# ಮೈಸೂರು ವಿಶ್ವವಿದ್ಯಾನಿಲಯ

# ಶಾಸನಗಳ ಹಿನ್ನೆಲೆಯಲ್ಲಿ ಬೆಂಗಳೂರು ನಗರ: ಸಾಂಸ್ಕೃತಿಕ ಅಧ್ಯಯನ

(ಪಿಎಚ್.ಡಿ ಪದವಿಗಾಗಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ
ಸಾದರಪಡಿಸಿದ ಮಹಾಪ್ರಬಂಧ)


ಸಂಶೋಧಕರು

ಶಿಲ್ಪ. ಎಸ್
ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ
ಮಾನಸಗಂಗೋತ್ರಿ ಮೈಸೂರು

ಮಾರ್ಗದರ್ಶಕರು

ಡಾ.ಎಂ.ಜಿ.ಮಂಜುನಾಥ
ಪ್ರಾಧ್ಯಾಪಕರು ಮತ್ತು ನಿರ್ದೇಶಕರು,
ಪ್ರಸಾರಾಂಗ, ಮಾನಸಗಂಗೋತ್ರಿ,
ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು



ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ
ಮಾನಸಗಂಗೋತ್ರಿ, ಮೈಸೂರು–೬

೨೦೧೬

# ಸಂಶೋಧಕರ ಪ್ರಮಾಣ ಪತ್ರ

ಶಿಲ್ಪ.ಎಸ್. ಆದ ನಾನು "ಶಾಸನಗಳ ಹಿನ್ನೆಲೆಯಲ್ಲಿ ಬೆಂಗಳೂರು ನಗರ–ಸಾಂಸ್ಕೃತಿಕ ಅಧ್ಯಯನ" ಎಂಬ ವಿಷಯವನ್ನು ಕುರಿತು ಪ್ರೊ.ಎಂ.ಜಿ.ಮಂಜುನಾಥ, ಕನ್ನಡ ಪ್ರಾಧ್ಯಾಪಕರು ಮತ್ತು ನಿರ್ದೇಶಕರು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ, ಮೈಸೂರು, ಇವರ ಮಾರ್ಗದರ್ಶನದಲ್ಲಿ ಸಂಶೋಧನಾ ಕಾರ್ಯವನ್ನು ಕೈಗೊಂಡು ಈ ಮಹಾಪ್ರಬಂಧವನ್ನು ಸಿದ್ಧಪಡಿಸಿ, ಕನ್ನಡ ಪಿಎಚ್.ಡಿ. ಪದವಿಗಾಗಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸುತ್ತಿದ್ದೇನೆ.

ಈ ಸಂಶೋಧನಾ ಮಹಾಪ್ರಬಂಧವನ್ನು ನನ್ನ ಸ್ವಂತ ಪರಿಶ್ರಮದಿಂದ ಸಿದ್ಧಪಡಿಸಲಾಗಿದ್ದು, ಇದನ್ನು ಯಾವುದೇ ವಿಶ್ವವಿದ್ಯಾನಿಲಯದ ಎಂ.ಎ., ಎಂ.ಫಿಲ್., ಪಿಎಚ್.ಡಿ. ಅಥವಾ ಸರ್ಟಿಫಿಕೇಟ್ ಕೋರ್ಸ್‌ಗಳ ಪದವಿಗಾಗಿ ಭಾಗಶಃವಾಗಿಯಾಗಲಿ, ಪೂರ್ಣ ಪ್ರಮಾಣವಾಗಿಯಾಗಲಿ ಸಲ್ಲಿಸಿರುವುದಿಲ್ಲ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ : ಮೈಸೂರು
ದಿನಾಂಕ :

ಶಿಲ್ಪ.ಎಸ್
ಸಂಶೋಧಕರು

# ಮೈಸೂರು ವಿಶ್ವವಿದ್ಯಾನಿಲಯ

## ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮಾನಸಗಂಗೋತ್ರಿ, ಮೈಸೂರು–೦೬

## ನಿರ್ದೇಶಕರ ದೃಢೀಕರಣ ಪತ್ರ

ಶಿಲ್ಪ.ಎಸ್ ಇವರು ಯು.ಜಿ.ಸಿ–ಜೆ.ಆರ್.ಎಫ್. ಸೌಲಭ್ಯದಲ್ಲಿ ಪ್ರೊ.ಎಂ.ಜಿ.ಮಂಜುನಾಥ, ಕನ್ನಡ ಪ್ರಾಧ್ಯಾಪಕರು ಮತ್ತು ನಿರ್ದೇಶಕರು, ಪ್ರಸಾರಾಂಗ, ಮಾನಸಗಂಗೋತ್ರಿ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಇವರ ಮಾರ್ಗದರ್ಶನದಲ್ಲಿ 'ಶಾಸನಗಳ ಹಿನ್ನೆಲೆಯಲ್ಲಿ ಬೆಂಗಳೂರು ನಗರ–ಸಾಂಸ್ಕೃತಿಕ ಅಧ್ಯಯನ' ಎಂಬ ವಿಷಯದ ಬಗ್ಗೆ ಸಂಶೋಧನೆ ನಡೆಸಿ, ಮಹಾಪ್ರಬಂಧವನ್ನು ಸಿದ್ಧಪಡಿಸಿ ಪಿಎಚ್.ಡಿ. ಪದವಿಗಾಗಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸುತ್ತಿದ್ದಾರೆ.

ಇವರ ಈ ಸಂಶೋಧನೆಯು ಇವರ ಸ್ವಂತ ಪರಿಶ್ರಮದಿಂದ ಕೂಡಿದುದಾಗಿದ್ದು, ಇದನ್ನು ಯಾವುದೇ ವಿಶ್ವವಿದ್ಯಾನಿಲಯದ ಎಂ.ಎ., ಎಂ.ಫಿಲ್., ಪಿಎಚ್.ಡಿ. ಅಥವಾ ಯಾವುದೇ ಸರ್ಟಿಫಿಕೇಟ್ ಕೋರ್ಸ್‌ಗಳ ಪದವಿಗಾಗಿ ಭಾಗಶಃವಾಗಿಯಾಗಲಿ, ಪೂರ್ಣ ಪ್ರಮಾಣವಾಗಿಯಾಗಲಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸುತ್ತಿದ್ದೇನೆ.

ಸ್ಥಳ : ಮೈಸೂರು　　　　　　　　　　ನಿರ್ದೇಶಕರು

ದಿನಾಂಕ :

# ಮೈಸೂರು ವಿಶ್ವವಿದ್ಯಾನಿಲಯ

**ಪ್ರೊ.ಎಂ.ಜಿ.ಮಂಜುನಾಥ** ಎಂ.ಎ., ಪಿಹೆಚ್.ಡಿ.,
ಕನ್ನಡ ಪ್ರಾಧ್ಯಾಪಕರು ಮತ್ತು ನಿರ್ದೇಶಕರು
ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ
ಮಾನಸಗಂಗೋತ್ರಿ, ಮೈಸೂರು

---

## ಮಾರ್ಗದರ್ಶಕರ ದೃಢೀಕರಣ ಪತ್ರ

ಶಿಲ್ಪ.ಎಸ್ ಇವರು ಯು.ಜಿ.ಸಿ–ಜೆ.ಆರ್.ಎಫ್. ಸೌಲಭ್ಯದಲ್ಲಿ "ಶಾಸನಗಳ ಹಿನ್ನೆಲೆಯಲ್ಲಿ ಬೆಂಗಳೂರು ನಗರ–ಸಾಂಸ್ಕೃತಿಕ ಅಧ್ಯಯನ" ಎಂಬ ವಿಷಯದ ಬಗ್ಗೆ ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಮಹಾಪ್ರಬಂಧವನ್ನು ಸಿದ್ಧಪಡಿಸಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಾದರಪಡಿಸುತ್ತಿದ್ದಾರೆ. ಈ ಸಂಶೋಧನೆಯು ಇವರ ಸ್ವಂತ ಪರಿಶ್ರಮದಿಂದ ಕೂಡಿದ್ದು, ಇದನ್ನು ಯಾವುದೇ ವಿಶ್ವವಿದ್ಯಾನಿಲಯದ ಎಂ.ಎ., ಎಂ.ಫಿಲ್., ಪಿಎಚ್.ಡಿ. ಅಥವಾ ಸರ್ಟಿಫಿಕೇಟ್ ಕೋರ್ಸ್‌ಗಳ ಪದವಿಗಾಗಿ ಭಾಗಶಃವಾಗಿಯಾಗಲಿ, ಪೂರ್ಣ ಪ್ರಮಾಣವಾಗಿಯಾಗಲಿ ಸಲ್ಲಿಸಿರುವುದಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ಸ್ಥಳ : ಮೈಸೂರು

ದಿನಾಂಕ :

ಪ್ರೊ.ಎಂ.ಜಿ.ಮಂಜುನಾಥ

# ಕೃತಜ್ಞತೆಗಳು

**"ಶಾಸನಗಳ ಹಿನ್ನೆಲೆಯಲ್ಲಿ ಬೆಂಗಳೂರು ನಗರ-ಸಾಂಸ್ಕೃತಿಕ ಅಧ್ಯಯನ"** ಎಂಬ ವಿಷಯದ ಮೇಲೆ ಸಂಶೋಧನೆಯನ್ನು ಕೈಗೊಂಡ ನನಗೆ ಈ ಕಾರ್ಯದಲ್ಲಿ ಅನೇಕ ವ್ಯಕ್ತಿಗಳು ಹಲವಾರು ರೀತಿಯಿಂದ ಸಹಾಯ ನೀಡಿದ್ದಾರೆ. ಹೀಗೆ ನನ್ನ ಕಾರ್ಯದ ಯಶಸ್ಸಿಗೆ ಕಾರಣರಾದ ಅಂತಹ ವ್ಯಕ್ತಿಗಳನ್ನು ಈ ಸಂದರ್ಭದಲ್ಲಿ ನೆನೆಯಬೇಕಾದುದು ನನ್ನ ಆದ್ಯ ಕರ್ತವ್ಯವಾಗಿದೆ.

ನಾನು ಪಿಎಚ್.ಡಿ. ಸಂಶೋಧನೆ ಕೈಗೊಳ್ಳಬೇಕೆಂದು ನಿರ್ಧರಿಸಿ, ಮಾರ್ಗದರ್ಶಕರ ಹುಡುಕಾಟದಲ್ಲಿದ್ದಾಗ ಬೆಂಗಳೂರಿನ ಶಾಸನಗಳನ್ನು ಕುರಿತ ಸಂಶೋಧನಾ ವಿಷಯವನ್ನು ವಿಶ್ವಾಸದಿಂದ ಸಮ್ಮತಿ ನೀಡಿ ಮಾರ್ಗದರ್ಶಕರಾಗಲು ಸಂತೋಷದಿಂದ ಒಪ್ಪಿಕೊಂಡ (ದಿ) ಡಾ.ಬಿ.ಎಂ.ಶೈಲಜ ಅವರಿಗೆ ನಾನು ಅಭಾರಿಯಾಗಿದ್ದೇನೆ. ಅವರು ಅಕಾಲಿಕ ಮರಣ ಹೊಂದಿದ್ದರಿಂದ ಮಾರ್ಗದರ್ಶಕರನ್ನು ಬದಲಾವಣೆ ಮಾಡಿಕೊಳ್ಳಲಾಯಿತು.

ನನ್ನ ಪಿಎಚ್.ಡಿ. ಸಂಶೋಧನೆಗೆ ಮೊದಲ ಮಾರ್ಗದರ್ಶಕರು ಬೇರೆಯವರಾಗಿದ್ದರೂ, ಆರಂಭದಿಂದ ಇಲ್ಲಿಯವರೆಗೂ ಎಲ್ಲಾ ರೀತಿಯ ಸಲಹೆ, ಸಹಕಾರಗಳ ಪ್ರೋತ್ಸಾಹವನ್ನು ನೀಡಿ, ಮಹಾಪ್ರಬಂಧವನ್ನು ಪೂರ್ಣಗೊಳಿಸಲು ಸೂಕ್ತ ಮಾರ್ಗದರ್ಶನ ನೀಡಿದ ಪ್ರೀತಿಯ ಗುರುಗಳಾದ ಪ್ರೊ.ಎಂ.ಜಿ.ಮಂಜುನಾಥ, ಕನ್ನಡ ಪ್ರಾಧ್ಯಾಪಕರು ಮತ್ತು ನಿರ್ದೇಶಕರು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ, ಮೈಸೂರು, ಇವರಿಗೆ ಹೃದಯಪೂರ್ವಕ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ. ಅದೇ ರೀತಿ ಆರಂಭದಿಂದಲೂ ನನ್ನ ಸಂಶೋಧನೆಗೆ ಸಹಕಾರ ನೀಡಿ ಹಾರೈಸಿದ ಶ್ರೀಮತಿ ಮಾಲತಿ ಮಂಜುನಾಥ ಅವರಿಗೂ ನನ್ನ ಗೌರವಪೂರ್ವಕ ನಮನಗಳು.

ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಪೂರ್ಣಕಾಲಿಕ ಸಂಶೋಧನಾ ವಿದ್ಯಾರ್ಥಿಯಾಗಿ ಕಾರ್ಯನಿರ್ವಹಿಸಲು ನೆರವು ನೀಡಿದ ಸಂಸ್ಥೆಯ ಹಿಂದಿನ ನಿರ್ದೇಶಕರಾದ ಪ್ರೊ.ಕೆ.ಎನ್.ಗಂಗಾನಾಯಕ್, ಪ್ರೊ.ಎನ್.ಎಂ.ತಳವಾರ್, ಪ್ರೊ.ಆರ್.ರಾಮಕೃಷ್ಣ ಹಾಗೂ ಈಗಿನ ನಿರ್ದೇಶಕರಾದ ಪ್ರೊ.ಪ್ರೀತಿ ಶ್ರೀಮಂಧರಕುಮಾರ್ ಅವರಿಗೆ, ಸಂಸ್ಥೆಯಲ್ಲಿ ಸೇವೆ ಸಲ್ಲಿಸುತ್ತಿರುವ ಎಲ್ಲಾ ಭೋಧಕ ವರ್ಗದವರಿಗೆ ಮತ್ತು ಭೋಧಕೇತರ ವರ್ಗದವರಿಗೂ ನನ್ನ ಅನಂತ ವಂದನೆಗಳು. ಈ ಪ್ರಬಂಧ ರಚನೆಗೆ ಅವಶ್ಯವಿರುವ ಅಧ್ಯಯನ ಸಾಮಗ್ರಿಗಳನ್ನು ಸಕಾಲಕ್ಕೆ ಒದಗಿಸಿಕೊಟ್ಟ ಕು.ಕ.ಅ.ಸಂಸ್ಥೆಯ ಗ್ರಂಥಭಂಡಾರದ ಗ್ರಂಥಪಾಲಕರಾದ ಡಾ.ರಾಘವೇಂದ್ರ

ಅವರಿಗೂ ಹಾಗೂ ವಿಶ್ವವಿದ್ಯಾನಿಲಯದ ಮುಖ್ಯಗ್ರಂಥಾಲಯದ ಸಿಬ್ಬಂದಿಯವರಿಗೂ ನಾನು ಚಿರಋಣಿಯಾಗಿದ್ದೇನೆ.

ನಾನು ಪಿಎಚ್.ಡಿ ಪದವಿಯವರೆಗೂ ವ್ಯಾಸಂಗ ಮಾಡಲು ಬೆನ್ನುತಟ್ಟಿ ಪ್ರೋತ್ಸಾಹಿಸಿ, ಸಹಕಾರ ನೀಡುತ್ತಿರುವ ಪೂಜ್ಯ ತಾಯಿತಂದೆಯವರಾದ ಶ್ರೀಮತಿ ಗಂಗಮ್ಮ, ಶ್ರೀ ಹೆಚ್.ಡಿ.ಶಿವಮಾದಯ್ಯರವರನ್ನೂ ಹಾಗೂ ಪ್ರೀತಿಯ ಅಣ್ಣಅತ್ತಿಗೆಯವರಾದ ಶ್ರೀ ಶಿವಕುಮಾರ್ ಶ್ರೀಮತಿ ಉಮರವರನ್ನೂ, ನೆಚ್ಚಿನ ಅಕ್ಕಬಾವಂದಿರಾದ ಶ್ರೀ ಸೋಮಶೇಖರ್, ಶ್ರೀಮತಿ ಸವಿತ ಮತ್ತು ಶ್ರೀ ಹನುಮಂತರಾಜು, ಶ್ರೀಮತಿ ಸೌಮ್ಯರವರನ್ನೂ ಪುಟಾಣಿಗಳಾದ ಕು॥ಜೀವಿತ, ಚಿ॥ಸುಜನ್, ಚಿ॥ಗಗನ್‌ದೀಪ್, ಚಿ॥ಸಾತ್ವಿಕ್ ಕೃಷ್ಣ ಹಾಗೂ ಕುಟುಂಬ ವರ್ಗದವರನ್ನೂ ಅಪಾರ ಕೃತಜ್ಞತೆ ಹಾಗೂ ಅಭಿಮಾನದಿಂದ ಇಲ್ಲಿ ಸ್ಮರಿಸುತ್ತಿದ್ದೇನೆ.

ಕ್ಷೇತ್ರಕಾರ್ಯದ ಸಂದರ್ಭದಲ್ಲಿ ನನ್ನೊಡನೆಯೇ ಇದ್ದು ಸಂಶೋಧನೆಗೆ ನೆರವಾದ ನನ್ನ ಪೂಜ್ಯ ತಂದೆಯವರಿಗೆ ಹಾಗೂ ನನ್ನ ಸಂಶೋಧನೆಗೆ ಸಹಾಯಕವಾದ ಕೆಲವು ಛಾಯಚಿತ್ರಗಳನ್ನು ನೀಡಿದ ಶ್ರೀ ಕೆಂಗೇರಿ ಚಕ್ರಪಾಣಿರವರಿಗೆ ಹಾಗೂ ನನ್ನ ಸಂಶೋಧನೆಗೆ ಸಹಕರಿಸಿದ ಹಿರಿಯರಾದ ಡಾ.ಎಂ.ರಾಮಕೃಷ್ಣ, ಶ್ರೀಮತಿ ಬಿ.ಮಂಗಳ ಹಾಗೂ ಹಿರಿಯ ಸಂಶೋಧಕ ಮಿತ್ರರಾದ ಡಾ.ಜಿ.ಚಂದ್ರಶೇಖರ್, ಡಾ.ಎಂ.ಕೆ.ಮಂಜುನಾಥ, ಡಾ.ಎಸ್.ಪಿ.ಮಂಜುಶ್ರೀ ಅವರಿಗೂ ಹಾಗೂ ನನ್ನ ಮಹಾಪ್ರಬಂಧದ ಕರಡು ತಿದ್ದುಪಡಿ ಮಾಡುವಲ್ಲಿ ನೆರವು ನೀಡಿದ ಎಂ.ಮುನಿಕೆಂಪೇಗೌಡ, ಸತೀಶ್‌ಕುಮಾರ್.ಬಿ.ವಿ, ಹೇಮಂತ.ಬಿ.ಆರ್, ಎಸ್.ಬಸವರಾಜು, ಎನ್.ಮಂಜುನಾಥ್ ಮತ್ತು ಎಂ.ಯೋಗೇಶ್ವರಿ ಮುಂತಾದವರಿಗೆ ಹಾಗೂ ನನ್ನ ಸ್ನೇಹಿತೆಯರಾದ ಉಷ.ಡಿ.ಕೆ, ಎ.ಜೆ.ಪಲ್ಲವಿ, ಸವಿತ.ಎಂ. ಭಾರತಿ, ಭಾರತಿ.ಟಿ.ವಿ, ವಿಮಲಾಕ್ಷಿ.ಎಂ, ರೇಖಾಮಣಿ.ಸಿ.ಎಂ ಮೊದಲಾದವರೆಲ್ಲರನ್ನು ಈ ಸಂದರ್ಭದಲ್ಲಿ ನೆನೆಯುತ್ತೇನೆ.

ಈ ಕಾರ್ಯಕ್ಕೆ ನನ್ನ ಹಿತಚಿಂತನೆಗಳನ್ನು ಬಯಸಿ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಸಹಾಯ ಸಹಕಾರವನ್ನು ನೀಡಿದ ಎಲ್ಲ ಮಹನೀಯರಿಗೂ, ಸ್ನೇಹಿತರಿಗೂ, ಬಂಧುಗಳಿಗೂ ಹಾಗೂ ಆತ್ಮೀಯರಿಗೂ ನಾನು ಚಿರಋಣಿಯಾಗಿದ್ದೇನೆ.

**ಶಿಲ್ಪ.ಎಸ್**

# ಪರಿವಿಡಿ

## ಸಂಕೇತಾಕ್ಷರಗಳು

| | | |
|---|---|---|
| ಸಂ. | : | ಸಂಪಾದಕರು |
| ಪ್ರ. ಸಂ. | : | ಪ್ರಧಾನ ಸಂಪಾದಕರು |
| ಪು. | : | ಪುಟ |
| ಎ.ಕ. | : | ಎಪಿಗ್ರಾಫಿಯ ಕರ್ನಾಟಿಕ (ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಪರಿಷ್ಕೃತ ಸಂಪುಟಗಳು) |
| E. C. | : | Epigraphia Carnatica, (ಬಿ.ಎಲ್.ರೈಸ್ ಅವರು ಸಂಪಾದಿಸಿರುವ ಶಾಸನ ಸಂಪುಟಗಳು) |
| M.A.R. | : | Mysore Archaeological Report |
| p. | : | Page |

# ಪೀಠಿಕೆ

ಆಧುನಿಕ ಸಂದರ್ಭದಲ್ಲಿ ಜಾಗತೀಕರಣಕ್ಕೆ ಜಗತ್ತು ಒಳಗಾಗುತ್ತಿದ್ದಂತೆ ಸಂಸ್ಕೃತಿ ಕುರಿತ ಚಿಂತನೆ ಬಹಳ ಪ್ರಮುಖ ಮತ್ತು ವ್ಯಾಪಕವಾಗುತ್ತಿದೆ. ಸಂಸ್ಕೃತಿ ಕುರಿತ ವ್ಯಾಖ್ಯಾನವು ಜಟಿಲವಾದದ್ದು. ಅದನ್ನು ಎರಡು–ಮೂರು ಸಾಲುಗಳಲ್ಲಿ ಹಿಡಿದಿಡಲು ಸಾಧ್ಯವಿಲ್ಲ. ಅದರ ವ್ಯಾಪ್ತಿ ವಿಸ್ತಾರವಾದದ್ದು. ಅದರಲ್ಲೂ ಬಹುಮುಖಿ ಸಂಸ್ಕೃತಿಯನ್ನು ಅರ್ಥೈಸುವುದು ಕಷ್ಟಸಾಧ್ಯವಾದ ಕೆಲಸ. ಮಾನವನ ಉಗಮದೊಂದಿಗೆ ಪ್ರಾರಂಭವಾದ ಸಂಸ್ಕೃತಿ ನಿತ್ಯಚಲನಶೀಲವಾದದು.

ಅತಿವೇಗದಲ್ಲಿ ಬೆಳೆಯುತ್ತಿರುವ ನಗರೀಕರಣ, ಆಧುನೀಕರಣ, ಯಾಂತ್ರೀಕರಣ ಹಾಗೂ ಜಾಗತೀಕರಣ ಪ್ರಭಾವದಿಂದ ಸಂಸ್ಕೃತಿಯ ಪರಿವರ್ತನೆ ತೀಕ್ಷ್ಣವಾದ ಬದಲಾವಣೆಗೆ ಸ್ಪಂದಿಸುತ್ತಿದೆ. ಆಧುನಿಕತೆಯ ಹಾವಳಿಯಿಂದ ಸಂಸ್ಕೃತಿಯನ್ನು ಅದರ ಮೂಲರೂಪದಲ್ಲಿ ಕಾಣಬೇಕಾದರೆ ಆ ಸಂಸ್ಕೃತಿ ಕುರಿತ ಅಧ್ಯಯನ ಇಂದು ಅತ್ಯಂತ ಮಹತ್ವದ್ದಾಗಿದೆ. ಅಂತಹ ಒಂದು ಪ್ರಯತ್ನವೇ ನನ್ನ ಅಧ್ಯಯನದ ಮುಖ್ಯ ಉದ್ದೇಶ.

ಮೂಲ ಸಂಸ್ಕೃತಿಯೆನ್ನುವುದು ಸ್ಥಿರವಾಗಿರುವುದಿಲ್ಲ ಸದಾ ಬದಲಾವಣೆಗೆ ಒಳಗಾಗುತ್ತದೆ. ಯಾವ ಒಂದು ಸಂಸ್ಕೃತಿ ಪ್ರಸ್ತುತದಲ್ಲಿ ಚಾಲ್ತಿಯಲ್ಲಿರುತ್ತದೋ ಮುಂದಿನ ಕಾಲಘಟ್ಟದಲ್ಲಿ ಆ ಸಂಸ್ಕೃತಿ ಪರಿವರ್ತನೆಯಾಗಿ ಮೂಲ ಸಂಸ್ಕೃತಿಯೊಂದು ಕಣ್ಮರೆಯಾಗಬಹುದು. ಹಾಗಾಗಿ ಸಾಂಸ್ಕೃತಿಕ ಅಧ್ಯಯನವು ಅತ್ಯಂತ ಮಹತ್ವಪೂರ್ಣವಾಗಿದೆ.

ಸಾಂಸ್ಕೃತಿಕ ಅಧ್ಯಯನ ಎಂಬುದು ಬಹುಕೇಂದ್ರಿತ, ಬಹುಶಿಸ್ತೀಯ ಅಧ್ಯಯನವಾಗಿರುತ್ತದೆ. ಇಲ್ಲಿ ರಾಜಕೀಯ, ಸಾಮಾಜಿಕ, ಧಾರ್ಮಿಕ, ಆರ್ಥಿಕ ಹೀಗೆ ಹತ್ತು ಹಲವು ಆಯಾಮಗಳನ್ನು ಒಳಗೊಂಡಿರುತ್ತದೆ. ಮನುಷ್ಯನ ಬೌದ್ಧಿಕತೆಯ ಮುನ್ನೋಟವೇ ಸಾಮಾಜಿಕ ಪರಿವರ್ತನೆಗೆ, ಸಾಂಸ್ಕೃತಿಕ ಮಹತ್ವಕ್ಕೆ ಕಾರಣವಾಗುತ್ತದೆ. ಬೆಳೆಯುತ್ತಿರುವ ಜನಸಂಖ್ಯೆಗೆ ಅನುಗುಣವಾಗಿ ನಾಗರೀಕತೆಯು ಮೇಲ್ಮುಖವಾಗುತ್ತಾ ಪ್ರಗತಿಗೆ ಯಾವುದು ಪೂರಕವೋ ಅದನ್ನೆಲ್ಲಾ ಜೀರ್ಣಿಸಿಕೊಂಡು ಎಲ್ಲರನ್ನೂ, ಎಲ್ಲವನ್ನು ಬೆಳೆಸುತ್ತಾ ಆಕ್ಷೇತ್ರದ ಸಾಧನೆಯ ಬಹುದೊಡ್ಡ ಕೊಡುಗೆಯಾಗಿ ಪರಿಣಮಿಸುತ್ತದೆ.

ಸಂಸ್ಕೃತಿ ಎಂಬುದು ಮನುಷ್ಯನನ್ನು ಪ್ರಾಣಿ ಸಮಾಜದಿಂದ ಬೇರ್ಪಡಿಸಿ ಆತನ ಪರಿವರ್ತನೆಗಳನ್ನು ವಿವರಿಸುವ ಒಂದು ವಿಶಿಷ್ಟವಾದ ಪರಿಕಲ್ಪನೆಯಾಗಿದೆ. ಸಮಾಜ ಹಾಗು ಸಂಸ್ಕೃತಿಗೆ ತಮ್ಮದೇ ಆದ ಅಂತರ್‌ಸಂಬಂಧವಿದೆ. ಸಂಸ್ಕೃತಿಯಿಲ್ಲದೆ ಸಮಾಜವಿಲ್ಲ. ಸಮಾಜವಿಲ್ಲದೆ

ಸಂಸ್ಕೃತಿಯಿಲ್ಲ. ಆರಂಭದಿಂದಲೂ ಈ ಒಡನಾಟವನ್ನು ಉಳಿಸಿಕೊಂಡು ಬೆಳೆಯುತ್ತಿರುವ ಪ್ರಕ್ರಿಯೆಯನ್ನೇ ಸಂಸ್ಕೃತಿ ಎನ್ನುತ್ತೇವೆ.

ಕರ್ನಾಟಕದ ರಾಜಧಾನಿಯಾಗಿರುವ ಬೆಂಗಳೂರು ಇಂತಹ ಸಾಂಸ್ಕೃತಿಕ ಪ್ರಕ್ರಿಯೆಗಳಿಂದೇನು ಹೊರತಾಗಿಲ್ಲ. ಇಂದು ಸಿಲಿಕಾನ್ ವ್ಯಾಲಿ, ಗಾರ್ಡನ್ ಸಿಟಿ, ಐಟಿ–ಬಿಟಿ ಸಿಟಿ ಎಂದು ಕರೆಸಿಕೊಳ್ಳುತ್ತಿರುವ ಬೆಂಗಳೂರಿನಲ್ಲಿ ವಿವಿಧ ಬಗೆಯ ಭಾಷೆ, ಶೈಲಿ, ಸಂಸ್ಕೃತಿ, ಧರ್ಮಗಳನ್ನು ಕಾಣಬಹುದು. ಬೆಂಗಳೂರು ನಗರ ಬಹುಮುಖಿ ಸಂಸ್ಕೃತಿಯನ್ನು ಮೈಗೂಡಿಸಿಕೊಂಡು ವಿಶ್ವದ ಪ್ರಮುಖ ನಗರಗಳಲ್ಲಿ ಒಂದಾಗಿದೆ. ಎಲ್ಲೆಲ್ಲೂ ಮುಗಿಲು ಮುಟ್ಟುವ ಕಟ್ಟಡಗಳು, ಮೇಲುಸೇತುವೆಗಳು, ಉದ್ಯಾನವನಗಳು, ಆಧುನಿಕತೆಯ ವೈಭವದ ಚಿತ್ರಣವನ್ನು ಕಾಣಬಹುದು. ಹೀಗೆ ಬೆಂಗಳೂರು ನಗರ ಜ್ಞಾನ–ವಿಜ್ಞಾನಗಳ ಸಾಮರಸ್ಯವಾಗಿ ಆಧುನಿಕತೆಯನ್ನು ಹೊಂದಿ ನವನಾಗರೀಕತೆಯನ್ನು ನಿರ್ಮಾಣಮಾಡಿದೆ. ಇಂತಹ ಬೆಂಗಳೂರು ಹಲವು ಶತಮಾನಗಳಲ್ಲಿ ಹಲವಾರು ಯುದ್ಧಗಳನ್ನು ಕಂಡಿದೆ, ಪರಕೀಯರ ದಾಳಿಗೆ ಒಳಪಟ್ಟಿದೆ, ವಿವಿಧ ಧರ್ಮಗಳು, ಜೀವನ ಶೈಲಿಗಳು, ವಿಭಿನ್ನ ನಾಗರೀಕತೆಯನ್ನು ಒಳಗೊಂಡಿದ್ದು, ಹಲವು ಶತಮಾನಗಳ ಹಿಂದಿನಿಂದಲೂ ಜನವಸತಿಯ ನೆಲೆಯಾಗಿತ್ತು ಎಂಬುದು ಈ ಪ್ರದೇಶದಲ್ಲಿ ನಡೆದ ಪುರಾತತ್ವ ಶೋಧಗಳಿಂದ ತಿಳಿದುಬರುತ್ತದೆ.

ಬೆಂಗಳೂರು ನಗರದ ಭೌಗೋಳಿಕ ಲಕ್ಷಣವನ್ನು ಗಮನಿಸಿದರೆ, ಇದು ಬಟಾಬಯಲಿನ ನಗರ. ನೈಸರ್ಗಿಕವಾದ ಯಾವ ಭೌಗೋಳಿಕ ಮೇಲ್ಮೈ ಲಕ್ಷಣಗಳೂ ನಗರದ ಬೆಳವಣಿಗೆಗೆ ಅಡ್ಡಿಬಂದಿಲ್ಲ. ದೊಡ್ಡ ದೊಡ್ಡ ಪರ್ವತಗಳಾಗಲೀ ಗಿರಿಕಂದರಗಳಾಗಲೀ ಇಲ್ಲಿಲ್ಲ. ಹಲವು ಗ್ರಾಮಾಂತರ ಪ್ರದೇಶಗಳನ್ನು ಒಳಗೆ ಸೇರಿಸಿಕೊಳ್ಳುತ್ತಲೇ ಎಲ್ಲ ದಿಕ್ಕುಗಳಲ್ಲೂ ಬೆಳದಿರುವ ನಗರ. ವೃಷಭಾವತಿ ನದಿಯನ್ನು ಹೊರತು ಪಡಿಸಿದರೆ ಬೆಂಗಳೂರಿನಲ್ಲಿ ನದಿಯಾಗಲಿ, ತೊರೆಗಳಾಗಲಿ ಇಲ್ಲ. ಹಿಂದೆ ಈ ನದಿ ಸಮೃದ್ಧವಾಗಿತ್ತು. ಆದರೆ ಇಂದಿನ ನಗರೀಕರಣ ಹಾಗೂ ಕೈಗಾರೀಕೀಕರಣದ ಬರಾಟೆಯಲ್ಲಿ ಕಲುಷಿತಗೊಂಡಿದೆ. ಬೆಂಗಳೂರಿನಲ್ಲಿ ನೆಲೆಯೂರ ಬಯಸುವ ನಾಗರೀಕರ ಸಂಖ್ಯೆ ಪ್ರತಿವರ್ಷವೂ ಹೆಚ್ಚುತ್ತಿರುವುದಕ್ಕೆ ಇಲ್ಲಿನ ಆಹ್ಲಾದಕರವಾದ ಹವಾಮಾನವೂ ಒಂದು ಪ್ರಬಲ ಕಾರಣವಾಗಿದೆ.

ಕ್ರಿ.ಪೂ. ಸುಮಾರು 5000 ವರ್ಷಗಳಷ್ಟು ಪ್ರಾಚೀನ ಕಾಲಘಟ್ಟದ ಸೂಕ್ಷ್ಮಶಿಲಾಯುಗದ ಆಯುಧಗಳು ಈ ಪ್ರದೇಶದಲ್ಲಿ ಲಭ್ಯವಾಗಿರುವುದರಿಂದ ಆ ಕಾಲಘಟ್ಟದಿಂದಲೇ ಇಲ್ಲಿ ಜನವಸತಿ ಇತ್ತೆಂದು ಹೇಳಬಹುದು. ಅಂದಿನಿಂದ ಇಂದಿನವರೆಗೂ ಆ ಪ್ರದೇಶವು ನಿರಂತರವಾಗಿ ಜನವಸತಿಯಿಂದ ಕೂಡಿದ್ದು ಹಲವು ಸಂಸ್ಕೃತಿಗಳನ್ನು ತನ್ನೊಡಲಿನಲ್ಲಿ ಗರ್ಭೀಕರಿಸಿಕೊಂಡಿದೆ.

ಬೆಂಗಳೂರಿನ ಜಾಲಹಳ್ಳಿ ಪ್ರದೇಶ, ಬಸವನಗುಡಿ, ಆನೇಕಲ್ಲು ಪ್ರದೇಶಗಳಲ್ಲಿ ಸೂಕ್ಷ್ಮಶಿಲಾಯುಗಕ್ಕೆ ಸೇರಿದ ಅವಶೇಷಗಳು ದೊರೆಯುತ್ತವೆ. ರೋಮ್ ದೊರೆಗಳಾದ ಅಗಸ್ಟಸ್, ಟೈಬೀರಿಯಸ್, ಕ್ಲಾಡಿಯಸ್ ಮೊದಲಾದವರ ನಾಣ್ಯಗಳು ಯಶವಂತಪುರ ಬಳಿ ದೊರಕಿವೆ ಎಂದು ವಿದ್ವಾಂಸರು ವರದಿ ಮಾಡಿದ್ದಾರೆ. ಅಂದರೆ ಬೆಂಗಳೂರು ನಗರ ಸಾವಿರಾರು ವರ್ಷಗಳ ಹಿಂದೆಯೇ ಜನ ವಸತಿಯನ್ನು ಹೊಂದಿದ್ದು. ಹೊರ ನಾಡುಗಳ ಸಂಪರ್ಕ ಹೊಂದಿತ್ತು ಎಂಬುದು ಸ್ಪಷ್ಟವಾಗುತ್ತದೆ.

ಐತಿಹ್ಯಗಳ ಪ್ರಕಾರ ಬೆಂಗಳೂರು ಅಥವಾ ಬೆಂದಕಾಳೂರು ಎಂಬ ಹೆಸರು ಹೊಯ್ಸಳರ ದೊರೆ ವೀರಬಲ್ಲಾಳನ ಕಾಲದಲ್ಲಿ ಬಂದಿರುವುದಾಗಿ ತಿಳಿಯುತ್ತದೆ. ವೀರಬಲ್ಲಾಳನು ಈ ಭಾಗದಲ್ಲಿ ಬೇಟೆಯಾಡುತ್ತಿರುವಾಗ, ತನ್ನ ಹಾದಿಯನ್ನು ತಪ್ಪಿಸಿಕೊಂಡು ಮುದುಕಿಯೋರ್ವಳ ಗುಡಿಸಲನ್ನು ಕಾಣುತ್ತಾನೆ. ಆಗ ಮುದುಕಿಯು ವೀರಬಲ್ಲಾಳನಿಗೆ ಬೇಯಿಸಿದ ಕಾಳುಗಳನ್ನು ತಿನ್ನಲು ನೀಡುತ್ತಾಳೆ. ವೀರಬಲ್ಲಾಳನು ಸಂತೋಷದಿಂದ ಕಾಳುಗಳನ್ನು ಸೇವಿಸಿದನಂತೆ. ಅನಂತರ ಈ ಸ್ಥಳವನ್ನು ಬೆಂದಕಾಳೂರು ಎಂದು ಹೆಸರಿಸಿದನಂತೆ. ಹೀಗೆ ಬೆಂದಕಾಳೂರು ಹೆಸರು ಪಡೆದು, ನಂತರದಲ್ಲಿ ಬೆಂಗಳೂರು ಆಗಿದೆ ಎಂದು ಸ್ಥಳಪುರಾಣದಿಂದ ತಿಳಿದುಬರುತ್ತದೆ.

ಕ್ರಿ.ಶ.890ರ ಬೇಗೂರು ಶಾಸನದಲ್ಲಿ ಬೆಂಗಳೂರು ಎಂಬ ಹೆಸರನ್ನು ಗುರುತಿಸಬಹುದು. ಹಾಗೂ ಕ್ರಿ.ಶ.1247ರ ಮಡಿವಾಳ ಶಾಸನದಲ್ಲಿ ಉಕ್ತವಾಗಿರುವ ವೆಂಗಳೂರು ಎಂಬ ಸ್ಥಳವು ಇಂದಿನ ಮಡಿವಾಳ ಪ್ರದೇಶದಲ್ಲಿತ್ತು. ಈ ಬೆಂಗಳೂರು "ಕ್ರಿ.ಶ.1402ರ ವೇಳೆಗೆ ದೊಡ್ಡ ಊರಾಗಿ ಬೆಳೆದು ಇಂದಿನ ತಮಿಳು ನಾಡಿನ ಡೆಂಕಣಿ ಕೋಟೆ ತಾಲ್ಲೂಕಿನ ಗುಮಳಾಪುರವೂ ಸೇರಿದಂತೆ ದೊಡ್ಡಪ್ರದೇಶದ ಆಡಳಿತದ ಕೇಂದ್ರವಾಗಿತ್ತು. ಹಾಗೆ ವಿಸ್ತಾರವಾಗಿ ಬೆಳೆದಿದ್ದ ದೊಡ್ಡ ಊರನ್ನು ಯಲಹಂಕ ನಾಡಪ್ರಭು ಕೆಂಪೇಗೌಡನ ತಂದೆ ಕೆಂಪನಂಜೇಗೌಡನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನು" ಎಂದು ಡಾ.ಎಂ.ಜಿ.ಮಂಜುನಾಥರವರು ತಮ್ಮ 'ಪ್ರಾಚೀನ ಬೆಂಗಳೂರು' ಎಂಬ ಲೇಖನದಲ್ಲಿ ಸ್ಪಷ್ಟಪಡಿಸಿದ್ದಾರೆ.

ಬೆಂಗಳೂರು ಎಂದೊಡನೆ ನೆನಪಾಗುವುದು ಮಾಗಡಿಯ ಕೆಂಪೇಗೌಡ. ಯಲಹಂಕದ ನಾಡಪ್ರಭು ಎಂದು ಖ್ಯಾತಿಗೊಂಡಿರುವ ಕೆಂಪೇಗೌಡ ಬೆಂಗಳೂರಿನ ನಿರ್ಮಾಪಕನೆಂಬ ಪ್ರತೀತಿ ಇದೆ. ವಿಜಯನಗರದ ಅರಸ ಶ್ರೀ ಕೃಷ್ಣದೇವರಾಯ ಮತ್ತು ಅಚ್ಯುತರಾಯ ಅಧೀನದಲ್ಲಿ ಮಾಂಡಲೀಕರಾಗಿದ್ದ ಕೆಂಪನಂಜೇಗೌಡನ ಮಗನಾದ ಕೆಂಪೇಗೌಡನು ಬೆಂಗಳೂರನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಮತ್ತಷ್ಟು ವಿಸ್ತಾರವಾಗಿ ಬೆಳಸಿ ದೊಡ್ಡಪಟ್ಟಣವನ್ನಾಗಿಸಿದನು. ಈತ ನಿರ್ಮಿಸಿದ ಕೋಟೆ ವಿಶಾಲವಾಗಿದ್ದು, ಎಂಟು ದ್ವಾರಗಳು, ಉತ್ತರದ ಯಲಹಂಕ ಬಾಗಿಲು ಪೂರ್ವದ ಹಲಸೂರು ಬಾಗಿಲು, ದಕ್ಷಿಣದ ಆನೇಕಲ್ಲು ಬಾಗಿಲು ಮತ್ತು ಪಶ್ಚಿಮದ ಕೆಂಗೇರಿ

ಬಾಗಿಲುಗಳನ್ನು ನಿರ್ಮಿಸಿದ್ದನು ಹಾಗೂ ನಗರವನ್ನು ಗುರ್ತಿಸಲು ಮುಖ್ಯ ಚಿಹ್ನೆಗಳಾದ ನಾಲ್ಕು ಕಾವಲು ಗೋಪುರಗಳು ಇವನ ಕಾಲದಲ್ಲಿ ನಿರ್ಮಾಣಗೊಂಡವು. ಇವುಗಳು ಇಂದಿನ ಉತ್ತರದಲ್ಲಿ ವೈಯಾಲಿಕಾವಲ್ ದಿಬ್ಬದ ಮೇಲೆ, ಪೂರ್ವದಲ್ಲಿ ಹಲಸೂರು ಬಳಿ, ದಕ್ಷಿಣದಲ್ಲಿ ಲಾಲ್‌ಬಾಗ್‌ನಲ್ಲಿ, ಪಶ್ಚಿಮದಲ್ಲಿ ಗವಿಪುರದ ಬಳಿ ಕಾಣಬಹುದು.

ಬೆಂಗಳೂರು ನಗರ ಆಡಳಿತದ ದೃಷ್ಟಿಯಿಂದ ಮೈಸೂರು ರಾಜ್ಯ ಸ್ಥಾಪನೆಯಾದಾಗ ಈ ನಗರವೂ ಒಳಗೊಂಡಂತೆ ಕ್ರಿ.ಶ.1986ರವರೆಗೆ ಬೆಂಗಳೂರು ಜಿಲ್ಲೆಯಾಗಿತ್ತು. ಈ ಜಿಲ್ಲೆಯು ದೇವನಹಳ್ಳಿ, ಚನ್ನಪಟ್ಟಣ, ದೊಡ್ಡಬಳ್ಳಾಪುರ, ಹೊಸಕೋಟೆ, ಕನಕಪುರ, ಮಾಗಡಿ, ನೆಲಮಂಗಲ ಮತ್ತು ರಾಮನಗರ ತಾಲ್ಲೂಕುಗಳನ್ನು ಒಳಗೊಂಡಿತ್ತು. ಈ ಬೆಂಗಳೂರು ಜಿಲ್ಲೆಯನ್ನು ಆಗಸ್ಟ್ 15, 1986ರಲ್ಲಿ ಅಧಿಕಾರ ವಿಕೇಂದ್ರಿಕರಣದನ್ವಯ ಬೆಂಗಳೂರು ನಗರ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆಗಳನ್ನಾಗಿ ವಿಭಾಗಿಸಲಾಯಿತು. ಈಗಿನ ಬೆಂಗಳೂರು ನಗರ ಜಿಲ್ಲೆಯನ್ನು ಬೆಂಗಳೂರು ನಗರ, ಬೆಂಗಳೂರು ದಕ್ಷಿಣ, ಬೆಂಗಳೂರು ಉತ್ತರ, ಬೆಂಗಳೂರು ಪೂರ್ವ ಹಾಗೂ ಆನೇಕಲ್ಲು ತಾಲ್ಲೂಕುಗಳಾಗಿ ವಿಭಜಿಸಲಾಗಿದೆ.

ಹೀಗೆ ಉದಯಿಸಲ್ಪಟ್ಟ ಬೆಂಗಳೂರು ನಗರ ಇಡೀ ಪ್ರಪಂಚದಲ್ಲೇ ಗಮನವನ್ನು ಸೆಳೆಯುತ್ತಿರುವ ಪ್ರಮುಖ ನಗರವಾಗಿ ಪ್ರಖ್ಯಾತಗೊಂಡು ದಾಪುಗಾಲು ಹಾಕುತ್ತಾ, ಭಾರತದ ಪ್ರಮುಖ ನಗರಗಳಲ್ಲಿ ಒಂದಾಗಿದೆ. ಇಂತಹ ವಿವಿಧ ಬಗೆಯ ಸಂಸ್ಕೃತಿಯನ್ನು ಒಳಗೊಂಡಿರುವ ಬೆಂಗಳೂರು ನಗರಿಯ ಸಂಸ್ಕೃತಿಯನ್ನು ವಿಶ್ಲೇಷಿಸುವುದು ತುಂಬಾ ಅವಶ್ಯಕವಾಗಿದೆ.

## ಅಧ್ಯಯನದ ಉದ್ದೇಶ ಮತ್ತು ಮಹತ್ವ

ಎರಡು ಸಾವಿರ ವರ್ಷಗಳಷ್ಟು ಇತಿಹಾಸವಿರುವ ಕನ್ನಡ ಸಾಹಿತ್ಯಕ್ಕೆ ಮೂಲ ಆಕರ ಸಾಮಗ್ರಿ ಎಂದರೆ ಶಾಸನಗಳು. ಪ್ರಾರಂಭದ ಕನ್ನಡಸಾಹಿತ್ಯವನ್ನು ಗುರುತಿಸುವುದು ಶಾಸನಗಳ ಮೂಲಕವೇ. ನಮಗೆ ಸಾಹಿತ್ಯ ಕೃತಿಗಳು ದೊರಕಿದರೂ ಅದು ಕವಿರಾಜಮಾರ್ಗದಿಂದ. ಕನ್ನಡ ಸಾಹಿತ್ಯದ ಇತಿಹಾಸವನ್ನು ತಿಳಿಯುವಲ್ಲಿ ಶಾಸನಗಳು ಪ್ರಮುಖ ಪಾತ್ರವಹಿಸುತ್ತದೆ.

ಕರ್ನಾಟಕದಲ್ಲಿ ಶಿಷ್ಟಸಾಹಿತ್ಯ ಅಧ್ಯಯನ, ಶಾಸನಾಧ್ಯಯನ, ಜನಪದ ಅಧ್ಯಯನಗಳು ಸಾಕಷ್ಟು ವಿಪುಲವಾಗಿದೆ. ಆದರೆ ಉಳಿದ ಎರಡು ಅಧ್ಯಯನಗಳು ವ್ಯಾಪಕವಾಗಿ ನಡೆಯುತ್ತಿದ್ದರು ಶಾಸನಾಧ್ಯಯನಗಳು ವಿರಳವಾಗಿ ನಡೆಯುತ್ತಿವೆ ಎಂದರೆ ತಪ್ಪಾಗಲಾರದು. ಪ್ರಸ್ತುತ **"ಶಾಸನಗಳ ಹಿನ್ನೆಲೆಯಲ್ಲಿ ಬೆಂಗಳೂರು ನಗರ-ಸಾಂಸ್ಕೃತಿಕ ಅಧ್ಯಯನ"**ವನ್ನು ಮಾಡಲಾಗುತ್ತದೆ.

ಒಂದು ಪ್ರದೇಶ, ಒಂದು ತಾಲ್ಲೂಕು ಅಥವಾ ಒಂದು ಜಿಲ್ಲೆಯಂತಹವುಗಳನ್ನು ಕೇಂದ್ರವಾಗಿಟ್ಟುಕೊಂಡು ಆ ಪ್ರದೇಶದ ಜನರ ಜೀವನ ಕ್ರಮಗಳನ್ನು ಸಾಂಸ್ಕೃತಿಕ ಅಧ್ಯಯನಕ್ಕೆ ಒಳಪಡಿಸುವ ವಿಧಾನ ಇತ್ತೀಚಿಗೆ ಜನಪ್ರಿಯವಾದ ಸಂಶೋಧನಾ ವಿಧಾನವಾಗಿದೆ. ಏಕೆಂದರೆ ವಿಶಾಲಾರ್ಥದಲ್ಲಿ ಸಾಂಸ್ಕೃತಿಕ ಅಧ್ಯಯನವೆಂದರೆ ಭಾಷೆಯ ಅಧ್ಯಯನ, ಸಮುದಾಯದ ಅಧ್ಯಯನ, ಸಾಹಿತ್ಯಕ ಅಧ್ಯಯನ, ಸ್ಥಳನಾಮಗಳ ಅಧ್ಯಯನ, ಸಾಮಾಜಿಕ ಅಧ್ಯಯನ, ಧಾರ್ಮಿಕ ಆಚರಣೆಗಳ ಅಧ್ಯಯನ ಮುಂತಾದವು ಸೇರುತ್ತವೆ. ಇವುಗಳ ಅಧ್ಯಯನದಿಂದ ಒಂದು ಪ್ರದೇಶದ ಸಂಸ್ಕೃತಿಯ ವಿವಿಧ ಆಯಾಮಗಳನ್ನು ಆಮೂಲಾಗ್ರವಾಗಿ ಸಮಕಾಲೀನ ಸಾಮಾಜಿಕ ಸಂದರ್ಭದಲ್ಲಿ ವಿಶ್ಲೇಷಿಸುವ ಅಗತ್ಯವಿದೆ.

ಬೆಂಗಳೂರು ನಗರದ ಚರಿತ್ರೆಯ ಪುಟಗಳನ್ನು ತೆರೆದಿಡುವ ಹತ್ತಾರು ದೇವಾಲಯಗಳು, ಶಾಸನಗಳು, ಸ್ಮಾರಕಗಳು, ಸಾಹಿತ್ಯಕ ದಾಖಲೆಗಳು ಮುಂತಾದವನ್ನು ಪ್ರಸ್ತುತ ಅಧ್ಯಯನಕ್ಕೆ ಆಕರವಾಗಿ ಬಳಸಿಕೊಳ್ಳಲಾಗಿದೆ. ಬೆಂಗಳೂರು ನಗರ ಸಂಸ್ಕೃತಿಯನ್ನು ಬಿಂಬಿಸುವ ಕಥೆ, ಪುರಾಣ, ಐತಿಹ್ಯ, ಧರ್ಮ, ಆಚಾರ–ವಿಚಾರಗಳು, ಸಂಪ್ರದಾಯ ಮುಂತಾದವುಗಳನ್ನು ಸಾಂಸ್ಕೃತಿಕ ಅಧ್ಯಯನದ ದೃಷ್ಟಿಯಿಂದ ತಲಸ್ಪರ್ಶಿಯಾದ ಅಧ್ಯಯನಕ್ಕೊಳಪಡಿಸಲಾಗುವುದು. ಒಟ್ಟಾರೆಯಾಗಿ ನಗರದಲ್ಲಿನ ವಿಶಿಷ್ಟವಾದ ಸಂಸ್ಕೃತಿಯನ್ನು ಅರಿಯಲು ಕ್ಷೇತ್ರಕಾರ್ಯದ ಮೂಲಕ ಅಗತ್ಯ ಮಾಹಿತಿಯನ್ನು ಸಂಗ್ರಹಿಸಲಾಗುವುದು. ಸಂಗ್ರಹಿಸಿದ ಮಾಹಿತಿಯನ್ನು ಆಕರ ಗ್ರಂಥಗಳ ಅಧ್ಯಯನದ ನೆರವಿನೊಂದಿಗೆ ವಿಶ್ಲೇಷಣೆಗೆ ಒಳಪಡಿಸಿ, ಈ ನಗರದ ವಿಶಿಷ್ಟವಾದ ಸಂಸ್ಕೃತಿಯನ್ನು ಕಟ್ಟಿಕೊಡಲು ಪ್ರಯತ್ನಿಸಲಾಗುವುದು.

## ಪ್ರಸ್ತುತ ವಿಷಯದ ಬಗ್ಗೆ ಇದುವರೆಗೂ ನಡೆದಿರುವ ಅಧ್ಯಯನಗಳ ಸಮೀಕ್ಷೆ

ಶಾಸನಗಳನ್ನು ಆಧರಿಸಿ ಅನೇಕ ಸಂಶೋಧನಾ ಪ್ರಬಂಧಗಳು ರಚನೆಯಾಗಿವೆ. ಅವುಗಳಲ್ಲಿ ಎಂ.ಚಿದಾನಂದಮೂರ್ತಿಯವರ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಅತ್ಯಂತ ಮಹತ್ವದ ಕೃತಿ. ಈ ಮಹಾಪ್ರಬಂಧವು ಕ್ರಿ.ಶ.450ರಿಂದ ಕ್ರಿ.ಶ.1150ರ ವರೆಗಿನ ಕನ್ನಡ ಶಾಸನಗಳ ಅಧ್ಯಯನವಾಗಿರುವುದರಿಂದ ಬೆಂಗಳೂರಿಗೆ ಸಂಬಂಧ ಪಟ್ಟ ಕೆಲವೇ ಕೆಲವು ಶಾಸನಗಳನ್ನು ಅಧ್ಯಯನಕ್ಕೆ ಒಳಪಡಿಸಿಕೊಂಡಿದ್ದಾರೆ.

ಡಾ.ಸಿ.ಯು.ಮಂಜುನಾಥರವರ 'ಶಾಸನಗಳು ಮತ್ತು ಕರ್ಣಾಟಕ ಸಂಸ್ಕೃತಿ' ಕೃತಿಯು ಕ್ರಿ.ಶ.1150 ರಿಂದ ಕ್ರಿ.ಶ.1340ರ ಕರ್ನಾಟಕದ ಮಧ್ಯಕಾಲೀನ ಸಂಸ್ಕೃತಿಯನ್ನು ಕನ್ನಡ ಶಾಸನಗಳ

ಮೂಲಕ ಅವಲೋಕಿಸಿದ್ದಾರೆ. ಬೆಂಗಳೂರಿಗೆ ಸಂಬಂಧಪಟ್ಟ ಶಾಸನಗಳ ಅಧ್ಯಯನ ಈ ಗ್ರಂಥದಲ್ಲಿ ಗೌಣವಾಗಿದೆ.

ಡಾ.ಆರ್.ಶೇಷಶಾಸ್ತ್ರಿಯವರ 'ಕರ್ನಾಟಕದ ವೀರಗಲ್ಲುಗಳು' ಮಹಾಪ್ರಬಂಧದ ಎಂಟು ಅಧ್ಯಾಯಗಳಲ್ಲಿ ವೀರಗಲ್ಲುಗಳ ಐತಿಹಾಸಿಕ ಮಹತ್ವವನ್ನು ಕಟ್ಟಿಕೊಡುತ್ತಾರೆ. ಆದರೆ ಬೆಂಗಳೂರು ನಗರದಲ್ಲಿನ ಕೆಲವೇ ಕೆಲವು ವೀರಗಲ್ಲುಗಳನ್ನು ಮಾತ್ರ ತಮ್ಮ ಅಧ್ಯಯನಕ್ಕೆ ಒಳಪಡಿಸಿಕೊಂಡಿದ್ದಾರೆ.

ಬೆಂಗಳೂರು ನಗರಕ್ಕೆ ಸಂಬಂಧಿಸಿದಂತೆ ಕೆಲವು ಕೃತಿಗಳು, ಲೇಖನಗಳು ಪ್ರಕಟವಾಗಿವೆ. ಬೆಂಗಳೂರು ಬಾಗಿನ, ಅರ್ಕಾವತಿ, ಉದ್ಯಾನ ನಗರಿ ಬೆಂಗಳೂರು, ಬೆಂಗಳೂರು ಸ್ಮರಣ ಸಂಚಿಕೆಗಳಲ್ಲಿ ಬಿಡಿ ಲೇಖನಗಳು ಹೊರಬಂದಿವೆಯೇ ಹೊರತು ಸಮಗ್ರವಾದ ವಿಷಯ ನಿರೂಪಣೆಯಾಗಿಲ್ಲ.

ಬ.ನ.ಸುಂದರರಾವ್‌ರವರು 'ಬೆಂಗಳೂರಿನ ಇತಿಹಾಸ' ಕೃತಿಯಲ್ಲಿ ರಾಜ್ಯ ಸರ್ಕಾರದ ಪತ್ರಾಗಾರ ಇಲಾಖೆಯಲ್ಲಿದ್ದ ದಾಖಲೆಗಳನ್ನು ಆಧರಿಸಿ ವಿಚಾರಗಳನ್ನು ಸಂಗ್ರಹಿಸಿ ಬೆಂಗಳೂರಿನ ಇತಿಹಾಸವನ್ನು ರಚಿಸಿದ್ದಾರೆ.

ಡಾ.ಎಂ.ಜಿ.ಮಂಜುನಾಥರವರ 'ಬೆಂಗಳೂರಿನ ಬಖೈರುಗಳು' ಎಂಬ ಕೃತಿಯು ಈ ಪ್ರದೇಶವನ್ನು ಆಳಿದ ಅರಸು ಮನೆತನಗಳ ಬಗ್ಗೆ, ಒಂದನೇ ಕೆಂಪೇಗೌಡ, ಮರಾಠರು, ಮೈಸೂರು ಅರಸರು, ಹೈದರಾಲಿ ಹಾಗೂ ಟಿಪ್ಪು ಸುಲ್ತಾನನ ಬಗ್ಗೆ ವಿವರಗಳನ್ನು ನೀಡುತ್ತದೆ. ಬೆಂಗಳೂರಿನ ಸಾಮಾಜಿಕ, ಧಾರ್ಮಿಕ ಪರಿಸ್ಥಿತಿಯನ್ನು ಅರಿಯಲು ಆಧಾರವಾಗಿದೆ. 'ಯಲಹಂಕ ನಾಡಪ್ರಭುಗಳ ಶಾಸನ ಸಂಪುಟ'ವನ್ನು ಡಾ.ಎಂ.ಜಿ.ಮಂಜುನಾಥರವರು ಸಂಪಾದಿಸಿದ್ದಾರೆ. ಬೆಂಗಳೂರನ್ನು ನಗರವನ್ನಾಗಿಸಿ ಅಭಿವೃದ್ಧಿ ಪಥದೆಡೆಗೆ ಕೊಂಡೊಯ್ದ ನಾಡಪ್ರಭುಗಳ ಸಮಗ್ರ ಶಾಸನದ ದಾಖಲೆ ಈ ಕೃತಿ.

ಡಾ.ಸೂರ್ಯನಾಥ ಕಾಮತ್ ಮತ್ತು ಪ್ರೊ.ಎಂ.ಎಚ್.ಕೃಷ್ಣಯ್ಯರವರು ಸಂಪಾದಿಸಿರುವ 'ಬೆಂಗಳೂರು ದರ್ಶನ' ಎಂಬ ಗ್ರಂಥದಲ್ಲಿ ಬಿಡಿ ಲೇಖನಗಳು ಪ್ರಕಟವಾಗಿದೆಯೇ ಹೊರತು ಸಮಗ್ರವಾದ ಸೂಕ್ಷ್ಮ ಅಧ್ಯಯನ ನಡೆದಿಲ್ಲ.

ಡಾ.ಬಿ.ಸಿ.ವೀರಪ್ಪನವರು 'ಬೆಂಗಳೂರು ನಗರದ ವೀರಶೈವ ಮಠಗಳು ಒಂದು ಸಾಂಸ್ಕೃತಿಕ ಅಧ್ಯಯನ' ಎಂಬ ಪಿಎಚ್.ಡಿ. ಮಹಾಪ್ರಬಂಧವನ್ನು ರಚಿಸಿದ್ದಾರೆ. ಈ ಸಂಶೋಧನೆಯು ಬೆಂಗಳೂರು ನಗರದ ವೀರಶೈವ ಮಠಗಳನ್ನು ಮಾತ್ರ ಕೇಂದ್ರಿಕರಿಸಿ ಸಾಂಸ್ಕೃತಿಕ ಅಧ್ಯಯನವನ್ನು ನಡೆಸಲಾಗಿದೆ.

ಎಂ.ಪಿ.ಪುಟ್ಟರಾಜುರವರು 'ಬೆಂಗಳೂರು ಜಿಲ್ಲೆಯ ಐತಿಹಾಸಿಕ ಪ್ರವಾಸಿ ತಾಣಗಳು' ಎಂಬ ಪಿಎಚ್.ಡಿ. ಮಹಾಪ್ರಬಂಧವನ್ನು ರಚಿಸಿದ್ದಾರೆ. ಈ ಸಂಶೋಧನೆಯು ಬೆಂಗಳೂರಿನ ಜಿಲ್ಲೆಯ ಪ್ರವಾಸಿ ತಾಣಗಳನ್ನು ಕೇಂದ್ರಿಕರಿಸಿರುವುದರಿಂದ ಬೆಂಗಳೂರು ನಗರ ಜಿಲ್ಲೆಯ ಶಾಸನಗಳನ್ನು ಗಮನಿಸಿರುವುದಿಲ್ಲ. ಈ ನಿಟ್ಟಿನಲ್ಲಿ ಬೆಂಗಳೂರು ನಗರದ ಶಾಸನಗಳ ಸಾಂಸ್ಕೃತಿಕ ಸಮಗ್ರ ಅಧ್ಯಯನ ಮಾಡುವುದರ ಮೂಲಕ ಈ ಕೊರತೆಯನ್ನು ನೀಗಬಲ್ಲದೆಂದು ಹೇಳಬಹುದು. ಪ್ರಸ್ತುತ ಮಹಾಪ್ರಬಂಧವು ಶಾಸನಗಳನ್ನೇ ಮುಖ್ಯ ಆಕರವಾಗಿಸಿಕೊಂಡು ಸೂಕ್ಷ್ಮ ಅಧ್ಯಯನವನ್ನು ಒಳಗೊಂಡಿದೆ.

## ಅಧ್ಯಯನದ ವಿಧಾನ ಮತ್ತು ಆಕರಗಳು

'ಶಾಸನಗಳ ಹಿನ್ನೆಲೆಯಲ್ಲಿ ಬೆಂಗಳೂರು ನಗರ – ಸಾಂಸ್ಕೃತಿಕ ಅಧ್ಯಯನ' ಎಂಬ ಶೀರ್ಷಿಕೆಯುಳ್ಳ ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಮೂಲ ಆಕರ ಸಾಮಗ್ರಿ ಬಿ.ಎಲ್.ರೈಸ್‌ರವರು ಸಂಪಾದಿಸಿ ಪ್ರಕಟಿಸಿರುವ ಎಪಿಗ್ರಾಫಿಯಾ ಕರ್ನಾಟಿಕಾ IX ಶಾಸನ ಸಂಪುಟದಲ್ಲಿರುವ ಬೆಂಗಳೂರು ತಾಲೂಕು ಮತ್ತು ಆನೇಕಲ್ಲು ತಾಲೂಕಿನ ಶಾಸನಗಳನ್ನು ಸಮಗ್ರವಾಗಿ ಮತ್ತು ಬೆಂಗಳೂರು ಗ್ರಾಮಾಂತರ ಪ್ರದೇಶಗಳಾದ ದೊಡ್ಡಬಳ್ಳಾಪುರ, ನೆಲಮಂಗಲ, ಹೊಸಕೋಟೆ ತಾಲೂಕುಗಳ ಕೆಲವು ಪೂರಕವಾದ ಶಾಸನಗಳನ್ನು ನನ್ನ ಅಧ್ಯಯನಕ್ಕೆ ಒಳಪಡಿಸಿಕೊಂಡಿದ್ದೇನೆ. ಇತಿಹಾಸ ದರ್ಶನ ಸಂಪುಟಗಳು, ಕನ್ನಡ ಸಾಹಿತ್ಯ ಪರಿಷ್ಪತ್ರಿಕೆ, ಲೋಚನ, ಸಾಧನೆಯಲ್ಲಿ ಪ್ರಕಟವಾದ ಬೆಂಗಳೂರಿಗೆ ಸಂಬಂಧ ಪಟ್ಟ ಪ್ರಕಟಿತ ಶಾಸನಗಳನ್ನು ಹಾಗೂ ನನ್ನ ಕ್ಷೇತ್ರಕಾರ್ಯದಲ್ಲಿ ದೊರೆತ ಅಪ್ರಕಟಿತ ಶಾಸನಗಳು ಸೇರಿ ಬೆಂಗಳೂರು ನಗರಕ್ಕೆ ಸಂಬಂಧಿಸಿದಂತೆ ದೊರೆತ ಸುಮಾರು 308 ಶಾಸನಗಳು ಮಹಾಪ್ರಬಂಧದ ಆಕರವಾಗಿದೆ. ಇದರ ಜೊತೆಗೆ ಮೈಸೂರು ಅರ್ಕಿಯಾಲಾಜಿಕಲ್ ರಿಪೋರ್ಟ್(ಎಂ.ಎ.ಆರ್) ಮಾಹಿತಿಯನ್ನು ಬಳಸಿಕೊಳ್ಳಲಾಗಿದೆ. ಈಗಾಗಲೇ ಪ್ರಕಟವಾಗಿರುವ ಶಾಸನಗಳು ಹಾಗೂ ಅವುಗಳಿಗೆ ಸಂಬಂಧಿಸಿದ ಗ್ರಂಥಗಳು, ಲೇಖನಗಳು, ನಿಯತಕಾಲಿಕೆಗಳನ್ನು ವಿಷಯಕ್ಕೆ ತಕ್ಕಂತೆ ಉಪಯೋಗಿಸಿಕೊಂಡಿದ್ದೇನೆ.

ಪ್ರದೇಶವೊಂದರ ಅಧ್ಯಯನವು ಮುಖ್ಯವಾಗಿ ಕ್ಷೇತ್ರಕಾರ್ಯವನ್ನು ಅವಲಂಬಿಸಿರುತ್ತದೆ. ಹಾಗಾಗಿ ಬೆಂಗಳೂರು ನಗರದಲ್ಲಿ ಸಂಪೂರ್ಣ ಕ್ಷೇತ್ರಕಾರ್ಯ ಕೈಗೊಂಡು ದೊರೆತ ಸ್ಮಾರಕ ಶಿಲ್ಪಗಳು, ದೇವಾಲಯಗಳು ಹಾಗೂ ವಕ್ತೃಗಳು ನೀಡುವ ವಿವರವನ್ನು ಅಧ್ಯಯನಕ್ಕೆ ಬಳಸಿಕೊಂಡಿದ್ದೇನೆ.

## ಅಧ್ಯಯನದ ವ್ಯಾಪ್ತಿ

ಪ್ರಸ್ತುತ ಈ ಮಹಾಪ್ರಬಂಧವು ಪ್ರಾಚೀನ ಮತ್ತು ಆಧುನಿಕತೆ ಈ ಎರಡೂ ಮುಖಗಳನ್ನು ಕಂಡಿರುವ ಬೆಂಗಳೂರು ನಗರದ ಇತಿಹಾಸ, ಬೆಂಗಳೂರಿನ ಬದಲಾವಣೆಯ ಸ್ವರೂಪ, ಸ್ವಾತಂತ್ರ್ಯ ಪೂರ್ವದಲ್ಲಿನ ಬೆಂಗಳೂರು, ಸ್ವಾತಂತ್ರ್ಯಾ ನಂತರದ ಬೆಂಗಳೂರು ಹಾಗೂ ಪ್ರಸ್ತುತದ ಬೆಂಗಳೂರು ನಗರದ ಸಂಸ್ಕೃತಿಯ ಅಧ್ಯಯನವನ್ನು ಮಾಡುವ ಉದ್ದೇಶವನ್ನು ಹೊಂದಿದೆ. ಆಧುನಿಕತೆಯ ಭರದಲ್ಲಿ ತನ್ನ ಹಳೆಯ ಸಂಸ್ಕೃತಿಯನ್ನು ಕಳೆದುಕೊಂಡು ಹೊಸ–ಹೊಸ ಸಂಸ್ಕೃತಿಯನ್ನು ಮೈಗೂಡಿಸಿಕೊಳ್ಳುತ್ತಿರುವ ಈ ಸಂದರ್ಭದಲ್ಲಿ ಬೆಂಗಳೂರಿನ ಶ್ರೀಮಂತವಾಗಿದ್ದ ಸಂಸ್ಕೃತಿಯನ್ನು ಅರಿಯುವ ಅಗತ್ಯತೆಯಿದೆ. ಈ ಅಗತ್ಯತೆಯನ್ನು ಪೂರೈಸುವ ನಿಟ್ಟಿನಲ್ಲಿ ಪ್ರಸ್ತುತದ ಈ ಅಧ್ಯಯನವು ಅದರ ಒಂದು ಪ್ರಯತ್ನವಾಗಿದೆ.

## ಅಧ್ಯಯನದ ರೂಪುರೇಷೆಗಳು

## ಅಧ್ಯಾಯ ಒಂದು : ಚಾರಿತ್ರಿಕ ಅಧ್ಯಯನ

ಬೆಂಗಳೂರು ಸಾವಿರಾರು ವರ್ಷಗಳಿಂದಲೇ ಜನರ ವಾಸಸ್ಥಾನವಾಗಿತ್ತು ಎಂದು ನಮಗೆ ದೊರೆತಿರುವ ಬೆಂಗಳೂರಿನ ಜಾಲಹಳ್ಳಿ ಬಡಾವಣೆ ಹಾಗೂ ಬಸವನಗುಡಿ ಬಳಿಯ ಕಹಳೆಬಂಡೆ ಉದ್ಯಾನದ ಬಳಿ ಸೂಕ್ಷ್ಮಶಿಲಾಯುಗ, ನವಶಿಲಾಯುಗದ ಅವಶೇಷಗಳು ಸುಮಾರು 5000 ವರ್ಷಗಳ ಹಿಂದೆಯೇ ಜನರ ವಾಸಸ್ಥಳವಾಗಿತ್ತು ಎಂಬುದು ಸ್ಪಷ್ಟವಾಗುತ್ತದೆ. ಹಾಗಾಗಿ ಈ ಅಧ್ಯಾಯದಲ್ಲಿ ಬೆಂಗಳೂರಿನ ಪ್ರಾಗೈತಿಹಾಸಿಕ ಕಾಲದಿಂದ ಇಂದಿನ ಬೆಂಗಳೂರಿನವರೆಗಿನ ಐತಿಹಾಸಿಕ ಪರಿಚಯವನ್ನು ಮಾಡಿಕೊಡಲಾಗುವುದು. ಬೆಂಗಳೂರು ನಗರದ ಪ್ರಾಚೀನತೆ ಮತ್ತು ಕ್ರಿ.ಶ.8ನೇ ಶತಮಾನದಿಂದ 18ನೇ ಶತಮಾನದವರೆಗೆ ಈ ನಗರವನ್ನು ಆಳಿದ ಪ್ರಮುಖ ರಾಜವಂಶಗಳಾದ ಗಂಗರು, ರಾಷ್ಟ್ರಕೂಟರು, ಚೋಳರು, ನೊಳಂಬರು, ಹೊಯ್ಸಳರು, ವಿಜಯನಗರದ ಅರಸರು, ಕುಕ್ಕಲನಾಡಿನ ದೊರೆಗಳು, ಯಲಹಂಕ ನಾಡಪ್ರಭುಗಳು, ಸುಗುಟೂರು ಅರಸರು, ಜಿಗಣಿ ನಾಯಕರು, ಮೈಸೂರು ಒಡೆಯರು, ಹೈದರಾಲಿ, ಟಿಪ್ಪು, ಬ್ರಿಟಿಷರು ಬೆಂಗಳೂರಿನೊಡನೆ ಹೊಂದಿದ್ದ ರಾಜಕೀಯ ಸಂಬಂಧವನ್ನು ಶಾಸನಾಧಾರಗಳ ಮೂಲಕ ವಿವರಿಸಲಾಗುವುದು. ಹಾಗೂ ಫ್ರಾನ್ಸಿಸ್ ಬುಕನನ್ ಕಂಡ ಬೆಂಗಳೂರನ್ನು ಕುರಿತು ವಿಶ್ಲೇಷಿಸಲಾಗಿದೆ. ಈ ರಾಜಮನೆತನಗಳು ಈ ನಗರಕ್ಕೆ ನೀಡಿರುವ ಕೊಡುಗೆಗಳನ್ನು ಕುರಿತು ಚರ್ಚಿಸಲಾಗುವುದು.

**ಅಧ್ಯಾಯ ಎರಡು : ಆಡಳಿತ ಪದ್ಧತಿ**

ಈ ಅಧ್ಯಾಯದಲ್ಲಿ ಪ್ರಾಚೀನ ಕಾಲದಲ್ಲಿ ಬೆಂಗಳೂರು ನಗರ ಜಿಲ್ಲೆಯಲ್ಲಿ ಪ್ರಚಲಿತದಲ್ಲಿದ್ದ ಆಡಳಿತ ಪದ್ಧತಿಯನ್ನು ಸಮಗ್ರವಾಗಿ ವಿಶ್ಲೇಷಿಸಲಾಗುವುದು. ಗಂಗ, ಚೋಳ, ಹೊಯ್ಸಳ, ವಿಜಯನಗರ, ಮೈಸೂರು ಒಡೆಯರ ಆಳ್ವಿಕೆಯ ಕಾಲದಲ್ಲಿನ ಆಡಳಿತ ಪದ್ಧತಿಯ ಜೊತೆಗೆ ಪ್ರಾಚೀನ ಬೆಂಗಳೂರಿನ ಪ್ರಾದೇಶಿಕ ಆಡಳಿತ ವಿಭಾಗಗಳನ್ನು ಶಾಸನಗಳ ಆಧಾರದಿಂದ ವಿಶ್ಲೇಷಿಸಲಾಗುವುದು.

**ಅಧ್ಯಾಯ ಮೂರು : ಧಾರ್ಮಿಕ ಅಧ್ಯಯನ**

ಬೆಂಗಳೂರು ನಗರ ಸರ್ವಧರ್ಮಗಳನ್ನು ತನ್ನದಾಗಿಸಿಕೊಂಡಿದೆ. ಈ ನಗರದಲ್ಲಿ ಅಸ್ತಿತ್ವದಲ್ಲಿದ್ದ ಧರ್ಮಗಳಾದ ಬೌದ್ಧ, ಜೈನ, ಶೈವ, ಲಕುಲೀಶ ಪಾಶುಪತ, ಕಾಳಾಮುಖ, ಕಾಪಾಲಿಕ, ನಾಥಪಂಥ, ವೀರಶೈವ, ಶ್ರೀವೈಷ್ಣವ ಧರ್ಮ, ಮಾಧ್ವ, ಕ್ರೈಸ್ತ, ಇಸ್ಲಾಂ ಮುಂತಾದ ಧರ್ಮಗಳನ್ನು ಕುರಿತು ಅಧ್ಯಯನ ಮಾಡಲಾಗುವುದು. ಗಾಣಪತ್ಯ, ಸೌರಮತ, ವೀರಭದ್ರ ಪರಂಪರೆ, ಮಾತೃದೇವತಾರಾಧನೆಗಳ ಪದ್ಧತಿಯ ಅಸ್ತಿತ್ವಗಳನ್ನು ಗುರುತಿಸಲಾಗುವುದು ಬೆಂಗಳೂರು ನಗರವನ್ನು ಆಳಿದ ಅರಸು ಮನೆತನಗಳು ಧಾರ್ಮಿಕವಾಗಿ ನೀಡಿದ ಕೊಡುಗೆಗಳು, ದೇವಾಲಯ ನಿರ್ಮಾಣ, ಜೀರ್ಣೋದ್ಧಾರ, ಧಾರ್ಮಿಕ ಆಚರಣೆ, ಮಠಗಳು ಮೊದಲಾದ ಧಾರ್ಮಿಕ ಮಹತ್ವವನ್ನು ಶಾಸನಗಳ ಮೂಲಕ ವಿಶ್ಲೇಷಿಸಲಾಗುವುದು.

ಈ ಅಧ್ಯಾಯದಲ್ಲಿ ಪ್ರಾಚೀನ ಬೆಂಗಳೂರಿನ ಪ್ರಮುಖ ದೇವಾಲಯಗಳಾದ ಗುಟ್ಟಹಳ್ಳಿಯ ಗವಿಗಂಗಾಧರೇಶ್ವರ ದೇವಾಲಯ, ಹಲಸೂರಿನ ಸೋಮೇಶ್ವರ ದೇವಾಲಯ, ಬೇಗೂರಿನ ನಾಗೇಶ್ವರ, ಭಿನ್ನಮಂಗಲದ ಮುಕ್ತಿನಾಥೇಶ್ವರ, ಬನ್ನೇರುಘಟ್ಟದ ಚಂಪಕಧಾಮಸ್ವಾಮಿ ದೇವಾಲಯ, ಕೋಟೆ ವೆಂಕಟರಮಣಸ್ವಾಮಿ ದೇವಾಲಯ, ದೊಡ್ಡ ಬಸವನಗುಡಿ ದೇವಾಲಯ, ವಸಂತಪುರದ ವಸಂತ ವಲ್ಲಭರಾಯ ಸ್ವಾಮಿ, ಹೆಸರುಘಟ್ಟದ ಪಾಂಡವರ ದೇವಾಲಯ, ಕೋಟೆ ಆಂಜನೇಯ, ರಂಗನಾಥಸ್ವಾಮಿ, ಕೆಂಗೇರಿ ಸೋಮೇಶ್ವರ ಮುಂತಾದ ಪ್ರಮುಖ ದೇವಾಲಯಗಳನ್ನು ಕುರಿತು ಸಮಗ್ರವಾಗಿ ವಿಶ್ಲೇಷಿಸಲಾಗುತ್ತದೆ.

**ಅಧ್ಯಾಯ ನಾಲ್ಕು : ಸಾಮಾಜಿಕ ಅಧ್ಯಯನ**

ಶಾಸನಗಳ ಹಿನ್ನೆಲೆಯಲ್ಲಿ ಪ್ರಾಚೀನ ಬೆಂಗಳೂರಿನಲ್ಲಿ ಅಸ್ತಿತ್ವದಲ್ಲಿದ್ದ ವರ್ಗವ್ಯವಸ್ಥೆ, ವರ್ಣವ್ಯವಸ್ಥೆ, ದಲಿತರ ಸ್ಥಾನಮಾನ, ತೊತ್ತುಗಳ ವಿವರಣೆ, ಅಗ್ರಹಾರಗಳು, ವಿದ್ಯಾಭ್ಯಾಸ, ಸ್ತ್ರೀಯರ ಜೀವನ ಮತ್ತು ಪ್ರಾಚೀನ ಕಾಲಘಟ್ಟದ ಆರ್ಥಿಕ ಪರಿಸ್ಥಿತಿಯನ್ನು ನಿರ್ಧರಿಸುವ ತೆರಿಗೆ ಪದ್ಧತಿ,

ವೃತ್ತಿಗಳು, ವರ್ತಕರು ಅವರ ವ್ಯಾಪಾರ ವ್ಯವಹಾರಗಳು, ನಾಣ್ಯಪದ್ಧತಿ, ಭೂದಾನದ ವಿಧಾನಗಳು, ಅಳತೆಮಾಪನಗಳು ಮತ್ತಿತರ ಅಂಶಗಳನ್ನು ಈ ಅಧ್ಯಾಯದಲ್ಲಿ ವಿಶ್ಲೇಷಿಸಲಾಗುವುದು.

## ಅಧ್ಯಾಯ ಐದು : ಸ್ಮಾರಕ ಶಿಲ್ಪಗಳು

ಶಾಸನಗಳಷ್ಟೇ ಅಲ್ಲದೆ ಸ್ಮಾರಕಗಳು ಚರಿತ್ರೆಯ ಜೀವನಾಡಿಗಳಾಗಿವೆ ಎಂದರೆ ಅತಿಶಯೋಕ್ತಿಯಾಗಲಾರದು. ಹಾಗಾಗಿ ಈ ಅಧ್ಯಾಯದಲ್ಲಿ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ದೊರೆತ ಸ್ಮಾರಕ ಶಿಲ್ಪಗಳಾದ ವೀರಗಲ್ಲು, ತುರುಗೋಳು ಕಲ್ಲುಗಳು, ಮಾಸ್ತಿಕಲ್ಲುಗಳು ಮತ್ತು ಶಾಸನಶಿಲ್ಪವನ್ನು ವಿಶ್ಲೇಷಿಸಲಾಗುವುದು. ಯುದ್ಧದ ಪ್ರಾಚೀನತೆ, ಕಾಳಗದ ರೀತಿ, ವೀರಯೋಧರಿಗೆ ನೀಡುತ್ತಿದ್ದ ಮಹತ್ವ, ಮಹಿಳೆಯರ ಸಾಮಾಜಿಕ ಪರಿಸ್ಥಿತಿಯನ್ನು ಅವಲೋಕಿಸಲಾಗಿದೆ.

## ಅಧ್ಯಾಯ ಆರು : ರಾಚನಿಕ ಅಧ್ಯಯನ

ಅಲೆಮಾರಿಯಾಗಿದ್ದ ಮಾನವ ತನ್ನ ಜೀವನೋಪಾಯಕ್ಕೆ ಒಂದು ಕಡೆ ನೆಲೆಸಿ ಬೇಸಾಯಪದ್ಧತಿಯನ್ನು ರೂಡಿಸಿಕೊಂಡ. ಹೀಗೆ ನೆಲೆನಿಂತವನು ತನ್ನ ಸುತ್ತಲೂ ಸಾಂಸ್ಕೃತಿಕ ಪರಿಸರವನ್ನು ಕಟ್ಟಿಕೊಳ್ಳತೊಡಗಿದ. ತಾನಿರುವ ಸ್ಥಳಕ್ಕೆ ತನ್ನ ನೆನಪಿನ ಆಧಾರದ ಮೇಲೆ ಪ್ರಾಕೃತಿಕವಾಗಿ ಬಂದಿರುವ ಸಸ್ಯ, ಗಿಡ, ಬಳ್ಳಿ, ಮರ, ಹಣ್ಣು, ಹೂವು, ನದಿ, ಬೆಟ್ಟ, ಪ್ರಾಣಿ, ವ್ಯಕ್ತಿ, ಐತಿಹ್ಯ, ಮತ್ತು ಚಾರಿತ್ರಿಕ ಘಟನೆಗಳ ಹೆಸರನ್ನು ಕಟ್ಟಿದ.

ಆನಂತರದ ಕಾಲ ಘಟ್ಟಗಳಲ್ಲಿ ಒಂದು ಸ್ಥಳದ ಸಂಸ್ಕೃತಿಯನ್ನು ಅಧ್ಯಯನ ಮಾಡತೊಡಗಿದವರಿಗೆ ಆ ಸ್ಥಳದ ಹೆಸರನ್ನೂ ಕೂಡ ಅಧ್ಯಯನ ಮಾಡುವುದು ಅನಿವಾರ್ಯವಾಯಿತು. ಏಕೆಂದರೆ ಪ್ರತಿಯೊಂದು ಸ್ಥಳನಾಮವು ತನ್ನದೇ ಆದ ಸಾಂಸ್ಕೃತಿಕ ಅಂಶವನ್ನು ಹೊಂದಿರುತ್ತದೆ.

ಸ್ಥಳನಾಮಗಳ ಅಧ್ಯಯನ ಕುತೂಹಲಕರವಾದ ವಿಷಯವಾಗಿದೆ. ಬೇರೆ ಬೇರೆ ಊರುಗಳ ಹುಟ್ಟಿನ ಮೂಲ, ಇತಿಹಾಸ, ಆರ್ಥಿಕ ಪರಿಸರ, ಭೌಗೋಳಿಕ ಪರಿಸರ ಮುಂತಾದವುಗಳನ್ನು ತಿಳಿಯಲು ಸ್ಥಳನಾಮಗಳು ನೆರವಾಗುತ್ತವೆ. ಹಾಗಾಗಿ ಪ್ರಾಚೀನ ಬೆಂಗಳೂರಿನ ಶಾಸನೋಕ್ತ ಸ್ಥಳನಾಮಗಳನ್ನು ಕುರಿತು ಪ್ರಸ್ತುತ ಅಧ್ಯಾಯದಲ್ಲಿ ವಿಶ್ಲೇಷಿಸುವುದರ ಜೊತೆಗೆ ಶಾಸನಗಳ ಭಾಷೆ, ಪರಿಭಾಷೆ, ಪ್ರಾರ್ಥನಾ ಶ್ಲೋಕಗಳು, ಫಲಶ್ರುತಿ ಶ್ಲೋಕಗಳು, ಶಾಪಾಶಯಗಳು, ಶಾಸನ ಸಾಹಿತ್ಯ, ಲಿಪಿಕಾರರು, ರೂವಾರಿಗಳನ್ನು ಶಾಸನಗಳ ಆಧಾರದಿಂದ ಕೂಲಂಕಷವಾಗಿ ಅಭ್ಯಸಿಸಲಾಗುವುದು.

## ಸಮಾರೋಪ

ಅಧ್ಯಯನದ ಫಲಿತವನ್ನು ಸಂಗ್ರಹವಾಗಿ ಸಮಾರೋಪದಲ್ಲಿ ನಿರೂಪಿಸಲಾಗುವುದು. ಬೆಂಗಳೂರು ನಗರದ ಶಾಸನಗಳನ್ನು ಮುಖ್ಯ ಆಕರವಾಗಿಟ್ಟುಕೊಂಡು ಪೂರಕ ಸಾಹಿತ್ಯಕ ಆಕರ ಸಾಮಗ್ರಿಗಳೊಡನೆ ಚಾರಿತ್ರಿಕ, ಧಾರ್ಮಿಕ, ಸಾಮಾಜಿಕ ನೆಲೆಗಳಲ್ಲಿ ವಿಶ್ಲೇಷಿಸಿ, ಆ ಮೂಲಕ ಅನ್ವೇಷಿಸಿದ ಬೆಂಗಳೂರು ನಗರದ ಸಾಂಸ್ಕೃತಿಕ ಇತಿಹಾಸವನ್ನು ಪ್ರಾಮಾಣಿಕವಾಗಿ ದಾಖಲಿಸುವ ಪ್ರಧಾನ ಉದ್ದೇಶವನ್ನು ಈ ಅಧ್ಯಯನವು ಹೊಂದಿದೆ.

ಕೊನೆಯ ಭಾಗವಾದ ಅನುಬಂಧದಲ್ಲಿ ನನ್ನ ಅಧ್ಯಯನದ ವ್ಯಾಪ್ತಿಯಲ್ಲಿನ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಸಂಗ್ರಹಿಸಿದ ಅಪ್ರಕಟಿತ ಶಾಸನಗಳ ಪಠ್ಯ, ವಕ್ತೃಗಳ ವಿವರ, ಬೆಂಗಳೂರು ನಗರದ ನಕಾಶೆ ಮತ್ತು ಬೆಂಗಳೂರು ನಗರದಲ್ಲಿ ದೊರೆತ ಸ್ಮಾರಕ ಶಿಲ್ಪಗಳ ಕೆಲವು ಪ್ರಮುಖ ಛಾಯಾಚಿತ್ರಗಳನ್ನು ಅಧ್ಯಯನಕ್ಕೆ ಪೂರಕವಾಗಿ ನೀಡಲಾಗುವುದು, ಹಾಗೂ ಪ್ರಸ್ತುತ ಅಧ್ಯಯನಕ್ಕೆ ಪೂರಕವಾದ ಪರಾಮರ್ಶನ ಗ್ರಂಥಗಳ ಪಟ್ಟಿಯನ್ನು ನೀಡಲಾಗುವುದು.

# ಅಧ್ಯಾಯ–ಒಂದು

# ಚಾರಿತ್ರಿಕ ಅಧ್ಯಯನ

## ಬೆಂಗಳೂರು ನಗರ ಜಿಲ್ಲೆಯ ಭೌಗೋಳಿಕ ಹಿನ್ನೆಲೆ

ಬಹುಮುಖಿ ಸಂಸ್ಕೃತಿಯನ್ನು ಮೈಗೂಡಿಸಿಕೊಂಡು ವಿಶ್ವದ ಪ್ರಮುಖ ನಗರಗಳಲ್ಲಿ ಒಂದಾಗಿರುವ ಬೆಂಗಳೂರು ಇಂದು ಸಿಲಿಕಾನ್ ಸಿಟಿ, ಗಾರ್ಡನ್ ಸಿಟಿ, ಐಟಿ–ಬಿಟಿ ಸಿಟಿ, ಉದ್ಯಾನ ನಗರಿ ಎಂದೆಲ್ಲಾ ಕರೆಸಿಕೊಳ್ಳುತ್ತಿದೆ. ಬೆಂಗಳೂರಿನಲ್ಲಿ ವಿವಿಧ ಬಗೆಯ ಭಾಷೆ, ಶೈಲಿ, ಸಂಸ್ಕೃತಿ, ಧರ್ಮಗಳನ್ನು ಕಾಣಬಹುದು. ಇಂತಹ ಬೆಂಗಳೂರು ಸಾಂಸ್ಕೃತಿಕ ಪ್ರಕ್ರಿಯೆಗಳಿಂದೇನು ಹೊರತಾಗಿಲ್ಲ. ಶಾಸನದ ಹಿನ್ನೆಲೆಯಲ್ಲಿ ಕ್ರಿ.ಶ.9ನೇ ಶತಮಾನದ ವೇಳೆಗಾಗಲೇ 'ಬೆಂಗಳೂರು' ಎಂಬ ಹೆಸರು ಪ್ರಚಲಿತವಾಗಿತ್ತು ಎಂಬುದನ್ನು ಗುರುತಿಸಬಹುದು.[1] ಯಾವುದೇ ಪ್ರಾಂತ್ಯದ ಸಾಂಸ್ಕೃತಿಕ ಚರಿತ್ರೆಯನ್ನು ತಿಳಿಯುವ ಮೊದಲು ಆಯಾ ಪ್ರಾಂತ್ಯದ ಭೌಗೋಳಿಕ ವೈಶಿಷ್ಟ್ಯ, ಪ್ರಾಗಿತಿಹಾಸದ ವಿಶೇಷತೆಯನ್ನು ಗಮನಿಸಬೇಕಾದದ್ದು ಅವಶ್ಯಕ.

**ಭೌಗೋಳಿಕ ವ್ಯಾಪ್ತಿ :** ಕರ್ನಾಟಕದ ರಾಜಧಾನಿಯಾಗಿರುವ ಬೆಂಗಳೂರು ಕರ್ನಾಟಕದ ಆಗ್ನೇಯದ ಮೂಲೆಯಲ್ಲಿದೆ. ಪೂರ್ವಕ್ಕೆ ಕೋಲಾರ ಜಿಲ್ಲೆ, ಪಶ್ಚಿಮಕ್ಕೆ ತುಮಕೂರು ಜಿಲ್ಲೆ, ಉತ್ತರಕ್ಕೆ ಚಿಕ್ಕಬಳ್ಳಾಪುರ ಜಿಲ್ಲೆ, ದಕ್ಷಿಣಕ್ಕೆ ಮೈಸೂರು ಜಿಲ್ಲೆಗಳಿವೆ. ಹಾಗೂ ಬೆಂಗಳೂರು ನಗರವು ಕನಕಪುರ, ರಾಮನಗರ, ಚನ್ನಪಟ್ಟಣ, ಮಾಗಡಿ, ನೆಲಮಂಗಲ, ದೊಡ್ಡಬಳ್ಳಾಪುರ, ಹೊಸಕೋಟೆ ತಾಲ್ಲೂಕುಗಳಿಂದ ಸುತ್ತುವರೆದಿದೆ. 1986ರ ಅಧಿಕಾರ ವಿಕೇಂದ್ರೀಕರಣದನ್ವಯ ಕರ್ನಾಟಕ ಸರ್ಕಾರ 15ನೇ ಆಗಸ್ಟ್ 1986ರಲ್ಲಿ ಬೆಂಗಳೂರು ನಗರ ಜಿಲ್ಲೆ ಹಾಗೂ ಗ್ರಾಮಾಂತರ ಜಿಲ್ಲೆಯಾಗಿ ವಿಭಜಿಸಿ ಅಸ್ತಿತ್ವಕ್ಕೆ ತರಲಾಯಿತು. ಬೆಂಗಳೂರು ಗ್ರಾಮಾಂತರ ಜಿಲ್ಲೆಯಾಗಿ ದೊಡ್ಡಬಳ್ಳಾಪುರ, ನೆಲಮಂಗಲ, ದೇವನಹಳ್ಳಿ, ಹೊಸಕೋಟೆ ತಾಲೂಕುಗಳನ್ನೂ ಹಾಗೂ ಬೆಂಗಳೂರು ನಗರ ಜಿಲ್ಲೆಯಾಗಿ ಬೆಂಗಳೂರು ದಕ್ಷಿಣ, ಬೆಂಗಳೂರು ಉತ್ತರ, ಆನೇಕಲ್ಲು ತಾಲೂಕುಗಳನ್ನು ಭೌಗೋಳಿಕ ಹಿನ್ನೆಲೆಯಲ್ಲಿ ವಿಂಗಡಿಸಲಾಗಿದೆ. ಬೆಳೆಯುತ್ತಿದ್ದ ಬೆಂಗಳೂರು ನಗರದ ಆಡಳಿತಾತ್ಮಕ ಒತ್ತಡವನ್ನು ತಡೆಯಲು 2001ನೇ ಡಿಸೆಂಬರ್ 12ನೇ ತಾರೀಖಿನಂದು 'ಬೆಂಗಳೂರು ಪೂರ್ವ' ಎಂಬ ಹೊಸ ತಾಲೂಕು ಉದಯವಾಯಿತು. ಈ ತಾಲೂಕಿಗೆ ಸೇರಿರುವ ಬಿದರಹಳ್ಳಿ ಹೋಬಳಿ 1986ಕ್ಕಿಂತ ಹಿಂದೆ ಹೊಸಕೋಟೆ ತಾಲೂಕಿನ ಭಾಗವಾಗಿತ್ತು. ಈಗ ಬೆಂಗಳೂರು ಜಿಲ್ಲೆಯಲ್ಲಿ ಬೆಂಗಳೂರು ನಗರ, ಉತ್ತರ, ದಕ್ಷಿಣ ಮತ್ತು ಪೂರ್ವ ಹಾಗೂ ಆನೇಕಲ್ ತಾಲೂಕುಗಳು ಅಂತರ್ಗತವಾಗಿವೆ. ಹೀಗೆ ಆಡಳಿತಾತ್ಮಕವಾಗಿ ಬೆಂಗಳೂರನ್ನು ಬೆಂಗಳೂರು ಜಿಲ್ಲೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ

ಎಂದು ವಿಂಗಡಿಸಿದ್ದರೂ ಬೆಂಗಳೂರು ಮಹಾನಗರವೂ ಸೇರಿದಂತೆ ಇಡೀ ಜಿಲ್ಲೆ $12^0$ $39^0$ ಉತ್ತರದಿಂದ $13^0$ $38^0$ ಉತ್ತರ ಅಕ್ಷಾಂಶ, $77^0$ $20^0$ ಪೂರ್ವದಿಂದ $77^0$ $50^0$ ಪೂರ್ವ ರೇಖಾಂಶದವರೆಗೂ ಹಂಚಿಕೆಯಾಗಿದೆ.[2]

ಬೆಂಗಳೂರು ಮೆಟ್ರೋಪೋಲ್ ಎಂದರೆ ಸುಮಾರು 1400 ಚ.ಕಿ.ಮೀ. ವಿಸ್ತೀರ್ಣ ಹೊಂದಿರುವ ಹೊಸ ಬಡಾವಣೆಗಳನ್ನೂ ಒಳಗೊಂಡಿರುವ ನಗರ ಹಲವು ಗ್ರಾಮಾಂತರ ಪ್ರದೇಶಗಳನ್ನು ಒಳಗೆ ಸೇರಿಸಿಕೊಳ್ಳುತ್ತಲೇ ಎಲ್ಲ ದಿಕ್ಕುಗಳಲ್ಲೂ ಬೆಳೆದಿರುವ ನಗರ. 1872ರಲ್ಲಿ ಶೇಷಾದ್ರಿಪುರ ಚಾಮರಾಜಪೇಟೆ ವಿನ್ಯಾಸ ಸಿದ್ಧತೆ, 1892ರಲ್ಲಿ ಚಾಮರಾಜಪೇಟೆ ಮತ್ತು ಬೆಂಗಳೂರಿಗೆ ಸೇರ್ಪಡೆ, 1898ರಲ್ಲಿ ಬಸವನಗುಡಿ ಮತ್ತು ಮಲ್ಲೇಶ್ವರಂ, 1908 ಶಂಕರಪುರಂ, 1915 ಗವೀಪುರಂ, 1916 ಶ್ರಿರಾಮಪುರಂ, 1918 ವಿಶ್ವೇಶ್ವರಪುರ, 1921–31 ವೆಂಕಟರಂಗಾಪುರ, ಗವೀಪುರ–ಗುಟ್ಟಹಳ್ಳಿ, ಕಲಾಸಿಪಾಳ್ಯ ಮತ್ತು ಕೇಂದ್ರ ಕಾರಾಗೃಹದ ಪಶ್ಚಿಮ ಭಾಗದ ನೂತನ ಬಡಾವಣೆ ಬೆಂಗಳೂರಿಗೆ ಸೇರ್ಪಡೆ. 1931–41 ಮಾಗಡಿರಸ್ತೆಯಲ್ಲಿ ಕೆಂಪಾಪುರ ಅಗ್ರಹಾರ ಮತ್ತು ರಾಮಚಂದ್ರಪುರ, 1947 ಜುಲೈನಲ್ಲಿ ದಂಡು ಪ್ರದೇಶದ ನಾಗರಿಕ ಆಡಳಿತ ನಾಲ್ವಡಿ ಕೃಷ್ಣರಾಜೇಂದ್ರ ಒಡೆಯರ್‌ರವರಿಗೆ ವರ್ಗಾವಣೆಯಾಗುತ್ತದೆ. 1949ರಲ್ಲಿ ನಗರ, ನಾಗರಿಕ ಮತ್ತು ಮಿಲಿಟರಿ ದಂಡು ವಿಲೀನವಾಗುತ್ತದೆ. 1951–61ರಲ್ಲಿ ದೇವರ ಜೀವನ ಹಳ್ಳಿ, ಜಾಲಹಳ್ಳಿ, ಜೋಡಿಕೆಂಪಾಪುರ, ಕಾಡುಗೊಂಡನಹಳ್ಳಿ, ಕೇತಮಾರನಹಳ್ಳಿ(ರಾಜಾಜಿನಗರ), ಯಶವಂತಪುರ ನಗರಕ್ಕೆ ಸೇರ್ಪಡೆಯಾಗುತ್ತದೆ. 1970ರ ಹೊತ್ತಿಗಾಗಲೇ ಪಟ್ಟಣ ಸಮುಚ್ಚಯ ಕಲ್ಪನೆ ಗಣತಿಯಲ್ಲಿ ಜಾರಿಯಾಗುತ್ತದೆ. 1981ರಲ್ಲಿ ಹೆಬ್ಬಾಳ, ಎಚ್.ಎಂ.ಟಿ ವಾಚ್ ಫ್ಯಾಕ್ಟರಿ, ಕೆಂಗೇರಿ, ಕೃಷ್ಣರಾಜಪುರ, ಲಿಂಗರಾಜಪುರ, ಬೈಯಪ್ಪನಹಳ್ಳಿ, ಸರ್ಜಾಪುರಗಳು ಬೆಂಗಳೂರು ಪಟ್ಟಣ ಸಮುಚ್ಚಯಕ್ಕೆ ಸೇರ್ಪಡೆಯಾಗುತ್ತವೆ.[3] ಹೀಗೆ ಇಂದಿನ ಬೆಂಗಳೂರು ತನ್ನ ಸುತ್ತಲಿನ ಗ್ರಾಮೀಣ ಪ್ರದೇಶವನ್ನು ತನ್ನೊಳಗೆ ಒಂದಾಗಿಸಿಕೊಂಡು ವ್ಯಾಪಕವಾಗಿ ಬೆಳೆಯುತ್ತಿದೆ. ಹೊರಗೆ ನಿಂತು ನೋಡುವವರಿಗೆ ಸ್ವಪ್ನ ನಗರಿ ಆದರೆ ಕಂಡವರಿಗೆ ಬೆಂಗಳೂರು ಹಳ್ಳಿಗಳ ನಗರವೆಂದರೆ ಅದರಲ್ಲಿ ಯಾವ ಉತ್ಪ್ರೇಕ್ಷೆಯೂ ಇಲ್ಲವೆಂದು ಹೇಳಬಹುದು.

**ವಾಯುಗುಣ :** ಬೆಂಗಳೂರು ನಗರವು ಸಮುದ್ರ ಮಟ್ಟದಿಂದ 900 ರಿಂದ 953ಮೀ ಎತ್ತರದಲ್ಲಿದೆ. ಈ ಎತ್ತರದಿಂದ ಹವಾಗುಣವು ಆಹ್ಲಾದಕರವಾಗಿದೆ. ವಾರ್ಷಿಕ ಸರಾಸರಿ 970ಮಿ.ಮೀ, ಮಳೆ ಬೀಳುತ್ತದೆ. ವರ್ಷದಲ್ಲಿ ಸರಾಸರಿ 30 ಮಳೆಯ ದಿನಗಳಾಗಿವೆ. ಜುಲೈ, ಆಗಸ್ಟ್, ಸೆಪ್ಟೆಂಬರ್ ಮತ್ತು ಅಕ್ಟೋಬರ್ ತಿಂಗಳಿನಲ್ಲಿ ಅನುಕ್ರಮವಾಗಿ ಸರಾಸರಿ 110.2, 137.0, 194.8 ಮತ್ತು 180.4 ಮಿ.ಮೀ ಮಳೆ ಬೀಳುತ್ತದೆ. ವಾಯುಗುಣದ ಉಷ್ಣತೆಯ ಗರಿಷ್ಠ 32.7ಡಿಗ್ರಿ ಸೆ. ಮತ್ತು ಕನಿಷ್ಠ 21.2

ಸೆ. ಇರುತ್ತದೆ. ಡಿಸೆಂಬರ್ ತಿಂಗಳು ವರ್ಷದ ಅತಿ ಕಡಿಮೆ ಉಷ್ಣಾಂಶ ಇರುವ ತಿಂಗಳು(ಗರಿಷ್ಠ 25.9 ಸೆಂ ಮತ್ತು ಕನಿಷ್ಠ 15.6 ಸೆಂ) ಇದರಂತೆಯೇ ಸಾಪೇಕ್ಷ ತೇವಾಂಶವು ಮಳೆಗಾಲದ ತಿಂಗಳಿನಲ್ಲಿ ಸರಾಸರಿ ಶೇಕಡಾ 85ರಷ್ಟು ಇದ್ದರೆ ಡಿಸೆಂಬರ್ ಮತ್ತು ಜನವರಿ ತಿಂಗಳುಗಳಲ್ಲಿ ಶೇಕಡಾ 50ರಷ್ಟು ಇರುತ್ತದೆ. ಈ ಮೇಲಿನ ಅಂಶಗಳನ್ನು ಗಮನಿಸಿದರೆ ಬೆಂಗಳೂರಿನ ಹವಾಗುಣ ಅತಿ ಹೆಚ್ಚು ಉಷ್ಣವೂ ಅಲ್ಲ. ಅತಿ ಹೆಚ್ಚು ತಂಪೂ ಅಲ್ಲ ಎಂಬುದು ವಿದಿತವಾಗುತ್ತದೆ. ಇಂಥ ಆಹ್ಲಾದಕರ ಹವಾಗುಣಕ್ಕೆ ನಗರದ ಭೂಮಟ್ಟದ ಎತ್ತರವೇ ಕಾರಣ.[4] ಬೆಂಗಳೂರಿನಲ್ಲಿ ನೆಲಯೂರ ಬಯಸುವ ನಾಗರೀಕರ ಸಂಖ್ಯೆ ಪ್ರತಿವರ್ಷವೂ ಹೆಚ್ಚುತ್ತಿರುವುದಕ್ಕೆ ಇಲ್ಲಿನ ಆಹ್ಲಾದಕರವಾದ ಹವಾಮಾನವೂ ಒಂದು ಪ್ರಬಲ ಕಾರಣವಾಗಿದೆ.

**ಜಲಸಂಪನ್ಮೂಲ :** ಬೆಂಗಳೂರು ನಗರದ ಮುಖ್ಯ ನದಿ ವೃಷಭಾವತಿ. ಬಸವನಗುಡಿ ಬಡಾವಣೆಯ ದೊಡ್ಡ ಬಸವಣ್ಣ ಇರುವ ಹೆಬ್ಬಂಡೆಗಳ ಬಿರುಕಿನಲ್ಲಿ ಶುದ್ಧನೀರಿನ ಸಣ್ಣ ತೊರೆಯಾಗಿ ವೃಷಭಾವತಿ ನದಿ ಹುಟ್ಟುತ್ತದೆ ಎಂದು ಶಾಸನದಲ್ಲಿ ಉಲ್ಲೇಖವಾಗಿದೆ.[5] ಈಗ ಪೀಣ್ಯದ ಬಳಿ ಈ ನದಿ ಪಾತ್ರ ದೊಡ್ಡದಾಗಿರುವುದರಿಂದ ಇದನ್ನೇ ಈಗ ಮೂಲ ವೃಷಭಾವತಿ ನದಿ ಎಂದು ಗುರುತಿಸುತ್ತಾರೆ. ಭಾರತದ ಸರ್ವೆ ಇಲಾಖೆಯ ನಕ್ಷೆ ಈ ನದಿ ಪೀಣ್ಯದಲ್ಲಿ ಹುಟ್ಟುವುದನ್ನು ಸ್ಪಷ್ಟವಾಗಿ ಬಿಂಬಿಸುತ್ತದೆ. ಮುಂದೆ ವೃಷಭಾವತಿ ನದಿ ನಾಗರಬಾವಿ ತೊರೆಯನ್ನು ಕೂಡಿಕೊಂಡು ಮುದುವಾಡಿದುರ್ಗದ ಬಳಿ ಅರ್ಕಾವತಿಯನ್ನು ಕೂಡಿಕೊಳ್ಳುತ್ತದೆ.[6] ಹಿಂದೆ ವೃಷಭಾವತಿ ನದಿಯಲ್ಲಿ ಮೀನುಗಳು ಬಾಳುವಷ್ಟು ಶುದ್ಧ ನೀರಿತ್ತೆಂದು ತಿಳಿದುಬರುತ್ತದೆ. ಆದರೆ ಇಂದಿನ ಕೈಗಾರಿಕೀಕರಣದ ಭರಾಟೆಯಲ್ಲಿ ನದಿ ಸಂಪೂರ್ಣವಾಗಿ ಹಾಳಾಗಿದೆ.

ಆನೇಕಲ್ಲು ತಾಲೂಕಿನಲ್ಲಿ ಸುವರ್ಣಮುಖಿ ಹೊಳೆಯೊಂದು ಹರಿಯುತ್ತದೆ. ಹಾಗೂ ಬೆಂಗಳೂರಿನಲ್ಲಿ ಕೆರೆಗಳ ಸಂಖ್ಯೆ ಹೆಚ್ಚಾಗಿರುವುದನ್ನು ಗುರುತಿಸಬಹುದು. ಕೆಲವು ಕೆರೆಗಳು ಗಂಗರು, ವಿಜಯನಗರದ ಅರಸರು, ಯಲಹಂಕನಾಡಪ್ರಭುಗಳ ಕಾಲದಲ್ಲಿ ನಿರ್ಮಾಣವಾಗಿರುವುದು ವಿಶೇಷವಾಗಿದೆ. ಅಗರ ಕೆರೆ, ಹೆಬ್ಬಾಳ ಕೆರೆ, ವರ್ತೂರು ಕೆರೆ, ಕೋರಮಂಗಲ ಕೆರೆ, ಹಲಸೂರು ಕೆರೆ, ಶೀನಿವಾಗಿಲು ಕೆರೆ, ಕಲ್ಕೆರೆ, ನಾಗವಾರ ಕೆರೆ, ಬೆಳ್ಳಂದೂರು ಕೆರೆ, ಕೆಂಪಾಂಬುಧಿ ಕೆರೆ ಹೀಗೆ ಬೆಂಗಳೂರಿನಲ್ಲಿ ಸುಮಾರು ಐವತ್ತಕ್ಕೂ ಹೆಚ್ಚಿನ ಕೆರೆಗಳನ್ನು ಗುರುತಿಸಬಹುದು. ಹಾಗಾಗಿಯೋ ಏನೋ ಬೆಂಗಳೂರನ್ನು ಲೇಕ್ ಸಿಟಿ ಎಂತಲೂ ಕರೆಯುತ್ತಾರೆ.

**ಬೆಟ್ಟಗುಡ್ಡಗಳು :** ದಕ್ಷಿಣ ಭಾರತದ ಎತ್ತರದ ಬೆಟ್ಟ ಶ್ರೇಣಿ ಎಂದು ಹೆಸರುವಾಸಿಯಾದ ನೀಲಗಿರಿ ಬೆಟ್ಟಶ್ರೇಣಿಗಳ ಅಂಚಿನಲ್ಲಿ ಬೆಂಗಳೂರು ಇರುವುದನ್ನು ಕಾಣುತ್ತೇವೆ. ಎರಡು ಪ್ರಮುಖ ಬೆಟ್ಟಗಳ ಶ್ರೇಣಿಗಳ ಆಯಕಟ್ಟಿನ ಸ್ಥಳದಲ್ಲಿರುವ ಬೆಂಗಳೂರು ಪಶ್ಚಿಮ ಕರಾವಳಿ ಪ್ರದೇಶದಿಂದ ದಕ್ಷಿಣದ

ಒಳನಾಡಿನ ಮಾರ್ಗಗಳಲ್ಲಿ ಬರುವ ಒಂದು ಊರಾಗಿದೆ. ಬೆಂಗಳೂರಿನ ಉತ್ತರ ಭಾಗದಲ್ಲಿ ನಂದಿ ಬೆಟ್ಟ ಶ್ರೇಣಿಗಳು ಹಾಗೂ ದಕ್ಷಿಣ ಭಾಗದಲ್ಲಿ ರಾಮಗಿರಿ – ಸಾವನದುರ್ಗ ಬೆಟ್ಟ ಶ್ರೇಣಿಗಳನ್ನು ಕಾಣುತ್ತೇವೆ. ಈ ಎರಡು ಬೆಟ್ಟ ಶ್ರೇಣಿಗಳ ನಡುವಿನ ಮೈದಾನದಂತಹ ಬಯಲು ಪ್ರದೇಶದಲ್ಲಿ ಬೆಂಗಳೂರು ಇದೆ. ರಾಜಾಜಿನಗರ, ಜಯನಗರ, ಬಸವನಗುಡಿ, ಪೀಣ್ಯ, ನಾಗರಬಾವಿ, ಉತ್ತರಹಳ್ಳಿ, ಇವೆಲ್ಲ ಪಶ್ಚಿಮ ಬೆಂಗಳೂರಿನ ಭಾಗಗಳು. ಸಣ್ಣಪುಟ್ಟ ಬೆಟ್ಟ ಗುಡ್ಡಗಳು, ದಿಬ್ಬಗಳು, ವೃಕ್ಷದಂತೆ ಕವಲಾಗಿ ಹರಿಯುವ ಸಣ್ಣ ತೊರೆ, ಹಳ್ಳಗಳನ್ನು ಪಶ್ಚಿಮ ಬೆಂಗಳೂರಿನಲ್ಲಿ ಕಾಣಬಹುದು. ರಾಜಾಜಿನಗರ ಬೆಟ್ಟ(947 ಮೀ), ಗೊಟ್ಟಿಗೆರೆ ಬೆಟ್ಟ(872 ಮೀ), ಉತ್ತರಹಳ್ಳಿ ಬೆಟ್ಟ(923 ಮೀ), ನಾಗರಬಾವಿ ಗುಡ್ಡ(874 ಮೀ), ಬಸವನಗುಡಿಯ ಮೌಂಟ್‌ಜಾಯ್ (930 ಮೀ)[7] ಎಂಬ ಬೆಟ್ಟಗಳು ಪ್ರಮುಖವಾಗಿದೆ. ಹಾಗಾಗಿ ಪಶ್ಚಿಮ ಬೆಂಗಳೂರು ಮೂಲತಃ ಬೆಟ್ಟಗಳ ಕಣಿವೆ ಪ್ರದೇಶ. ಭೌಗೋಳಿಕವಾಗಿ ಈ ಕಿರುಬೆಟ್ಟಗಳಲ್ಲಿ ಕೆಲವನ್ನು ರಕ್ಷಣೆಗಾಗಿಯೂ ಮತ್ತೂ ಕೆಲವನ್ನು ದೇವಾಲಯಗಳ ನಿರ್ಮಾಣಕ್ಕಾಗಿಯೂ ಬಳಸಿಕೊಳ್ಳಲಾಗಿದೆ.

**ಕೃಷಿ :** ಪ್ರಸ್ತುತ ಸಂದರ್ಭದಲ್ಲಿ ಬೆಂಗಳೂರು ನಗರ ಕೈಗಾರಿಕೀಕರಣವನ್ನೇ ಆಶ್ರಯಿಸಿದೆ. ಆದರೂ ಮೂಲತಃ ಇಲ್ಲಿನ ಜನರ ಕಸುಬು ಕೃಷಿಯಾಗಿತ್ತು. ಬೆಂಗಳೂರಿನ ಕೆಂಗೇರಿಯಲ್ಲಿ ಒಂದು ಕಾಲಕ್ಕೆ ತೆಂಗಿನ ಮರಗಳು ಹೆಚ್ಚಾಗಿದ್ದವು. ತೆಂಗಿನ ಏರಿಯೇ ಇಂದು ಕೇಂಗೇರಿಯಾಗಿರುವುದು. ಇಂದಿಗೂ ಕೆಲವು ಕೃಷಿಕ ವರ್ಗದವರು ತಮ್ಮ ಭೂಮಿಯಲ್ಲಿ ಕಡಲೆಕಾಯಿ, ಹತ್ತಿ, ಮೊದಲಾದ ತೋಟಗಾರಿಕಾ ಬೆಳೆಗಳನ್ನು ಬೆಳೆಯುತ್ತಾರೆ. ಆನೇಕಲ್ಲು ತಾಲೂಕಿನ ಕೆಲವು ಭಾಗಗಳಲ್ಲಿ ರಾಗಿ, ಭತ್ತ, ದ್ವಿದಳ ಧಾನ್ಯಗಳು ಮತ್ತು ಎಣ್ಣೆ ಬೀಜಗಳನ್ನು ಬೆಳೆಯುತ್ತಾರೆ. ನಗರಕ್ಕೆ ಸಮೀಪವೇ ಇರುವ ಬೆಂಗಳೂರು ಗ್ರಾಮಾಂತರ ಜಿಲ್ಲೆಗೆ ಸೇರುವ ನೆಲಮಂಗಲದಲ್ಲಿ ಮುಸುಕಿನ ಜೋಳ, ಎಲೆಕೋಸು ಬೆಳೆಯುತ್ತಾರೆ.

**ಕೈಗಾರಿಕೀಕರಣ:** ಬೆಂಗಳೂರು ಕೆಂಪೇಗೌಡನ ಕಾಲಕ್ಕಾಗಲೇ ವಾಣಿಜ್ಯೋದ್ಯಮದಲ್ಲಿ ಮುಂದುವರೆದಿತ್ತು. ಬುಕಾನಾನ್ ತನ್ನ ಕೃತಿಯಲ್ಲಿ ತಿಳಿಸುವ ಪ್ರಕಾರ, ಬೆಂಗಳೂರಿನಲ್ಲಿ ಎಣ್ಣೆ ಕೈಗಾರಿಕೆಗಳು, ಬಣ್ಣ ತಯಾರಿಕಾ ಕೈಗಾರಿಕೆಗಳು ಅದಾಗಲೇ ತಲೆ ಎತ್ತಿದ್ದವು. ಹಾಗೂ ಬೆಂಗಳೂರು ಬೇರೆ–ಬೇರೆ ಊರುಗಳೊಂದಿಗೆ ವ್ಯಾಪಾರ ಸಂಪರ್ಕವನ್ನೂ ಹೊಂದಿತ್ತು. ಸ್ವಾತಂತ್ರ್ಯ ಪೂರ್ವದಲ್ಲೇ 1937ರಲ್ಲಿ ಮೈಸೂರು ಟ್ಯೋಬಾಕೋ ಕಂಪನಿ ಬೆಂಗಳೂರಿನಲ್ಲಿ ಸ್ಥಾಪನೆಯಾಗಿತ್ತು. ಹಾಗೂ 1925ರಲ್ಲಿ ಮಿನರ್ವ ಮಿಲ್ಸ್ ಸ್ಥಾಪನೆಯಾಗಿತ್ತು. ಸ್ವಾತಂತ್ರ್ಯಾನಂತರ ಈ ಕೈಗಾರಿಕೆಗಳನ್ನು ಎನ್.ಟಿ.ಸಿ. ಸ್ವಾಮ್ಯಕ್ಕೆ ತೆಗೆದುಕೊಂಡಿತು. ಪ್ರಸ್ತುತ ಈ ಕೈಗಾರಿಕೆಗಳು ಮುಚ್ಚಿವೆ.[8] ಸ್ವಾತಂತ್ರ್ಯ ನಂತರ ಹತ್ತು ಹಲವು ಕೈಗಾರಿಕೆಗಳು ಸ್ಥಾಪನೆಯಾದವು. ಈ ಸಂಸ್ಥೆಗಳು ಈಗಲೂ ಅಸ್ತಿತ್ವದಲ್ಲಿವೆ. ಪ್ರಸ್ತುತ ಬೆಂಗಳೂರು ಪ್ರಮುಖ ವಾಣಿಜ್ಯ ಮತ್ತು ಔದ್ಯಮಿಕ ಕೇಂದ್ರವಾಗಿದೆ.

**ಜನಸಂಖ್ಯೆ :** 2011ರ ಭಾರತೀಯ ಜನಗಣತಿ ವರದಿಯ ಪ್ರಕಾರ ಬೆಂಗಳೂರಿನ ಜನಸಂಖ್ಯೆಯು 8,443,675. ಇದರಲ್ಲಿ ಪುರುಷರು 4,391,723 ಮತ್ತು 4,051,952 ಇದ್ದಾರೆ. ನಗರದ ಒಟ್ಟಾರೆ ಸಾಕ್ಷರತೆಯ ಪ್ರಮಾಣ ಶೇಕಡ 91.71ರಷ್ಟಿದೆ. ಇದರಲ್ಲಿ ಶೇಕಡ 88.71 ಪುರುಷರು ಹಾಗೂ ಶೇಕಡ 85.44 ಮಹಿಳೆಯರಿದ್ದಾರೆ. ಬೆಂಗಳೂರಿನ ಜನಸಂಖ್ಯೆಯು ಕಳೆದ ದಶಕಕ್ಕಿಂತ 46.68% ಹೆಚ್ಚಾಗಿದೆ. 2011ರಲ್ಲಿ ಜನಸಂಖ್ಯೆಯು ಸರಿಸುಮಾರು 9.59 ಮಿಲಿಯನ್ ಆಗಿದೆ. ರಾಜ್ಯದ ಜನಸಂಖ್ಯೆಯಲ್ಲಿ ಶೇಕಡ 15.69ರಷ್ಟು ಜನರು ಈ ಜಿಲ್ಲೆಯೊಂದರಲ್ಲೇ ನೆಲಸಿರುವರು.

## ಬೆಂಗಳೂರಿನ ಪ್ರಾಗಿತಿಹಾಸ

ಹೊಸತನಕ್ಕೆ ಹೊಂದಿಕೊಳ್ಳುವ ಪ್ರವೃತ್ತಿ ಮನುಷ್ಯನ ಸಹಜ ಗುಣ. ಇದು ಇಂದು ನೆನ್ನೆಯದಲ್ಲ, ಅನಾದಿಕಾಲದಿಂದಲೂ ನಡೆದುಕೊಂಡು ಬಂದಿದೆ. ಆಧುನಿಕತೆ ಎಂದರೆ ಹೊಸತು. 'ನಾಗರೀಕತೆ ಮತ್ತು ನಗರೀಕರಣ' ಇವು ಒಂದಕ್ಕೊಂದು ಅವಿನಾಭಾವ ಸಂಬಂಧವನ್ನು ಹೊಂದಿವೆ. ಆದಿಮಾನವನಾಗಿದ್ದವನು ತನಗೆ ಬೇಕಾದ ಸೌಲಭ್ಯವನ್ನು ಹೊಂದಲು ಒಂದು ಕಡೆ ನೆಲೆ ನಿಂತು ಜೀವಿಸಲು ಪ್ರಾರಂಭಿಸಿ ನಾಗರೀಕನಾದ. ನಾಗರೀಕತೆಯ ಕಡೆಗೆ ಸಾಗಿದ ದಾರಿಯೇ ಹಲವು ವಿಸ್ಮಯಕಾರಿ ಘಟನೆಗಳನ್ನು ತಿಳಿಸುತ್ತದೆ. ತನಗೆ ಅವಶ್ಯಕವಾದ ಜೀವನ ನಡೆಸಲು ಒಂದು ಸ್ಥಳ ಅಥವಾ ಪ್ರದೇಶದ ಅವಶ್ಯಕತೆ ಇದೆ ಎಂಬುದನ್ನು ಅರಿತುಕೊಂಡ. ಹೀಗೆ ಆದಿಮಾನವ ನಾಗರೀಕನಾಗುವುದರ ಜೊತೆಗೆ ಕಾಡನ್ನು ನಾಡಾಗಿಸತೊಡಗಿದ. ಮುಂದೆ ಇದೇ ನಾಡನ್ನು ತನ್ನ ಅನುಕೂಲತೆ, ಅವಶ್ಯಕತೆಯ ಆಧಾರದ ಮೇಲೆ ನಗರವಾಗಿಸಿಕೊಂಡ. ಹೀಗೆ ನಾಗರೀಕನಾಗುತ್ತಾ ಬಂದ ಮಾನವನ ಸಾಂಸ್ಕೃತಿಕ ಚರಿತ್ರೆಯನ್ನು ಎರಡು ನೆಲೆಯಲ್ಲಿ ಗುರುತಿಸಬಹುದು. ಮೊದಲನೆಯದು ಪ್ರಾಗಿತಿಹಾಸಕಾಲ. ಎರಡನೆಯದು ಇತಿಹಾಸ ಕಾಲ.

ಪ್ರಾಗೈತಿಹಾಸಿಕ ಯುಗವನ್ನು ಆದಿಶಿಲಾಯುಗ (ಸುಮಾರು ಕ್ರಿ.ಪೂ.2,50,000–ಕ್ರಿ.ಪೂ. 1,00,000), ಮಧ್ಯಶಿಲಾಯುಗ (ಸುಮಾರು ಕ್ರಿ.ಪೂ.9000–ಕ್ರಿ.ಪೂ.7000), ನವಶಿಲಾಯುಗ (ಸುಮಾರು ಕ್ರಿ.ಪೂ.7000–ಕ್ರಿ.ಪೂ2100), ಬೃಹತ್ ಶಿಲಾಯುಗ (ಸುಮಾರು ಕ್ರಿ.ಪೂ.2100–ಕ್ರಿ.ಪೂ.1500) ಎಂದು ವಿಂಗಡಿಸಲಾಗಿದೆ. ಈ ಸಂಸ್ಕೃತಿಗಳಲ್ಲಿ ನವಶಿಲಾಯುಗ ಸಂಸ್ಕೃತಿಯು ಕ್ರಿ.ಪೂ. ಎರಡು ಸಾವಿರದ ಐದುನೂರು ಅಂದರೆ ಇಂದಿಗೆ ನಾಲ್ಕು ಸಾವಿರದ ಐದುನೂರು ವರ್ಷಗಳಷ್ಟು ಹಿಂದೆ ಹಾಗೂ ಬೃಹತ್ ಶಿಲಾಯುಗ ಸಂಸ್ಕೃತಿಯು ಕ್ರಿ.ಪೂ. ಒಂದು ಸಾವಿರ ವರ್ಷಗಳಷ್ಟು ಅಂದರೆ ಇಂದಿಗೆ ಸುಮಾರು ಮೂರು ಸಾವಿರ ವರ್ಷಗಳಷ್ಟು ಪ್ರಾಚೀನ ಕಾಲದಲ್ಲಿ ಅಸ್ತಿತ್ವದಲ್ಲಿದ್ದವು ಎಂದು ವಿದ್ವಾಂಸರು ಗುರುತಿಸುತ್ತಾರೆ. ಈ ಹಿನ್ನೆಲೆಯಲ್ಲಿ ಬೆಂಗಳೂರು ನಗರದಲ್ಲಿ

ಆದಿಮಾನವನ ನೆಲೆಗಳು ಇದ್ದವು ಎಂಬುದಕ್ಕೆ ಪುಷ್ಠಿಯನ್ನು ನೀಡುವ ಹಲವು ನೆಲೆಗಳು ದೊರೆತಿದೆ. ಅವುಗಳು ಈ ಮುಂದಿನಂತೆ ಇವೆ.

## ಆದಿಶಿಲಾಯುಗ(ಪೇಲಿಯೋಲಿಥಿಕ್ ಏಜ್)

ಆದಿಶಿಲಾಯುಗವು ಮಾನವನ ಪ್ರಥಮ ಹಂತ. ಈ ಯುಗದಲ್ಲಿ ಮಾನವ ಶಿಲೆಯಿಂದ ಮಾತ್ರ ಬಹುತೇಕ ಉಪಕರಣಗಳನ್ನು ತಯಾರಿಸಿಕೊಂಡು ಅವುಗಳನ್ನು ಬಳಕೆ ಮಾಡಿಕೊಳ್ಳುತ್ತಿದ್ದ. ಈ ಕಾಲದಲ್ಲಿ ಅವನ ರೀತಿ ನೀತಿಗಳೂ ಸಾಕಷ್ಟು ಸುಧಾರಿಸದೇ ಇನ್ನೂ ಆದಿಮ ಹಂತದಲ್ಲೇ ಇದ್ದುದ್ದರಿಂದ ಈ ಕಾಲಘಟ್ಟವನ್ನು ಆದಿಶಿಲಾಯುಗ ಸಂಸ್ಕೃತಿ ಎಂದು ಕರೆಯಲಾಗುತ್ತದೆ. ಬೆಂಗಳೂರಿನ ಪ್ರದೇಶದಲ್ಲಿ ಇದುವರೆಗೂ ಆದಿಶಿಲಾಯುಗ ಕಾಲಘಟ್ಟದ ಅವಶೇಷಗಳು ದೊರೆತಿರಲಿಲ್ಲ. ಆದರೆ ಇತ್ತೀಚೆಗೆ ಬನಶಂಕರಿ ಎರಡನೇ ಹಂತದ ಕದಿರೇನಹಳ್ಳಿ ಕೆಳಸೇತುವೆ ಬಳಿ ನೀರು ಸೋರಿಕೆಯನ್ನು ತಡೆಯಲು ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ರಸ್ತೆ ಅಗೆದಾಗ ಆದಿಶಿಲಾಯುಗದ ಪುರಾವೆಗಳು ದೊರೆತಿವೆ. ಡಾ.ಕೆ.ಬಿ.ಶಿವತಾರಕ್‌ರವರು ಪರಿಶೀಲಿಸಿ ಕದಿರೇನಹಳ್ಳಿಯಲ್ಲಿ ದೊರೆತ ಶಿಲೆಗಳು ಹಿಂದೆ ತುಮಕೂರು, ಮಂಡ್ಯ ಹಾಗೂ ಚಿತ್ರದುರ್ಗ ಜಿಲ್ಲೆಗಳಲ್ಲಿ ಸಂಗ್ರಹಿಸಿದ್ದ ಶಿಲೆಗಳಿಗೆ ಸಾಮ್ಯತೆ ಹೊಂದಿವೆ ಎಂದು ವಿವರಿಸಿದ್ದಾರೆ. ಐದು ಶಿಲಾ ಸಾಧನಗಳನ್ನು ಅವರು ಸಂಗ್ರಹಿಸಿದ್ದು ಕೈ–ಕೊಡಲಿ, ಉಜ್ಜುವ ಸಾಧನ, ಎಲೆಯಾಕಾರದ ಸಾಧನ, ಸುತ್ತಿಗೆ ಕಲ್ಲು ಹಾಗೂ ಪುಟ್ಟ ಶಿಲಾಕೊಡಲಿಗಳು ಸಿಕ್ಕಿವೆ. ಇವು ಬೆಣಚುಕಲ್ಲು ಮತ್ತು ಸ್ಫಟಿಕದಿಂದ ಮಾಡಲ್ಪಟ್ಟವು. 7.11 ಸೆಂಟಿಮೀಟರ್ ಉದ್ದ ಹಾಗೂ 4.7 ಸೆಂ–ಮೀ ಅಗಲ ಇವೆ. ಈ ಪುರಾವೆಯಿಂದ ಬೆಂಗಳೂರು ನಾಲ್ಕು ಲಕ್ಷ ವರ್ಷಗಳ ಹಿಂದೆಯೇ ಮಾನವನ ವಾಸಸ್ಥಳವಾಗಿತ್ತು ಎಂಬುದಕ್ಕೆ ಸಾಕ್ಷಿಯಾಗಿವೆ. ಹಾಗೂ ಈ ಪುರಾವೆಗಳು ಮೊಟ್ಟಮೊದಲ ಬಾರಿಗೆ ದೊರೆತ ಆದಿಶಿಲಾಯುಗದ ದಾಖಲೆಗಳಾಗಿವೆ.[9] ಈ ಪ್ರದೇಶದಲ್ಲಿ ಹೆಚ್ಚಿನ ಭೂಉತ್ಖನನಗಳು, ಸಂಶೋಧನೆಗಳು ನಡೆದರೆ ಆದಿಶಿಲಾಯುಗದ ಅವಶೇಷಗಳು ಮತ್ತಷ್ಟೂ ದೊರೆತರೂ ದೊರೆಯಬಹುದು.

## ಸೂಕ್ಷ್ಮಶಿಲಾಯುಗ ಸಂಸ್ಕೃತಿಯ ನೆಲೆಗಳು(ಮೈಕ್ರೋಲಿಥಿಕ್ ಏಜ್)

ಬೆಂಗಳೂರು ಮತ್ತು ಜಾಲಹಳ್ಳಿಯಲ್ಲಿ ಸೂಕ್ಷ್ಮಶಿಲಾಯುಗಕ್ಕೆ ಸಂಬಂಧಿಸಿದ ಶಿಲಾಯುಧಗಳು ದೊರೆತಿವೆ. "1946 ನವೆಂಬರ್‌ನಲ್ಲಿ ಕೆ.ಆರ್.ಯು. ಟಾಡ್‌ರವರು ಜಾಲಹಳ್ಳಿ, ಬೆಂಗಳೂರಿನ ಇಂಡೋ–ಬ್ರಿಟಿಷ್ ಜನರಲ್ ಆಸ್ಪತ್ರೆ ಮತ್ತು ಹಿಂದೂಸ್ತಾನ್ ಏರ್‌ಕ್ರಾಫ್ಟ್ ಫ್ಯಾಕ್ಟರಿ ಹತ್ತಿರ ಸೂಕ್ಷ್ಮ ಶಿಲಾಯುಗ ನೆಲೆಯನ್ನು ಶೋಧಿಸಿದರು. ಜಾಲಹಳ್ಳಿಯ ನೆಲೆಯು ಸಮೀಪದ

ಎರಡು ಬೆಟ್ಟಗಳ ನಡುವಿನ ಕೊಳ್ಳ ಪ್ರದೇಶದಲ್ಲಿದೆ. ಇಲ್ಲಿಯ ಒಂದು ಕೊರಕಲಿನಲ್ಲಿ ಗ್ರಾನೈಟ್ ಬಂಡೆಯ ಮೇಲಿನ ಕೆಂಪು ಮಣ್ಣಿನ ಪದರಿನಲ್ಲಿ ಹಾಗೂ ಸುತ್ತ ಮುತ್ತ ನೆಲದಮೇಲೆ ಸೂಕ್ಷ್ಮ ಶಿಲಾ ಸಂಸ್ಕೃತಿಯ ಅತಿ ಸಣ್ಣ ಸಣ್ಣ ಕಲ್ಲಿನ ಉಪಕರಣಗಳಿದ್ದುದನ್ನು ಟಾಡ್ ಸಂಗ್ರಹಿಸಿದ್ದಾರೆ. ಈ ಉಪಕರಣಗಳು ಲಂಡನ್ನಿನ ಬ್ರಿಟಿಷ್ ಮ್ಯೂಸಿಯಮ್‌ನಲ್ಲಿವೆ. ಅವುಗಳನ್ನು ಎಂ.ಶ್ರೇಷಾದ್ರಿಯವರು ತಮ್ಮ ಪಿಎಚ್.ಡಿ. ಸಂಶೋಧನೆಯ ಭಾಗವಾಗಿ ಸೂಕ್ಷ್ಮವಾಗಿ ಮತ್ತು ಕೂಲಂಕಷವಾಗಿ ಅಧ್ಯಯನ ಮಾಡಿದ್ದಾರೆ. ಅವರ ಪ್ರಕಾರ ಅವುಗಳನ್ನು ರಾಕ್ ಕ್ರಿಸ್ಟಲ್ ಮತ್ತು ಹಾಲಿನ ಬಣ್ಣದ ಬೆಣಚುಕಲ್ಲಿನಲ್ಲಿ ಮಾಡಲಾಗಿದೆ. ಈ ಕಲ್ಲುಗಳ ಎಳೆಗಳು ಸ್ಥಳೀಯ ಕಲ್ಲು ಬಂಡೆಯ ಬಿರುಕಿನಲ್ಲಿವೆ. ಮತ್ತು ಈ ನೆಲೆಯಲ್ಲಿ ಸೂಕ್ಷ್ಮ ಶಿಲಾ ಉಪಕರಣಗಳಲ್ಲದೆ ಅನುಪಯುಕ್ತ ಕಲ್ಲುಗಳ ಸಣ್ಣ ಸಣ್ಣ ಚಕ್ಕೆಗಳು, ತುಂಡುಗಳು ಗಣನೀಯವಾಗಿವೆ. ಇದರಿಂದ ಇಂಥ ಉಪಕರಣಗಳನ್ನು ಇಲ್ಲಿಯೆ ಸಿದ್ಧಮಾಡಲಾಗಿದೆಯೆಂಬುದು ಮತ್ತು ಈ ನೆಲೆಯು ಸೂಕ್ಷ್ಮಶಿಲಾ ಉಪಕರಣಗಳ ತಯಾರಿಕೆಯ ಸ್ಥಳವೆಂಬುದು ಸ್ಪಷ್ಟ ಎಂದು ಅಭಿಪ್ರಾಯಿಸಿದ್ದಾರೆ.[10] ಆನಂತರ ಕೇಂದ್ರ ಪುರಾತತ್ವ ಇಲಾಖೆಯ ಶೋಧದಿಂದ "ರಾಗಿಗುಡ್ಡದಲ್ಲಿ ಈ ಸಂಸ್ಕೃತಿಯ ಉಪಕರಣಗಳಾದ ಅರ್ಧಚಂದ್ರಾಕೃತಿಯ ಮೊನೆ ಹಾಗೂ ಚಕ್ಕೆಗಳು ದೊರೆತಿದ್ದು, ಕ್ವಾರ್ಟ್ಸ್ ಹಾಗೂ ಚಾಲ್ಸಿಡೋನಿ ಶಿಲೆಗಳು ದೊರಕಿವೆ."[11] ಸೂಕ್ಷ್ಮಶಿಲಾಯುಗದಲ್ಲಿ ಬೆಂಗಳೂರಿನ ಪ್ರದೇಶವು ಜನವಸತಿಯಿಂದ ಕೂಡಿತ್ತು ಎಂಬುದು ಈ ಶೋಧಗಳಿಂದ ಧೃಡಪಡುತ್ತದೆ.

## ನವಶಿಲಾಯುಗ ಸಂಸ್ಕೃತಿಯ ನೆಲೆಗಳು (ನಿಯೋಲಿಥಿಕ್ ಏಜ್)

ಬೆಂಗಳೂರಿನಲ್ಲಿ ನವಶಿಲಾಯುಗ ಸಂಸ್ಕೃತಿಗೆ ಸಂಬಂಧಿಸಿದಂತೆ ಪ್ರಥಮವಾಗಿ 1896ರಲ್ಲಿ ಶೋಧಿತವಾದವು. ಈಗಿನ ರೇಸ್‌ಕೋರ್ಸ್ ಇರುವ ಪ್ರದೇಶದಲ್ಲಿ ಕಿನ್‌ಕೇಡ್ ಲೀ ಎಂಬುವವರು ಸೂಕ್ಷ್ಮಶಿಲಾಯುಗಕ್ಕೆ ಸಂಬಂಧಿಸಿದಂತೆ ಕೆಲವು ಕಿರುಶಿಲಾಯುಧ(ಮೈಕ್ರೋಲಿತ್ಸ್)ಗಳನ್ನು ಪತ್ತೆಹಚ್ಚಿದರು. ಇಂಥದೇ ಕಿರುಶಿಲಾಯುಧಗಳನ್ನು ಎಚ್.ಎ.ಎಲ್‌ಗೆ ಹೋಗುವ ರಸ್ತೆಯ ಉತ್ತರದ ಒಂದು ನಲೆಯಲ್ಲಿ 1945ರಲ್ಲಿ ಗೋರ್ಡನ್ ಎಂಬುವರು ಪತ್ತೆ ಮಾಡಿದ್ದರು. ಜಾಲಹಳ್ಳಿಯಲ್ಲಿ ಇಂಥದೇ ಕಿರುಶಿಲಾಯುಧಗಳನ್ನು ಕಂಡು ಹಿಡಿದಿದ್ದರು. ಲಂಡನ್ ಮ್ಯೂಸಿಯಮ್‌ನಲ್ಲಿ ಸಂಗ್ರಹಿಸಿಟ್ಟಿದ್ದ ಇವನ್ನು ಅಭ್ಯಸಿಸಿ ಎಂ.ಶ್ರೇಷಾದ್ರಿಯವರು ಈ ಶಿಲಾಯುಧಗಳನ್ನು ಸುಮಾರು ಕ್ರಿ.ಪೂ.6000ದಷ್ಟು ಹಳೆಯವೆಂದು ಹೇಳಿದ್ದರು.[12]

ಬೆಂಗಳೂರು ನಗರ ಜಿಲ್ಲೆಯ ಆನೇಕಲ್ಲು ತಾಲೂಕಿನ ಮುತ್ಯಾಲಮಡು ಎಂಬಲ್ಲಿ ನವಶಿಲಾಯುಗ ಸಂಸ್ಕೃತಿಯ ಕಲ್ಲಿನ ಕೊಡಲಿ ಉಪಕರಣಗಳು ದೊರಕಿವೆ.[13] ಇದನ್ನು ಹೊರತು ಪಡಿಸಿ ಈ ತಾಲೂಕಿನಲ್ಲಿ ಇದುವರೆಗೂ ನವಶಿಲಾಯುಗದ ಯಾವ ನೆಲೆಗಳು ದೊರೆತಿಲ್ಲ.

ಕೆಂಗೇರಿಯಲ್ಲಿಯೂ ನವಶಿಲಾಯುಗ ಸಂಸ್ಕೃತಿಯ ಕೆಲವು ಕುರುಹುಗಳು ದೊರೆತಿವೆ. ಇಲ್ಲಿ ಕೆಲವು ನಿಸರ್ಗ ನಿರ್ಮಿತ ಗವಿಗಳಿವೆ. ಒಂದು ಗವಿ ಬಂಡೆಮಠದ ಬಳಿಯಿದೆ. ಅಲ್ಲಿಂದ ಸುಮಾರು ಅರ್ಧ ಕಿಲೋಮೀಟರ್ ದೂರದಲ್ಲಿರುವ ಕೆಂಗೇರಿ ಉಪನಗರದ ಸ್ಯಾಟಲೈಟ್ ಕ್ಲಬ್ ಬಳಿ ಮತ್ತೊಂದು ಗವಿ ಇದೆ. ಆ ಗವಿಯ ಒಳಭಾಗದಲ್ಲಿ ನವಶಿಲಾಯುಗದ ಜನರು ಬಳಸುತ್ತಿದ್ದ ಕಲ್ಲಿನ ಕೊಡಲಿಯೊಂದು ಪತ್ತೆಯಾಗಿದೆ. ಡಾಲರೈಟ್ ಕಲ್ಲಿನಿಂದ ನಿರ್ಮಿತವಾದ ಈ ಕೊಡಲಿಯು ಸುಮಾರು ಹನ್ನೆರಡು ಅಂಗುಲಗಳಷ್ಟು ಉದ್ಧವಾಗಿದೆ. ಆ ಕೊಡಲಿಯ ಅಲುಗು ಇಂದಿಗೂ ಹರಿತವಾಗಿದೆ. ಇಂತಹ ಕೊಡಲಿಯನ್ನು ಮರದ ತುಂಡಿಗೆ ಕಟ್ಟಿಕೊಂಡು ನವಶಿಲಾಯುಗದ ಜನರು ಪ್ರಾಣಿಗಳನ್ನು ಬೇಟೆಯಾಡುತ್ತಿದ್ದರು. ಇಂತಹ ಕೊಡಲಿಯು ಈ ಪ್ರದೇಶದಲ್ಲಿ ದೊರೆತಿರುವುದರಿಂದ ನವಶಿಲಾಯುಗದ ಜನರು ಈ ಪ್ರದೇಶದಲ್ಲಿ ವಾಸಿಸುತ್ತಿದ್ದರೆಂದು ಖಚಿತವಾಗುತ್ತದೆ. ಈ ಕೊಡಲಿ ದೊರೆತ ಗುಹೆಗಳು ಆದಿಮಾನವನ ಕಲ್ಲಾಸರೆಗಳು. ಬಿಸಿಲು–ಮಳೆಯಿಂದ ರಕ್ಷಣೆಗಾಗಿ ಇವನ್ನು ಬಳಸುತ್ತಿದ್ದರು. ಹಾಗಾಗಿ ಈ ಗುಹೆಗಳು ಆ ಜನರ ವಸತಿ ತಾಣವಾಗಿದ್ದಿರಬಹುದೆಂದು ಹೇಳಬಹುದು.

ಜ್ಞಾನಭಾರತಿಯ ಆವರಣದಲ್ಲಿರುವ ಹಳ್ಳವೊಂದರಲ್ಲಿಯೂ ಕಲ್ಲಿನ ಕೊಡಲಿಯೊಂದು ಪತ್ತೆಯಾಗಿದೆ. ಸುಮಾರು ಆರು ಅಂಗುಲಗಳಷ್ಟು ಉದ್ದವಾಗಿರುವ ಈ ಕೊಡಲಿಯೂ ಸಹ ನವಶಿಲಾಯುಗದ ಜನರು ಬಳಸುತ್ತಿದ್ದ ಡಾಲರೈಟ್ ಕಲ್ಲಿನ ಕೊಡಲಿಯಾಗಿದೆ. ಈ ಕಲ್ಲಿನ ಕೊಡಲಿಗಳು ಕ್ರಿ.ಪೂ. ಎರಡು ಸಾವಿರದ ಐದು ನೂರು ವರ್ಷಗಳಷ್ಟು ಪ್ರಾಚೀನ ಕಾಲಕ್ಕೆ ಸೇರಿದವುಗಳೆಂದು ಕಾರ್ಬನ್ ಹದಿನಾಲ್ಕು ಎಂಬ ವೈಜ್ಞಾನಿಕ ಪರೀಕ್ಷೆಯಿಂದ ತಿಳಿದುಬಂದಿದೆ.[14] ಈ ಶೋಧಗಳಿಂದ ಈಗ ನಗರವಿರುವ ಪ್ರದೇಶದಲ್ಲಿ ನವಶಿಲಾಯುಗದ ಮಾನವ ನೆಲೆಸಿದ್ದನೆಂದು ಹೇಳಬಹುದು.

## ಬೃಹತ್ ಶಿಲಾಯುಗ ಸಂಸ್ಕೃತಿಯ ನೆಲೆಗಳು

'ಬೃಹತ್‌ಶಿಲಾಯುಗ' ಅಥವಾ 'ಕಬ್ಬಿಣದಯುಗ' ಎಂದು ಈ ಸಂಸ್ಕೃತಿಯನ್ನು ಕರೆಯಲಾಗುತ್ತದೆ. ಈ ಯುಗದ ಜನರಿಗೆ ಕಬ್ಬಿಣದ ಬಳಕೆ ತಿಳಿದಿತ್ತು. ಹಾಗೂ ಶವಸಂಸ್ಕಾರ ಪದ್ಧತಿಯನ್ನು ರೂಢಿಸಿಕೊಂಡಿದ್ದರು. ಇದಕ್ಕೆ ದೊರೆತಿರುವ ಶಿಲಾಗೋರಿಗಳು ಸಾಕ್ಷಿಯಾಗಿವೆ. ನಗರದಲ್ಲಿ ವಿವಿದೆಡೆ ದೊರೆತಿರುವ ಬೃಹತ್ ಶಿಲಾಯುಗದ ಗೋರಿಗಳನ್ನು ಈ ಮುಂದಿನಂತೆ ಹೆಸರಿಸಬಹುದು. ಕಂಡಿಕಲ್ಮನೆಗಳೂ, ನೆಲಕಂಡಿ ಕೋಣೆಗಳು, ಅರೆಕಂಡಿ ಕೋಣೆಗಳು, ಶವಕುಣಿ ವೃತ್ತಗಳು, ಕಲ್ಮನೆಗಳು, ನಿಲಸುಗಲ್ಲುಗಳು, ನೆಲಮಾಳಿಗೆ ಕೋಣೆಗಳು. ಬೃಹತ್‌ಶಿಲಾಯುಗಕ್ಕೆ ಸಂಬಂಧ ಪಟ್ಟ ನೆಲೆಗಳನ್ನು 1990ರ ದಶಕದಿಂದೀಚೆಗೆ ಕರ್ನಾಟಕದಲ್ಲಿನ ವಿದ್ವಾಂಸರು,

ಸಂಶೋಧಕರು ಪತ್ತೆಹಚ್ಚಿದ್ದಾರೆ. ಇವುಗಳು ಈ ಮುಂದಿನಂತಿವೆ, ನಗರ ಜಿಲ್ಲೆಯ ಭಾಗವಾಗಿರುವ ಆನೇಕಲ್ಲು ತಾಲೂಕಿನ ಬನ್ನೇರುಘಟ್ಟ, ಮೇಲೂರು ದಿಣ್ಣೆ, ಕಾಳನಾಯಕನಹಳ್ಳಿಯಲ್ಲಿ ಈ ನೆಲೆಯ ಶೋಧನೆಗಳು ಕಂಡುಬಂದಿವೆ.

ಬನ್ನೇರುಘಟ್ಟದಲ್ಲಿ ಬೃಹತ್ ಶಿಲಾಯುಗದ ಗೋರಿಗಳೂ ದೊರೆತಿವೆ. ಬನ್ನೇರುಘಟ್ಟದ ದೇವಾಲಯದ ಹಿಂಬದಿಗೆ ಬೆಟ್ಟವಿದ್ದು, ಅದರ ವಾಯುವ್ಯಕ್ಕೆ ಶಾನುಭೋಗರ ಹಳ್ಳಿಗೆ ಹೋಗುವ ದಾರಿಯಲ್ಲಿ ಷರೀಫ್ ಗಾರ್ಡನ್ ಮತ್ತು ಅದರ ಪಕ್ಕದ ಜಮೀನಿನಲ್ಲಿ ಅನೇಕ ಸಮಾಧಿಗಳಿವೆ. ಒಂದೆರಡು ನಿಲುಸುಗಲ್ಲುಗಳೂ ಇವೆ.[15] ಮೇಲೂರು ದಿಣ್ಣೆಯಲ್ಲೂ ಈ ನೆಲೆಯು ಕಂಡುಬಂದಿದೆ. ಇಲ್ಲಿ 95 ಶಿಲಾಗೋರಿಗಳಿವೆ. ಇವುಗಳಲ್ಲಿ 75 ಸಮಾಧಿಗಳು ಹಾಳಾಗಿವೆ. 7 ಮೀ ವ್ಯಾಸದ ಶಿಲಾವೃತ್ತವಿದೆ. ಹಾಳಾಗಿರುವ ಗೋರಿಗಳು ಕಪ್ಪು–ಕೆಂಪು ವರ್ಣದ ಮಡಕೆ ಹಾಗೂ ಮೂಳೆ ಚೂರುಗಳು ದೊರಕಿವೆ.[16]

"ಕಾಳನಾಯಕನಹಳ್ಳಿಯಲ್ಲಿ ಈ ಸಂಸ್ಕೃತಿಯ ಶಿಲಾಗೋರಿಗಳು 24 ದೊರೆತಿವೆ. ಇವುಗಳಲ್ಲಿ 14 ಶಿಲಾಗೋರಿಗಳು ಹಾಳಾಗಿವೆ. ಹಾಳಾಗಿರುವ ಗೋರಿಗಳಲ್ಲಿ ದೊರೆತ ಮಡಕೆಯ ಭಾಗಗಳ ಜೊತೆಗೆ ಎರಡು ಮಣ್ಣಿನ ಗೊಂಬೆಗಳು ದೊರೆತಿವೆ. ಒಂದು ಹೆಣ್ಣು ಇನ್ನೊಂದು ಗಂಡು. ಹೆಣ್ಣು ಗೊಂಬೆಯು 6.4 ಸೆಂ.ಮೀ. ಎತ್ತರ, 7.5 ಸೆಂ.ಮೀ ಅಗಲವಾಗಿದೆ. ಗಂಡು ಗೊಂಬೆ 7 ಸೆಂ.ಮೀ. ಉದ್ದ, 5.4 ಸೆಂ.ಮೀ ಅಗಲವಾಗಿದೆ. ಒಂದು ಸಣ್ಣ ಬಂಡೆಯ ಮೇಲೆ ನಾಲ್ಕು ಅಂಗುಲ ಎತ್ತರದ ಜಿಂಕೆಯ ರೇಖಾ ಚಿತ್ರವು ದೊರೆತಿದೆ. ಕಬ್ಬಿಣದ ಕೊಡಲಿಯೊಂದು ಕೃಷಿ ಕಾರ್ಯ ನಡೆಸುವಾಗ ದೊರೆತಿದೆ. ಅದು 23 ಸೆಂ.ಮೀ. ಉದ್ದ, 10 ಸೆಂ.ಮೀ ಅಗಲವಾಗಿದೆ. ವಿವಿಧ ಆಭರಣಗಳ ಅಲಂಕೃತ ಗೊಂಬೆಗಳಾಗಿವೆ."[17] ಇದುವರೆಗೂ ನಗರದಲ್ಲಿ ನಡೆದಿರುವ ಶೋಧಗಳಲ್ಲಿ ಮಣ್ಣಿನ ಗೊಂಬೆಗಳು ಪ್ರಥಮವಾಗಿ ಬೃಹತ್‌ಶಿಲಾಯುಗಕ್ಕೆ ಸಂಬಂಧಪಟ್ಟಂತೆ ದೊರೆತಿರುವುದು ಈ ಪ್ರದೇಶದಲ್ಲಿ ಮಾತ್ರ.

"ಕಗ್ಗಲಿಪುರ ಹೋಬಳಿಯ ಗಿರಿಗೌಡನದೊಡ್ಡಿಯಲ್ಲಿ ನೂರಕ್ಕೂ ಹೆಚ್ಚು ಶಿಲಾಗೋರಿಗಳಿವೆ. ಬೆಟ್ಟದ ಮೇಲೆ ಹಾಗೂ ನೆಲಮಟ್ಟದಲ್ಲಿ ಶಿಲಾಗೋರಿಗಳಿವೆ. ನೆಲದ ಒಳಭಾಗದಲ್ಲಿ 4 ಶಿಲಾಗೋರಿಗಳ ಕುರುಹುಗಳಿವೆ. ಮೂರು ಕಲ್ಲುಗಳು ಹಾಗೂ ಅವುಗಳ ಮೇಲೆ ಬೃಹದಾಕಾರದ ಚಪ್ಪಡಿಗಳನ್ನು ಮುಚ್ಚಲಾಗಿದೆ. ಸುತ್ತಲೂ ಕಲ್ಲುಗಳನ್ನು ಜೋಡಿಸಿದ್ದು, ಒಂದೇ ಕಡೆ ಪ್ರವೇಶವಿರುವಂತೆ ಮಾಡಿದ್ದಾರೆ. ನೆಲ ಮಟ್ಟದ ಸಮಾಧಿಗಳ ಮುಚ್ಚಳ ಕಲ್ಲಿನ ಮೇಲೆ ಬೆಣಚುಕಲ್ಲಿನ ಗುಡ್ಡೆಹಾಕಿ ಅದನ್ನು ವೃತ್ತಾಕಾರವಾಗಿ ಹರಡಲಾಗಿದೆ. ಕೆಲವು ಬಂಡೆಕಲ್ಲುಗಳನ್ನು ವೃತ್ತಾಕಾರವಾಗಿ

ಒಂದು ಅಥವಾ ಎರಡು ಜೋಡಿಸಲಾದ ವೃತ್ತಗಳಿವೆ."[18] ಹಾಗೂ ಇದೇ ಹೋಬಳಿಯ ಮುನಿನಗರದಲ್ಲಿ 35ಕ್ಕೂ ಹೆಚ್ಚು ಶಿಲಾಗೋರಿಗಳು ದೊರೆತಿವೆ.[19]

"ಚಿನ್ನಕುರ್ಚಿ ಗ್ರಾಮದ ಗುಡ್ಡದ ಬಳಿ ಬೃಹತ್ ಶಿಲಾಯುಗಕ್ಕೆ ಸೇರಿದ ಮೂವತ್ತೊಂದು ಕೋಣೆಯಿರುವ ಗೋರಿಗಳಿವೆ. ಈ ಸಮಾಧಿಗಳು (ಗೋರಿಗಳು) ಕಣಶಿಲೆಯ(ಗ್ರಾನೈಟ್) ಚಪ್ಪಡಿಗಳಿಂದ ಆಯತಾಕಾರದ ಕೋಣೆಯಂತೆ ನಿರ್ಮಿತವಾಗಿದೆ. ಈ ಸಮಾಧಿಗಳ ಪೂರ್ವ ಭಾಗದ ಚಪ್ಪಡಿಯಲ್ಲಿ ಒಂದೂವರೆ ಅಡಿ ವ್ಯಾಸದ ರಂದ್ರಗಳಿವೆ. ಇಂತಹ ಗೋರಿಗಳನ್ನು ರಂದ್ರಕೋಣೆ ಗೋರಿಗಳೆಂದು ಕರೆಯಲಾಗುತ್ತದೆ. ಈ ಗೋರಿಗಳ ಸುತ್ತಲೂ ಅಲ್ಲಿಯೇ ಸ್ಥಳೀಯ ಪರಿಸರದಲ್ಲಿ ದೊರೆಯುವ ಕಾಡುಗಲ್ಲುಗಳಿಂದ ನಿರ್ಮಿಸಿದ ಶಿಲಾವೃತ್ತಗಳಿವೆ. ಈ ವೃತ್ತಗಳು ಹದಿನೆಂಟರಿಂದ ಇಪ್ಪತ್ತು ಅಡಿಗಳ ವ್ಯಾಸವನ್ನು ಹೊಂದಿವೆ. ಚಿನ್ನಕುರ್ಚಿ ಗ್ರಾಮದಲ್ಲಿರುವ ಮೂವತ್ತೊಂದು ಬೃಹತ್ ಶಿಲಾಸಮಾಧಿಗಳಲ್ಲಿ ಒಂದು ಮಾತ್ರ ಸಂಪೂರ್ಣ ಹಾಳಾಗಿದೆ. ಉಳಿದ ಎಲ್ಲವೂ ಸುಸ್ಥಿತಿಯಲ್ಲಿದ್ದು ಈ ಸ್ಥಳವು ಉತ್ಖನನ ನಡೆಸಲು ಯೋಗ್ಯವಾಗಿದೆ"[20] ಎಂದು ಎಂ.ಜಿ.ಮಂಜುನಾಥರವರ ಶೋಧದಿಂದ ತಿಳಿದು ಬಂದಿದೆ. ಈ ಎಲ್ಲಾ ಶೋಧಗಳಿಂದ ಬೆಂಗಳೂರು ನಗರವು ಸೂಕ್ಷ್ಮಶಿಲಾಯುಗ, ನವಶಿಲಾಯುಗ, ಮುಂದೆ ಬೃಹತ್‌ಶಿಲಾಯುಗದಲ್ಲೂ ಜನರ ಸಂಸ್ಕೃತಿಯ ತಾಣವಾಗಿತ್ತು ಎಂಬುದು ಸ್ಪಷ್ಟವಾಗುತ್ತದೆ. ಆದರೆ ಇದುವರೆಗೂ ಹಳೆ(ಆದಿ–ಮಧ್ಯ–ಅಂತ್ಯ) ಶಿಲಾಯುಗದ ನೆಲೆಗಳು ಬೆಳಕಿಗೆ ಬಂದಿಲ್ಲದಿರುವುದು ಕುತೂಹಲಕಾರಿಯಾಗಿದೆ. ಈ ನಿಟ್ಟಿನಲ್ಲಿ ಇನ್ನೂ ವ್ಯಾಪಕವಾದ ಕ್ಷೇತ್ರ ಪರಿವೀಕ್ಷಣೆ ನಡೆಯಬೇಕಾಗಿದೆ.

ಬೆಂಗಳೂರು ನಗರ ಜಿಲ್ಲೆಯು ಭೌಗೋಳಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಮಾನವನ ಜೀವನ ನಿರ್ವಹಣೆಗೆ ಉತ್ತಮ ಸ್ಥಳವಾಗಿದೆ. ಹೀಗೆ ಸೂಕ್ಷ್ಮ ಶಿಲಾಯುಗ, ನೂತನಶಿಲಾಯುಗ, ಬೃಹತ್‌ಶಿಲಾಯುಗದ ನೆಲೆಗಳು ಶೋಧನೆಗೊಂಡಿವೆ. ಬೆಂಗಳೂರಿನ ಜಾಲಹಳ್ಳಿ, ರಾಗಿಗುಡ್ಡ, ಚಿಕ್ಕಜಾಲ, ಆನೇಕಲ್ಲು, ಬೆಳ್ಳಂದೂರು, ಕೋರಮಂಗಲ, ಸೊಣ್ಣಪ್ಪನಹಳ್ಳಿ ಮೊದಲಾದ ಪ್ರದೇಶದಲ್ಲಿ ಈ ಸಂಸ್ಕೃತಿಯ ಅವಶೇಷಗಳನ್ನು ಪತ್ತೆ ಮಾಡಲಾಗಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಗಳಾದ ದೊಡ್ಡಬಳ್ಳಾಪುರ, ನೆಲಮಂಗಲ, ದೇವನಹಳ್ಳಿಯಲ್ಲಿ ಹಾಗೆಯೇ ಕೋಲಾರ, ತುಮಕೂರು ಜಿಲ್ಲೆಗಳಲ್ಲಿ ಈ ಸಂಸ್ಕೃತಿಯ ನೆಲೆಗಳು ಪತ್ತೆಯಾಗಿವೆ. ಅಂದರೆ ಬೆಂಗಳೂರು ಪ್ರಾಗಿತಿಹಾಸದ ಕಾಲದಲ್ಲಿ ಜನರ ವಾಸದ ನೆಲೆಯಾಗಿತ್ತು ಎಂದು ಖಚಿತವಾಗಿ ತಿಳಿಯಬಹುದು.

## ಬೆಂಗಳೂರಿನ ಪ್ರಾಚೀನತೆ

ಐತಿಹ್ಯಗಳ ಪ್ರಕಾರ ಬೆಂದಕಾಳೂರು>ಬೆಂಗಳೂರು ಆಗಿದೆ. ಹೊಯ್ಸಳ ದೊರೆ ಬಲ್ಲಾಳನು ಬೇಟೆಗೆ ಎಂದು ಹೊರಟಾಗ ದಾರಿತಪ್ಪಿ ಹಸಿವಿನಿಂದ ಆಯಾಸಗೊಳ್ಳುತ್ತಾನೆ. ಒಬ್ಬ ಹಳ್ಳಿಯ

ಮುದುಕಿ ಆತನಿಗೆ ಬೆಂದಕಾಳುಗಳನ್ನು ನೀಡಿ ಅವನ ಹಸಿವನ್ನು ನಿವಾರಿಸುತ್ತಾಳೆ. ಸಂತುಷ್ಟನಾದ ರಾಜ ಆ ಹಳ್ಳಿಗೆ ಬೆಂದಕಾಳೂರು ಎಂದು ಹೆಸರಿಡುತ್ತಾನೆ. ಇದೇ ಮುಂದೆ ಬೆಂಗಳೂರು ಆಯಿತು ಎಂಬುದು ಪ್ರಸಿದ್ಧಿ ಪಡೆದಿರುವ ಕಥೆ. ಭೌಗೋಳಿಕ ಹಿನ್ನಲೆಯಲ್ಲಿ ಹೇಳುವುದಾದರೆ, ಹೆಚ್ಚಾಗಿ ಬೆಣಚುಕಲ್ಲಿನಿಂದ ಕೂಡಿರುವ ಸ್ಥಳವಾದ್ದರಿಂದ ಈ ಊರನ್ನು ಬೆಣಚುಕಲ್ಲು ಊರು ಎಂದು ಕರೆಯಲಾಗುತ್ತಿತ್ತು. ಮುಂದೆ ಅದು ಬೆಂಗಳೂರು ಆಯಿತು ಎಂಬುದು ಕೆಲವರ ಅಭಿಪ್ರಾಯ. ಕೆ.ವಿ.ರಮೇಶ, ಎಂ.ಚಿದಾನಂದಮೂರ್ತಿ, ಹ.ಕ.ರಾಜೇಗೌಡ ಮತ್ತೂ ಕೆಲವರು ಗಂಗರ ಕಾಲದಲ್ಲಿ 'ಬೆಂಗಾವಲೂರು' ಆಗಿದ್ದ ಪ್ರದೇಶವೇ ಬೆಂಗಳೂರು ಆಯಿತು ಎನ್ನುತ್ತಾರೆ. ಹೀಗೆ ಬೆಂಗಳೂರಿನ ಸ್ಥಳದ ಬಗ್ಗೆ ಹಲವು ದಂತಕತೆಗಳು ಹುಟ್ಟಿಕೊಂಡಿವೆ. ಒಂದು ಸ್ಥಳ ಅಥವಾ ಪ್ರದೇಶಗಳ ಹಿಂದೆ ಇಂತಹ ಐತಿಹ್ಯ ಕತೆ ಹುಟ್ಟಿಕೊಳ್ಳುವುದು ಸಹಜ.

ಐತಿಹ್ಯ, ದಂತಕತೆ ಅದೇನೆ ಇದ್ದರು ಶಾಸನಗಳ ಪ್ರಕಾರ ಬೆಂಗಳೂರು ಎಂಬ ಉಲ್ಲೇಖ ಸಿಗುವುದು ಕ್ರಿ.ಶ.900ರ ಗಂಗರ ಕಾಲದ ಶಾಸನದಲ್ಲಿ. "ಬೆಂಗುಳೂರು ಕಾಳಗದೊಳೆಗ ದೊಱೆಙ್ಞಾಗತರನ ಮಗಂ ಬುಟ್ಟಣ ಪತಿ ಸತ್ತಂ"[21] ಎಂದಿದೆ. ಬೆಂಗಳೂರು ಎಂಬ ಉಲ್ಲೇಖ ಸಿಗುವ ಪ್ರಥಮ ಶಾಸನವಿದು. ಈ ಶಾಸನದ ನಂತರ ಬೆಂಗಳೂರು ಎಂಬ ಉಲ್ಲೇಖ ನಮಗೆ ದೊರಕುವುದು ಕ್ರಿ.ಶ.1247ರ ಸೋಮೇಶ್ವರ ದೇವಸ್ಥಾನದಲ್ಲಿ ದೊರೆತ ತಮಿಳು ಶಾಸನದಲ್ಲಿ. "ವೆಪ್ಪೂರಿನ ಪೆಮ್ಮಟ್ಟಿಯಾರ್ ಎಂಬುವನು ವೆಂಗಳೂರಿನ ದೊಡ್ಡಕೆರೆಯ ಕೆಳಗಿನ ಭೂಮಿಯನ್ನು ಸೋಮೇಶ್ವರ ದೇವಸ್ಥಾನಕ್ಕೆ ದಾನ ನೀಡಿರುವ ವಿವರವಿದೆ."[22] 'ಬೆಂಗಳೂರು', 'ವೆಂಗಳೂರು' ಎಂದು ಉಲ್ಲೇಖವಾಗಿದೆ. 'ಬೆ' ತಮಿಳಿನಲ್ಲಿ 'ವೆ' ಆಗಿದೆ. ಬೇಗೂರು ಶಾಸನೋಕ್ತ ಬೆಂಗಳೂರು ಮತ್ತು ಮಡಿವಾಳ ಶಾಸನೋಕ್ತ ಬೆಂಗಳೂರು ಒಂದೇ ಪ್ರದೇಶವಾಗಿತ್ತು.

ಕ್ರಿ.ಶ.1761ರ ಕೋಲಾರದ ಒಂದು ಶಾಸನದಲ್ಲಿ 'ಶ್ರೀಮತು ಬೆಂಗಳೂರು ದ್ಯಾವರಾಯ ಪಟ್ಟಣದ ಚಿಕ್ಕಂಣಶೆಟ್ಟು ಅಮೃತಸಾಗರದ ಅರಳೆಪ್ಯಾಟೆ ಕಳಸಪ್ಪಶೆಟ್ಟು ಮುಂತಾದ ಸ್ಥಳದ'[23] ಎಂಬ ವಿವರಗಳಿವೆ. ಬೆಂಗಳೂರಿನ 'ದೇವರಾಯಪಟ್ಟಣ' ಕ್ರಿ.ಶ.1431ರ ಕೊಡಿಗೆಹಳ್ಳಿ ಶಾಸನದಲ್ಲಿ ಉಲ್ಲೇಖಿತ ದೇವರಾಯಪುರವೇ (ದೇವಸಮುದ್ರ) ಆಗಿದೆ.[24] ಬೇಗೂರಿನಲ್ಲಿ ದೊರೆತಿರುವ ಕ್ರಿ.ಶ.1402ರ ಕಾಲದ ತಾಮ್ರಶಾಸನದಲ್ಲಿ 'ಬೆಂಗಳೂರು' ಎಂಬ ಉಲ್ಲೇಖವಿದೆ.[25]

ಕ್ರಿ.ಶ.1609ರ ಶಿವಗಂಗೆ ಶಾಸನದಲ್ಲಿ 'ಬೆಂಗಳೂರ ಕೆಂಪನಾಚಯಗೌಡರ ಕೊಮಾರ ಕೆಂಪಯಗೌಡನು ಗಂಗಾಧರಸ್ವಾಮಿಯ ಪಾದಕ್ಕೆ ಸದಾ ನಮಸ್ಕಾರ'[26] ಎಂಬ ವಿವರವಿದೆ. ಒಂದನೇ ಕೆಂಪೇಗೌಡನ ತಂದೆ ಕೆಂಪನಾಚಯಗೌಡನ ಕಾಲದಲ್ಲೇ ಯಲಹಂಕನಾಡ ಪ್ರಭುಗಳು

ಆಳುತ್ತಿದ್ದರು. ಆನಂತರ ಕೆಂಪೇಗೌಡ ಈಗಾಗಲೇ ಇದ್ದ ಬೆಂಗಳೂರನ್ನು ವ್ಯವಸ್ಥಿತ ನಗರವನ್ನಾಗಿಸಿದ.

ಕ್ರಿ.ಶ.1699ರ ನಗರೇನಹಳ್ಳಿ ಗ್ರಾಮದ ಶಾಸನದಲ್ಲಿ 'ಬೆಂಗಳೂರ ವೆಂಕಟರಾಯರ ಮಗ ಬಾಳಸೆಟ್ಟಿ'[27] ಎಂಬ ಉಲ್ಲೇಖವಿದೆ. ಉಳಿದ ಶಾಸನದ ಭಾಗ ತ್ರುಟಿತವಾಗಿದೆ. ಕ್ರಿ.ಶ.1705ರ ಕೊತ್ತನೂರಿನಲ್ಲಿ ದೊರೆತ ಮೈಸೂರು ಒಡೆಯರ ಕಾಲದ ಶಾಸನದಲ್ಲಿ 'ಕಂಠೀರವ ನರಸರಾಜ ಒಡೆಯರು ಸಾಮ್ರಾಜ್ಯವನ್ನು ಆಳುತ್ತಿದ್ದಾಗ ತಮ್ಮ ಆಳ್ವಿಕೆಗೆ ಸಲುವ ಬೆಂಗಳೂರು ಕೋಟೆ'[28] ಎಂಬ ಉಲ್ಲೇಖವಿದೆ. ಕ್ರಿ.ಶ.1628ರ ಕಾಲದ ಬಳ್ಳಾಪುರದ ಪೇಟೆ ರಂಗನಾಥ ದೇವಾಲಯದಲ್ಲಿರುವ ಶಾಸನದಲ್ಲಿ 'ಬೆಂಗಳೂರು' ಎಂದು ಉಲ್ಲೇಖವಿದೆ.[29] ಗಂಗ, ಚೋಳ, ಹೊಯ್ಸಳ, ವಿಜಯನಗರದ ಅರಸರ ಕಾಲದಲ್ಲಿ ರಾಜ್ಯಾಭಾರಗೊಂಡ ಕರ್ನಾಟಕದ ಪ್ರಮುಖ ಪ್ರದೇಶಗಳಲ್ಲಿ ಬೆಂಗಳೂರು ಒಂದಾಗಿತ್ತು. ಬೆಂಗಳೂರು ಹೆಸರಿನ ಉಲ್ಲೇಖ ಸಿಗುವುದು ಕೆಲವೇ ಕೆಲವು ಶಾಸನದಲ್ಲಿ ಈ ಎಲ್ಲಾ ಶಾಸನಗಳನ್ನು ಅವಲೋಕಿಸಿದರೆ ಕ್ರಿ.ಶ.850ರಲ್ಲಿ ಅಸ್ತಿತ್ವದಲ್ಲಿದ್ದ ಬೆಂಗಳೂರು ಸುಮಾರು ಕ್ರಿ.ಶ.1500ರ ಹೊತ್ತಿಗೆ ವಿಸ್ತಾರವಾಯಿತು. ಪ್ರಾಚೀನ ಕಾಲದಿಂದ ಹಿಡಿದು ಇಂದಿನ ಜಾಗತೀಕರಣದ ಸಂದರ್ಭದಲ್ಲಿಯೂ ಬೆಂಗಳೂರು ವಿಸ್ತಾರವಾಗಿ ಬೆಳೆಯುತ್ತಿದ್ದು ದೇಶದಲ್ಲೇ ಎಲ್ಲರ ಗಮನವನ್ನು ತನ್ನತ್ತ ಸೆಳೆಯುತ್ತಿದೆ.

ವಿದ್ವಾಂಸರುಗಳೂ ಈಗಾಗಲೇ ಬೆಂಗಳೂರಿನ ಪ್ರಾಚೀನತೆ ಬಗ್ಗೆ ಚರ್ಚಿಸಿದ್ದಾರೆ. ಪ್ರೊ.ಬಿ.ಜಿ.ಎಲ್ ಸ್ವಾಮಿ ಅವರು 'ಬೆಂಗ'ದ ತಮಿಳು ರೂಪ 'ವೆಂಗ', ಇದರಿಂದಲೇ 'ವೆಂಗಿ', 'ವೆಂಗಳ' ಎಂಬ ಪ್ರದೇಶನಾಮ ಬಂದಿರಬೇಕು. 'ವೆಂಗಳೂರು' ಎಂದರೆ ವೆಂಕಟರಮಣನಿಗೆ ಸಂಬಂಧಿಸಿ ಈ ಹೆಸರು ಬಂದಿರಬಹುದೇ ಎಂದು ತಮ್ಮ ಒಂದು ಲೇಖನದಲ್ಲಿ ಸಂದೇಹ ಪಟ್ಟಿದ್ದಾರೆ.[30] ಡಾ.ಸೂರ್ಯನಾಥ ಕಾಮತ್ ಹೇಳುವಂತೆ "ಕ್ರಿ.ಶ.900ರ ಬೇಗೂರು ಶಾಸನದಲ್ಲಿ ಬೆಂಗಳೂರು (ಬೆಂಗಳೂರು ಅಲ್ಲ) ಎಂದು ಉಲ್ಲೇಖಿತವಾದ ನಂತರ ಎಲ್ಲಿಯೂ 'ವೆಂಗಳೂರು' ಎಂಬ ರೂಪ ದಾಖಲೆಗಳಲ್ಲಿ ಬಂದಿಲ್ಲ ಮತ್ತು ಕ್ರಿ.ಶ.900ರ ಸುಮಾರಿಗೆ, ವೆಂಕಟರಮಣ ಈಗಿನಷ್ಟು ವ್ಯಾಪಕ ಜನಪ್ರಿಯತೆ ಪಡೆದಿರಲೂ ಇಲ್ಲ. ವಾಸ್ತವವಾಗಿ 'ಬೆಂಗ' ಎಂಬ ಮರದಿಂದ (ರಕ್ತಹೊನ್ನೆಮರ) ಈ ಹೆಸರು ಬಂದಿರಬೇಕು. ಬೆಂಗದ ಮರವನ್ನು ಬೆಂಗು(ತೆಂಗಿನ ಮರವನ್ನು ತಂಗು ಎನ್ನುವಂತೆ) ಎನ್ನುವುದರಿಂದ ಬೆಂಗಳೂರು ರೂಪ ಬಂದಿರಬೇಕು" ಎಂದು ಅಭಿಪ್ರಾಯ ಪಟ್ಟಿದ್ದಾರೆ.[31] ಸೂರ್ಯನಾಥ ಕಾಮತ್ ಅವರ ಅಭಿಪ್ರಾಯವನ್ನು ಡಾ.ಎಂ.ಜಿ. ಮಂಜುನಾಥರವರು ತೆಗೆದು ಹಾಕಿದ್ದಾರೆ. "ಬೆಂಗಳೂರಿನ ಮೂಲ ಹೆಸರು ವೆಂಗಳನಾಥನ ಹೆಸರಿನಿಂದಲೇ ವೆಂಗಳೂರು ಎಂದು ರೂಪುಗೊಂಡು ತದನಂತರ ಬೆಂಗಳೂರು ಆಗಿರಬಹುದೆಂದು ಹೇಳಬಹುದು.

ವೆಂಗಳನಾಥ ಎಂದರೆ ಮಂಗಳಕರ, ಕಲ್ಯಾಣಕರ, ಶುಭಕರ ಎಂಬ ಅರ್ಥಗಳನ್ನು ಜನಸಾಮಾನ್ಯರು ಹೇಳುತ್ತಾರೆ. (ವೆಂಗಳನಾಥನನ್ನು 'ಕಲ್ಯಾಣಾದ್ಭುತ ಗಾತ್ರ' ಎಂದು ಈ ಅರ್ಥದಲ್ಲಿಯೇ ಕರೆದಿರುವುದನ್ನು ಗಮನಿಸಬಹುದು) ಆದ್ದರಿಂದಲೇ ಬೆಂಗಳೂರಿಗೆ ಕಲ್ಯಾಣನಗರ ಎಂಬ ಮತ್ತೊಂದು ಹೆಸರೂ ಇರುವುದನ್ನು ಈ ಸಂದರ್ಭದಲ್ಲಿ ಸ್ಮರಿಸಬಹುದು"[32] ಎನ್ನುತ್ತಾರೆ. ಈ ಅಂಶಕ್ಕೆ ಪೂರಕವೆಂಬಂತೆ ಕ್ರಿ.ಶ.1884ರ ಕಾಲಘಟ್ಟದ ಶಾಸನವೊಂದು ಬೆಂಗಳೂರು ನಗರ್ತಪೇಟೆಯ ನಗರೇಶ್ವರ ದೇವಸ್ಥಾನದ ಮುಖಮಂಟಪದ ಶಿರೋಭಾಗದಲ್ಲಿ ದೊರಕಿದೆ.[33] ಈ ಶಾಸನದ ಪ್ರಕಾರ "ಮುಮ್ಮಡಿ ಕೃಷ್ಣರಾಜ ಒಡೆಯರವರ ಆಳ್ವಿಕೆಯಲ್ಲಿ ಸಹಸ್ರ ಋಷಿಗಳ ದ್ಗೋತ್ರದಲ್ಲಿ ಉತ್ಪನ್ನರಾಗಿ ಸತ್ಯವಾದಿಳಾದ ಗರುಡನ ಉಪಾಸನೆಯಿಂದ ಪಡೆದ ಗುರುತ್ಮಾನ್ ಎಂಬ ಉಜ್ವಲ ಬಿರುದಿನಿಂದ ಕೂಡಿದ ಅಯೋಧ್ಯಾನಗರದಿಂದ ಬಂದ ಪಂಚ ದ್ರಾವಿಡ ವರ್ಗಕ್ಕೆ ಸೇರಿದ ಧರ್ಮವಾರಿಧಿಯಿಂದ ಹೇಮಪಾಲ, ಶೆರಿಯಾ ಮುಂತಾದ ಪೂರ್ವಿಕರಿಂದ ಕೂಡಿದ ದಶರಥನು ಆದಿಯಾಗಿ ಉಳ್ಳ ರಾಜರುಗಳಿಂದ ಸನ್ಮಾನಿತರಾದ, ಕಲ್ಯಾಣನಗರದಲ್ಲಿ ವಾಸ ಮಾಡುತ್ತಿರುವ ನಗರಸ್ತ ಮಹಾಜನಗಳಿಂದ ಶ್ರೀಯುಕ್ತ ಕುಲದೇವನಾದ ನಗರೇಶ್ವರ ಶಾಶ್ವತವಾದ ದೇವಾಲಯವು ನಕ್ಷತ್ರ ಸಹಿತವಾದ ಚಂದ್ರ ಇರುವವರೆಗೆ ಇರಲೆಂದು ಪ್ರತಿಷ್ಠಾಪಿಸಲ್ಪಟ್ಟಿತು" ಎಂದಿದೆ. ಇಲ್ಲಿ ಹೇಳಿರುವ ಕಲ್ಯಾಣನಗರ 'ಕಲ್ಯಾಣಾದ್ಭುತ ಗಾತ್ರ'ನಾದ ವೆಂಗಳನಾಥನ ಹಿನ್ನಲೆಯಲ್ಲಿಯೇ ಬೆಂಗಳೂರು ಎಂಬ ಹೆಸರಾಗಿದೆ.

## ರಾಜಕೀಯ ಚರಿತ್ರೆ

ಬೆಂಗಳೂರು ನಗರ ಜಿಲ್ಲೆಯ ಶಾಸನಗಳು ತಮ್ಮದೇ ಆದ ವೈಶಿಷ್ಟ್ಯತೆಯಿಂದ ಕೂಡಿವೆ. ಒಂದು ಕಾಲದ ಸಾಂಸ್ಕೃತಿಕ ಚರಿತ್ರೆಯನ್ನು ಪುನಾರಚಿಸುವಲ್ಲಿ ಶಾಸನಗಳ ಪಾತ್ರ ಪ್ರಮುಖವಾಗಿದೆ. ಅವುಗಳಿಗೆ ಸಮಾಜದಲ್ಲಿ ದೊರೆಯುವ ಮಹತ್ವ ಶ್ರೇಷ್ಠವಾದುದು. ಬೆಂಗಳೂರಿನ ಸಾಂಸ್ಕೃತಿಕ ಚರಿತ್ರೆಯನ್ನು ಅವಲೋಕಿಸಿದರೆ, ಇಲ್ಲಿ ಯಾವುದೇ ಪ್ರಮುಖ ರಾಜಮನೆತನಗಳು ಸ್ಥಾಪನೆಯಾಗಿಲ್ಲದಿರುವುದು ಕಾಣಬಹುದು. ಆದರೆ ಕರ್ನಾಟಕದ ರಾಜ ಮನೆತನಗಳಾದ ಗಂಗ, ಚಾಲುಕ್ಯ, ಕಲ್ಯಾಣ ಚಾಲುಕ್ಯ, ರಾಷ್ಟ್ರಕೂಟ, ಹೊಯ್ಸಳ, ವಿಜಯನಗರ ಸಾಮ್ರಾಜ್ಯಗಳು ತಮ್ಮ ಬಾಹುಗಳನ್ನು ವಿಸ್ತರಿಸಿವೆ. ಅನೇಕ ಕದನಗಳನ್ನು ಮಾಡಿರುವುದು ಜಿಲ್ಲೆಯ ಶಾಸನಗಳಿಂದ ಗೋಚರಿಸುತ್ತದೆ. ವಿಜಯನಗರ ಕಾಲದಲ್ಲಿ ಅಮರನಾಯಕರಾಗಿದ್ದ ನಾಡಪ್ರಭುಗಳ ಆಳ್ವಿಕೆ ದೊಡ್ಡ ಸಾಮ್ರಾಜ್ಯದಂತೆ ವಿಸ್ತರಿಸಿ ಸ್ವತಂತ್ರರಾಗಿ ಬೆಂಗಳೂರು ಜಿಲ್ಲೆಯಲ್ಲಿ ಆಳ್ವಿಕೆ ಮಾಡತೊಡಗಿದರು.

ಬೆಂಗಳೂರು ನಗರಜಿಲ್ಲೆಯ ಇತಿಹಾಸವನ್ನು ನೋಡಿದರೆ ರಾಜಕೀಯ, ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ತನ್ನದೇ ಆದ ಕೊಡುಗೆಯನ್ನು ಕಾಣಬಹುದಾಗಿದೆ.

ಇಂತಹ ಕೊಡುಗೆಗಳನ್ನು ಆಯಾ ರಾಜರ ಕಾಲದ ವಿವಿಧ ರಂಗಗಳ ಕ್ಷೇತ್ರಗಳಲ್ಲಿ ಮಾಡಿದ ಸಾಧನೆಗಳನ್ನು ಗುರುತಿಸಬಹುದಾಗಿದೆ. ಈ ಭಾಗದ ಪ್ರಾಚೀನ ಆಳ್ವಿಕೆಯನ್ನು ನೋಡುವುದಾದರೆ ಆದಿ ಶಿಲಾಯುಗದ ಕಾಲದಿಂದ ಇಲ್ಲಿಯ ತನಕ ಮಾನವ ಯಾವ ರೀತಿ ನೆಲೆಸಿದ್ದ ಎಂಬುದು ಅಸ್ಪಷ್ಟ. ಬೆಂಗಳೂರಿನಲ್ಲಿ ರಾಜರ ಆಳ್ವಿಕೆ ಯಾವಾಗ ಪ್ರಾರಂಭವಾಯಿತು. ಯಾವ–ಯಾವ ರಾಜರ ಕಾಲದಲ್ಲಿ ಆಳ್ವಿಕೆ ಉತ್ತಮವಾಗಿತ್ತು, ರಾಜರ ಕೊಡುಗೆಗಳೇನು ಎಂಬುದು ಈ ಅಧ್ಯಾಯದಲ್ಲಿನ ಪ್ರಮುಖ ವಿಷಯವಾಗಿದೆ.

ಈ ಜಿಲ್ಲೆಯಲ್ಲಿ ಸ್ವತಂತ್ರ ರಾಜಮನೆತನ ಇಲ್ಲದಿದ್ದರೂ ಕೂಡಾ ಈ ಜಿಲ್ಲೆಯ ಬಹುಭಾಗ ವಿವಿಧ ರಾಜಮನೆತನಗಳ ಆಳ್ವಿಕೆಗೆ ಒಳಪಟ್ಟಿತ್ತು. ಈ ಪ್ರದೇಶದಲ್ಲಿ ಆಳ್ವಿಕೆ ನಡೆಸಿದ ರಾಜಮನೆತನಗಳು ಆ ಅವಧಿಯಲ್ಲಿ ಹಲವು ಶಾಸನಗಳನ್ನು ಹಾಕಿಸಿದ್ದಾರೆ. ಆ ಶಾಸನಗಳು ಪ್ರಸ್ತುತ ಬೆಂಗಳೂರು ನಗರ ಜಿಲ್ಲೆಯ ವಿವಿಧ ತಾಲ್ಲೂಕುಗಳಲ್ಲಿ ದೊರಕಿವೆ. ಬೆಂಗಳೂರು ನಗರ ಜಿಲ್ಲೆಯಲ್ಲಿ ಕನ್ನಡ ಮತ್ತು ಸಂಸ್ಕೃತ ಭಾಷೆಯ ಹೆಚ್ಚು ಶಾಸನಗಳು ಮಾತ್ರವಲ್ಲದೆ ತೆಲುಗು, ತಮಿಳು, ಪರ್ಷಿಯನ್, ಉರ್ದು, ಇಂಗ್ಲೀಷ್ ಹೀಗೆ ಹಲವು ಭಾಷೆಯ ಶಾಸನಗಳು ದೊರಕಿವೆ. ಈ ಶಾಸನಗಳು ಕರ್ನಾಟಕವನ್ನು ಆಳಿದ ವಿವಿಧ ರಾಜಮನೆತನಗಳಿಗೆ ಸೇರಿವೆ. ಈ ಶಾಸನಗಳು ನಗರ ಜಿಲ್ಲೆಯ ಸಂಸ್ಕೃತಿಯನ್ನು ತಿಳಿಯಲು ಸಹಕಾರಿಯಾಗಿವೆ.

ಬೆಂಗಳೂರು ನಗರ ಜಿಲ್ಲೆಯಲ್ಲಿ ಕ್ರಿ.ಶ.459 ರಿಂದ ಕ್ರಿ.ಶ.1851ರವರೆಗೆ ವಿವಿಧ ರೀತಿಯ ಶಾಸನಗಳು ದೊರೆತಿವೆ. ಜಿಲ್ಲೆಯಲ್ಲಿ ದೊರೆತಿರುವ ಅತ್ಯಂತ ಪ್ರಾಚೀನ ಶಾಸನ ಗಂಗರ ಕಾಲಕ್ಕೆ ಸೇರಿದುದಾಗಿದೆ. ಸುಮಾರು 700 ವರ್ಷಗಳ ಕಾಲ ಆಳ್ವಿಕೆ ನಡೆಸಿದ ಗಂಗರ ಆಡಳಿತಕ್ಕೆ ಬೆಂಗಳೂರು ಜಿಲ್ಲೆಯ ಪ್ರದೇಶವು ಸೇರಿತ್ತು. ಆನಂತರದಲ್ಲಿ ಚೋಳರು, ಹೊಯ್ಸಳರು, ವಿಜಯನಗರದ ಅರಸರು, ಪಾಳೇಗಾರರು, ಮೈಸೂರು ಒಡೆಯರು ಹೀಗೆ ರಾಜ ಮನೆತನಗಳ ಆಳ್ವಿಕೆಗೆ ಬೆಂಗಳೂರು ಒಳಪಟ್ಟಿತ್ತು. ಸಂಸ್ಕೃತಿಯ ಲಕ್ಷಣಗಳನ್ನು ಹಾಗೂ ಕಾಲಮಾನವನ್ನು ಗುರುತಿಸುವಾಗ ಬೆಂಗಳೂರಿನಲ್ಲಿನ ರಾಜವಂಶಗಳ ವಂಶಾನುಕ್ರಮವನ್ನು ವಿವೇಚಿಸಲೇಬೇಕು. ಹೀಗೆ ಬೆಂಗಳೂರಿನಲ್ಲಿ ಸಂಶೋಧನೆಗೊಂಡು ನೂರಾರು ಶಾಸನಗಳು ಪ್ರಕಟಗೊಂಡಿವೆ. ದೊರೆತ ಶಾಸನಗಳಿಂದ ಬೆಂಗಳೂರು ನಗರದ ಸಾಂಸ್ಕೃತಿಕ ಚರಿತ್ರೆಯನ್ನು ಪುನಾರಚಿಸಬಹುದು.

## ಮೌರ್ಯರು

ಮೌರ್ಯರು ಭಾರತ ದೇಶವನ್ನು ಆಳಿದ ಮೊಟ್ಟಮೊದಲ ರಾಜವಂಶ. ನಂದರನ್ನು ನಿರ್ಮೂಲ ಮಾಡಿದ ಮೌರ್ಯರು ದಕ್ಷಿಣದವರೆಗೆ ವಿಸ್ತಾರವಾಗಿ ವ್ಯಾಪಿಸಿದ್ದ ಮಗಧರಾಜ್ಯಕ್ಕೆ

ಒಡೆಯರಾದರು. ಮೌರ್ಯ ಸಾಮ್ರಾಜ್ಯವನ್ನು ಕ್ರಿ.ಪೂ.324ರಲ್ಲಿ ಚಂದ್ರಗುಪ್ತಮೌರ್ಯನು ಸ್ಥಾಪಿಸಿದ. ಕರ್ನಾಟಕವು ಮೌರ್ಯರ ಅಧೀನಕ್ಕೆ ಒಳಪಟ್ಟಿತ್ತು ಎಂಬುದು ಕರ್ನಾಟಕದಲ್ಲಿ ದೊರೆತ ಕೆಲವು ಶಾಸನಾಧಾರಗಳಿಂದ ತಿಳಿಯುತ್ತದೆ. ಆದರೆ ಬೆಂಗಳೂರಿನಲ್ಲಿ ಈ ಅರಸುಮನೆತನಕ್ಕೆ ಸಂಬಂಧಪಟ್ಟ ಯಾವುದೇ ಶಾಸನವಾಗಲಿ ಅಥವಾ ಪ್ರಾಗೈತಿಹಾಸದ ಕುರುಹುಗಳಾಗಲಿ ದೊರೆತಿಲ್ಲ.

ಚಂದ್ರಗುಪ್ತ ಮೌರ್ಯನು ಜೈನಧರ್ಮವನ್ನು ಸ್ವೀಕರಿಸಿ ತನ್ನ ಗುರುವಾದ ಭದ್ರಬಾಹುವಿನೊಡನೆ ಕರ್ನಾಟಕದ ಹಾಸನ ಜಿಲ್ಲೆಯಲ್ಲಿರುವ ಶ್ರವಣಬೆಳಗೊಳಕ್ಕೆ ಬಂದು ಸಲ್ಲೇಖನ ವ್ರತದಿಂದ ಮುಕ್ತಿಯನ್ನು ಪಡೆದಿರುವ ಸಂಗತಿಯನ್ನು ಶ್ರವಣಬೆಳಗೊಳದ ಶಾಸನಗಳು ತಿಳಿಸುತ್ತವೆ. ಆದರೆ ಶ್ರವಣಬೆಳಗೊಳಕ್ಕೆ ಬಂದು ಅಲ್ಲಿ ಸಲ್ಲೇಖನ ವ್ರತದಿಂದ ಸಮಾಧಿಮರಣ ಪಡೆದವನು ಮೌರ್ಯ ಸಾಮ್ರಾಜ್ಯದ ಸ್ಥಾಪಕ ಚಂದ್ರಗುಪ್ತಮೌರ್ಯನಲ್ಲ, ಬದಲಿಗೆ ಚಕ್ರವರ್ತಿ ಅಶೋಕನ ಮೊಮ್ಮಗನಾದ ಸಂಪ್ರತಿ ಚಂದ್ರಗುಪ್ತನೆಂಬುದಾಗಿ ವಿದ್ವಾಂಸರು ನಿರ್ಧರಿಸಿದ್ದಾರೆ. ಅದೇನೆ ಇದ್ದರೂ ಕರ್ನಾಟಕವು ಮೌರ್ಯ ಸಾಮ್ರಾಜ್ಯಕ್ಕೆ ಒಳಪಟ್ಟಿತ್ತು ಎಂಬುದು ಸ್ಪಷ್ಟವಾಗುತ್ತದೆ.

ಮೌರ್ಯ ವಂಶದಲ್ಲೇ ಪ್ರಸಿದ್ದನಾದ ದೊರೆ ಅಶೋಕ ಚಕ್ರವರ್ತಿ. ಚಂದ್ರಗುಪ್ತ ಮೌರ್ಯನ ಮೊಮ್ಮಗನೇ ಅಶೋಕ. ಈತ ಕ್ರಿ.ಪೂ.274 ರಿಂದ 235ರ ವರೆಗೆ ಆಳ್ವಿಕೆ ನಡೆಸಿದ್ದಾನೆ. ನಮಗೆ ದೊರೆಯುವ ಮೊಟ್ಟ ಮೊದಲ ಶಾಸನ ಅಶೋಕನದ್ದು. ಕರ್ನಾಟಕದಲ್ಲಿ ಈತನ ಕೆಲವು ಶಾಸನಗಳು ದೊರೆತಿವೆ. ಈ ಶಾಸನಗಳೇ ಕರ್ನಾಟಕದ ಐತಿಹಾಸಿಕ ಸ್ಪಷ್ಟತೆಯ ಮೊಟ್ಟಮೊದಲನೆಯ ಸಾಕ್ಷಿಗಳೆನ್ನಬಹುದು. ಅಶೋಕನು ಧರ್ಮಬೋಧಕರನ್ನು ಮಹಾರಾಷ್ಟ್ರ, ಮಹಿಷಮಂಡಲ ಮತ್ತು ಬನವಾಸಿಗಳಿಗೆ ಕಳುಹಿಸಿದನೆಂಬ ಮಾತು ಮಹಾವಂಸವೆಂಬ ಬೌದ್ಧಗ್ರಂಥದಿಂದ ತಿಳಿಯುತ್ತದೆ.[34] ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ಮೌರ್ಯವಂಶವು ಕರ್ನಾಟಕದ ಬಹುಭಾಗವನ್ನು ಆಳ್ವಿಕೆ ನಡೆಸಿತ್ತು ಎಂಬುದು ತಿಳಿಯುತ್ತದೆ.

**ಶಾತವಾಹನರು**

ಮೌರ್ಯರ ಪತನಾನಂತರ ಏಳಿಗೆಗೆ ಬಂದವರೇ ಶಾತವಹಾಹನರು. ಕ್ರಿ.ಶ. ಒಂದನೇ ಶತಮಾನದಿಂದ ಮೂರನೇ ಶತಮಾನದವರೆಗೆ ಇವರು ಆಳ್ವಿಕೆ ನಡೆಸಿದರು. ಶಾತವಾಹನರಲ್ಲಿ ಬಹಳ ಪ್ರಮುಖರಾದವರು ಹಾಲರಾಜ, ಗೌತಮೀಪುತ್ರ ಶಾತಕರ್ಣಿ, ಪುಲಿಮಾಯಿ ಮೊದಲಾದವರು. ಇವರ ಕಾಲದ ಯಾವುದೇ ಶಾಸನಗಳು ಬೆಂಗಳೂರು ನಗರ ಜಿಲ್ಲೆಯಲ್ಲಿ ದೊರೆತಿಲ್ಲ. ಆದರೆ ಶಾತವಾಹನರ ಕಾಲಕ್ಕೆ ಸೇರಿರುವ ಸ್ಮಾರಕ ಶಿಲ್ಪಗಳು ಮತ್ತು ಯಶವಂತಪುರ ಮತ್ತು ಜಾಲಹಳ್ಳಿಯಲ್ಲಿ ಕ್ರಿ.ಶ. ಒಂದನೇ ಶತಮಾನಕ್ಕೆ ಸೇರಿದ ರೋಮನ್ ಸಾಮ್ರಾಜ್ಯದ ಬೆಳ್ಳಿಯ

ನಾಣ್ಯಗಳು ದೊರೆತಿವೆ.[35] ಹಾಗೂ ಶಾತವಾಹನರ ಕಾಲಕ್ಕೆ ಸೇರಿರುವ ಆದಿಚರಿತ್ರೆ ಕಾಲದ ಮಣ್ಣಿನ ಸುಟ್ಟ ಇಟ್ಟಿಗೆಗಳು ಬೆಂಗಳೂರಿನ ಸನಿಹವೇ ಇರುವ ರಾಜಘಟ್ಟದಲ್ಲಿ ದೊರೆತಿದೆ. ಹಾಗೂ ದೊರೆತಿರುವ ಬುದ್ಧನ ಶಿಲ್ಪವೂ ಶಾತವಾಹನರ ಕಾಲಕ್ಕೆ ಸೇರಿದ್ದಾಗಿದೆ. ಇತ್ತೀಚೆಗೆ ಡಾ.ರಾಜಾರಾಮ ಹೆಗ್ಗಡೆ ಅವರು ರಾಜಘಟ್ಟದಲ್ಲಿ ಒಂದು ಶಾಸನವನ್ನು ಪತ್ತೆ ಹಚ್ಚಿದರು. ಸುಡಾವೆ ಮಣ್ಣಿನ ಮುದ್ರೆಯ ಮೇಲೆ ಬರೆಯಲಾದ ಈ ಶಾಸನವು ಶಾತವಾಹನರ ಕಾಲಘಟ್ಟಕ್ಕೆ ಸೇರಿದ್ದಾಗಿದ್ದು, ಪ್ರಾಕೃತ ಭಾಷೆಯಲ್ಲಿದೆ ಎಂಬುದು ವಿದ್ವಾಂಸರ ಅಭಿಮತವಾಗಿದೆ.[36] ಈ ಎಲ್ಲಾ ಅಂಶಗಳಿಂದ ರಾಜಘಟ್ಟವು ಶಾತವಾಹನರ ಪ್ರಮುಖ ಕೇಂದ್ರ ಸ್ಥಳವಾಗಿತ್ತು ಎಂಬುದನ್ನು ಖಚಿತಪಡಿಸುತ್ತದೆ. ಅಷ್ಟೇ ಅಲ್ಲದೆ ಬೌದ್ಧಕೇಂದ್ರವಾಗಿತ್ತು ಎಂಬುದು ಸ್ಪಷ್ಟ. ಹಾಗಾಗಿ ದೊಡ್ಡಬಳ್ಳಾಪುರದ ರಾಜಘಟ್ಟದ ಸನಿಹದಲ್ಲೇ ಇರುವ ಬೆಂಗಳೂರು ಶಾತವಾಹನರ ಆಳ್ವಿಕೆಗೆ ಒಳಪಟ್ಟಿರುವ ಸಾಧ್ಯತೆಗಳಿವೆ.

## ಗಂಗರು

ಕನ್ನಡ ನೆಲವನ್ನಾಳಿದ ಪ್ರಾಚೀನ ಅರಸರಲ್ಲಿ ಗಂಗ ಮನೆತನವೂ ಒಂದು. ನಾಲ್ಕನೇ ಶತಮಾನದಿಂದ ಹತ್ತನೇ ಶತಮಾನದವರೆಗೂ ಗಂಗರು ಕರ್ನಾಟಕದ ದಕ್ಷಿಣ ಭಾಗವನ್ನು ಆಳ್ವಿಕೆ ನಡೆಸಿದ್ದಾರೆ. ಈಗಿನ ಕೋಲಾರ, ತಲಕಾಡು ನಂತರ ನೆಲಮಂಗಲದ ಬಳಿಯಿರುವ ಮಣ್ಣೆ(ಮಾನ್ಯಪುರ) ಹಾಗೂ ಚನ್ನಪಟ್ಟಣದ ಮಂಕುಂದವನ್ನು ರಾಜಧಾನಿಯಾಗಿಸಿ ಕೊಂಡಿದ್ದರು. ಕೋಲಾರ, ಮಣ್ಣೆ, ಮಂಕುಂದ ಪ್ರದೇಶಗಳು ಬೆಂಗಳೂರನ್ನು ಸುತ್ತುವರಿದಿವೆ. ಹಾಗಾಗಿ ಬೆಂಗಳೂರು ಗಂಗರ ಆಳ್ವಿಕೆಗೆ ಒಳಗಾಗಿತ್ತು ಎಂಬುದು ಸ್ಪಷ್ಟವಾಗುತ್ತದೆ. ವಿದ್ವಾಂಸರು "ಉತ್ತರದಲ್ಲಿ ಮುಯಿಂದಲೆ, ಪೂರ್ವಕ್ಕೆ ತೊಂಡ್ಯೆ ಮಂಡಲ(ತೊಂಡೂರು), ಪಶ್ಚಿಮಕ್ಕೆ ಚೇರನಾಡು ಮತ್ತು ಸಮುದ್ರ, ದಕ್ಷಿಣಕ್ಕೆ ಕೊಂಗು ದೇಶವೂ"[37] ಇತ್ತು ಎಂದು ಗಂಗ ರಾಜ್ಯದ ವಿಸ್ತಾರವನ್ನು ಹೇಳುತ್ತಾರೆ. ಶಾಸನಗಳಲ್ಲಿ ಗಂಗರಾಜ್ಯವನ್ನು ತೊಂಭತ್ತಾರು ಸಾಸಿರ[38] ಎಂದು ವರ್ಣಿಸಿದೆ. ಗಂಗರು ಆಳಿದ ಪ್ರದೇಶವು ಗಂಗವಾಡಿ 96000 ಎಂದೇ ಪ್ರಸಿದ್ಧವಾಗಿದೆ.

ಬೆಂಗಳೂರು ನಗರ ಜಿಲ್ಲೆಯಲ್ಲಿ ದೊರೆತಿರುವ ಪ್ರಾಚೀನ ಶಾಸನಗಳೆಲ್ಲವೂ ಗಂಗರದ್ದೇ ಆಗಿದ್ದು, ಗಂಗರ ನೇರ ಆಳ್ವಿಕೆಗೆ ಬೆಂಗಳೂರು ಒಳಪಟ್ಟಿತ್ತೆಂಬುದನ್ನು ಇದು ಸೂಚಿಸುತ್ತದೆ. ಬೆಂಗಳೂರು ನಗರಕ್ಕೆ ಸೇರಿರುವ ಪ್ರದೇಶಗಳಾದ ವರ್ತೂರು, ಅಗರ, ಬೇಗೂರು, ಹಾರಗದ್ದೆ, ಕಮ್ಮಸಂದ್ರಗಳಲ್ಲಿ ದೊರೆತಿರುವ ಎಲ್ಲಾ ಪ್ರಾಚೀನ ಶಾಸನಗಳೂ ಗಂಗರದ್ದೇ ಆಗಿರುವುದರಿಂದ ಗಂಗವಾಡಿಯೊಳಗೆ ಬೆಂಗಳೂರು ಇತ್ತೆನ್ನುವುದರಲ್ಲಿ ಸಂಶಯವಿಲ್ಲ.

ಬೆಂಗಳೂರಿನಲ್ಲಿ ದೊರೆತಿರುವ ಶಾಸನಗಳ ಆಧಾರದಿಂದ ಬೆಂಗಳೂರು ಬಹಳ ಕಾಲದ ಹಿಂದೆಯೇ ಅಂದರೆ ಸುಮಾರು ನಾಲ್ಕನೇ ಶತಮಾನದಿಂದ ಹತ್ತನೇ ಶತಮಾನದವರೆಗೂ ಗಂಗರ

ಆಳ್ವಿಕೆಗೆ ಒಳಪಟ್ಟಿದೆ ಎಂಬುದು ತಿಳಿಯುತ್ತದೆ. ಗಂಗವಂಶವನ್ನು ಸುಮಾರು 26 ರಾಜರು ಸುದೀರ್ಘವಾಗಿ ಆಳಿದ್ದಾರೆ. ಗಂಗವಂಶದ ಮೊದಲ ದೊರೆ ಕೊಂಗಣಿವರ್ಮನಿಂದ ಕೊನೆಯ ದೊರೆ ನಾಲ್ಕನೇ ರಾಚಮಲ್ಲನವರೆಗೂ ಈ ವಂಶದ ಅರಸರು ಆಳಿದ್ದಾರೆ. ಬೆಂಗಳೂರು ಜಿಲ್ಲೆಯನ್ನು ಗಂಗವಂಶದ ಶ್ರೀಪುರುಷ, ಶಿವಮಾರ, ರಾಚಮಲ್ಲ, ಎರೆಗಂಗ ರಾಜರುಗಳು ಆಳಿದ್ದಾರೆ ಎಂಬುದಕ್ಕೆ ದೊರೆತಿರುವ ಶಾಸನಗಳು ಸಾಕ್ಷಿಯಾಗಿವೆ.

ಬೆಂಗಳೂರು ನಗರ ಜಿಲ್ಲೆಯಲ್ಲಿ ದೊರೆತಿರುವ ಗಂಗರ ಶಾಸನಗಳ ಸ್ವರೂಪವನ್ನು ಅನುಲಕ್ಷಿಸಿದಾಗ, ತಾಮ್ರಪಟಗಳು ಮತ್ತು ಶಿಲಾಶಾಸನಗಳು ದೊರೆಯುತ್ತವೆ. ಈ ತಾಮ್ರ ಶಾಸನಗಳು ಹೆಚ್ಚಾಗಿ ದಾನಶಾಸನಗಳೇ ಆಗಿವೆ. ಈ ಶಾಸನಗಳು 'ಸ್ವಸ್ತಿ ಜಿತಮ್ಭಗವತಾ ಗತ ಘನ ಗಗನಾಭೇನ ಪದ್ಮನಾಭೇನ, ಶ್ರೀಮಜ್ಜಾಹ್ನವೇಯ ಕುಲಾಮಲ ವ್ಯೋಮಾವ ಭಾಸನ ಭಾಸ್ಕರಸ್ಯ'[39] ಎಂಬ ಸಾಲಿನೊಂದಿಗೆ ಪ್ರಾರಂಭವಾಗುತ್ತದೆ. ಹಾಗೂ ಗಂಗರು ಗಾಂಗೇಯ ಅಥವಾ ಜಾಹ್ನವೀಯ ಕುಲದವರೆಂದು ಹೇಳುತ್ತದೆ. ದೇವತಾಸ್ತುತಿ, ದಾನ ನೀಡಿದವರು, ದಾನ ಪಡೆದವರು, ಅವರ ವಂಶಾವಳಿ, ದಾನಕ್ಕೆ ಕಾರಣ, ದಾನ ನೀಡಿದ ಸ್ಥಳ, ವಂಶಪ್ರಶಸ್ತಿಯನ್ನು ಇವು ಒಳಗೊಂಡಿರುತ್ತದೆ. ಗಂಗರ ಶಿಲಾ ಶಾಸನಗಳ ಮತ್ತೊಂದು ವಿಶೇಷತೆ ಎಂದರೆ ಇವುಗಳು ಹೆಚ್ಚಾಗಿ ವೀರಗಲ್ಲುಗಳಾಗಿವೆ.

ಈ ಪ್ರದೇಶದಲ್ಲಿ ಗಂಗರ ಕಾಲದ ಶಾಸನವು ನಮಗೆ ಶ್ರೀಪುರುಷನಿಂದ(ಸು.725–788) ದೊರೆಯುತ್ತದೆ. ಈತ ಗಂಗ ವಂಶದ ಹದಿನಾಲ್ಕನೆಯ ಅರಸ. ಈತನು ಈ ಪ್ರದೇಶದಲ್ಲಿ ಆಳ್ವಿಕೆ ನಡೆಸುತ್ತಿದ್ದ ಎಂಬುದಕ್ಕೆ ಇವನ ಕಾಲದ ಶಾಸನಗಳು ಸ್ಪಷ್ಟ ದಾಖಲೆಗಳಾಗಿವೆ. ಕೃಷ್ಣರಾಜಪುರದಲ್ಲಿ ದೊರೆತಿರುವ ಸು.785ರ ಶಾಸನವು ಶ್ರೀಪುರುಷನ ಕಾಲದಲ್ಲಿ ಮಾರಯ್ಯ ಎಂಬುವನು ಊರನ್ನು ರಕ್ಷಣೆ ಮಾಡುವ ಸಂದರ್ಭದಲ್ಲಿ ಹೋರಾಡಿ ಮರಣವನ್ನು ಹೊಂದಿದ ವಿಷಯವನ್ನು ಹೇಳುತ್ತದೆ. ಒಂದು ಗ್ರಾಮದ ರಕ್ಷಣೆಯನ್ನು ಮಾಡುವಂತಹ ಕಾರ್ಯ ಶ್ರೇಷ್ಠವಾದದ್ದು. ಇಂತಹ ಊರಳಿವು ಸಂದರ್ಭದಲ್ಲಿ ಪ್ರಾಣವನ್ನು ತೊರೆದ ವ್ಯಕ್ತಿ ಮಾರಯ್ಯ. ಶ್ರೀಪುರುಷನು ತನ್ನ ಸಾಮ್ರಾಜ್ಯ ಭದ್ರವಾಗಿರಲು ಈ ರೀತಿಯ ರಕ್ಷಣಾ ಪಡೆಗಳನ್ನು ಪ್ರತಿ ಊರುಗಳಲ್ಲಿ ನೇಮಿಸಿದ್ದ ಎಂಬುದು ಈ ಶಾಸನಗಳ ಮೂಲಕ ಸ್ಪಷ್ಟವಾಗುತ್ತದೆ.[40] ಕ್ರಿ.ಶ.750 ಅಗ್ರಹಾರ ದಾಸರಳ್ಳಿ ಶಾಸನವು ಶ್ರೀಪುರುಷ ಆಳ್ವಿಕೆ ಮಾಡುತ್ತಿದ್ದ ಕಾಲದ್ದು. ಆ ಸಮಯದಲ್ಲಿ ಕರಿಕನಾಡಿನಲ್ಲಿರುವ ಬಿದಿರ್ಕ್ಕಲ್ಲನ್ನು ಕುಕ್ಕರ ಎಂಬುವನು ಆಳುತ್ತಿದ್ದನು ಈತ ಶತ್ರುರಾಜರ ಇರಿತಕ್ಕೆ ಒಳಗಾಗಿ ಸಾವನಪ್ಪುತ್ತಾನೆ. ವೀರಗಲ್ಲು ಶಾಸನವಾದ ಇದು ಯುದ್ಧದ ಸಂದರ್ಭವನ್ನು ತಿಳಿಸುತ್ತದೆ.[41]

ಗಂಗರ ಮತ್ತೊಬ್ಬ ಅರಸ ದುಗ್ಗಮಾರ ಈತ ಕುವಲಾಳವನ್ನು ಆಳುತ್ತಿರುತ್ತಾನೆ. ಬೆಂಗಳೂರು ಗ್ರಾಮಾಂತರ ಜಿಲ್ಲೆ ದೇವನಹಳ್ಳಿಯ ಬೂದಿಗೆರೆ ಹೋಬಳಿಯ ಗೋಪಾಲಸ್ವಾಮಿ

ದೇವಾಲಯದ ಕ್ರಿ.ಶ.459ರ ಕಾಲದ ಎರಡು ಶಾಸನಗಳು  ದೊರೆತಿವೆ. ಇದು ದುಗ್ಗಮಾರನ ಹೆಸರನ್ನು ಉಲ್ಲೇಖಿಸುತ್ತದೆ. ಕೂರಳಿಗದ ಆಳು ಕೊನ್ನಮೀರು ಗಂಗ ಎಂಬುವನು ಗಂಗರ ಯುದ್ಧ ಪಡೆಗೆ ಸೇರಿ ಸಾವನ್ನಪ್ಪಿರುವ ವಿಷಯವಿದೆ.[42] 'ಸತ್ಯವಾಕ್ಯ', 'ಪೆರ್ಮಾನಡಿ' ಎಂಬ ಬಿರುದನ್ನು ಹೊಂದಿದ್ದ ರಾಚಮಲ್ಲ(816–843) ಗಂಗರ ಅರಸರಲ್ಲೇ ಬಹುದೀರ್ಘ ಕಾಲ ರಾಜನಾಗಿ ಆಳ್ವಿಕೆ ನಡೆಸುತ್ತಾನೆ. ಇವನ ಶಾಸನ ಬೆಂಗಳೂರು ನಗರ ಜಿಲ್ಲೆಯಲ್ಲಿದೆ. ಕ್ರಿ.ಶ. ಸುಮಾರು 820ರ ನಾಗೊಂಡ ಹಳ್ಳಿಯಲ್ಲಿ ದೊರೆತಿರುವ ಶಾಸನವು 'ಪೆರ್ಮಾನಡಿ' ರಾಚಮಲ್ಲನ ಕಾಲದಲ್ಲಿ ದೇವಸ್ಥಾನ ಪ್ರತಿಷ್ಠಾಪಿಸಿ ದಾನ ನೀಡಿರುವ ವಿವರವನ್ನಷ್ಟೇ ಹೇಳುತ್ತದೆ. ಈತನ ಕಾಲದ ಮತ್ತೊಂದು ಶಾಸನ ಅಗರದ ಕೆರೆಕಟ್ಟೇ ಕೆಳಗೆ ದೊರೆತಿದೆ. ಕ್ರಿ.ಶ.870ರ ಕಾಲದ್ದಾಗಿರುವ ಈ ಶಾಸನದಲ್ಲಿ ಬೆಂಪೂರು ಸೀಮೆಯನ್ನು ನಾಗತ್ತರನೆಂಬುವನು (ಬೇಗೂರು ಶಾಸನದಲ್ಲೂ ನಾಗತ್ತರನ ಉಲ್ಲೇಖವಿದೆ.) ನೋಡಿಕೊಳ್ಳುತ್ತಿದ್ದ. ಈ ನಾಗತ್ತರನ ಕೈಕೆಳಗೆ ಇರ್ವುಲಿಯೂರೊಡೆಯ ಇರುಗನಿದ್ದನು. ಇವನು ಈಗಿನ ಬೆಂಗಳೂರು ನಗರದ ಅಗರದಲ್ಲಿ ಕೆರೆಯೊಂದನ್ನು ಕಟ್ಟಿಸಿದನು[43] ಎಂಬುದನ್ನು ತಿಳಿಸುತ್ತದೆ.

ಬೇಗೂರಿನಲ್ಲಿ ದೊರೆತ ಎರೆಯಪ್ಪನ ಕಾಲದ ಕ್ರಿ.ಶ.900ರ ಬೇಗೂರು ವೀರಗಲ್ಲು ಶಾಸನವು ನಾಗತ್ತರನ ಪರಾಕ್ರಮವನ್ನು ಹೇಳುವುದರ ಜೊತೆಗೆ ಚೋಳರಿಗೂ ಗಂಗರಿಗೂ ತುಮ್ಬೆಪಾಡಿ ಎಂಬಲ್ಲಿ ನಡೆದ ಮಹತ್ವದ ಕದನವನ್ನು ತಿಳಿಸುತ್ತದೆ. ಈ ವೀರಗಲ್ಲಿನಲ್ಲಿರುವ ಚಿತ್ರವು ಯುದ್ಧದ ಚಿತ್ರಣವನ್ನು ಕಟ್ಟಿಕೊಡುತ್ತದೆ. "ಶ್ರೀಮದೆರೆಯಪ್ಪರಸರ್ ಪಗೆವರೆಲ್ಲಮಂ ನಿಕ್ಷತ್ರಮಾಡಿ ಗಂಗವಾಡಿ ತೊಂಭತ್ತಾರು ಸಾಸಿರಮನೇಕ ಚತ್ರಚ್ಛಾಯೆಯೊಳಾಳುತ್ತಮಿಳ್ದು ಬೀರ ಮಹೇನ್ದ್ರನೊಳ್ಕಾದಲೆನ್ದು ಅಯ್ಯಪದೇವಂಗೆ ಸಾಮಂತ ಸಹಿತಂ ನಾಗತ್ತರನಂ ದುಣ್ಡುವೇಳ್ದೊಡೆ ತುಮ್ಬೆಪಾಡಿಯೊಳಾದಿ ಕಾಳೆಗಮಿಮ್ಬುಳಿದೊಡೆ ಆನೆಯೊಳಾನ್ತಿರಿದು ಸತ್ತೊಡದಂ ಕೇಳ್ದೆರೆಯಪಂ ಮೆಚ್ಚಿ ಇರುಗಂಗೆ ನಾಗತ್ತರವಟ್ಟಂಗಟ್ಟಿ ಬೆಂಪೂರ್ಪನ್ನೆರಡುಮಂ ಸಾಸನಬದ್ಧಂ ಕಲ್ನಾಡಿತ್ತನ್"[44] ಗಂಗರ ಸಾಮಂತಾಧಿಕಾರಿ ನಾಗತ್ತರನು ಸತ್ತಾಗ ಅವನ ಮಗನಿಗೆ 'ಪನ್ನೆರಡು' ಹಳ್ಳಿಗಳನ್ನು ಎಱೆಯಪ್ಪರಸರು ದಾನವನ್ನು ನೀಡಿದ್ದಾರೆ. ಕಲ್ನಾಡೆಂದರೆ, ಹೋರಾಡುವ ವೀರರಿಗೆ ಗ್ರಾಮವನ್ನು, ಭೂಮಿಯನ್ನು ದತ್ತಿ ನೀಡಿದ ಗೌರವವನ್ನು ಕಲ್ನಾಟು ಅಥವಾ ಕಲ್ನಾಡು ಎಂದು ಕರೆಯಲಾಗುತ್ತಿತ್ತು. ಬಹುಶಃ ಕಲ್ನಾಟು ಎಂದರೆ ಶಿಲಾಶಾಸನ ಸಹಿತವಾಗಿ ಎಂದರ್ಥ. ನಾಗತ್ತರನ ಮಗ ಇರುಗನಿಗೆ ಪಟ್ಟಕಟ್ಟಿ 12 ಊರುಗಳನ್ನು ದಾನ ನೀಡಿದ ಶಾಸನ. ಕದನದಲ್ಲಿ ಆನೆಯೊಂದಿಗೆ ಹೋರಾಡಿ ಸಾವನ್ನಪ್ಪಿದ್ದನ್ನು ಶಾಸನ ತಿಳಿಸುತ್ತದೆ. ಮರಣ ಹೊಂದಿದ ವೀರ ನಾಗತ್ತರನ ಗೌರವಾರ್ಥ ನಡೆಸಿದ ಬೇಗೂರು ವೀರಗಲ್ಲು ಗಂಗರ ಆಳ್ವಿಕೆಯ ಚರಿತ್ರೆಯನ್ನು ಹೇಳುತ್ತದೆ. ಈ

ವೀರಗಲ್ಲಿನಲ್ಲಿ ಯುದ್ಧದ ಭೀಕರತೆಯ ಚಿತ್ರಣವನ್ನು ಶಿಲ್ಪದ ಮೂಲಕ ಕಟ್ಟಿಕೊಡಲಾಗಿದೆ. ಆನೆಯೊಂದಿಗೆ ಹೋರಾಡುತ್ತಿರುವ ವೀರನನ್ನು ಕಾಣಬಹುದು.

ಕ್ರಿ.ಶ.900ರ ಕಾಲದ ಬೊಮ್ಮೊಂಡಹಳ್ಳಿಯಲ್ಲಿ ದೊರೆತ ಮತ್ತೊಂದು ಶಾಸನವು[45] ನೀತಿಮಾರ್ಗ ಎರೆಯಪ್ಪನ ಕಾಲದ್ದು. ಇದು ಬೇಗೂರು ನಾಗತ್ತರನ ಆಳು ಮಂಗಲ ಬೀಮಣ್ಣನೆಂಬೋನು ನಗ ದೇವನೆಂಬೋನು ಕದಂಬೂರಿನ ತುರುಗೋಳಿನಲ್ಲಿ ಕಾದಿ ಸತ್ತುದ್ದನ್ನು ತಿಳಿಸುತ್ತದೆ.

ವರ್ತೂರು ಕೆರೆ ಕಟ್ಟೆ ಮೇಲೆ ಸುಮಾರು 900ರ ಎರೆಯಪ್ಪನ ಮತ್ತೊಂದು ಶಾಸನ ದೊರಕಿದೆ. ಆದರೆ ಈ ಶಾಸನ ನೊಳಂಬ ಶಿವಮಾರನ ಹೆಸರನ್ನು ಉಲ್ಲೇಖಿಸುತ್ತದೆ. ಈತ ಗಂಗರ ರಾಜ. ಈತ ಮೊರಸುನಾಡನ್ನು ಆಳುತ್ತಿದ್ದ. ಈ ಶಾಸನ ದಾನ ಶಾಸನವಾಗಿದೆ. ಮಹಾಬಲಿ ವಂಶಕ್ಕೆ ಸೇರಿದ ನಿಜಪನ ಮಗ ಅಣ್ಣಿಗ ಇಬ್ಬರು ಅರಸುಗಳಲ್ಲಿ ಪಡೆದು ದೇವಭೋಗಕ್ಕೆ ಕೊಟ್ಟ ದಾನವಾಗಿದೆ. ಈ ದಾನವನ್ನು ಎರೆಯಪ್ಪ ಮಹಾಜನರ ಸಾಕ್ಷಿಯಾಗಿ ನೀಡಿದ್ದಾನೆ ಎಂಬ ವಿಷಯದ ಒಕ್ಕಣೆಯಿದೆ.

ಆನೇಕಲ್ಲು ತಾಲ್ಲೂಕಿನ ಹೆಬ್ಬಗೋಡಿಯಲ್ಲಿ ಸುಮಾರು ಕ್ರಿ.ಶ.908ಕ್ಕೆ ಸರಿಹೊಂದಬಹುದಾದ ಗಂಗರ ಕಾಲದ ವೀರಗಲ್ಲೊಂದು ದೊರೆತಿದೆ. ಗಂಗ ಎಱೆಯಪ್ಪನ ಆಳ್ವಿಕೆಯಲ್ಲಿ ನಾಗತ್ತರ ನಾಡನ್ನು ಆಳುತ್ತಿದ್ದಾಗ ವ್ಯಕ್ತಿಯೊಬ್ಬ ತುರುಕಾಳಗದಲ್ಲಿ ಮರಣ ಹೊಂದಿರುವ ವಿಷಯವನ್ನು ಹೇಳುತ್ತದೆ. ನಾಗತ್ತರ ನಾಡನ್ನು ಆಳುತ್ತಿದ್ದ ಎಂದಿದೆ. ಆದರೆ ಯಾವ ನಾಡು ಎಂಬ ಉಲ್ಲೇಖವಿಲ್ಲ. ಬಹುಶಃ ಈ ನಾಡು ಬೇಗೂರು ಆಗಿತ್ತು ಎಂದು ಹೇಳಬಹುದು.[46] ನಾಗತ್ತರನು ವೀರಮರಣ ಹೊಂದಿದ ವಿಷಯ ನಾಗೇಶ್ವರ ದೇವಾಲಯದ ಹಿಂದೆ ಪ್ರಾಕಾರದ ಗೋಡೆಗೆ ಹಾಕಿರುವ ಶಾಸನದಿಂದ ತಿಳಿಯುತ್ತದೆ.[47]

ಗಂಗರ ಕಾಲದ ಶಾಸನಗಳು ಬೆಂಗಳೂರಿನಾದ್ಯಂತ ದೊರಕಿದೆ. ಈ ಶಾಸನಗಳನ್ನು ಅವಲೋಕಿಸಿದಾಗ ಬೆಂಗಳೂರು ಗಂಗರ ಮುಖ್ಯ ಕೇಂದ್ರವಾಗಿತ್ತು ಎಂಬುದು ಸ್ಪಷ್ಟವಾಗುತ್ತದೆ. ಗಂಗ ದೊರೆಗಳಾದ ಶ್ರೀಪುರುಷ, ಎರೆಯಪ್ಪ, ರಾಚಮಲ್ಲ, ದುಗ್ಗಮಾರನ ಶಾಸನಗಳು ನಗರಜಿಲ್ಲೆಗಳಲ್ಲಿ ದೊರೆತಿರುವುದರಿಂದ ಗಂಗರ ಕಾಲದಲ್ಲಿ ಬೆಂಗಳೂರು ಸುಭಿಕ್ಷವಾಗಿ ಆಡಳಿತಕ್ಕೆ ಒಳಗಾಗಿತ್ತು ಎಂಬುದು ಗೋಚರಿಸುತ್ತದೆ. ಮುಂದೆ ಚೋಳರ ಆಕ್ರಮಣಕ್ಕೆ ಒಳಗಾಗಿ ಗಂಗ ಸಾಮ್ರಾಜ್ಯವು ತನ್ನ ಅಸ್ತಿತ್ವವನ್ನು ಕಳೆದು ಕೊಳ್ಳುತ್ತದೆ. ಹೀಗೆ ಗಂಗರ ವಶದಲ್ಲಿದ್ದ ಗಂಗವಾಡಿಯನ್ನು ಚೋಳರು ತಮ್ಮ ತೆಕ್ಕೆಗೆ ವಶಪಡಿಸಿಕೊಳ್ಳುತ್ತಾರೆ. ಗಂಗವಾಡಿಯ ಭಾಗವಾದ ಬೆಂಗಳೂರು ಚೋಳರ ಅಧೀನಕ್ಕೆ ಸೇರಿದುದನ್ನು ಗಮನಿಸಬಹುದು.

## ಪಲ್ಲವರು

ಹೊಸಕೋಟೆ ತಾಲ್ಲೂಕಿನ ಗ್ರಾಮದಲ್ಲಿ ದೊರೆತಿರುವ ಶಿಲಾಶಾಸನದಲ್ಲಿ 'ಬಾದಾಮಿಗೊಂಡ ನರಸಿಂಗವರ್ಮ' ಎಂಬ ಉಲ್ಲೇಖ ದೊರೆಯುತ್ತದೆ. ಈ ಶಾಸನದ ಆಧಾರದಿಂದ ಕ್ರಿ.ಶ. ಸುಮಾರು 650ರ ವೇಳೆಗೆ ಪಲ್ಲವ ದೊರೆ ನರಸಿಂಹವರ್ಮನು ಬಾದಾಮಿಯ ಮೇಲೆ ದಾಳಿ ಮಾಡಿ ಬಾದಾಮಿ ಚಾಲುಕ್ಯಚಕ್ರವರ್ತಿ ಇಮ್ಮಡಿ ಪುಲಿಕೇಶಿಯನ್ನು ಸೋಲಿಸಿದ ಸಂದರ್ಭದಲ್ಲಿ ಅಂದಿನ ಬೆಂಗಳೂರಿನ ಪ್ರದೇಶವನ್ನು ಬಾದಾಮಿ ಚಾಲುಕ್ಯರು ತಮ್ಮ ವಶಪಡಿಸಿಕೊಂಡಿದ್ದರಿಂದ ಈ ಪ್ರದೇಶವು ಪಲ್ಲವರ ಆಳ್ವಿಕೆಗೊಳಪಟ್ಟಿತ್ತು. ಆದ್ದರಿಂದಲೇ ಬೆಂಗಳೂರು ಉತ್ತರತಾಲೂಕಿಗೆ ಸೇರಿದ ಗಂಗವಾರದ ಈಶ್ವರ ದೇವಾಲಾಯದಲ್ಲಿ ಮತ್ತು ನೆಲಮಂಗಲ ತಾಲೂಕಿನ ಮಣ್ಣೆಯಲ್ಲಿ ಪಲ್ಲವ ಶೈಲಿಯ ಸಿಂಹಸ್ತಂಭಗಳು ನಿರ್ಮಾಣಗೊಂಡಿವೆ. ಹೊಸಕೋಟೆ ಬಳಿಯ ಚಿಕ್ಕನ ಹಳ್ಳಿಯಲ್ಲಿ ಪಲ್ಲವ ಶೈಲಿಯ ಕ್ರಿ.ಶ. ಸುಮಾರು 7ನೆಯ ಶತಮಾನದ ವೆಂಕಟೇಶ್ವರನ ವಿಗ್ರಹ ಪತ್ತೆಯಾಗಿದೆ. ಈ ಎಲ್ಲಾ ಆಧಾರಗಳ ಹಿನ್ನೆಲೆಯಲ್ಲಿ ಕ್ರಿ.ಶ. ಸುಮಾರು 650ರ ಕಾಲಘಟ್ಟದಲ್ಲಿ ಅಂದಿನ ಬೆಂಗಳೂರಿನ ಪ್ರದೇಶಗಳು ಪಲ್ಲವರ ಆಳ್ವಿಕೆಗೊಳಪಟ್ಟಿತ್ತು ಎಂದು ಪ್ರೊ ಎಂ.ಜಿ.ಮಂಜುನಾಥ ಅವರು ಅಭಿಪ್ರಾಯಪಟ್ಟಿದ್ದಾರೆ.[48] ಪ್ರೊ.ಎಂ.ಜಿ.ಮಂಜುನಾಥ ಅವರ ಅಭಿಪ್ರಾಯ ಸಕಾರಣವಾದದ್ದು 'ಬಾದಾಮಿಗೊಂಡ ನರಸಿಂಗವರ್ಮ' ಎಂಬ ಉಲ್ಲೇಖ ಶಾಸನದಲ್ಲಿ ದೊರೆತಿರುವುದರಿಂದ ಬೆಂಗಳೂರಿನ ಪ್ರದೇಶಗಳು ಪಲ್ಲವರ ನೇರ ಆಳ್ವಿಕೆಗೊಳಪಟ್ಟಿತ್ತೆಂಬುದು ಸ್ಪಷ್ಟವಾಗುತ್ತದೆ. ಪಲ್ಲವ ಶೈಲಿಯ ಸಿಂಹಸ್ತಂಭಗಳು ಸಹಾ ಈ ಪ್ರದೇಶದಲ್ಲಿ ದೊರೆತಿರುವುದು ಪಲ್ಲವರ ಆಳ್ವಿಕೆ ಈ ಪ್ರದೇಶಕ್ಕೊಳಪಟ್ಟಿತ್ತೆಂಬುದಕ್ಕೆ ಪೂರಕವಾಗಿದೆಯೆಂದು ಹೇಳಬಹುದು. ಒಟ್ಟಾರೆ ಕ್ರಿ.ಶ.7ನೆಯ ಶತಮಾನದ ಕಾಲಘಟ್ಟದಲ್ಲಿ ಬೆಂಗಳೂರಿನ ಪ್ರದೇಶಗಳು ಪಲ್ಲವರ ಆಳ್ವಿಕೆಗೆ ಸೇರಿತ್ತೆಂಬುದು ಖಚಿತವಾಗುತ್ತದೆ.

## ರಾಷ್ಟ್ರಕೂಟರು

ಕರ್ನಾಟಕದ ಇತಿಹಾಸದಲ್ಲಿ ವೈಭವ ಪೂರ್ಣವಾಗಿ ಆಳಿದ ರಾಜಮನೆತನಗಳಲ್ಲಿ ರಾಷ್ಟ್ರಕೂಟರು ಒಬ್ಬರು. ಚಾಲುಕ್ಯರ ನಂತರ ಅಧಿಕಾರದ ಗದ್ದುಗೆ ಏರಿದ ಇವರು ಸುಮಾರು ಎರಡು ಶತಕಗಳಿಗೂ ಹೆಚ್ಚು ಕಾಲ ಆಳಿದ್ದಾರೆ. ಇವರ ರಾಜ್ಯಭಾರ ಕರ್ನಾಟಕದಾದ್ಯಂತ ವಿಸ್ತರಿಸಿತ್ತು ಎಂಬುದಕ್ಕೆ ದೊರೆತಿರುವ ಶಾಸನಗಳಿಂದ ಸ್ಪಷ್ಟವಾಗುತ್ತದೆ. ಕರ್ನಾಟಕದ ರಾಜಧಾನಿ ಬೆಂಗಳೂರು ಕೂಡ ಇವರ ಆಳ್ವಿಕೆಗೆ ಒಳಗಾಗಿತ್ತು ಎಂಬುದರಲ್ಲಿ ಯಾವುದೇ ಸಂಶಯವಿಲ್ಲ. ದಂತಿವರ್ಮ, ಇಂದ್ರ, ಪೃಚ್ಛಕರಾಜ, ಗೋವಿಂದರಾಜ, ಕರ್ಕ ಕ್ರಮವಾಗಿ ರಾಷ್ಟ್ರಕೂಟರ ರಾಜರಾಗಿ

ರಾಜ್ಯವಾಳಿದ್ದಾರೆ. ಬೆಂಗಳೂರು ಹಾಗೂ ಸನಿಹದ ಪ್ರದೇಶಗಳಲ್ಲಿ ರಾಷ್ಟ್ರಕೂಟರ ಮೂರನೇ ಗೋವಿಂದನ ಕಾಲದಿಂದ ಶಾಸನಗಳು ದೊರೆಯುತ್ತದೆ.

ರಾಷ್ಟ್ರಕೂಟರು ಕನ್ನಡಿಗರಾಗಿದ್ದರು. ಇವರ ಕಾಲದಲ್ಲಿ ಕನ್ನಡ ಭಾಷೆ ಮತ್ತು ಸಾಹಿತ್ಯಗಳಿಗೆ ದೊರಕಿದ ಪ್ರೋತ್ಸಾಹ ಹಾಗೂ ಆ ಕಾಲದ ಶಾಸನಗಳ ಭಾಷೆ ಮತ್ತು ಲಿಪಿ ಇವುಗಳ ಆಧಾರದ ಮೇಲೆ ರಾಷ್ಟ್ರಕೂಟರು ಕನ್ನಡ ಮೂಲಕ್ಕೆ ಸೇರಿದವರು ಎಂದು ಹೇಳಬಹುದು. ಶಾಸನದಲ್ಲಿ ಕಾಲದ ಉಲ್ಲೇಖವಿಲ್ಲ. ಈ ಶಾಸನದಲ್ಲಿ 'ಸ್ವಸ್ತಿ ಶ್ರೀ ಕಣ್ಣಡಿ ಅರಸರ್ಕೈವರನಾಡ ಶುಭವನ್ದಿವಜುಕ್ಕನೊರೊಳ'[49] ಎಂದಿದೆ. ಕಣ್ಣಡಿ ಅಂದರೆ ಕನ್ನಡದ ಅರಸನೊಬ್ಬ ಕೈವಾರ ನಾಡನ್ನು ಆಳುತ್ತಿದ್ದ ವಿಚಾರವನ್ನು ಹೇಳುತ್ತದೆ.

ಕ್ರಿ.ಶ. ಸುಮಾರು 802ರ ಶಾಸನದಲ್ಲಿ ಕಂಬದೇವ ಅಥವಾ ಸ್ತಂಭನ ಉಲ್ಲೇಖವಿದೆ.[50] ಈತನನ್ನು ಅಪರನಾಮ ರಣಾವಳೋಕ ಎನ್ನಲಾಗಿದೆ. ಕಂಬನು ಮೂರನೇ ಗೋವಿಂದನ ಹಿರಿಯ ಸಹೋದರ. ಗೋವಿಂದನು(ಕ್ರಿ.ಶ.793–814) ರಾಜನಾಗಿದ್ದಾಗ ಕಂಬನನ್ನು ಗಂಗವಾಡಿಯ ಪ್ರಾಂತಾಧಿಪತಿಯನ್ನಾಗಿ ಮಾಡಿದ್ದನು.[51] ಬೆಂಗಳೂರು ಪ್ರಾಂತ್ಯವು ಗಂಗವಾಡಿಯ ಒಂದು ಭಾಗವೇ ಆಗಿತ್ತು. ಶಾಸನದಲ್ಲಿ ಮೂರನೇ ಗೋವಿಂದನನ್ನು ಮಹಾರಾಜ ಎಂದು ಕರೆಯಲಾಗಿದೆ. ಹಾಗೂ ರಾಷ್ಟ್ರಕೂಟರ ವಂಶಾವಳಿಯನ್ನು ಈ ಶಾಸನವು ನೀಡುವುದರಿಂದ ಪ್ರಾಮುಖ್ಯತೆಯನ್ನು ಹೊಂದಿದೆ. ಮೂರನೇ ಗೋವಿಂದನಿಗಿಂತಲೂ ಮೊದಲೇ ರಾಷ್ಟ್ರಕೂಟರ ಅಧಿಕಾರದ ಚುಕ್ಕಾಣಿ ಹಿಡಿದ ಕೃಷ್ಣ, ಸ್ತಂಭ ಮತ್ತು ಗೋವಿಂದನ ತಂದೆಯಾದ ಧ್ರುವನ ಉಲ್ಲೇಖವಿದೆ. ಮೂರನೇ ಗೋವಿಂದನ ನಂತರ ಒಂದನೇ ಅಮೋಘವರ್ಷನು ಆಳ್ವಿಕೆ ನಡೆಸುತ್ತಾನೆ. ಆದರೆ ಈತನ ಕಾಲದ ಶಾಸನಗಳು ಬೆಂಗಳೂರಿನಲ್ಲಿ ನಮಗೆ ದೊರೆಯುವುದಿಲ್ಲ.

ಸುಮಾರು ಕ್ರಿ.ಶ.914 ಕಾಲದ ಶಾಸನದಲ್ಲಿ ಅಕಾಲವರ್ಷನು ಆಳುತ್ತಿದ್ದಾಗ ಎಂದಿದೆ. ಅಕಾಲವರ್ಷ ಎಂಬ ಬಿರುದು ಒಂದನೇ ಕೃಷ್ಣ, ಎರಡನೇ ಕೃಷ್ಣ ಮತ್ತು ಮೂರನೇ ಕೃಷ್ಣರಿಗೆ ಇತ್ತು. ಕಾಲದ ಆಧಾರದ ಮೇಲೆ ಈ ಶಾಸನವು ಎರಡನೇ ಕೃಷ್ಣನಿಗೆ(ಕ್ರಿ.ಶ. 878–914) ಸೇರುತ್ತದೆ.

ಅಮೋಘವರ್ಷನ ಪುತ್ರನಾದ ಎರಡನೇ ಕೃಷ್ಣನು ಪಟ್ಟಕ್ಕೆ ಬಂದನು. 'ಅಕಾಲವರ್ಷ' ಮತ್ತು 'ಶುಭತುಂಗ' ಮುಂತಾದ ಬಿರುದುಗಳನ್ನು ಧರಿಸಿದ್ದನು. ಇವನ ಆಳ್ವಿಕೆಯು ದುರ್ಬರವಾದ ಕಾಲ.[52] ಶತ್ರುಗಳೊಂದಿಗೆ ಹೋರಾಡುವುದರಲ್ಲೇ ಇವನ ಕಾಲ ಮುಗಿಯಿತು. ಅರದೇಶಹಳ್ಳಿಯಲ್ಲಿ ದೊರೆತಿರುವ ಕ್ರಿ.ಶ. ಸುಮಾರು 914ಕ್ಕೆ ಸೇರಬಹುದಾದ ಶಾಸನವು ತುರುಕಾಳಗದ ವಿಷಯವನ್ನು ಹೇಳುತ್ತದೆ. ಅಕಾಲವರ್ಷನು ಆಳುತ್ತಿದ್ದಾಗ ಗಂಗವಾಸನ ಮಗನಾದ ಗೋವಿಂದನು ಸಣ್ಣೆನಾಡು–300 ಮತ್ತು ಕುಣಿಗ್ಗಲ್–500 ಪ್ರದೇಶಗಳನ್ನು ಆಳುತ್ತಿರಲು ನನ್ದಿಗುನ್ತ ಪಸುವೊನ್ನಮಾಟ್(ಹೆಸರು

ಸ್ಪಷ್ಟವಾಗಿಲ್ಲ) ಗಾಣಿಗಾವುಣ್ಡನು ಇಡೀ ರಾಜ್ಯವನ್ನು ದಾಟಿ ಬಂದು ದಾಳಿ ಮಾಡಲು, ಗೋವಿಂದನು ಶತ್ರುವನ್ನು ನಾನು ಎದುರಿಸುತ್ತೇನೆ ಎಂದು ಹೇಳಿ, ಮುಂದೆ ನಿಂತು ಹಸುಗಳನ್ನು ರಕ್ಷಿಸಿ ಮಡಿದ ವಿಚಾರವನ್ನು ಈ ಶಾಸನ ತಿಳಿಸುತ್ತದೆ.[53]

ಬೆಂಗಳೂರಿನಲ್ಲಿ ಮತ್ತೊಂದು ವೀರಗಲ್ಲು ಶಾಸನವೊಂದು ದೊರೆತಿದೆ. ಮನುಷ್ಯನೊಬ್ಬ ಬಲಗೈಯಲ್ಲಿ ಬಿಲ್ಲನ್ನು, ಎಡಗೈಯಲ್ಲಿ ಬಾಣವನ್ನು ಹಿಡಿದುಕೊಂಡು ಬಿದ್ದ ವ್ಯಕ್ತಿಯ ಮುಂದೆ ನಿಂತಿರುವ ಚಿತ್ರಣವನ್ನು ನೀಡಿದೆ. ಬಹುಶಃ ಕಾದಾಡಿ ಮಡಿದ ವ್ಯಕ್ತಿಯ ಜ್ಞಾಪಕಾರ್ಥವಾಗಿ ಸ್ಥಾಪಿಸಿದ ವೀರಗಲ್ಲಿನ ಬಗ್ಗೆ ಶಾಸನವು ವಿವರಿಸುತ್ತದೆ. ಇತರ ವಿವರಗಳು ಸ್ಪಷ್ಟವಾಗಿಲ್ಲ. ಶಾಸನವು ಒಂಭತ್ತನೇ ಶತಮಾನದ ಲಿಪಿಯಲ್ಲಿದೆ.[54]

ಎರಡನೇ ಕೃಷ್ಣನ ನಂತರ ಅವನ ಮೊಮ್ಮಗನಾದ ಮೂರನೇ ಇಂದ್ರನು(ಕ್ರಿ.ಶ.914–929) ರಾಷ್ಟ್ರಕೂಟರ ಚಕ್ರವರ್ತಿಯಾದನು. ಈತನ ಕಾಲದ ಶಾಸನವೊಂದು ದಾಸರಹಳ್ಳಿಯಲ್ಲಿ ದೊರಕಿದೆ. ಕನ್ನಡ ಭಾಷೆ ಮತ್ತು ಲಿಪಿಯಲ್ಲಿರುವ ಈ ಶಾಸನದ ಕಾಲದ ಉಲ್ಲೇಖವಿಲ್ಲ. ರಾಷ್ಟ್ರಕೂಟ ಇಂದ್ರನು ರಾಜ್ಯವಾಳುತ್ತಿದ್ದಾಗ ಧರ್ಮಗುರು ಸ್ವರ್ಗಸ್ಥನಾದದ್ದನ್ನು ದಾಖಲಿಸುತ್ತದೆ. ಯಾವ ಧರ್ಮದಗುರು, ಆತನ ಹೆಸರು, ಯಾವುದರ ಬಗ್ಗೆಯೂ ಮಾಹಿತಿಯಿಲ್ಲ.[55] ದಕ್ಷನೂ, ಯುದ್ಧವಿಶಾರದನೂ ಆದ ಇಂದ್ರನು ರಾಷ್ಟ್ರಕೂಟರ ಪ್ರಭುತ್ವವನ್ನು ಎತ್ತಿಹಿಡಿದಿದ್ದನು. ಬೆಂಗಳೂರಿನಲ್ಲಿ ಇಂದ್ರನ ಕಾಲದ ಶಾಸನವೇ ದೊರೆತಿರುವ ರಾಷ್ಟ್ರಕೂಟರ ಕೊನೆಯ ಶಾಸನವಾಗಿದೆ. ರಾಷ್ಟ್ರಕೂಟರ ಅಧಿಕಾರವನ್ನು ಮುಂದೆ ನಾಲ್ಕನೇ ಗೋವಿಂದ, ಮೂರನೇ ಅಮೋಘವರ್ಷ, ಮೂರನೇ ಕೃಷ್ಣ, ಇಮ್ಮಡಿ ಕರ್ಕ ಮೊದಲಾದವರು ಪಡೆದಿದ್ದಾರೆ. ಆದರೆ ಇವರ ಕಾಲದ ಯಾವ ಶಾಸನವು ದೊರೆತಿಲ್ಲ. ಉಜ್ವಲವಾಗಿ ಕರ್ನಾಟಕವನ್ನು ಆಳಿದ ರಾಷ್ಟ್ರಕೂಟರು ಮುಂದೆ ಕಣ್ಮರೆಯಾದರು.

## ಚೋಳರು

ಚೋಳರು ಮೂಲತಃ ತಮಿಳುನಾಡಿನ ಅರಸುಮನೆತನದವರು. ತಂಜಾವೂರಿನ ಚೋಳರು ಎಂದೇ ಪ್ರಖ್ಯಾತಿಯನ್ನು ಪಡೆದವರು. ಚೋಳರ ರಾಜ್ಯವನ್ನು ಚೋಳಮಂಡಲವೆಂದು ಕರೆಯಲಾಗುತ್ತಿತ್ತು. ದಕ್ಷಿಣ ಭಾರತದಲ್ಲಿ ಸುಮಾರು ಒಂಭತ್ತನೇ ಶತಮಾನದಲ್ಲಿ ಆಳ್ವಿಕೆ ನಡೆಸಿದ ಸಾರ್ವಭೌಮರು. ಪಲ್ಲವರು ದುರ್ಬಲರಾಗುತ್ತಿದ್ದಂತೆ ಚೋಳರು ತಲೆ ಎತ್ತಿದರು. ಕ್ರಿ.ಶ.850ರ ವೇಳೆಗೆ ಚೋಳ ವಂಶದ ವಿಜಯಾಲಯನಿಂದ ಸಣ್ಣರಾಜ್ಯವಾಗಿ ಸ್ಥಾಪಿತವಾದದ್ದು ಮುಂದೆ ಹೆಮ್ಮರವಾಗಿ ಬೆಳೆಯಿತು. ಮುಂದೆ ಚೋಳ ಸಾಮ್ರಾಜ್ಯದ ಅರಸರಾಗಿ ಒಂದನೇ ರಾಜರಾಜ, ರಾಜೇಂದ್ರ, ಕುಲೋತ್ತುಂಗ ಮುಂತಾದವರು ಆಳ್ವಿಕೆ ನಡೆಸಿದ್ದಾರೆ.

ಬೆಂಗಳೂರಿಗೆ ಸಂಬಂಧಪಟ್ಟಂತೆ ಚೋಳರ ಮೊದಲ ಶಾಸನ ಕ್ರಿ.ಶ.997ರ ಕಾಲದ ಕಮ್ಮಸಂದ್ರದಲ್ಲಿ ದೊರೆಯುತ್ತದೆ.[56] ರಾಜರಾಜದೇವನ(ಕ್ರಿ.ಶ.985–1014) ಶಾಸನವಿದು. ಚೋಳ ಅರಸರಲ್ಲೇ ಅತ್ಯಂತ ಪ್ರಖ್ಯಾತನಾದವನು. ಗಂಗವಾಡಿ, ನೊಳಂಬವಾಡಿ ರಾಜ್ಯಗಳನ್ನು ಆಕ್ರಮಿಸಿಕೊಂಡಿದ್ದನು. ನೊಳಂಬರು ಈತನ ಅಧೀನರಾಗಿದ್ದರು. ನೊಳಂಬ ಅರಸ ಅಯ್ಯಪದೇವನ ಮಗ ಗನ್ನರಸನು ರಾಜರಾಜ ದೇವನ ಕಾಲದಲ್ಲಿ ದಡಿಗವಾಡಿ ಕುಖುಕುಂದ ನಾಡನ್ನು ಆಳುತ್ತಿರುವ ವಿಷಯವು ಕಮ್ಮಸಂದ್ರದ ಶಾಸನದಿಂದ ತಿಳಿಯುತ್ತದೆ.

ರಾಜರಾಜದೇವನ ಅನಂತರ ಚೋಳ ಅರಸನಾಗಿ ಅಧಿಕಾರವನ್ನು ವಹಿಸಿಕೊಂಡವನು ರಾಜೇಂದ್ರ ಚೋಳ(ಕ್ರಿ.ಶ. 1012–1044). ಈತನಿಗೆ 'ಗಂಗೈಕೊಂಡ ಚೋಳ' ಎಂಬ ಹೆಸರಿನಿಂದ ಪ್ರಖ್ಯಾತನಾಗಿದ್ದನು. ತಂದೆ ರಾಜಕೇಸರಿ ಆದರೆ ಮಗ ಪರಕೇಸರಿ ಆಗಿದ್ದ. 'ಮುಡಿಕೊಂಡ', 'ಗಂಗೈಕೊಂಡ', 'ಕಡಾರಂಗೊಂಡ', 'ವೀರರಾಜೇಂದ್ರ ಗಂಗೈಕೊಂಡಚೋಳ' ಮುಂತಾದ ಹಲವು ಬಿರುದುಗಳನ್ನು ಹೊಂದಿದ್ದನು.[57] ಈತನ ಕ್ರಿ.ಶ.1029ರ ಶಾಸನವು ಸೋಲದೇವನ ಹಳ್ಳಿಯಲ್ಲಿ ದೊರೆಕಿದೆ.[58] ಕನ್ನಡ ಭಾಷೆಯಲ್ಲಿರುವ ಈ ಶಾಸನವು ರಾಜೇಂದ್ರ ಚೋಳನಿಗೆ ಪರಕೇಸರಿವರ್ಮ ಎಂಬ ಬಿರುದಿತ್ತೆಂಬುದನ್ನು ಸ್ಪಷ್ಟಪಡಿಸುತ್ತದೆ. ಹಾಗೂ ಗಂಗರನ್ನು ಹತ್ತಿಕ್ಕಿ 'ಗಂಗೈಕೊಂಡ ಚೋಳ' ಎಂಬ ಹೆಸರಿನಿಂದ ಪ್ರಖ್ಯಾತನಾಗಿದ್ದನು. ಈತನ ದಂಡನಾಯಕ ವಾಮನಯ್ಯ ಎಂಬುದನ್ನು ಸೋಲದೇವನ ಹಳ್ಳಿಯ ಶಾಸನ ಮತ್ತು ಹುಸ್ಕೂರಿನ ಕ್ರಿ.ಶ.1033ರ ಗೋಪಾಲ ಕೃಷ್ಣ ದೇವಾಲಯದಲ್ಲಿ ದೊರೆತ ಶಾಸನವು ತಿಳಿಸುತ್ತದೆ.[59]

ರಾಜೇಂದ್ರ ಚೋಳನ ಮರಣದ ನಂತರ ಅವನ ಮಗ ಒಂದನೇ ರಾಜಾಧಿರಾಜ ಅಧಿಕಾರ ಸ್ವೀಕರಿಸಿದ. ಆನಂತರ ಎರಡನೇ ರಾಜೇಂದ್ರ(ಕ್ರಿ.ಶ.1054–64) ಅರಸನಾದ. ಕ್ರಿ.ಶ.1060ರ ರಾಜೇಂದ್ರ ದೇವನ ಶಾಸನವು ಕೆಂಗೇರಿ ಬಳಿ ದೊರತಿದೆ. ಈ ಶಾಸನವು ಚೋಳರ ರಾಜಕೀಯ ಚರಿತ್ರೆಯನ್ನು ತಿಳಿಯುವಲ್ಲಿ ಉಪಯುಕ್ತವಾಗಿದೆ. ರಾಜೇಂದ್ರ ದೇವನನ್ನು ಈ ಶಾಸನ ಪರಕೇಸರಿ ಎಂದಿದೆ. ಶಾಸನ ಪ್ರಾರಂಭವಾಗುವುದೆ ರಾಜೇಂದ್ರ ಚೋಳನ ಸಿಂಹಾಸನದ ಬಲದ ವರ್ಣನೆಯಿಂದ. ಹಾಗೂ ಆತನ ಅಧಿಕಾರವಧಿಯ ವೈಭೋಗವನ್ನು ಬಿತ್ತರಿಸುತ್ತದೆ. ಈತನ ತಂದೆಯ ಕಿರಿಯ ತಮ್ಮ ಗಂಗೈಕೊಂಡ ಚೋಳನು ಹಾಗೂ ಇಮ್ಮಡಿ ಚೋಳನು ಯುದ್ಧಶಕ್ತಿ ಎಂಬಂತಿದ್ದನು. ಹಾಗೂ ರಾಜೇಂದ್ರ ಚೋಳನ ಕಿರಿಯ ತಮ್ಮಂದಿರಾದ ಇರಾಟೆ ಮುಮ್ಮಡಿ ಚೋಳನು ಯುದ್ಧದಲ್ಲಿ ಶತ್ರುರಾಜರನ್ನು ವಿನಾಶಮಾಡುವ ಶಕ್ತಿ ಹೊಂದಿದ್ದರು ಎಂಬ ವಿಷಯವನ್ನು ಈ ಶಾಸನ ತಿಳಿಸುತ್ತದೆ. ಇಂತಹ ಪರಾಕ್ರಮಿಗಳಾದ ಚೋಳ ಅರಸರು ಬೆಂಗಳೂರನ್ನು ತಮ್ಮ ಕಪಿಮುಷ್ಠಿಯಲ್ಲಿಟ್ಟುಕೊಂಡಿದ್ದರು.

ವೀರರಾಜೇಂದ್ರನ ಆನಂತರ ಇವನ ಸೋದರಳಿಯನಾದ ಕುಲೋತ್ತುಂಗ(1070–1120)ನು ಚೋಳ ಅಧಿಪತ್ಯವನ್ನು ವಹಿಸಿಕೊಂಡನು. ಇವನ ಶಾಸನವು ಯಲಹಂಕ ಹೋಬಳಿ ಕೆಂಪಾಪುರದಲ್ಲಿ ದೊರತಿದೆ.[60] ಇದು ಹಂದಿಬೇಟೆಯ ವೀರಗಲ್ಲಾಗಿದೆ. ಕ್ರಿ.ಶ.1080ರ ಈ ಶಾಸನವು ಕುಲೋತ್ತುಂಗ ಚೋಳನ ಕಾಲದಲ್ಲಿ ಸಣ್ಣೇನಾಡನ್ನು ಆಳುತ್ತಿದ್ದ, ಕಾಡೆಯ ನಾಯಕನ ಭಂಟ ಮುಮ್ಮಡಿ ಸೆಟ್ಟಿಯ ಮಗ ಗೂಳಿಯಣ್ಣನ ಸಹೋದರ ರಾಮದೇವ ಎಂಬುವನು ಬೇಟೆಗೆ ಹೋದಾಗ ಹಂದಿಯನ್ನು ಕೊಂದು ಮಡಿದಿರಬೇಕು. ಕುಲೋತ್ತುಂಗನ ಮತ್ತೊಂದು ಶಾಸನ ಆನೇಕಲ್ಲಿನಲ್ಲಿ ದೊರೆತಿದೆ. ಇದು ಕುಲೋತ್ತುಂಗನಿಗೆ ಇದ್ದ 'ಕಸವದೇವ' ಮತ್ತು 'ದೇವರಾಯ' ಎಂಬ ಬಿರುದುಗಳನ್ನು ತಿಳಿಸುತ್ತದೆ.[61] ಮತ್ತೊಂದು ಶಾಸನ ಮುಕ್ತಿ ನಾಥೇಶ್ವರನ ದೇವಾಲಯದ ಬಳಿ ದೊರೆತಿದ್ದು, ಕ್ರಿ.ಶ.1110ರ ಕಾಲದ ದಾನ ಶಾಸನವಾಗಿದೆ.[62] ಈ ಶಾಸನದ ಪ್ರಾರಂಭದಲ್ಲಿ ಕುಲೋತ್ತುಂಗನ ವಿಜಯದ ಬಗ್ಗೆ ಹಾಗೂ ಆತನ ರಾಣಿಯ ವರ್ಣನೆಯ ಬಗ್ಗೆ ಹೇಳುತ್ತದೆ. 'ಕುಲೋತ್ತುಂಗನು ವೀರ ಶತ್ರುರಾಜರನ್ನು ಸೋಲಿಸಿ ಜಯಗಳಿಸುವಂತಹವನು. ಅವನಿ ಮಲುದು ಉದಯರ್ ಎಂಬಾಕೆ ಈತನ ಮನಸ್ಸನ್ನು ಗೆದ್ದಿದ್ದಾಳೆ. ಈತನ ಆಳ್ವಿಕೆಗೆ ಕೊನೆ ಎಂಬುದೇ ಇಲ್ಲವೆನ್ನುವಷ್ಟು ವೈಭವ ರೀತಿಯಲ್ಲಿತ್ತು. ಬಲಯುತವಾದ ಸೈನ್ಯಗಳ ಜೊತೆ, ರಾಣಿಯ ಜೊತೆಗೆ ಸಿಂಹಾಸನ ರೂಢನಾಗಿದ್ದ. ಪಾಂಡ್ಯರಾಜನಾದ ಮಿನಾವರ್ ಈತನ ಪ್ರಭಾವದಿಂದ ಎಲ್ಲಾ ಸ್ಥಾನ ಮಾನವನ್ನು ಕಳೆದುಕೊಂಡಿದ್ದ. ಹಾಗೂ ಬೇರೆ ರಾಜರು ಈ ರಾಜನಿಗೆ ತಲೆಬಾಗಿದ್ದರು ಎಂದು ಶಾಸನದಿಂದ ತಿಳಿದು ಬರುತ್ತದೆ'.

ಹೀಗೆ ಬೆಂಗಳೂರು ನಗರ ಜಿಲ್ಲೆಯಲ್ಲಿ ರಾಜೇಂದ್ರ ಚೋಳ, ಕುಲೋತ್ತುಂಗ ಚೋಳ ಮತ್ತು ವೀರ ಪ್ರತಾಪ ಚೋಳನ ಶಾಸನಗಳು ಮಾತ್ರ ದೊರೆಯುತ್ತವೆ. ಮುಂದೆ ಬೆಂಗಳೂರನ್ನು ಗಂಗರ ಆಳ್ವಿಕೆಯಿಂದ ತಮ್ಮ ತೆಕ್ಕೆಗೆ ತೆಗೆದುಕೊಂಡಿದ್ದ ಚೋಳರನ್ನು ಹೊಯ್ಸಳರು ಸದೆಬಡಿದು ಅಧಿಪತ್ಯವನ್ನು ಸ್ಥಾಪಿಸುತ್ತಾರೆ.

## ನೊಳಂಬರು

ನೊಳಂಬರು ಕರ್ನಾಟಕದಲ್ಲಿ ಸುಮಾರು ಎಂಟನೆಯ ಶತಮಾನದಿಂದ ಹನ್ನೊಂದನೆಯ ಶತಮಾನದವರೆಗೆ ಆಳ್ವಿಕೆ ನಡೆಸಿದ್ದಾರೆ. ಪಲ್ಲವರ ಆಳ್ವಿಕೆ ಕುಸಿದ ನಂತರ ನೊಳಂಬರು ಪ್ರಾಮುಖ್ಯ ಪಡೆದರು. ನೊಳಂಬವಾಡಿ ಮೂವತ್ತೆರಡು ಸಾವಿರ ಪ್ರಾಂತ್ಯವನ್ನು ಕಟ್ಟಿಕೊಂಡಿದ್ದರು. ಇವರ ರಾಜಧಾನಿ ಇಂದಿನ ಆಂಧ್ರಪ್ರದೇಶದ ಮಡಕಶಿರ ತಾಲ್ಲೂಕಿನಲ್ಲಿರುವ ಹೆಂಜೇರು ಅಥವಾ ಹೇಮಾವತಿಯಾಗಿತ್ತು. ಸುಮಾರು ಒಂಭತ್ತು–ಹತ್ತನೇ ಶತಮಾನದ ಹೊತ್ತಿಗೆ ಪ್ರಬಲರಾದ ನೊಳಂಬರು ಇಂದಿನ ಕರ್ನಾಟಕದ ಕೋಲಾರ, ತುಮಕೂರು, ಚಿತ್ರದುರ್ಗ ಪ್ರಾಂತ್ಯಗಳ

ಸುತ್ತಮುತ್ತಲ ಪ್ರದೇಶಗಳಾದ ಬೆಂಗಳೂರು, ಕಡೂರು, ಅನಂತಪುರ ಜಿಲ್ಲೆಯಲ್ಲಿ ತಮ್ಮ ಆಡಳಿತವನ್ನು ವಿಸ್ತರಿಸಿದ್ದರು.[63] ಗಂಗ, ಪಲ್ಲವ, ಚೋಳರ ಸಾಮಂತ ರಾಜರಾಗಿದ್ದ ನೊಳಂಬರ ಕೆಲವು ಶಾಸನಗಳು ಬೆಂಗಳೂರಿನಲ್ಲಿ ದೊರೆಯುತ್ತವೆ. ಬೆಂಗಳೂರನ್ನು ನೇರವಾಗಿ ಈ ವಂಶದ ಅರಸರು ಆಳದಿದ್ದರು ಅವರಿಗೆ ಸಂಬಂಧಿಸಿದ ಕೆಲವು ಶಾಸನಗಳು ದೊರೆಯುತ್ತವೆ.

ನಗರದಲ್ಲಿ ದೊರಕುವ ನೊಳಂಬ ಎಂಬ ಪದವಿರುವ ಮೊದಲ ಶಾಸನವೆಂದರೆ ಕ್ರಿ.ಶ.820 ವರ್ತೂರು ಕೆರೆಯ ಸಮೀಪ ದೊರೆತಿರುವ ಗಂಗರ ಕಾಲದ್ದು.[64] ನೊಳಂಬ ಶಿವಮಾರನು ಮೊರಸುನಾಡನ್ನು ಆಳುತ್ತಿರುವ ಸಂದರ್ಭದಲ್ಲಿ ಮಹಾಬಲಿ ವಂಶದ ನಿಜಪನ ಮಗ ಅಣ್ಣಿಗ ಇಬ್ಬರು ಅರಸುಗಳಿಗೆ ನೀಡಿದ ದಾನಶಾಸನವಾಗಿದೆ. ಶಿವಮಾರನ ಹೆಸರಿನೊಂದಿಗೆ ನೊಳಂಬ ಎಂಬ ಪ್ರತಿನಾಮ ಸೇರಿರುವುದು ಗಮನಿಸಬೇಕಾದ ಅಂಶ. ಶಿವಮಾರ ಎಂಬ ಹೆಸರಿನ ನೊಳಂಬ ರಾಜನ ಯಾವ ಶಾಸನವು ದೊರೆತಿಲ್ಲ. ಎಂ.ಎಸ್.ಕೃಷ್ಣಮೂರ್ತಿರವರು 'ದ ನೊಳಂಬಾಸ್' ಕೃತಿಯಲ್ಲಿ ಈ ಶಾಸನವನ್ನು ಚರ್ಚಿಸುವ ಸಂದರ್ಭದಲ್ಲಿ ನೊಳಂಬರಾಜನು ಶಿವಮಾರನೆಂಬ ಹೆಸರಿನವನೆಂದು ಎಲ್ಲಿಯೂ ಹೇಳಲಾಗಿಲ್ಲ. ಬಹುಶಃ ಶಿವಮಾರ ನೊಳಂಬ ಸಾಮ್ರಾಜ್ಯವನ್ನು ಆಕ್ರಮಿಸಿಕೊಂಡಿದ್ದು ಅವರಿಂದ ಕಪ್ಪ ಪಡೆಯುತ್ತಿದ್ದಿರಬಹುದು. ಹೀಗೆ ನೊಳಂಬ ಎಂಬ ಹೆಸರು ಬಂದಿರಬಹುದು ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.[65] ನೊಳಂಬರು ಪ್ರಾರಂಭದಲ್ಲಿ ತಲಕಾಡಿನ ಗಂಗರ ಕೈಕೆಳಗೆ ಸಾಮಂತರಾಜರಾಗಿ ಆಡಳಿತವನ್ನು ನಡೆಸಿದ್ದರು ಎಂಬುದನ್ನು ಮರೆಯುವಂತಿಲ್ಲ.

ನೊಳಂಬ ಅರಸರಲ್ಲಿ ಒಬ್ಬನಾದ ಮಹೇಂದ್ರನ(ಕ್ರಿ.ಶ. 870–897) ಶಾಸನಗಳು ಬೆಂಗಳೂರು ಜಿಲ್ಲೆಯಲ್ಲಿ ದೊರೆತಿವೆ. ಈತನ ತಂದೆ ಒಂದನೇಯ ಪೊಳಲ್ಚೋರನ ಅನಂತರ ಪಟ್ಟಕ್ಕೆ ಬಂದನು. ಮಹೇಂದ್ರನಿಗೆ ನೊಳಂಗ ಅಧಿರಾಜನೆಂಬ ಹೆಸರೂ ಇತ್ತು. ಇವನು ಗಂಗರ ಸಾಸಿರ ಪ್ರಾಂತ್ಯವನ್ನು ಆಳುತ್ತಿದ್ದನೆಂದು ಶಾಸನಗಳು ತಿಳಿಸುತ್ತವೆ. ಕ್ರಿ.ಶ.870ರ ದಳಸಿಗೆರೆ ಗ್ರಾಮದ ಶಾಸನದಲ್ಲಿ ಮಹೇಂದ್ರನು ಗಂಗ ಪೆರ್ಮಾನಡಿ ಅಥವಾ ಎರಡನೆಯ ರಾಚಮಲ್ಲನ ಸಾಮಂತನಾಗಿದ್ದ ಹಾಗೂ ಅವನ ಕೈಕೆಳಗೆ ಗಂಗವಾಡಿ–6000ವನ್ನು ಆಳುತ್ತಿದ್ದಂತೆ ಹೇಳಿದೆ. ಬಾಣರೊಂದಿಗೆ ನಡೆದ ಯುದ್ಧದಲ್ಲಿ ಈ ಅರಸರ ಪರವಾಗಿ ಹೋರಾಡಿ ಮಡಿದ ವೀರನಿಗೆ ನೊಳಂಬರಾಜನ ಬಿನ್ನಪದಂತೆ ಇಮ್ಮಡಿ ನೀತಿಮಾರ್ಗನು ಸರೂರೆಂಬ ಗ್ರಾಮವನ್ನು ಬಾಳ್ಗಚ್ಚಾಗಿ ನೀಡಿದ.[66] ಗಂಗರ ರಾಜ್ಯವನ್ನು ಗಂಗವಾಡಿ ಎನ್ನುವಂತೆ ಇವರ ರಾಜ್ಯವನ್ನು ನೊಳಂಬವಾಡಿ ಎಂದು ಕರೆಯಲಾಗುತ್ತಿತ್ತು.

ಮಹೇಂದ್ರನ ನಂತರ ಇವನ ಮಗ ಒಂದನೇಯ ಅಯ್ಯಪದೇವ (ಕಿ.ಶ.897–913) ನೊಳಂಬರ ಅರಸನಾದ. ಕ್ರಿ.ಶ.918ರ ಶಾಸನವು ಅಯ್ಯಪದೇವನ ಮಗ ಮಯ್ಯನೊಳಂಪಿ

ರಾಜ್ಯವಾಳುತ್ತಿದ್ದಾಗ ಬಸವಸೆಟ್ಟಿಯ ಮಗ ಚಚ್ಚಿಸೆಟ್ಟಿ ತುರುಕಾಳಗದಲ್ಲಿ ಮಡಿದ ವಿಷಯವನ್ನು ತಿಳಿಸುತ್ತದೆ.[67]

ಕ್ರಿ.ಶ.1001ರ ಶಾಸನವೊಂದು ಬೆಂಗಳೂರು ಜಿಲ್ಲೆ ಕಮ್ಮಸಂದ್ರದಲ್ಲಿ ದೊರೆತಿದೆ. ಇದು ಚೋಳ ದೊರೆ ರಾಜರಾಜ ದೇವನ ಕಾಲದ್ದು. ಈ ಶಾಸನದಲ್ಲಿ ಎರಡನೇ ಅಯ್ಯಪದೇವನ ಮಗ ಗನ್ನರಸನು ದಡಿಗವಾಡಿ ಮತ್ತು ಕುರುಕುಂದವನ್ನು ಆಳುತ್ತಿದ್ದ ಎಂಬ ವಿಷಯ ತಿಳಿಯುತ್ತದೆ.[68] ಈ ಗನ್ನರಸ ನೊಳಂಬರ ಮೂಲ ಶಾಖೆಯ ವಂಶದವನಾಗಿದ್ದು ಇವನ ತಂದೆ ಕೂಡ ರಾಜನಾಗಿರಲಿಲ್ಲ. ಗನ್ನರಸನು ಚೋಳರ ಸಾಮಂತನಾಗಿ 'ದಡಿಗಾವಳಿ' ಎಂಬ ಪ್ರದೇಶದಲ್ಲಿ ಆಳುತ್ತಿದ್ದನು. ಹೀಗೆ ಬೆಂಗಳೂರಿನಲ್ಲಿ ನೊಳಂಬರು ಸ್ವಲ್ಪಮಟ್ಟಿಗೆ ಅಧಿಕಾರ ಚಲಾಯಿಸಿರುವುದನ್ನು ಗುರುತಿಸಬಹುದು.

## ಹೊಯ್ಸಳರು

ಹತ್ತನೆಯ ಶತಮಾನದ ಮಧ್ಯಭಾಗದಿಂದ ಹದಿನಾಲ್ಕನೆಯ ಶತಮಾನದ ಮಧ್ಯಭಾಗದವರೆಗೆ, ವಿಶೇಷವಾಗಿ ದಕ್ಷಿಣ ಕರ್ನಾಟಕ ಮತ್ತು ಸುತ್ತಲಿನ ಭಾಗಗಳನ್ನು ಆಳಿದ ರಾಜಮನೆತನವೇ ಹೊಯ್ಸಳ ವಂಶ. ನಾಡಿನ ರಾಜಕೀಯ, ಆಡಳಿತ, ಆರ್ಥಿಕ ಸಾಂಸ್ಕೃತಿಕ ರಂಗಗಳಲ್ಲಿ ಉನ್ನತ ಸಾಧನೆಗೈದು, ಸುಮಾರು ಮೂರು ಶತಮಾನಗಳಿಗೂ ಹೆಚ್ಚು ಕಾಲ ವೈಭವೋಪೇತವಾಗಿ ಮೆರೆದ ರಾಜವಂಶವಿದು. ಸುಂದರ ದೇವಾಲಯಗಳ ನಿರ್ಮಾಣದಿಂದಲೇ ಭಾರತದ ಇತಿಹಾಸದಲ್ಲೇ ಈ ವಂಶ ಸ್ಮರಣೀಯವಾಗಿದೆ.

ಹೊಯ್ಸಳ ಎಂಬ ಪದ ಮತ್ತು ವಂಶದ ಮೂಲದ ಬಗ್ಗೆ ಹಲವು ವಿದ್ವಾಂಸರು ಹಲವು ರೀತಿಯಲ್ಲಿ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಕೆಲವು ಮೂಲದ ಪ್ರಕಾರ ಹೊಯ್ಸಳರು ಯದುವಂಶದವರು ದ್ವಾರಾಕಾವತಿಯಿಂದ ಕರ್ನಾಟಕಕ್ಕೆ ಬಂದರು ಎಂದು ತಿಳಿದು ಬರುವುದು. ಆದರೆ ಡೆರೆಟ್ ಮತ್ತು ಬಿ.ಎಲ್.ರೈಸ್ ಮುಂತಾದ ಕೆಲ ವಿದ್ವಾಂಸರು ಹೊಯ್ಸಳರು ಮೂಲತಃ ಪಶ್ಚಿಮಘಟ್ಟಗಳಲ್ಲಿ ವಾಸಮಾಡುತ್ತಿದ್ದ ಪರ್ವತನಾಯಕರು ಎಂದು ಹೇಳಿದ್ದಾರೆ.[69] ಸಳನು ಹೊಯ್ಸಳ ವಂಶದ ಮೂಲ ಪುರುಷ. ಈತ ಒಮ್ಮೆ ಸೊಸೆವೂರಿನ ವಾಸಂತಿಕಾ ದೇವಾಲಯಕ್ಕೆ ಆರಾಧನೆಗೆಂದು ಹೋಗಿದ್ದ ಕಾಲದಲ್ಲಿ ಆ ದೇವಾಲಯದ ಯತಿಯು ಸುದತ್ತಾಚಾರ್ಯನೆಂಬ ಯತಿ ಅಲ್ಲಿ ಧ್ಯಾನ ನಿರತನಾಗಿದ್ದನಂತೆ. ಆಗ ಸಮೀಪದ ಕಾಡಿನಿಂದ ಒಂದು ಹುಲಿ ಅಕಸ್ಮಾತ್ತಾಗಿ ಹಾರಿ ಬಂದು ಯತಿಯನ್ನು ಆಕ್ರಮಿಸಿತಂತೆ ಧ್ಯಾನಭಂಗದಿಂದಾಗಿ ಎಚ್ಚೆತ್ತ ಯತಿ ತನ್ನ ಕೈಯಲ್ಲಿದ್ದ ಬೆತ್ತವೊಂದನ್ನು ಸಳನ ಕೈಗಿತ್ತು 'ಹೊಯ್‌ಸಳ' ಎಂದು ಉದ್ಗರಿಸಿದನು. ಸಳನು ಹುಲಿಯನ್ನು ಆ

ಬೆತ್ತದಿಂದಲೇ 'ಹೊಯ್ದು' ಕೊಂದನಂತೆ. ಅಂದಿನಿಂದ ಸಳನಿಗೆ 'ಹೊಯ್‌ಸಳ' ಎಂಬ ಹೆಸರು ಈ ವಂಶಕ್ಕೆ ಪ್ರಾಪ್ತವಾಯಿತಂತೆ. ಕೆಲವು ಶಾಸನಗಳಲ್ಲಿಯೂ ಅಲ್ಪ ಸ್ವಲ್ಪ ವ್ಯತ್ಯಾಸಗಳೊಂದಿಗೆ ಇದೇ ಕಥೆಯನ್ನು ಬೇರೆ ಬೇರೆ ರೀತಿಯಾಗಿ ನಿರೂಪಿಸಿವೆ.[70] ಹೀಗೆ ಹೊಯ್ಸಳ ಸಾಮ್ರಾಜ್ಯದ ಮೂಲ ಪುರುಷನ ಬಗ್ಗೆ ಇರುವ ಕತೆಗಳನ್ನು ಗಮನಿಸಬಹುದು. ಸಳನ ಬಗ್ಗೆ ಬೆಂಗಳೂರು ನಗರ ಜಿಲ್ಲೆಯಲ್ಲಿ ಯಾವುದೇ ಶಾಸನಗಳು ದೊರೆತಿಲ್ಲ. ಸಳನ ಉತ್ತರಾಧಿಕಾರಿಯಾಗಿ ಬಂದ ನೃಪಕಾಮನು ಕ್ರಿ.ಶ. ಸುಮಾರು 1000–1045ರ ವರೆಗೆ ರಾಜ್ಯವಾಳಿದನು. ಆನಂತರ ವಿನಯಾದಿತ್ಯ(1045–1098), ಎರೆಯಂಗ(1098–1100) ಇವರು ಆಳ್ವಿಕೆ ನಡೆಸಿದ್ದಾರೆ. ಇವರ ಉಲ್ಲೇಖವಿರುವ ಯಾವ ಶಾಸನವು ಬೆಂಗಳೂರಿನಲ್ಲಿ ದೊರೆತಿಲ್ಲ.

ಒಂದನೆಯ ಬಲ್ಲಾಳನು ಕ್ರಿ.ಶ.1100 ರಿಂದ ಕ್ರಿ.ಶ.1108 ರವರೆಗೆ ಆಳ್ವಿಕೆ ನಡೆಸಿದನು. ಅನಂತರ ಅವನ ತಮ್ಮ ಬಿಟ್ಟಿದೇವನು ಪಟ್ಟಕ್ಕೆ ಬಂದನು. ಹೊಯ್ಸಳರಲ್ಲೇ ಶ್ರೇಷ್ಠದೊರೆ ವಿಷ್ಣುವರ್ಧನ ಅಥವಾ ಬಿಟ್ಟಿದೇವ ಕ್ರಿ.ಶ.1108 ರಿಂದ ಕ್ರಿ.ಶ.1148 ರವರೆಗೆ. ಸುಮಾರು 34 ವರ್ಷಗಳ ಆಳ್ವಿಕೆ ನಡೆಸಿದ. "ವಿಷ್ಣುವರ್ಧನ ಚೋಳರನ್ನು ಅಟ್ಟಿಸಿಕೊಂಡು ಘಟ್ಟದ ಮೇಲೆ ಈಗಿನ ಕೋಲಾರ, ಬೆಂಗಳೂರು ಜಿಲ್ಲೆಯ ಪ್ರದೇಶಗಳು ಹಾಗೂ ಘಟ್ಟದ ಕೆಳಗಿನ ಕೊಯಮತ್ತೂರು, ಸೇಲಂ, ಧರ್ಮಪುರಿ, ಉತ್ತರ ಆರ್ಕಾಟು ಜಿಲ್ಲೆಗಳ ಭಾಗಗಳ ಮೇಲೂ ದಾಳಿ ಮಾಡಿ, ಪ್ರಾಯಶಃ ಕಾಂಚೀಪುರದವರೆಗೂ ಮುನ್ನಡೆದ. ಇದೇ ಹುರುಪಿನಲ್ಲೆ ಉಚ್ಚಂಗಿಯ ಪಾಂಡ್ಯರನ್ನೂ ಸೋಲಿಸಿದ. ಒಂದು ಚಿಕ್ಕ ಅಧೀನ ರಾಜ್ಯದ ಚಿಕ್ಕ ಅರಸನೊಬ್ಬ ಬೃಹತ್ ಚೋಳ ಸಾಮ್ರಾಟನ ಮೇಲೆ ಜಯಗಳಿಸಿದುದು ನಿಜಕ್ಕೂ ಮಹತ್ವದ ಸಂಗತಿ. ಈ ಎಲ್ಲಾ ಸಾಧನೆಗಳಿಂದ ಕ್ರಿ.ಶ.1117ರ ಒಂದು ಶಾಸನ ವಿವರಿಸುವಂತೆ ದಕ್ಷಿಣದಲ್ಲಿ ಚೇರಮನ ಮಲೆ, ಕೊಂಗು ವಿಷಯದಿಂದ ಹಿಡಿದು(ನೀಲಗಿರಿ, ಕೊಯಮತ್ತೂರು ಭಾಗಗಳು) ಉತ್ತರದಲ್ಲಿ ಸಾವಿಮಲೆಯ (ಸಂಡೂರು ಬಳ್ಳಾರಿ ಜಿಲ್ಲೆ)ವರೆಗೂ ಪೂರ್ವದಲ್ಲಿ ನಂಗಲಿಘಟ್ಟದಿಂದ(ಕೋಲಾರ ಜಿಲ್ಲೆ ಮುಳಬಾಗಿಲು ಬಳಿಯ ನಂಗಲಿ) ಪಶ್ಚಿಮದಲ್ಲಿ ಬಾರಕನೂರು ಘಟ್ಟದ(ಸಹ್ಯಾದ್ರಿಯ ಪಶ್ಚಿಮ ಅಂಚು)ವರೆಗೂ ಹೊಯ್ಸಳ ರಾಜ್ಯ ವಿಸ್ತೃತವಾಗಿತ್ತು"[71] ಎಂದು ತಿಳಿಯುತ್ತದೆ.

ಗಂಗವಾಡಿಯನ್ನು ವಶಪಡಿಸಿಕೊಂಡಿದ್ದ ಚೋಳರನ್ನು ಕ್ರಿ.ಶ.1116ರಲ್ಲಿ ಸಂಪೂರ್ಣವಾಗಿ ನಿರ್ನಾಮಮಾಡಿ ಇಡೀ ಗಂಗವಾಡಿ 96000ವನ್ನು ವಶಪಡಿಸಿಕೊಂಡನು. ಆಗ ಬೆಂಗಳೂರು ಸಹ ಈತನ ಆಳ್ವಿಕೆಗೆ ಒಳಪಟ್ಟಿತ್ತು. ಈತನ ಕಾಲದ ತಮಿಳು ಭಾಷೆಯ ಶಾಸನವೊಂದು ಬೇಗೂರು ಹೋಬಳಿ ನಾಗೇಶ್ವರ ದೇವಸ್ಥಾನದ ತಳಪಾದಿಯ ಕಲ್ಲಿನ ಮೇಲೆ ದೊರಕಿದೆ.[72] ಕ್ರಿ.ಶ.1110ರ ಈ

ಶಾಸನದಲ್ಲಿ ಪೊಯ್ಸಳದೇವ ರಾಜ್ಯವಾಳುತ್ತಿದ್ದ ಸಂದರ್ಭದಲ್ಲಿ ಮೊರಸುನಾಡಿನ ಗಾವುಂಡನಾದ ರಾಜೇಂದ್ರ ಚೋಳನು ಭೂಮಿಯನ್ನು ದಾನ ನೀಡಿದ್ದಾನೆ ಎಂದಿದೆ.

ವಿಷ್ಣುವರ್ಧನನಿಗೆ 'ವೀರಗಂಗ'ನೆಂಬ ಬಿರುದು ಇತ್ತು. ಆನೇಕಲ್ಲಿನಲ್ಲಿ ದೊರೆತಿರುವ ಕ್ರಿ.ಶ.1130ರ ತಮಿಳು ಶಾಸನವು ಈತನನ್ನು 'ವೀರಗಂಗ ಪೋಸಲ ಅತೀವ ಶಕ್ತಿಯುತವಾದ ಭೂ ಸೇನೆಯನ್ನು ಹೊಂದಿ ಭೂಮಿಯನ್ನು ಆಳುತ್ತಿರುವ ಸಂದರ್ಭದಲ್ಲಿ' ಎಂದು ವರ್ಣಿಸಿದೆ.[73] ಯಲಹಂಕದ ಚಿಕ್ಕಬಾಣಾವರದ ಕ್ರಿ.ಶ.1140ರ ಶಾಸನದಲ್ಲಿ ಮುದೆಯಅಯ್ಯನು ಹೊಯ್ಸಳ ದೇವನ ದಂಡನಾಯನಾಗಿದ್ದನು ಎಂದು ತಿಳಿಸುತ್ತದೆ.[74]

ವಿಷ್ಣುವರ್ಧನ ನಂತರ ಇವನ ಮಗನಾದ ಒಂದನೇ ನರಸಿಂಹ ಕ್ರಿ.ಶ.1148 ರಲ್ಲಿ ಪಟ್ಟಕ್ಕೆ ಬಂದನು. ಬಾಲಕನಾಗಿದ್ದ ಈತನಿಗೆ ಆಡಳಿತದ ಚುಕ್ಕಾಣಿ ಹಿಡಿಯುವ ಸಾಮರ್ಥ್ಯ ಇರಲಿಲ್ಲ. ವಿಷ್ಣುವರ್ಧನನಿಂದ ಸೋಲನ್ನು ಅನುಭವಿಸಿದ್ದವರು ಈತನ ವಿರುದ್ಧ ತಿರುಗಿಬಿದ್ದು ಹೊಯ್ಸಳ ಸಾಮ್ರಾಜ್ಯದ ಕೆಲಭಾಗಗಳನ್ನು ಆಕ್ರಮಿಸಿದರು. ಕ್ರಿ.ಶ.1156ರ ವಸಂತನ ಹಳ್ಳಿಯಲ್ಲಿ ದೊರೆತ ಶಾಸನವೊಂದು ಶ್ರೀನರಸಿಂಗ ಪೊಯ್ಸಳದೇವನು ಆಳ್ವಿಕೆ ನಡೆಸುತ್ತಿದ್ದಾಗ ಕುಕ್ಕಲನಾಡಿನ ಅರಸರು ಮೊರಸುನಾಡಿನ ತಿಪ್ಪೂರಿನಲ್ಲಿ ನಡೆದ ದಂಗೆಯಲ್ಲಿ ಹಲವು ಗಾವುಂಡರು ಮತ್ತು ಪೇಟೆಯಲ್ಲಿ ಬಹುಸಂಖ್ಯೆಯ ಜನರ ಹತ್ಯೆಯಾಗಿದ್ದರು ಎಂಬುದನ್ನು ಹೇಳುತ್ತದೆ.[75] ಈತನ ನಂತರ ನರಸಿಂಹನ ಮಗ ಎರಡನೇ ಬಲ್ಲಾಳ ಕ್ರಿ.ಶ.1173ರಲ್ಲಿ ಅಧಿಕಾರ ವಹಿಸಿಕೊಳ್ಳುತ್ತಾನೆ. ಈತ ವಿಷ್ಣುವರ್ಧನನ ನಂತರ ಹೊಯ್ಸಳರಲ್ಲಿ ಶ್ರೇಷ್ಠನಾದ ರಾಜ. ಹೊಯ್ಸಳರಲ್ಲಿ 'ಚಕ್ರವರ್ತಿ' ಎಂಬ ಬಿರುದಿಗೆ ಪಾತ್ರನಾದ ರಾಜ. ಈತನ ಕಾಲದ ಯಾವ ಒಂದು ಶಾಸನವೂ ಬೆಂಗಳೂರಿನಲ್ಲಿ ದೊರೆತಿಲ್ಲ.

ಸೋಮೇಶ್ವರನು ಕ್ರಿ.ಶ.1235 ರಲ್ಲಿ ಹೊಯ್ಸಳ ದೊರೆಯಾಗುತ್ತಾನೆ. ಈತನ ಒಂದು ತಾಮ್ರ ಶಾಸನ ದೊರಕಿದೆ. ಕ್ರಿ.ಶ.1253ರ ಈ ಶಾಸನವು ದಾನಶಾಸನವಾಗಿದೆ. ಸೋಮೇಶ್ವರನ ನಂತರ ಹೊಯ್ಸಳ ರಾಜ್ಯ ಇಬ್ಭಾಗವಾಯಿತು. ಅವನ ಇಬ್ಬರು ಮಕ್ಕಳಲ್ಲಿ ಒಬ್ಬನಾದ ಮೂರನೇ ನರಸಿಂಹ ಹೊಯ್ಸಳ ರಾಜ್ಯದ ಕರ್ನಾಟಕ ಭಾಗವನ್ನು ಆಳ್ವಿಕೆ ನಡೆಸುತ್ತಿದ್ದರೆ, ರಾಮನಾಥ ಹೊಯ್ಸಳ ಸಾಮ್ರಾಜ್ಯಕ್ಕೆ ಸೇರಿದ ತಮಿಳು ನಾಡಿನ ಭಾಗವನ್ನು ಆಳುತ್ತಿದ್ದನು.

ಕ್ರಿ.ಶ.1257ರ ಮತ್ತೊಂದು ಶಾಸನದ ಪ್ರಕಾರ ಈತನು ತನ್ನ ತೋಳುಬಲದ ಶಕ್ತಿ ಸಾಮರ್ಥ್ಯ ಹಾಗೂ ಕತ್ತಿಯ ಯಶಸ್ಸಿಗಾಗಿ ಭೂಮಿಯನ್ನು ಕೊಡುಗೆಯಾಗಿ ನೀಡಿದ್ದಾನೆ. ಆದರೆ ಯಾರಿಗೆ ಎಂಬ ಉಲ್ಲೇಖವಿಲ್ಲ.[76] ಕ್ರಿ.ಶ.1283ರ ಮುಮ್ಮಡಿ ನರಸಿಂಹನ ಮತ್ತೊಂದು ದಾನ ಶಾಸನ ದೊರಕಿದೆ. ಇದು ತಮಿಳು ಭಾಷೆಯಲ್ಲಿದೆ. ಭೂಮಿಯನ್ನು ದಾನಮಾಡಿರುವ ವಿವರವಿದೆ. ಯಾರಿಗೆ ದಾನಮಾಡಿದ್ದು ಎಂದು ದಾನ ಪ್ರತಿಗಾಹಿಗಳ ವಿವರವಿಲ್ಲ. ಶಾಸನದ ಬಹುಭಾಗ ತ್ರುಟಿತವಾಗಿದೆ.

ಈ ಎರಡು ತಮಿಳು ಶಾಸನವು ಮುಮ್ಮಡಿ ನರಸಿಂಹನನ್ನು 'ಇರ್‌ಮನ್ ದೇವರ್' ಎಂದು ಸಂಬೋಧಿಸುತ್ತವೆ.

ಸೋಮೇಶ್ವರನ ಮತ್ತೊಬ್ಬ ಮಗ ರಾಮನಾಥನು(1235–1295) ಕ್ರಿ.ಶ.1290ರಲ್ಲಿ ದೊಮ್ಮಲೂರ ಚೊಕ್ಕನಾಥ ದೇವಾಲಯಕ್ಕೆ ದಾನ ನೀಡಿದ್ದನು.[77] ರಾಮನಾಥನ ಮತ್ತೊಂದು ಶಾಸನ ನಗರೇಶ್ವರ ದೇವಾಲಯದ ತಳಪಾದಿ ಕಲ್ಲಿನ ಮೇಲಿದೆ. ಕೆಲಭಾಗ ತ್ರುಟಿತವಾಗಿದೆ. ದೇವಾಲಯದ ಸಂರಕ್ಷಣೆಗಾಗಿ ಹಾಗೂ ಪೂಜಾ ಕೈಂಕರ್ಯಗಳಾದ ಧೂಪ–ಬತ್ತಿ, ನಂದಾದೀಪ, ಘಂಟೆ ಮೊದಲಾದವುಗಳಿಗೆ ದಾನವನ್ನು ನೀಡಲಾಗಿದೆ.[78]

ಮೂರನೆಯ ನರಸಿಂಹನ ಮಗ ಮೂರನೆಯ ಬಲ್ಲಾಳನು ಕ್ರಿ.ಶ.1292ರಲ್ಲಿ ಆಳ್ವಿಕೆಗೆ ಬಂದನು. ಇವನ ಕಾಲದಲ್ಲಿ ಹೊಯ್ಸಳ ವಂಶವು ಮತ್ತೆ ಪ್ರಸಿದ್ಧಿಗೆ ಬಂದಿತು. ಬೆಂಗಳೂರು ನಗರ ಜಿಲ್ಲೆಯಲ್ಲಿ ಇವನ ಕಾಲದ ಹಲವು ಶಾಸನಗಳು ದೊರೆತಿವೆ. ಕ್ರಿ.ಶ.1304ರ ತಮಿಳು ಶಾಸನವೊಂದು ಈತನನ್ನು 'ಮಹಾರಾಜಾಧಿರಾಜ ರಾಜಪರಮೇಶ್ವರ, ದ್ವಾರವತಿಪುರವರೇಶ್ವರ, ಯಾದವ ವಂಶದ ಸೂರ್ಯ' ಎಂದು ವರ್ಣಿಸಿದರೆ, ಕನ್ನಡ ಶಾಸನವು ಮಹಾರಾಜಾಧಿರಾಜ ರಾಜಪರಮೇಶ್ವರ, ದ್ವಾರಾವತಿಪುರವರೇಶ್ವರ, ಯಾದವಕುಲಾಂಬರದ್ಯುಮಣಿ, ಸರ್ವಜ್ಞ ಚೂಡಾಮಣಿ, ಮಲೆರಾಜರಾಜ, ಮಲೆಪರೊಳುಗಂಡ, ಗಂಡಭೇರುಂಡ, ಚೋಳ, ಗೂರ್ಜ್ಜರ ಭಯಂಕರ, ಪ್ರಳಯಕಾಲರುದ್ರ, ಹುಲಿರಾಯ, ಕದನಪ್ರಚಂಡ, ಅಸಹಾಯಶೂರ, ಏಕಾಂಗವೀರ ಶನಿವಾರಸಿದ್ಧಿ, ಗಿರಿದುರ್ಗ್ಗಮಲ್ಲ, ವೈರೀಭಕಂಠೀರವ ಪಾಂಡ್ಯರಾಜ್ಯ ಪ್ರತಿಷ್ಠಿತ, ಚೋಳರಾಯಸ್ಥಾಪನಾಚಾರ್ಯ ಎಂದು ಬಣ್ಣಿಸಿದೆ.[79]

ದೊಡ್ಡನೆಕ್ಕುಂದಿಯಲ್ಲಿ ದೊರೆತಿರುವ ಕ್ರಿ.ಶ.1304ರ ತಮಿಳು ಶಾಸನವು ಯುದ್ಧದ ಪರಿಸ್ಥಿತಿಯನ್ನು ವಿವರಿಸುತ್ತದೆ. ಇವನ ಕಾಲದಲ್ಲಿ ದುಷ್ಟತನದ ಸಂಹಾರ ಹಾಗೂ ಸತ್ಯದ ರಕ್ಷಣೆಯಾಗುತ್ತಿತ್ತು. ಉತ್ತರದಲ್ಲಿ ವೈರಿ ಪಡೆಯನ್ನು ಹೊಂದಿದ್ದ.[80] ಈ ಸೈನ್ಯವು ಸ್ವಲ್ಪ ದಿನಗಳ ನಂತರ 'ನಕ್ಕಿಗುಂಡಿ' ಕೋಟೆಯನ್ನು ಪ್ರವೇಶಿಸಿ ನಾಶಮಾಡಿ ವಿಜಯವನ್ನು ಸಾಧಿಸಿತು. ಆದರೆ ಇದು ಯಾವ ವೈರಿಪಡೆ ಎಂದು ಶಾಸನದಲ್ಲಿ ತಿಳಿದು ಬಂದಿಲ್ಲ. ಈ ನಕ್ಕಿಗುಂಡಿ ಬೆಂಗಳೂರಿನ ಇಂದಿನ ದೊಡ್ಡನೆಕ್ಕುಂದಿಯಾಗಿದೆ.

ಬಲ್ಲಾಳದೇವನ ವಿಜಯಕ್ಕೋಸ್ಕರ, ಆತನ ಶಕ್ತಿ ಮತ್ತು ತೋಳು ಬಲದ ಸಾಮರ್ಥ್ಯಕ್ಕಾಗಿ ಕಿಲ್ತೋಲುರುನ ಮಾದವನ್ ಭೂಮಿಯನ್ನು ದಾನ ಮಾಡಿದ್ದನು. ಹೀಗೆ ಬಲ್ಲಾಳ ತನ್ನ ಶಕ್ತಿ ಸಾಮಥ್ಯಕ್ಕೆ ಹೆಸರಾಗಿದ್ದನು. ಈತನ ಕಾಲದಲ್ಲಿ ಸಣ್ಣಪುಟ್ಟ ಪಾಳೇಗಾರರು ದೊಡ್ಡ ಆಡಳಿತ

ಕ್ಷೇತ್ರವನ್ನು ಹೊಂದಿದ್ದರು. ಸುಗಟೂರು ಅರಸರು, ಯಲಹಂಕ ನಾಡಪ್ರಭುಗಳು, ತೊರವಳಿ ನಾಡಪ್ರಭುಗಳು ಹಾಗೂ ಜಿಗಣಿಯ ನಾಯಕರು ಈತನ ಕೈಕೆಳಗೆ ರಾಜ್ಯಭಾರ ಮಾಡುತ್ತಿದ್ದರು.

ಬೆಂಗಳೂರು ನಗರ ಜಿಲ್ಲೆಯಲ್ಲಿ ದೊರೆತಿರುವ ಹೊಯ್ಸಳರ ಬಹುತೇಕ ಶಾಸನಗಳು ತಮಿಳುಶಾಸನಗಳಾಗಿವೆ. ಹೀಗೆ ಆಳ್ವಿಕೆ ನಡೆಸಿದ ಹೊಯ್ಸಳರ ನಂತರ ಈ ಭಾಗ ವಿಜಯನಗರದ ವಶವಾಯಿತು.

## ವಿಜಯನಗರದ ಅರಸರು

ದಕ್ಷಿಣ ಭಾರತದಲ್ಲಿ ರಾಜ್ಯವಾಳಿದ ಸಾಮ್ರಾಜ್ಯಗಳಲ್ಲಿ ಪ್ರಬಲ ಶಕ್ತಿಯಾಗಿ ಹೊರಹೊಮ್ಮಿದ ಅರಸುಮನೆತನಗಳಲ್ಲಿ ವಿಜಯನಗರ ಸಾಮ್ರಾಜ್ಯವೂ ಒಂದು. ಮಧ್ಯಕಾಲೀನ ರಾಜಕೀಯ ಹಾಗೂ ಸಾಂಸ್ಕೃತಿಕ ಸನ್ನಿವೇಶಗಳ ಪ್ರತಿನಿಧಿಯೆನಿಸಿ ಪ್ರಖ್ಯಾತಿ ಪಡೆದ ಸಾಮ್ರಾಜ್ಯವಾಗಿದೆ. ವಿಜಯನಗರ ಸಾಮ್ರಾಜ್ಯದ ಸ್ಥಾಪನೆ ಭಾರತೀಯ ಇತಿಹಾಸದಲ್ಲಿ ಒಂದು ವಿಶ್ವಪರಂಪರೆಯ ಮೈಲಿಗಲ್ಲಾಗಿತ್ತು. ಈ ಸಾಮ್ರಾಜ್ಯದ ರಾಜಧಾನಿ ಹಂಪೆಯಾಗಿತ್ತು. ವಿಸ್ತಾರವಾಗಿ ಹಬ್ಬಿದ್ದ ಸಾಮ್ರಾಜ್ಯದ ಸ್ಥಳಗಳಲ್ಲಿ ಇವರ ಆಳ್ವಿಕೆಯ ಕುರುಹುಗಳೆಂಬಂತೆ ಶಾಸನಗಳನ್ನು ಕೆತ್ತಿಸಿದ್ದಾರೆ.

ವಿಜಯನಗರ ಸಾಮ್ರಾಜ್ಯವು ಕ್ರಿ.ಶ.1336ನೆಯ ವರ್ಷದಿಂದ ಸುಮಾರು ಇನ್ನೂರು ವರ್ಷಗಳ ಕಾಲ ಬಾಳಿ ತನ್ನ ಕೀರ್ತಿಧ್ವಜವನ್ನು ಮೆರೆಯಿಸಿತು. ಸಂಗಮ, ಸಾಳುವ, ತುಳುವ, ಅರವೀಡು ವಂಶಸ್ಥರು ಈ ಸಾಮ್ರಾಜ್ಯ ಸಿಂಹಾಸನವನ್ನಲಂಕರಿಸಿದ್ದರು. ವಿಜಯನಗರ ಸಾಮ್ರಾಜ್ಯ ತೆಲುಗು, ಕನ್ನಡ, ತಮಿಳು ಪ್ರಾಂತ್ಯಗಳಲ್ಲೆಲ್ಲ ವ್ಯಾಪಿಸಿತ್ತು. ಇವರ ಶಾಸನಗಳು ಈ ಮೂರು ಭಾಷೆಗಳಲ್ಲಿ ದೊರೆಯುತ್ತವೆ. ರಾಜರು ಪ್ರಜೆಗಳ ಸರ್ವತೋಮುಖವಾದ ಬೆಳವಣಿಗೆಗೆ ಸಾಧಕವಾಗಿ ಅನೇಕ ದತ್ತಿಗಳನ್ನು ಬಿಟ್ಟರೆ ಪ್ರಜೆಗಳು ರಾಜರ ಶ್ರೇಯಸ್ಸಿಗಾಗಿ, ಮೇಲ್ಮೆಗಾಗಿ ಅಭಿವೃದ್ಧಿಗಾಗಿ ಅನೇಕ ಶಾಸನಗಳನ್ನು ಕೊರೆಸಿರುವುದು ಈ ಸಾಮ್ರಾಜ್ಯದ ವೈಶಿಷ್ಟ್ಯ. ಈ ಶಾಸನಗಳು ಪ್ರಜಾಪ್ರಭುಗಳ ಪರಸ್ಪರ ಪ್ರೀತ್ಯಾದರಗಳನ್ನು ವಿಶದಪಡಿಸುತ್ತವೆ. ಇವರ ಕಾಲಘಟ್ಟದಲ್ಲಿ ಬೆಂಗಳೂರು ಸಾಮಾಜಿಕ, ಆರ್ಥಿಕ, ಧಾರ್ಮಿಕ ಮುಂತಾದ ಕ್ಷೇತ್ರಗಳಲ್ಲಿ ವಿಸ್ತಾರ ರೂಪ ಪಡೆಯುತ್ತ ಬಂತು.

ವಿಜಯನಗರ ಸಾಮ್ರಾಜ್ಯ ಮೂಲತಃ ಹರಿಹರ, ಬುಕ್ಕರಾಯ, ಕೆಂಪಣರಾಯ, ಮಾರಪ್ಪ ಮತ್ತು ಮುದ್ದಪ್ಪ ಎಂಬ ಐದು ಮಂದಿ ಸಂಗಮ ಸಹೋದರರಿಂದ ಸಂಘಟಿಸಲ್ಪಟ್ಟಿತ್ತಾದರೂ ವಾಸ್ತವಿಕವಾಗಿ ಹರಿಹರ ಮತ್ತು ಬುಕ್ಕ ಈ ಸಾಮ್ರಾಜ್ಯ ಸ್ಥಾಪಕರೆಂಬುದು ಈಗಾಗಲೇ ತಿಳಿದಿರುವ ವಿಷಯ. ವಿಜಯನಗರ ಸಾಮ್ರಾಜ್ಯದ ಆಳ್ವಿಕೆ ಆರಂಭವು ಕ್ರಿ.ಶ.1336 ಎಂಬುದು ಬಹುತೇಕ ಒಪ್ಪಿತವಾಗಿರುವ ಮಾತು. ಆ ಹೊತ್ತಿಗೆ ಬೆಂಗಳೂರಿನ ಆಸುಪಾಸಿನಲ್ಲಿ ಹೊಯ್ಸಳ ವೀರಬಲ್ಲಾಳನ

ಆಳ್ವಿಕೆಯ ಕೆಲವು ಶಾಸನಗಳು ದೊರೆಯುತ್ತವೆ. ಕ್ರಿ.ಶ.1342ರ ಗಾಣಿಗರಹಳ್ಳಿ ಶಾಸನ[81] ಹಾಗೂ ಕ್ರಿ.ಶ.1340ರ[82] ಜಕ್ಕೂರಿನಲ್ಲಿ ದೊರೆತ ಶಾಸನವು ಹೊಯ್ಸಳ ವೀರಬಲ್ಲಾಳ ದೇವರಸನು ಉಣ್ಣಾಮಲೆ ಅಂದರೆ ತಮಿಳುನಾಡಿನ ತಿರುವಣ್ಣಾಮಲೈ ಪಟ್ಟಣದಿಂದ ಆಳುತ್ತಿದ್ದ ವಿಷಯವನ್ನು ದಾಖಲಿಸುತ್ತದೆ.

ಬೆಂಗಳೂರು ಪ್ರದೇಶದಲ್ಲಿ ವಿಜಯನಗರ ಸಾಮ್ರಾಜ್ಯಕ್ಕೆ ಸಂಬಂಧಿಸಿದಂತೆ ದೊರಕುವ ಮೊದಲ ಶಾಸನ ಕ್ರಿ.ಶ.1346ರ ಹರಿಯಪ್ಪ ಒಡೆಯನದು.[83] ಸಂಗಮ ವಂಶದ ಮೊದಲ ದೊರೆ ಹರಿಹರ ಕ್ರಿ.ಶ.1336–56ರವರೆಗೆ ರಾಜ್ಯಾಭಾರ ಮಾಡಿದ. ಈ ಶಾಸನದಲ್ಲಿ ಹರಿಹರ ಭೂಮಿಯನ್ನು ಆಳುತ್ತಿದ್ದ ಸಂದರ್ಭದಲ್ಲಿ ಎಂಬ ಉಲ್ಲೇಖವಿದೆ. ಇದು ತಮಿಳು ಶಾಸನವಾಗಿದೆ. ಇವನ ಕಾಲದಲ್ಲಿ ವಲ್ಲಪ್ಪ ನಾಯಕರ್ ಮಹಾಮಂಡಲೇಶ್ವರನಾಗಿದ್ದು ಹರಿಹರನ ಸಾಮಂತ ಅಧಿಕಾರಿಯಾಗಿದ್ದನು. ಇವನ ಆಡಳಿತಕ್ಕೆ ಇರುಂಬಲ್ಲಿಯೂರ್ ಹಾಗೂ ವೆಪ್ಪೂರು ಪ್ರದೇಶವು ಸೇರಿತ್ತು ಎಂಬುದನ್ನು ಕ್ರಿ.ಶ.1361ರಲ್ಲಿ ದೊರೆತ ಮತ್ತೊಂದು ತಮಿಳು ಶಾಸನ[84]ದಲ್ಲಿ ಉಲ್ಲೇಖವಾಗಿದೆ. ಕ್ರಿ.ಶ.1347ರ ಶಾಸನವೊಂದು ಬೇಗೂರು ಹೋಬಳಿಯಲ್ಲಿ ದೊರೆತಿದೆ. ಹರಿಹರನು 'ಅರಿರಾಯ ವಿಭಾಡ, ಭಾಷೆಗೆ ತಪ್ಪುವ ರಾಯರ ಗಂಡ, ಚತುಸಮುದ್ರಾಧಿಪತಿ'[85] ಎಂಬ ಬಿರುದನ್ನು ಹೊಂದಿದ್ದ ಎಂಬುದನ್ನು ತಿಳಿಸುತ್ತದೆ. ಹೊಯ್ಸಳ ದೊರೆ ನಾಲ್ಕನೇ ಬಲ್ಲಾಳನು ಜೀವಂತನಾಗಿರುವವರೆಗೂ ಅವನ ಸಾಮಂತರಾಗಿದ್ದು ಅವನ ಮರಣಾನಂತರ ಸ್ವತಂತ್ರ ರಾಜರಂತೆ ರಾಜಬಿರುದುಗಳನ್ನು, ರಾಜಚಿಹ್ನೆಗಳನ್ನೂ ಹೊಂದಿದ್ದರು.

ಬುಕ್ಕರಾಯನು(1356–77) ಹರಿಹರನಿಗೆ ಆಡಳಿತದಲ್ಲಿ ನೆರವಾಗಿದ್ದು ಈತನ ನಂತರ ಆಡಳಿತ ವಹಿಸಿಕೊಂಡನು. ಎರಡು ದಶಕಗಳ ಕಾಲ ಅಧಿಕಾರದಲ್ಲಿದ್ದ ಈತ ಸಾಮ್ರಾಜ್ಯವನ್ನು ವಿಸ್ತರಿಸಿದನು. ಬುಕ್ಕ ದಕ್ಷ ಆಡಳಿತಗಾರನಾಗಿದ್ದನು. ಈತನು 'ಮನುಮಹಾಮಂಡಳೇಶ್ವರ ಅರಿರಾಯ ವಿಭಾಡ ಭಾಷೆಗೆ ತಪ್ಪುವ ರಾಯರ ಗಂಡ ಚತುಸ್ಸಮುದ್ರಾಧಿಪತಿ'[86] ಎಂಬ ಬಿರುದನ್ನು ಹೊಂದಿದ್ದನು. ಕ್ರಿ.ಶ.1376ರ ತಮಿಳು ಶಾಸನದಲ್ಲಿ ಮಹಾಮಂಡಲೇಶ್ವರ ಶತ್ರು ರಾಜರುಗಳನ್ನು ನಾಶಮಾಡಿ ದಕ್ಷಿಣ ಮತ್ತು ಪಶ್ಚಿಮ ಭಾಗದ ಕರಾವಳಿಯ ಒಡೆಯನೆನಿಸಿಕೊಂಡನು ಎಂಬ ವಿಷಯ ತಿಳಿಯುತ್ತದೆ.[87] ಹಾಗೂ ಶತ್ರುರಾಜರ ಸೊಕ್ಕನ್ನು ಅಡಗಿಸುವ ಇವನ ಸಾಮಂತ ಅಧಿಕಾರಿಗಳಿಗೆ ಬುಕ್ಕರಾಯನೇ ಸ್ವತಃ ಐಶ್ವರ್ಯ, ಗೌರವ ಪುರಸ್ಕಾರಗಳನ್ನು ನೀಡುತ್ತಿದ್ದ.[88] ಮೊರಸುನಾಡಿನಲ್ಲಿ ರಾಜರ ಧರ್ಮವನ್ನು ಕಾಯ್ದುಕೊಂಡು ಬಂದ ಮಹಾರಾಜನಾಗಿದ್ದಾನೆ.

ಬುಕ್ಕನಿಗೆ ಇಮ್ಮಡಿ ಹರಿಹರ, ಇಮ್ಮಡಿ ಕಂಪ, ಸಂಗಮ, ಭಾಸ್ಕರ, ಮಲ್ಲಿನಾಥರೆಂಬ ಮಕ್ಕಳಿದ್ದರು. ಇವರೆಲ್ಲರೂ ಮಾಂಡಲಿಕರಾಗಿ ಸಾಮ್ರಾಜ್ಯದ ಒಂದೊಂದು ಭಾಗದ ಆಡಳಿತವನ್ನು

ನಡೆಸುತ್ತಿದ್ದರು. ಇವರ ಶಾಸನಗಳು ನಗರ ಜಿಲ್ಲೆಯಲ್ಲಿ ದೊರೆತಿವೆ. ಬನ್ನೇರುಘಟ್ಟದ ಚಂಪಕಧಾಮ ಸ್ವಾಮಿ ದೇವಾಲಯದ ಗೋಡೆ ಮೇಲೆ ಇರುವ ಕ್ರಿ.ಶ.1362ರ ಶಾಸನವು[89] ಮಹಾಮಂಡಲಿಕ ಶ್ರೀ ವೀರಬುಕ್ಕಣ ಒಡೆಯರವರ ಮಗ ಮಲ್ಲಪ್ಪ ಒಡೆಯರು ರಾಜ್ಯವಾಳುತ್ತಿದ್ದರು ಎಂಬ ಉಲ್ಲೇಖವಿದೆ.

ಬುಕ್ಕನ ಮತ್ತೊಬ್ಬ ಮಗ ಕಂಪ ಒಡೆಯನು ಮುಳುಬಾಗಿಲ ಪಟ್ಟಣದಲ್ಲಿ ರಾಜ್ಯವಾಳುತ್ತಿದ್ದನು ಎಂಬುದನ್ನು ಕ್ರಿ.ಶ.1364ರ ಶಾಸನವು[90] ಹೇಳುತ್ತದೆ. ಪ್ರಸ್ತುತ ಈ ಶಾಸನವನ್ನು ಬೆಂಗಳೂರು ಮ್ಯೂಸಿಯಂನಲ್ಲಿ ಸಂರಕ್ಷಿಸಿಡಲಾಗಿದೆ. ಕಂಪಣ್ಣ ರಾಜ್ಯವಾಳುತ್ತಿದ್ದ ಸಂದರ್ಭದಲ್ಲಿ ಇವನ ಸಾಮಂತ ಅಧಿಕಾರಿ ಕುಮಾರ ಕಾಮೆಯ ನಾಯಕ ಎಲಹಂಕನಾಡನ್ನು ಅಲ್ಲಾಳಜೀಯನ ಮಗ ತಣ್ಣಿಯಪ್ಪಗೆ ನೀಡಿದ್ದನ್ನು ಈ ಶಿಲಾಶಾಸನ ಹೇಳುತ್ತದೆ. ಅಂದರೆ ಈತನ ಕಾಲಕ್ಕಾಗಲೇ ಯಲಹಂಕನಾಡು ನಿರ್ಮಾಣವಾಗಿತ್ತು ಎಂಬುದು ಸ್ಪಷ್ಟವಾಗುತ್ತದೆ. ಕಂಪಣ್ಣನ ಬಗ್ಗೆ ಉಲ್ಲೇಖವಿರುವ ಕ್ರಿ.ಶ.1365ರ ತಮಿಳುಶಾಸನ ದಾನಶಾಸನವಾಗಿದೆ.[91] ಮಹಾಮಂಡಲೇಶ್ವರನಾದ ವೀರಬುಕ್ಕಣ ಒಡೆಯನ ನಾಯಕತ್ವದಲ್ಲಿ ಶತ್ರುರಾಜ್ಯವನ್ನು ಸೋಲಿಸಲಾಗಿತ್ತು ಎಂಬುದರ ವಿವರಣೆ ಇಲ್ಲ. ಈ ಸಂದರ್ಭದಲ್ಲಿ ಕಂಪಣ್ಣ ಒಡೆಯ ರಾಜ್ಯವನ್ನು ಆಳುತ್ತಿದ್ದನು ಎಂಬುದನ್ನು ಶಾಸನ ತಿಳಿಸುತ್ತದೆ.

ಇಮ್ಮಡಿ ಹರಿಹರ(1377–1404) ಬುಕ್ಕನ ಮತ್ತೊಬ್ಬ ಮಗ. ತನ್ನ ತಂದೆಯ ಉತ್ತರಾಧಿಕಾರಿಯಾಗಿ ಕ್ರಿ.ಶ.1377ರಲ್ಲಿ ಆಡಳಿತ ಸೂತ್ರವಹಿಸಿಕೊಂಡ. ಕ್ರಿ.ಶ.1381 ಬೆಂಗಳೂರಿನಲ್ಲಿ ದೊರಕಿರುವ ತಮಿಳು ಶಾಸನವು[92] ಮಹಾಮಂಡಲೇಶ್ವರ ವೀರ ಹರಿಯಪ್ಪ ಒಡೆಯರವರು ಸಣ್ಣೈ ಮುಂದಲವೈಲ್‌ನಲ್ಲಿ ಶತ್ರುರಾಜರುಗಳನ್ನು ಧೂಳಿಪಟ ಮಾಡಿದ ವಿಷಯವನ್ನು ಹೇಳುತ್ತದೆ. ಕ್ರಿ.ಶ.1384ರ ತಮಿಳು ಶಾಸನ ಹಾಗೂ ಕ್ರಿ.ಶ.1400ರ ಬಿದುರುಗುಪ್ಪೆಯಲ್ಲಿ ದೊರೆತ ಕನ್ನಡ ಶಾಸನವು ಹರಿಹರ ರಾಯ ರಾಜ್ಯವಾಳುತ್ತಿರುವಲ್ಲಿ ಎಂಬುದಷ್ಟೇ ಇದ್ದು ಮುಂದಿನ ಅಕ್ಷರಗಳು ತ್ರುಟಿತವಾಗಿವೆ.

ಇಮ್ಮಡಿ ಹರಿಹರನ ಶಾಸನಗಳ ನಂತರ ಬೆಂಗಳೂರಿನಲ್ಲಿ ನಮಗೆ ದೊರಕುವ ಶಾಸನ ಇಮ್ಮಡಿ ಬುಕ್ಕನ ಮಗನ ಶಾಸನ. ಇಬ್ಬಲೂರು ಆಂಜನೇಯ ದೇವಾಲಯದ ಪ್ರಾಕಾರದಲ್ಲಿ ದೊರೆತಿರುವ[93] ಈ ಶಾಸನದ ಬಹುಭಾಗ ತ್ರುಟಿತವಾಗಿದ್ದು ಶ್ರೀವೀರ ಇಮ್ಮಡಿ ಬುಕ್ಕಣ್ಣನ ಮಕ್ಕಳು ರಾಜ್ಯವಾಳುತ್ತಿರಲು ಎಂಬುದಷ್ಟೆ ಉಲ್ಲೇಖವಿದೆ.

ಒಂದನೆಯ ದೇವರಾಯನ (1406–22) ಕಾಲಕ್ಕೆ ಸಂಬಂಧಿಸಿದಂತೆ ನಗರಜಿಲ್ಲೆಯಲ್ಲಿ ದೊರೆತಿರುವ ಶಾಸನಗಳಲ್ಲಿ ಬಹುತೇಕ ದಾನ ಶಾಸನಗಳೇ ಆಗಿವೆ. ಇವನ ಕೈಕೆಳಗೆ 'ಹಯಕಸ' ಎಂಬ ಅಧಿಕಾರಿ ಇದ್ದನು ಎಂಬುದನ್ನು ಕ್ರಿ.ಶ.1408ರ ಕನ್ನೆಲ್ಲಿ ಗ್ರಾಮದಲ್ಲಿ ದೊರೆತ ಶಾಸನದಲ್ಲಿ

ತಿಳಿಯುತ್ತದೆ.[94] ಈತನ ಮರಣದ ನಂತರ ಆತನ ಪುತ್ರ ಮಲ್ಲಿಕಾರ್ಜುನನಿಗೆ ಪಟ್ಟಕಟ್ಟಲಾಗುತ್ತದೆ. ಇವನ ಒಂದು ಶಾಸನವು ಆನೇಕಲ್ಲು ತಾಲೂಕಿನಲ್ಲಿ ದೊರೆಯುತ್ತದೆ.[95] ಇದು ದಾನಶಾಸನವಾಗಿದ್ದು ಮಲ್ಲಪ್ಪ ಒಡೆಯರು ರಾಜ್ಯವಾಳುತ್ತಿದ್ದರು ಎಂದು ತಿಳಿಸುತ್ತದೆ. ಆನಂತರದ ಅರಸು ವೀರ ವಿಜಯರಾಯನ ಒಂದು ಶಾಸನವು ದೊರೆಯುತ್ತದೆ. ಕ್ರಿ.ಶ.1422ರ ಈ ಶಾಸನವು ವೀರ ವಿಜಯರಾಯ ಮಹಾರಾಯರು ಮುಳುಬಾಗಿಲಿನಲ್ಲಿ ರಾಜ್ಯವನ್ನು ಆಳುತ್ತಿರಲು ಮಂಚಯ್ಯ ನಾಯಕರ ಮಕ್ಕಳಾದ ನಂಜಯ್ಯ ಮಾದೇವ ನಾಯಕರು, ಚಿಕ್ಕ ಸಂಗಮ ನಾಯಕರು ಜಿಗುನಿಯನ್ನು ಆಳುತ್ತಿದ್ದುದ್ದರ[96] ಉಲ್ಲೇಖವಿದೆ. ವಿಜಯನಗರ ಕಾಲಘಟ್ಟದಲ್ಲಿ ಅಮರನಾಯಕರ ಆಳ್ವಿಕೆ ಇತ್ತು ಎಂಬುದು ಸ್ಪಷ್ಟವಾಗುತ್ತದೆ.

ವೀರವಿಜಯರಾಯನ ನಂತರ ಅವನ ಮಗ ಪ್ರತಾಪದೇವರಾಯ ಅಥವಾ ಎರಡನೆ ದೇವರಾಯನು ವಿಜಯನಗರದ ರಾಜನಾಗುತ್ತಾನೆ. ಇವನ ಕಾಲದ ಶಾಸನಗಳು ನಗರ ಜಿಲ್ಲೆಯಲ್ಲಿ ಬಿದುರುಗುಪ್ಪೆ ಹಾಗೂ ಸರ್ಜಾಪುರದ ಬಳಿ ದೊರೆತಿವೆ. ಕ್ರಿ.ಶ.1427ರ ಮಾಸ್ತೇನಹಳ್ಳಿ ಶಾಸನವು[97] 'ಶ್ರೀ ಮನ್ಮಮಹಾರಾಜಾಧಿರಾಜ ರಾಜಪರಮೇಶ್ವರ ಶ್ರೀ ವೀರ ವಿಜಯರಾಯ ಮಹಾರಾಯರ ಕುಮಾರ ಪ್ರತಾಪ ದೇವರಾಯ ಮಹಾರಾಯರು ರಾಜ್ಯವಾಳುತ್ತಿರಲು ದೇವನ ಬಂಟರಾದ ಶ್ರೀಮನ್ ಮಹಾಮೂವರು ರಾಯರ ಗಂಡ ಜಂಬು ಓಬಯ್ಯ ನಾಯಕನ ಮಗ ಚಿಕ್ಕ ತಿಮ್ಮಯ ನಾಯಕರ ಉಲ್ಲೇಖವಿದೆ'. ಮತ್ತೊಂದು ಶಾಸನದಲ್ಲಿ ವಿಜಯದೇವರ ಕುಮಾರ ದೇವರಾಯ ಮಹಾರಾಯ, ರಾಜ್ಯವಾಳುತ್ತಿದ್ದಾಗ[98] 'ಶ್ರೀ ಮನು ಮಹಾರಾಜ ರಾಜಪರಮೇಶ್ವರ ಶ್ರೀ ವೀರ ವಿಜಯ ಭೂಪತಿರಾಯ ಮಹಾರಾಯರ ಕುಮಾರ ದೇವರಾಯ ಮಹಾರಾಯರು ವಿಜಯನಗರಿಯ ಸಿಂಹಾಸನವನ್ನು ಸುಖ ಸಂತೋಷದಿಂದ ರಾಜ್ಯವಾಳುತ್ತಿರಲು ಆ ದೇವರಾಯ ಮಹಾರಾಯರ ಅನುಮತಿಯ ಮೇರೆಗೆ' ಎಂದಿದೆ.

ಕ್ರಿ.ಶ.1432ರ ಚಿಂತಲಮಡಿವಾಳ[99] ಶಾಸನವು ಪ್ರತಾಪದೇವ ಮಹಾರಾಯರು ಆಳುವಾಗ ಮುಳವಾಗಿಲು ರಾಜ್ಯದ ಸಾರಕ್ಕಿಯ ಪೆಂಮ್ಮಯ್ಯ ನಾಯ್ಕರು ಬದ್ದಬಿಸಿಲಾಂಡಗೆ ಬೇಹೂರ ನಾಡ ಹುಸುಕೂರಲ್ಲಿ ಭೂಮಿಯನ್ನು ಕೊಡುಗೆ ನೀಡಿದ್ದಾರೆ. ಪುತ್ತಿರಿಯ ವೊಳಗೆರೆಯಲ್ಲಿ ಹೊಲ, ಹಿರಿಯಕೆರೆಯಲ್ಲಿ ಗದ್ದೆ, ಊರು ಮುಂದಣ ಕೆರೆಯಲ್ಲಿ ಗದ್ದೆ ಮತ್ತು ಸುಂಕವನ್ನೂ ಸಹ ದಾನವಾಗಿ ನೀಡಿದ ವಿಷಯವಿದೆ. ಕ್ರಿ.ಶ.1437ರ ದೊಡ್ಡಜಾಲದ ಶಾಸನದಲ್ಲಿ[100] ಪ್ರತಾಪದೇವ ಮಹಾರಾಯರ ಅಮರನಾಯಕರು ಜಾಲದ ಭೀಮಸೆಟ್ಟಿಯರಿಗೆ ಭೂಮಿಯನ್ನು ದಾನಕೊಟ್ಟ ವಿವರವಿದೆ. ದೊಡ್ಡಬೊಮ್ಮಸಂದ್ರದ ಗೋಪಾಲಸ್ವಾಮಿ ದೇವಾಲಯದ ಮುಂದೆ ಪ್ರೌಢದೇವರಾಯನ ಶಾಸನವು ದೊರಕಿದೆ. ಪ್ರೌಢದೇವರಾಯ ರಾಜ್ಯವಾಳುತ್ತಿದ್ದ ಸಂದರ್ಭದಲ್ಲಿ ಕುಕ್ಕಲನಾಡಿನ ಪ್ರಭುಗಳು ಆಳ್ವಿಕೆ ನಡೆಸುತ್ತಿದ್ದರು ಎಂಬ ವಿಷಯ ತಿಳಿದು ಬರುತ್ತದೆ.[101]

ವರ್ತೂರು ಹೋಬಳಿ ಬಳಿ ದೇವರಾಯನ ಮಗನಿಗೆ ಸಂಬಂಧ ಪಟ್ಟ ಶಾಸನ ದೊರಕಿದೆ. ದೇವರಾಯನ ಆನಂತರ ಅಧಿಕಾರ ವಹಿಸಿಕೊಂಡ ಮಲ್ಲಿಕಾರ್ಜುನ ಮತ್ತು ವಿರೂಪಾಕ್ಷರು ದಕ್ಷರಾಗಿಲ್ಲದ ಕಾರಣ ಸಂಗಮ ಸಾಮ್ರಾಜ್ಯ ಅವನತಿಯ ಸ್ಥಿತಿಗೆ ತಲುಪಿತು. ವಿರೂಪಾಕ್ಷನ ಮರಣದ ನಂತರ ನರಸಿಂಹ ಸಾಮ್ರಾಜ್ಯದ ಪರಿಸ್ಥಿತಿಗಳನ್ನು ಹತೋಟಿಗೆ ತಂದು ಅಂತಿಮವಾಗಿ ತಾನೇ ಸಿಂಹಾಸನಾರೂಢನಾದ. ಕೇವಲ ಆರು ವರ್ಷಗಳ ಕಾಲ ಆಳ್ವಿಕೆ ನಡೆಸಿ ಶಾಂತಿಯುತ ಪರಿಸ್ಥಿತಿ ನಿರ್ಮಾಣ ಮಾಡುವುದರ ಜೊತೆಗೆ ಸಾಳುವ ಮನೆತನವು ವಿಜಯನಗರ ಸಾಮ್ರಾಜ್ಯದ ಗದ್ದುಗೆ ಏರಿತು. ನರಸಿಂಹನ ಮಗ ಇಮ್ಮಡಿ ನರಸಿಂಹನು ರಾಜ್ಯವಾಳುವ ಸಂದರ್ಭದ ಎರಡು ಶಾಸನಗಳು ನಗರಜಿಲ್ಲೆಯಲ್ಲಿ ದೊರೆತಿವೆ. 'ಶ್ರೀ ಮಹಾಮಂಡಲೇಶ್ವರ ಮೇದಿನೀ ಮೀಸರ ಗಂಡ ಕಠಾರಿ ಸಾಳ್ವ ಸಾಲುವ ಇಮ್ಮಡಿ ಶ್ರೀ ನರಸಿಂಗರಾಯ ಮಹಾರಾಯರು ರಾಜ್ಯವಾಳುತ್ತಿರಲು'[102] ಎಂಬ ಉಲ್ಲೇಖವಿದೆ. ಇಮ್ಮಡಿ ನರಸಿಂಗರಾಯನ ಬಿರುದಿನ ಜೊತೆಗೆ ಈತ ಸಾಳುವ ಮನೆತನಕ್ಕೆ ಸೇರಿದವನು ಎಂಬುದು ಸ್ಪಷ್ಟವಾಗುತ್ತದೆ. ಮಾರತ್ತಹಳ್ಳಿಯ ಊರಮುಂದೆ ದೊರೆತಿರುವ ಕ್ರಿ.ಶ.1507ರ ಶಾಸನವು[103] ಈತನ ಹೆಸರನ್ನು ಉಲ್ಲೇಖಿಸುತ್ತದೆ.

ಬೆಂಗಳೂರಿನ ಸುಲ್ತಾನಪಾಳ್ಯದ ಒಂದು ಹುಟ್ಟುಬಂಡೆಯ ಮೇಲೆ ಶಾಸನವಿದೆ.[104] ಇದು ಕ್ರಿ.ಶ. 1469ರ ಕಾಲದ್ದು. ಈ ಶಾಸನವು ಯಲಹಂಕನಾಡನ್ನು ನರಸಪ್ಪನಾಯಕ ಆಳುತ್ತಿದ್ದ ಎಂಬ ಹೇಳಿಕೆಯನ್ನು ನೀಡುತ್ತದೆ. ನರಸನಾಯಕರಿಗೆ ಪುಣ್ಯವಾಗಬೇಕೆಂದು ಚೆಂನಮನಾಯಕ ಗ್ರಾಮದಾನ ಮಾಡಿದ್ದಾನೆ. ಅಣಿಲಕುರ್ಕೆ ಎಂಬ ಹೆಸರಿನ ಗ್ರಾಮವನ್ನು ಈಸ್ವರಪುರ ಎಂದು ಬದಲಾಯಿಸಲಾಗಿದೆ. ದಾನ ನೀಡಿದವನು ಚೆಂನಮನಾಯಕ, ದಾನವನ್ನು ಪಡೆದವನು ಚೊಕ ಯಚಣ ಒಡೆಯ ಎಂಬುವನು. 'ಡಾ.ಗೋಪಾಲಕೃಷ್ಣರವರು ಅಭಿಪ್ರಾಯಿಸುವಂತೆ ಪ್ರಸ್ತುತ ಶಾಸನದಲ್ಲಿ ಉಲ್ಲೇಖಗೊಂಡಿರುವ ನರಸನಾಯಕನು ಕೃಷ್ಣದೇವರಾಯನ ತಂದೆ ಎಂದಿದ್ದಾರೆ.' ಈ ಮಾತಿಗೆ ಮತ್ತಷ್ಟು ಒತ್ತುಕೊಟ್ಟು 'ಡಾ.ಎಚ್.ಎಸ್.ಗೋಪಾಲರಾವ್‌ರವರು, ಈ ಊಹೆಯು ಸತ್ಯವೆಂದು ಒಪ್ಪಿತವಾದರೆ, ಆಗ ಕೃಷ್ಣದೇವರಾಯನ ಹಿರಿಯರ ಮೂಲನೆಲೆಯನ್ನು ಬೆಂಗಳೂರು ಜಿಲ್ಲೆಯಲ್ಲಿ ಹುಡುಕಬೇಕಾಗುತ್ತದೆ. ಆಗ ಕರ್ನಾಟಕ ಸಾಮ್ರಾಜ್ಯವನ್ನು ವಿಜಯನಗರದಿಂದ ಆಳಿದ ತುಳು ವಂಶದವರ ಮೂಲವು ತುಳು ನಾಡು ಎಂದು ಈವರೆಗೆ ಒಪ್ಪಿತವಾಗಿರುವ ಅಭಿಪ್ರಾಯವನ್ನು ಬದಲಾಯಿಸಬೇಕಾದ್ದು ಅನಿವಾರ್ಯ ಎನಿಸಿದರೂ, ತುಳು ಮೂಲದವರು ಯಲಹಂಕನಾಡಿನಲ್ಲಿ ಅಧಿಕಾರ ನಡೆಸಿರುವ ಸಾಧ್ಯತೆಗಳನ್ನು ಅಲ್ಲಗಳೆಯುವಂತಿಲ್ಲ. ಸುಲ್ತಾನಪಾಳ್ಯದ ಶಾಸನದಿಂದ ನರಸನಾಯಕ ಎಂಬುವನು ಕ್ರಿ.ಶ.1469 ಅಥವಾ ಕ್ರಿ.ಶ.1474ರ ಅವಧಿಯಲ್ಲಿ ಯಲಹಂಕ ನಾಡನ್ನು ಆಳುತ್ತಿದ್ದ. ಈ ನರಸಪ್ಪ ನಾಯಕರಿಗೆ ಪುಣ್ಯವಾಗಬೇಕೆಂದು

ಚೆಂನಮನಾಯಕ ದಾನ ನೀಡಿದ್ದು ಈಸ್ವರಪುರವನ್ನು ಅದರ ಮೊದಲ ಹೆಸರು ಅಣಿಲಕುರ್ಕೆ. ನರಸಪ್ಪ ನಾಯಕನ ತಂದೆಯ ಹೆಸರು ಈಶ್ವರ ನಾಯಕ. ಕೃಷ್ಣದೇವರಾಯನ ತಂದೆ ನರಸಿಂಹನ ತಂದೆಯ ಹೆಸರೂ ಈಶ್ವರನಾಯಕ. ಆದ್ದರಿಂದ ತಾರ್ಕಿಕವಾಗಿ ಡಾ.ಗೋಪಾಲಕೃಷ್ಣರಾಯರ ಊಹೆಯನ್ನು ಒಪ್ಪಬೇಕಾಗುತ್ತದೆ'[105] ಎನ್ನುತ್ತಾರೆ. ಬೆಂಗಳೂರಿನ ಯಲಹಂಕ ವಿಜಯನಗರ ಸಾಮ್ರಾಜ್ಯದ ಅಧೀನದಲ್ಲೇ ಇತ್ತು ಎಂಬುದು ಸ್ಪಷ್ಟವಾಗುತ್ತದೆ.

ಕೃಷ್ಣದೇವರಾಯನ ಪಟ್ಟಾಭಿಷೇಕವಾದ ಮೇಲೂ ಬೆಂಗಳೂರು ಜಿಲ್ಲೆಯಲ್ಲಿ ನರಸಿಂಗನಾಯಕನಿಗೆ ಒಳಿತಾಗಲಿ ಎಂದು ಹಾರೈಸಿ, ದಾನಗಳನ್ನು ನೀಡಿರುವುದು ಕೆಲವು ಶಾಸನಗಳಿಂದ ತಿಳಿಯುತ್ತದೆ. ಹೊಸಕೋಟೆ ತಾಲ್ಲೂಕಿನ ವಾಗಟದ ಒಂದು ಶಾಸನವು ಕೃಷ್ಣರಾಯನು ಧರ್ಮಸಿಂಹಾಸನದಲ್ಲಿ ಆಳುತ್ತಿದ್ದಾಗ ವೀರನರಸಿಂಹರಾಯರಿಗೆ ಒಳ್ಳೆಯದಾಗಲಿ ಎಂದು ವೀರನರಸಿಂಹನ ಕಾರ್ಯಕ್ಕೆ ಕರ್ತರಾದ ಚಿಕ್ಕಣನಾಯಕನು ದಾನನೀಡಿರುವ ಸಾಧ್ಯತೆಗಳನ್ನು ಅಲ್ಲಗಳೆಯುವಂತಿಲ್ಲ.[106]

ಕೃಷ್ಣದೇವರಾಯ ವಿಜಯನಗರ ಅರಸರಲ್ಲೇ ಅತ್ಯಂತ ಜನಪ್ರಿಯ ರಾಜನಾಗಿದ್ದಾನೆ. ಕೃಷ್ಣದೇವರಾಯ ಎಂದರೆ ವಿಜಯನಗರ, ವಿಜಯನಗರವೆಂದರೆ ಕೃಷ್ಣದೇವರಾಯ ಎಂಬಂತೆ ಒಂದರಲ್ಲಿ ಒಂದು ಜನರ ಮನಸ್ಥಿತಿಯಲ್ಲಿ ಮಿಳಿತವಾಗಿ ಹೋಗಿದೆ. ಕ್ರಿ.ಶ.1509ರಲ್ಲಿ ವೀರನರಸಿಂಹನ ನಂತರ ಆತನ ಮಲ ಸೋದರನಾಗಿದ್ದ ಕೃಷ್ಣದೇವರಾಯ ಪಟ್ಟಕ್ಕೆ ಬಂದ. ಸುಮಾರು 20 ವರ್ಷಗಳ ಕಾಲ ಆಳ್ವಿಕೆ ನಡೆಸಿದರೂ ಆ ಕಾಲಾವಧಿಯಲ್ಲಿಯೇ ಸಾಮ್ರಾಜ್ಯದ ಕೀರ್ತಿ ದೇಶಾದ್ಯಂತ ಹರಡಲು ಕಾರಣನಾದ. ಈತ ಅತ್ಯುತ್ತಮ ಆಡಳಿತಗಾರ, ಕಲಾಪೋಷಕ ಹಾಗೂ ಸ್ವತಃ ಕವಿಯಾಗಿದ್ದಾನೆ. ಹಾಗೂ ಹಲವು ದೇವಾಲಯಗಳಿಗೆ ಮತ್ತು ಬ್ರಾಹ್ಮಣ ಸಮುದಾಯಕ್ಕೆ ದಾನ–ಧರ್ಮಗಳನ್ನು ನೀಡಿರುವುದು ಶಾಸನಗಳಿಂದ ತಿಳಿಯುತ್ತದೆ.

ಇಂದಿನ ಹೆಚ್.ಎಸ್.ಆರ್ ಬಡಾವಣೆಗೆ ಸೇರಿರುವ ಅಗರದಲ್ಲಿ ಕ್ರಿ.ಶ.1515ಕ್ಕೆ ಸೇರಿರುವ ಶಾಸನವು ದೊರಕಿದ್ದು ಈ ಶಾಸನವು ಕೃಷ್ಣದೇವರಾಯನ ರಾಜ್ಯಭಾರವನ್ನು ಉಲ್ಲೇಖಿಸುತ್ತದೆ. ಈತನ ಕಾಲದಲ್ಲಿ ಸಿವಂಣ್ಣಪ ನಾಯಕರು ಅಗರದ ಕೆರೆಯ ಹೂಳುತೆಗೆವ ಭಂಡಿಯನ್ನು ನಡೆಸಲು ಹೊಲವನ್ನು ದಾನವಾಗಿ ನೀಡಿದ್ದರ ವಿವರವಿದೆ.[107] ಆನೇಕಲ್ ತಾಲ್ಲೂಕಿನ ಸರ್ಜಾಪುರದ ಬಳಿ ದೊರೆತಿರುವ ಕ್ರಿ.ಶ.1527ರ ಶಾಸನವು ತ್ರುಟಿತವಾಗಿದೆ. ಕೃಷ್ಣದೇವರಾಯ ಮಹಾರಾಯ ಪೃಥ್ವಿರಾಜ್ಯವನ್ನು ಆಳುತ್ತಿದ್ದರು ಎಂಬ ವಿಷಯವನ್ನಷ್ಟೇ ತಿಳಿಸುತ್ತದೆ.[108] ಚಿಕ್ಕಬೆಟ್ಟಹಳ್ಳಿಯ ಹನುಮಂತ ದೇವಾಲಯದ ಬಲಗಡೆ ನೆಟ್ಟಕಲ್ಲಿನ ಮೇಲೆ ಇರುವ ಶಾಸನ ಕ್ರಿ.ಶ.1524ರ ಕಾಲದ್ದು. ಕೃಷ್ಣದೇವರಾಯನ ಆಳ್ವಿಕೆಯ ಸಂದರ್ಭದಲ್ಲಿ ಸಿಂಗಪನಾಯಕರು ಸಿಂಗಾಪುರದಲ್ಲಿ ಇರುವ

ದೇವರಿಗೆ ಚಿಕ್ಕಬೆಟ್ಟಹಳ್ಳಿಯನ್ನು ದಾನವಾಗಿ ನೀಡಿರುವ ವಿವರವಿದೆ.[109] ಹೊಯ್ಸಳರ ಕಾಲದಲ್ಲಿ ಹುಟ್ಟಿಕೊಂಡಿದ್ದ ನಾಡಪ್ರಭುಗಳು ವಿಜಯನಗರ ಕಾಲದಲ್ಲೂ ಆಳ್ವಿಕೆ ಮುಂದುವರಿಸಿಕೊಂಡು ಬಂದಿದ್ದರು. ಕೃಷ್ಣದೇವರಾಯನು ಆಳುವಾಗ ಕುಕ್ಕಲನಾಡನ್ನು ಕೋಮನಾಯಕನೆನ್ನುವವನು ಆಳುತ್ತಿರುತ್ತಾನೆ.[110] ಕೃಷ್ಣದೇವರಾಯನ ಅನಂತರ ಆತನ ಮಲಸೋದರ ಅಚ್ಚುತರಾಯ ಕ್ರಿ.ಶ.1529ರಲ್ಲಿ ಸಿಂಹಾಸನವನ್ನೇರಿದನು. ಈತನ ಆಳ್ವಿಕೆಯ ಸಮಯದಲ್ಲೂ ಯಲಹಂಕ ನಾಡಪ್ರಭುವಾದ ಕೆಂಪೇಗೌಡ ಸಾಮಂತನಾಗಿದ್ದನು.

ಯಲಹಂಕದ ನಾಯಕತನವನ್ನು ಕೆಂಪೇಗೌಡರಿಗೆ ಅಚ್ಚುತರಾಯ ನೀಡಿದ್ದನು ಎಂಬ ವಿಷಯವು ಕ್ರಿ.ಶ.1531ರ ದಾಸರಹಳ್ಳಿ ಶಿಲಾಶಾಸನದಿಂದ ತಿಳಿಯುತ್ತದೆ.[111] ಅಚ್ಚುತರಾಯನ ಮರಣಾನಂತರ ಸಾಮ್ರಾಜ್ಯದಲ್ಲಿ ಮತ್ತೊಮ್ಮೆ ಕಲಹಗಳುಂಟಾದವು. ಅಂತಿಮವಾಗಿ ಅಳಿಯ ರಾಮರಾಯ ಮೇಲುಗೈ ಪಡೆದ. ರಾಮರಾಯನು ಅಚ್ಚುತರಾಯನ ಸೋದರನ ಮಗನಾದ ಸದಾಶಿವನ ಹಕ್ಕನ್ನು ಎತ್ತಿಹಿಡಿದ. ಸದಾಶಿವ ರಾಮರಾಯನ ಕೈಗೊಂಬೆಯಾದ. ಸದಾಶಿವನ ಆಳ್ವಿಕೆಯ ನಾಲ್ಕು ಶಾಸನಗಳು ಬೆಂಗಳೂರಿನ ನಗರ ಜಿಲ್ಲೆಯಲ್ಲಿ ದೊರೆತಿವೆ. ಈ ಶಾಸನಗಳು ಬಹುತೇಕ ತ್ರುಟಿತವಾಗಿದೆ. ಅಲ್ಲಾಳಸಂದ್ರ ಗ್ರಾಮದ ಊರ ಬಾಗಿಲ ಬಳಿ ಉತ್ತರದ ಕಡೆ ನೆಟ್ಟಿರುವ ಕಲ್ಲು ಕ್ರಿ.ಶ.1544ರ ಕಾಲಕ್ಕೆ ಸೇರಿದೆ. 'ಮಹಾರಾಜಾಧಿರಾಜ ರಾಜಪರಮೇಶ್ವರ ಶ್ರೀ ವೀರ ಪ್ರತಾಪ ಶ್ರೀ ವೀರ ಸದಾಶಿವರಾಯರು ರಾಜ್ಯವಾಳುತ್ತಿರಲು, ಶ್ರೀಮನು ಮಹಾಮಂಡಲೇಶ್ವರ ಶ್ರೀ ಮರಾಟೆಯ ವಿಟಲೇಶ್ವರ ದೇವ ಮಹಾ ಅರಸುಗಳ ಕಾರ್ಯಕ್ಕೆ ಕರ್ತರಾದವರು'[112] ಎಂದಿದೆ.

ತುಳುವ ಮನೆತನದ ಕೊನೆಯ ಅರಸು ಸದಾಶಿವನೊಂದಿಗೆ ಈ ಮನೆತನದ ಸಂತತಿಯ ರಾಜ್ಯಾಭಾರ ಅಂತ್ಯವಾಗುತ್ತದೆ. ಮುಂದೆ ಅರವೀಡು ವಂಶದ ಶ್ರೀರಂಗ ಅಧಿಕಾರವಹಿಸಿಕೊಳ್ಳುತ್ತಾನೆ. ಇವನಿಗೆ ಸಂಬಂಧಪಟ್ಟಂತೆ ನಗರ ಜಿಲ್ಲೆಯಲ್ಲಿ ಯಾವ ಒಂದು ಶಾಸನವು ದೊರೆಯುವುದಿಲ್ಲ. ಅರವೀಡು ವಂಶದ ಕೊನೆಯ ಅರಸು ಎರಡನೇ ರಾಮದೇವನ ಎರಡು ಶಾಸನಗಳು ಆನೇಕಲ್ಲಿನಲ್ಲಿನ ತಾಮ್ರಶಾಸನ ಹಾಗೂ ಬೆಂಗಳೂರು ಬಳ್ಳಾಪುರದ ಪೇಟೆ ರಂಗನಾಥ ದೇವಾಲಯದಲ್ಲಿ ದೊರೆತಿವೆ. ಈ ಎರಡು ಶಾಸನಗಳು ರಾಮದೇವನ ಆಳ್ವಿಕೆಯಲ್ಲಿ ಬೆಂಗಳೂರು ಒಳಗಾಗಿತ್ತು ಎಂಬುದನ್ನು ತಿಳಿಸುತ್ತವೆ. ಹಾಗೂ ರಂಗನಾಥ ದೇವಾಲಯದಲ್ಲಿ ದೊರೆತ ಕ್ರಿ.ಶ.1628ರ ಶಾಸನವು ಬೆಂಗಳೂರು ವಾಣಿಜ್ಯ ನಗರವಾಗಿ ಮಾರ್ಪಡುತ್ತಿರುವುದನ್ನು ತಿಳಿಸುತ್ತದೆ.

ವಿಜಯನಗರ ಅರಸರ ಕಾಲದ ಶಾಸನಗಳು ಉಲ್ಲೇಖಿಸಿರುವ ಊರುಗಳು ಹಾಗೂ ಶಾಸನಗಳು ದೊರೆತ ಸ್ಥಳಗಳ ಆಧಾರದ ಮೇಲೆ ಹೇಳುವುದಾದರೆ, ವಿಜಯನಗರದರಸರ ಆಳ್ವಿಕೆಯ ಕಾಲದಲ್ಲಿ ಬೆಂಗಳೂರು(ಪೂರ್ವ) ಮತ್ತು ಹೊಸಕೋಟೆ ತಾಲ್ಲೂಕುಗಳಾಗಿದ್ದವು.

ಬೆಂಗಳೂರು ದಕ್ಷಿಣ ತಾಲ್ಲೂಕು ವೆಪ್ಪೂರು(ಬೇಗೂರು) ನಾಡಿನಲ್ಲಿ, ಬೆಂಗಳೂರು ಉತ್ತರ ತಾಲ್ಲೂಕು ಯಲಹಂಕ ನಾಡಿನಲ್ಲಿ ಅಂತರ್ಗತವಾಗಿದ್ದವು. ಹೊಸಕೋಟೆ, ನಂದಗುಡಿ, ನೆಲವಾಗಿಲು ಸೀಮೆಗಳು ಶಿವನಸಮುದ್ರ ಸೀಮೆಗಳು(ಬೆಂಗಳೂರು ಉತ್ತರ), ದೊಡ್ಡಬೊಮ್ಮಸಂದ್ರ ದೇವಸಮುದ್ರ(ದ್ಯಾವಸಂದ್ರ) ಪ್ರದೇಶಗಳು ಶಾಸನಗಳಲ್ಲಿ ಉಲ್ಲೇಖಗೊಂಡಿವೆ. ಹೀಗೆ
ವಿಜಯನಗರದ ಅರಸರು ತಮ್ಮ ಬೃಹತ್ ಸಾಮ್ರಾಜ್ಯದಲ್ಲಿ ಬೆಂಗಳೂರನ್ನು ಒಂದಾಗಿಸಿಕೊಂಡು ಆಳ್ವಿಕೆ ನಡೆಸಿದ್ದರು. ಆದರೆ ರಕ್ಕಸತಂಗಡಿ ಕದನದೊಂದಿಗೆ ವಿಜಯನಗರ ಕಣ್ಮರೆಯಾಯಿತು. ದಕ್ಷಿಣ ಭಾಗದಲ್ಲಿ ಇದರ ಅಧೀನದಲ್ಲಿದ್ದ ಪಾಳೇಯಗಾರರು, ನಾಯಕರು ಸ್ವತಂತ್ರರಾಗಿ ರಾಜ್ಯವಾಳ ತೊಡಗಿದರು. ಬೆಂಗಳೂರಿನಲ್ಲಿ ಪ್ರಖ್ಯಾತರಾದವರೆಂದರೆ ಯಲಹಂಕನಾಡಪ್ರಭುಗಳು, ಕುಕ್ಕಲನಾಡ ಪ್ರಭುಗಳು ಮುಖ್ಯರಾಗುತ್ತಾರೆ.

## ಕುಕ್ಕಲನಾಡ ಪ್ರಭುಗಳು

ಬೆಂಗಳೂರನ್ನು ಆಳಿದ ನಾಡಪ್ರಭುಗಳಲ್ಲಿ ಕುಕ್ಕಲನಾಡ ಪ್ರಭುಗಳು ಒಬ್ಬರು. ಬೆಂಗಳೂರಿನ ಕೆಲ ಭಾಗಗಳು ಹಾಗೂ ನೆಲಮಂಗಲದ ಕಿತ್ತನಲ್ಲಿ ಗ್ರಾಮದ ಸುತ್ತಮುತ್ತಲ ಪ್ರದೇಶವನ್ನು ಕುಕ್ಕಲನಾಡು ಎಂದು ಕರೆಯಲಾಗುತ್ತಿತ್ತು. ಕುಕ್ಕಲನಾಡಿಗೆ ಸಂಬಂಧಪಟ್ಟ ಶಾಸನಗಳು ದೊರೆತ ಸ್ಥಳಗಳನ್ನು ಗಮನಿಸಿದರೆ ಈ ನಾಡಪ್ರಭುಗಳ ಆಡಳಿತ ಕ್ಷೇತ್ರ ಬೆಂಗಳೂರು ಜಿಲ್ಲೆಯ ನೆಲಮಂಗಲ ತಾಲೂಕಿನ ಕಿತ್ತನಹಳ್ಳಿ ಸೊಂಡೆಕೊಪ್ಪ ಹೋಬಳಿ ಮತ್ತಿತ್ತರ ಪ್ರದೇಶಗಳನ್ನು ಒಳಗೊಂಡಂತೆ ಬೆಂಗಳೂರಿನ ಕೆಂಗೇರಿ, ಬ್ಯಾಡರಹಳ್ಳಿ ಮುಂತಾದ ಪ್ರದೇಶವನ್ನು ಒಳಗೊಂಡಿತ್ತು ಎಂದು ತಿಳಿಯುತ್ತದೆ.

"ಕ್ರಿ.ಶ. ಸುಮಾರು 750ರ ಗಂಗ ದೊರೆ ಶ್ರೀಪುರುಷನ ಶಾಸನಗಳಲ್ಲಿ 'ಕುಕ್ಕನರೆನಾಡು', 'ಕುಕ್ಕರ ಪಾಳಿಕ್ಕಾರ ನಾಡು' ಎಂದು ಉಲ್ಲೇಖಿತವಾಗಿದ್ದ ಈ ನಾಡು ಕ್ರಿ.ಶ.11ನೇ ಶತಮಾನದ ಆದಿಭಾಗದಲ್ಲಿ ಚೋಳರ ಧಾಳಿಗಳಿಗೆ ಗುರಿಯಾಗಿ 'ಕುಕ್ಕನೂರು ನಾಡು' ಎಂದು ಕರೆಯಿಸಿ ಕೊಂಡಿದ್ದರು. ಹೊಯ್ಸಳರು ಕ್ರಿ.ಶ.1116ರ ನಂತರ ಈ ಪ್ರದೇಶದ ಮೇಲೆ ತಮ್ಮ ಆಳ್ವಿಕೆಯನ್ನು ಆರಂಭಿಸಿದರು. ಆಗ ಈ ನಾಡಿಗೆ 'ಕುಕ್ಕಲನಾಡು' ಎಂಬ ಹೆಸರು ಹೆಚ್ಚು ಪ್ರಚಲಿತವಾಗಿ, ಮುಂದೆ ವಿಜಯನಗರದ ಆಳ್ವಿಕೆಯ ಕಾಲದವರೆವಿಗೂ ಉಳಿದಿತ್ತು. ಪ್ರಾಯಶಃ ಈ ಹೆಸರೇ ಚೋಳರ ಆಳ್ವಿಕೆಗೆ ಪೂರ್ವದಿಂದಲೂ ಜನಬಳಕೆಯಲ್ಲಿದ್ದುದೆಂದು ತೋರುತ್ತದೆ. ಒಟ್ಟಾರೆ ಕುಕ್ಕರೆನಾಡು>ಕುಕ್ಕನೂರುನಾಡು>ಕುಕ್ಕಲನಾಡು ಎಂಬ ಅಂಕಿತಗಳಿಂದ ಕ್ರಿ.ಶ.8ನೇ ಶತಮಾನದಿಂದ 16ನೇ ಶತಮಾನದವರೆಗೂ ಈ ನಾಡು ಅಸ್ತಿತ್ವವನ್ನು ಪಡೆದಿದ್ದಿತು."

“ರಾಜಕೀಯವಾಗಿ ಕುಕ್ಕಲನಾಡು ಮೊದಲು ಗಂಗರ ವಶದಲ್ಲಿದ್ದು ನಂತರ ಚೋಳರ ವಶವಾಗಿ ಹೋಯಿತು. ಆಗ ಸ್ಥಳೀಯ ಆಡಳಿತಗಾರರಾಗಿದ್ದ ನಾಡಗೌಡರೇ ಮುಂತಾದವರು ಅನಿವಾರ್ಯವಾಗಿ ಚೋಳರ ಅಧೀನರಾಗಿ ಅವರ ಬಿರುದಾವಳಿಗಳನ್ನು ತಮ್ಮ ಹೆಸರುಗಳೊಂದಿಗೆ ಸೇರಿಸಿಕೊಂಡಿರುವುದು ಕಂಡುಬರುತ್ತದೆ. ಉದಾಹರಣೆಗೆ ಕುಕ್ಕನೂರನಾಡ ಗಾವುಂಡನ ಮಗ ರಟ್ಟಕುಳ ಕಾಲ ಚೋಳಗಾವುಂಡ, ಬಾಣಪುರದ ವಿಕ್ರಮ ಚೋಳ ಗಾವುಂಡ, ಆಲೂರ ಚೋಳಗಾವುಂಡ, ಪಟ್ಟಂದೂರು ಉತ್ತಮ ಚೋಳ ಗಾವುಂಡ, ಬಾಳೆಯವಾಡಿಯ ಮುಮ್ಮಡಿ ಚೋಳ ಗಾವುಂಡ ಇತ್ಯಾದಿ. ಇದೇ ಸಂದರ್ಭದಲ್ಲಿ ಗಂಗರ ಸೇವೆಯಲ್ಲಿದ್ದ ಅನೇಕ ಅಧಿಕಾರಿಗಳು, ಮಲೆನಾಡಿನಲ್ಲಿ ತಲೆಯೆತ್ತತೊಡಗಿದ್ದ ಹೊಯ್ಸಳರೊಂದಿಗೆ ಸೇರಿಕೊಂಡು ಚೋಳರನ್ನು ಗಂಡವಾಡಿ ಪ್ರದೇಶದಿಂದ ಹೊರ ಅಟ್ಟಲು ಪ್ರಯತ್ನಗಳನ್ನು ನಡೆಸುತ್ತಲೇ ಇದ್ದರು.”[113] ಮುಂದೆ ಈ ನಾಡಪ್ರಭುಗಳು ಹೊಯ್ಸಳರ ಮತ್ತು ವಿಜಯನಗರ ಕಾಲದಲ್ಲಿ ಹೆಚ್ಚು ಪ್ರಚಲಿತಕ್ಕೆ ಬಂದರು.

ಕ್ರಿ.ಶ.1325ರಲ್ಲಿ ಶ್ರೀಮನ್ಮಹಾನಾಯಕಾಚಾರ್ಯ ಮೇದನಿ ಮನ್ನೆಯರ ಗಂಡ ಉಪ್ಪೂರ ಬೊಮ್ಮಯನಾಯಕನು ಕುಕ್ಕಲ ನಾಡನ್ನು ಆಳುತ್ತಿದ್ದ ವಿವರ ಕಿತ್ತನೆಲ್ಲಿ ಮತ್ತು ಬೈಕೋನೆನಹಳ್ಳಿ ಶಾಸನಗಳಿಂದ ತಿಳಿದುಬರುತ್ತದೆ.[114] ಕ್ರಿ.ಶ.1333ರ ಶಾಸನವು ಇವರು ವೀರಬಲ್ಲಾಳನ ಸಾಮಂತಾಧಿಪತಿಯಾಗಿದ್ದರು ಎಂಬುದನ್ನು ತಿಳಿಸುತ್ತದೆ. ಹೊಯ್ಸಳರ ಅಧೀನದಲ್ಲಿದ್ದ ನರಲೋಕಗಂಡ ಎಂಬ ಬಿರುದಾಂಕಿತ ಮಯಿಲೆಯನಾಯ್ಕ ಮತ್ತು ಚನ್ನೆಯನಾಯ್ಕರು ಕುಕ್ಕಲನಾಡನ್ನು ಆಳುತ್ತಿದ್ದಾಗ ಶ್ರೀಮನುಮಹಾ ಕಂಬಾಡ ಪ್ರಭು ಮಂಟಪದ ನಾಗಗಾವುಂಡ, ಮಾರಪ್ಪಗಾವುಡಂಗೆ ನೀಡಿದ ಭೂದಾನದ ಶಾಸನ.[115] ಮೈಲೆನಾಯಕನ ಮತ್ತೊಂದು ಶಾಸನ ಬ್ಯಾಡರಹಳ್ಳಿಯಲ್ಲಿ ದೊರಕಿದೆ. ಕ್ರಿ.ಶ.1336ರ ಈ ಶಾಸನವು ಕುಕ್ಕಲನಾಡಿನ ಪ್ರಭು ಎಂದು ಹೇಳುತ್ತದೆ. ಕಿತ್ತನೆಲೆಯ ಅಂದರೆ ಇದು ಇಂದಿನ ನೆಲಮಂಗಲ ತಾಲ್ಲೂಕಿನಲ್ಲಿರುವ ಪ್ರದೇಶ. ಈ ಗ್ರಾಮದ ಹೊನ್ನೇಗೌಡನ ಮಕ್ಕಳು ಚಿಕ್ಕಣ್ಣ ಹೊನ್ನಪ್ಪಗೌಡ, ಮಲೆಯಪ್ಪ, ಹೊನ್ನಪ್ಪ ಚೊಕ್ಕಣ್ಣ, ಗೋಪಗೌಡರ ರಾಮಣ್ಣರು ವಿಧಿಯನ್ನು ಮಾಡಿಸಿ ಹೊನ್ನಪ್ಪ, ಬೊಪ್ಪಣ್ಣನವರು ಬರಸಿ ಆ ಊರಿನ ಗಾವುಂಡರು ಮತ್ತು ಕುಕ್ಕಲ ನಾಡಿನ ಪ್ರಭು ಮೈಲೆಯನಾಯಕ ಮತ್ತು ಚನ್ನಯ ನಾಯಕರಿಗೆ ಮಾನ್ಯವಾಗಿ ನೀಡಿದ ಹಳ್ಳಿಯಾಗಿದೆ[116]

ಮೈಲೆಯನಾಯಕನ ಕ್ರಿ.ಶ.1340ರ ಶಾಸನವು ಸೊಂಡೆಕೊಪ್ಪದ ಬಾಣಸವಾಡಿ ಗ್ರಾಮದಲ್ಲಿ ದೊರೆತಿದೆ. ವಿಜಯನಗರ ಸಾಮ್ರಾಜ್ಯವನ್ನು ಹರಿಯಪ್ಪ ಒಡೆಯರು ಆಳ್ವಿಕೆ ಮಾಡುತ್ತಿದ್ದ ಸಂದರ್ಭದಲ್ಲಿ ಈತ ಮಹಾಸಾಮಾಂತಾಧಿಪತಿಯಾಗಿ ಕುಕ್ಕಲನಾಡನ್ನು ಆಳುತ್ತಿದ್ದ ಎಂದಿದೆ.[117] ದೇವನಹಳ್ಳಿಯ ಕಟಿಗೇನಹಳ್ಳಿ ಗ್ರಾಮದಲ್ಲಿ ದೊರೆತಿರುವ ಮತ್ತೊಂದು ವಿಜಯನಗರ ಅರಸರ

ಶಾಸನದಲ್ಲೂ ಈತನನ್ನು ನರಲೋಕಗಂಡ ಎಂದು ಹೇಳಲಾಗಿದೆ.[118] ಈತ ಪರಾಕ್ರಮಿಯಾಗಿದ್ದು ಈ ಬಿರುದನ್ನು ಹೊಂದಿದ್ದನೆಂದು ತಿಳಿಯುತ್ತದೆ. ಕುಕ್ಕಲನಾಡಿನ ಮೈಲೆಯನಾಯಕ ಹಾಗೂ ಎಲಹಂಕನಾಡಿನ ಪ್ರಭುಗಳು ಭೈರೀದೇವ, ಮಾಚ್ಚಿದೇವರು ಹಾಗೂ ಗೋಪಾಲಸ್ವಾಮಿಯಪ್ಪ ಹೀಗೆ ಸಮಸ್ತ ಗಾವುಂಡರು ಬೈರಿಸೆಟ್ಟಿಯ ಮಗ ಕರಿಯನಾಯಕನಿಗೆ ಕೊಟ್ಟ ಕೊಡುಗೆ ಎಂದಿದೆ. ಕುಕ್ಕಲನಾಡು ಮತ್ತು ಯಲಹಂಕನಾಡ ಪಾಳೇಗಾರರು ವಿಜಯನಗರ ಸಾಮ್ರಾಜ್ಯದ ಸಾಮಂತ ಪಾಳೇಗಾರರಾಗಿದ್ದರು.

ಕ್ರಿ.ಶ.1339ರ ಹೊಯ್ಸಳ ವೀರಬಲ್ಲಾಳನ ಕಾಲದ ಶಾಸನವು ಕುಕ್ಕಲನಾಡಿನ ಪ್ರಭುವಾದ ಕೋಟೆಯ ನಾಯಕನ ಬಗ್ಗೆ ಹೇಳುತ್ತದೆ. ಜೊತೆಗೆ ಈತನ ಪೂರ್ವಿಕರ ಹೆಸರುಗಳನ್ನು ಉಲ್ಲೇಖಿಸುತ್ತದೆ. ಮಹಾಸಾಮಂತಾಧಿಪತಿ ನರಲೋಕನಾಥ ಕೋಟೆಯ ನಾಯಕನ ಮಗ ಮಯಿಲೆಯನಾಯಕ, ಬನ್ನೆಯನಾಯಕನ ಮಗ ಕೋಟೆಯ ನಾಯಕರಿಗೆ ಕುಕ್ಕಲನಾಡನ್ನು ಆಳುವುದಕ್ಕೆ ಅನುಮತಿ ನೀಡಿದ ವಿವರವಿದೆ.[119] ಕ್ರಿ.ಶ.1340ರ ರಾಮಸಮುದ್ರದ ಹರೇಕೆರೆಯ ಬಳಿ ದೊರೆತ ಶಾಸನದಲ್ಲಿ ಮೈಲೆನಾಯಕನ ಹೆಸರಿದೆ.

ಹೊಯ್ಸಳರ ಆಳ್ವಿಕೆಯಲ್ಲಿದ್ದ ಕುಕ್ಕಲನಾಡಪ್ರಭುಗಳು ಅವರ ಅವನತಿಯ ನಂತರ ವಿಜಯನಗರ ಸಾಮ್ರಾಜ್ಯದ ಸಾಮಂತಾಧಿಕಾರಿಗಳಾಗುತ್ತಾರೆ. ಕ್ರಿ.ಶ.1386ರ ಯಶವಂತಪುರ ಹೋಬಳಿ ಕ್ಯಾತಮಾರನಹಳ್ಳಿಯಲ್ಲಿ ದೊರೆತಿರುವ ಶಾಸನದಲ್ಲಿ ಇವರ ಒಕ್ಕಣೆ ಇದೆ.[120] ಹರಿಹರ ಮತ್ತು ಬುಕ್ಕನ ಆಳ್ವಿಕೆಯಲ್ಲೂ ಕುಕ್ಕಲನಾಡಿನ ಅಧಿಪತ್ಯವನ್ನು ವಹಿಸಿಕೊಂಡ ಕೋಟೆಯ ನಾಯಕನು ಮಯಿಲೆಯ ನಾಯಕನ ಮಗ. ಈತ ಬಂಕೋಡಿ ದೇವ ಪೆರುಮಾಳ ಮಗನಾದ ಕಾರ್ಯದೇವನಿಗೆ ಕೊಡುಗೆ ನೀಡಿದ್ದನ್ನು ಹೇಳುತ್ತದೆ. ಮತ್ತೊಂದು ಶಾಸನ ದೊಡ್ಡ ಬೊಮ್ಮಸಂದ್ರದ ಗೋಪಾಲಸ್ವಾಮಿ ದೇವಾಲಯದ ಬಳಿ ದೊರೆತಿದೆ. ಪ್ರೌಢದೇವರಾಯನ ಕಾಲದಲ್ಲಿ ಕುಕ್ಕಲ ನಾಡನ್ನಾಳುತ್ತಿರುವ ಬುಕ್ಕನಾಯಕನ ಉಲ್ಲೇಖವಿದೆ.

ಕುಕ್ಕಲನಾಡ ಪ್ರಭುಗಳಾದ ಮಯಿಲೆಯನಾಯಕ, ಚನ್ನೆಯನಾಯಕ, ಕೋಟೆಯನಾಯಕ, ಬುಕ್ಕನಾಯಕರ ಹೆಸರುಗಳು ಶಾಸನದಿಂದ ತಿಳಿದುಬರುತ್ತವೆ.

## ಯಲಹಂಕನಾಡ ಪ್ರಭುಗಳು

ಕರ್ನಾಟಕದ ಇತಿಹಾಸ ಬಲ್ಲ ಕನ್ನಡಿಗರೆಲ್ಲರಿಗೂ ಬೆಂಗಳೂರು ಎಂದ ಕೂಡಲೆ ನೆನಪಾಗುವುದು ಕೆಂಪೇಗೌಡ. ಬೆಂಗಳೂರು ನಗರದ ನಿರ್ಮಾಪಕರಾದ ಕೆಂಪೇಗೌಡನ ವಂಶಸ್ಥರು ಯಲಹಂಕ ನಾಡಪ್ರಭುಗಳಾಗಿದ್ದವರು. ಕನ್ನಡ ನಾಡಿನ ಜನಪ್ರಿಯ ನಾಡಪ್ರಭುಗಳಲ್ಲಿ ಕೇಳಿಬರುವ

ಮೊದಲನೆ ಹೆಸರು ಯಲಹಂಕ ನಾಡಪ್ರಭುಗಳದ್ದು. ಮಧ್ಯಕಾಲೀನ ಯುಗದಲ್ಲಿ ದಕ್ಷಿಣ ಭಾರತದ ಹಲವು ಪ್ರಾಂತ್ಯಗಳಲ್ಲಿ ಪಾಳೇಗಾರರು, ಅಮರನಾಯಕರು, ನಾಡಪ್ರಭುಗಳು ಆಳ್ವಿಕೆ ನಡೆಸುತ್ತಿದ್ದರು. ಹಾಗಾಗಿ ಇತಿಹಾಸಕಾರರು ಹದಿನೈದು ಮತ್ತು ಹದಿನಾರನೇ ಶತಮಾನವನ್ನು ಪಾಳೇಗಾರ ಕಾಲವೆಂದು ಪರಿಗಣಿಸಿದ್ದಾರೆ. ಯಲಹಂಕ ನಾಡಪ್ರಭುಗಳ ಶಾಸನ ಸಂಪುಟದ ಆಧಾರದಿಂದ ನಾಡಪ್ರಭುಗಳಿಗೆ ಸಂಬಂಧಪಟ್ಟ 95ಕ್ಕಿಂತ ಹೆಚ್ಚಿನ ಶಾಸನಗಳು ದೊರೆಯುತ್ತವೆ.

ಯಲಹಂಕ ನಾಡನ್ನು ಪ್ರಸ್ತಾಪಿಸುವ ಶಾಸನಗಳು ಸುಮಾರು ಕ್ರಿ.ಶ.1327ರಿಂದಲೇ ಪ್ರಾರಂಭವಾಗಿ, ಕ್ರಿ.ಶ.1971ರ ವರೆಗೂ ದೊರೆಯುತ್ತವೆ. ಈ ಮನೆತನವು ಸುಮಾರು 644 ವರ್ಷಗಳ ಸುಧೀರ್ಘ ಆಳ್ವಿಕೆ ನಡೆಸಿದ್ದಾರೆ. ಯಲಹಂಕ ನಾಡಪ್ರಭುಗಳು ಹೊಯ್ಸಳರ ಕಾಲಕ್ಕಾಗಲೇ ಪ್ರವರ್ಧಮಾನಕ್ಕೆ ಬಂದಿದ್ದು ವಿಜಯನಗರ ಅರಸರ ಕಾಲದಲ್ಲಿ ಅವರ ಸಾಮಂತರಾಗಿ, ವಿಜಯನಗರ ಪತನಾನಂತರ ಸ್ವತಂತ್ರರಾದರು. ಇವರ ರಾಜಕೀಯ ಸಂಬಂಧವು ಇವರ ಕಾಲದ ಶಾಸನ ಮತ್ತು ಸಾಹಿತ್ಯಕ ಆಕರಗಳಿಂದ ತಿಳಿಯುತ್ತದೆ. ಈಗಿನ ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಕೋಲಾರ, ತುಮಕೂರು, ಮೈಸೂರು, ಮಂಡ್ಯ, ದಕ್ಷಿಣಕನ್ನಡ, ತಮಿಳುನಾಡಿನ ಕೃಷ್ಣಗಿರಿ ಜಿಲ್ಲೆಗಳಲ್ಲಿ ಯಲಹಂಕ ನಾಡಪ್ರಭುಗಳಿಗೆ ಸಂಬಂಧಪಟ್ಟ ಶಾಸನಗಳು ದೊರೆತಿವೆ. ಈ ಶಾಸನಗಳ ಆಧಾರದಿಂದಲೇ ಇವರ ಆಡಳಿತ ಕ್ಷೇತ್ರ ವಿಸ್ತಾರವಾಗಿತ್ತೆಂಬುದು ತಿಳಿಯುತ್ತದೆ. ನನ್ನ ಅಧ್ಯಯನ ಕ್ಷೇತ್ರ ಬೆಂಗಳೂರು ನಗರ ಜಿಲ್ಲೆಯಾದರೂ ಅದಕ್ಕೆ ಪೂರಕವಾಗಿ ಬರುವ ಶಾಸನಗಳನ್ನು ಅಧ್ಯಯನಕ್ಕೆ ಒಳಪಡಿಸಿಕೊಳ್ಳಲಾಗಿದೆ.

'ಈ ವಂಶದವರು ಕಂಚಿಯ ಬಳಿಯ ಯಣಮಂಜಿ ಪುತ್ತೂರಿನಿಂದ ವಲಸೆ ಬಂದವರೆಂಬ ಐತಿಹ್ಯಗಳಿವೆ. ಹಾಗೂ ಇವರು ಆವತಿ ನಾಡಪ್ರಭುಗಳ ವಂಶಸ್ಥರೆಂದೂ ಈ ಐತಿಹ್ಯಗಳು ಹೇಳುತ್ತವೆ. ಈ ವಂಶದ ಏಳು ಜನ ಸೋದರರು ತಮಿಳುನಾಡಿನಿಂದ ಬಂದು ಕರ್ನಾಟಕದಲ್ಲಿ ಏಳು ರಾಜ್ಯಗಳನ್ನು ಕಟ್ಟಿದರೆಂಬ ಕಥನಗಳೂ ಇವೆ. ಆದರೆ ಆವತಿ ನಾಡಪ್ರಭುಗಳ ಶಾಸನಗಳು 1584ಕ್ಕಿಂತ ಮೊದಲು ದೊರಕದೇ ಇದ್ದು 1500ಕ್ಕೂ ಮೊದಲು ಅವರು ಆಳಿದ ಸೂಚನೆಗಳು ಲಭ್ಯವಿಲ್ಲ'[121]

ಯಲಹಂಕ ನಾಡಪ್ರಭುಗಳ ವಂಶಾವಳಿಯ ಬಗ್ಗೆ ಹಲವು ವಿದ್ವಾಂಸರು ಹಲವು ರೀತಿಯಲ್ಲಿ ವಿವರಿಸಿದ್ದಾರೆ. ಕರ್ನಾಟಕ ರಾಜ್ಯ ಗ್ಯಾಸೆಟಿಯರ್‌ನಲ್ಲಿ 'ರಣಬೈರೇಗೌಡನ ನಂತರ ಕೆಂಪನಂಜೇಗೌಡನ ಬಗ್ಗೆ ಮಾತ್ರ ಶಾಸನಗಳು ವಿವರ ನೀಡುತ್ತವೆ. ಜಯಗೌಡನ ಬಗ್ಗೆ ಸಾಹಿತ್ಯ ಕೃತಿಗಳಲ್ಲಿ ಮಾತ್ರ ವಿವರವಿದೆ. ಶಾಸನಗಳ ಪ್ರಕಾರ ಸ್ಪಷ್ಟವಾದ ವಂಶಾವಳಿಯು ಕೆಂಪನಂಜೇಗೌಡನಿಂದ ಪ್ರಾರಂಭವಾಗುತ್ತದೆ' ಎಂದು ಅಭಿಪ್ರಾಯಿಸಲಾಗಿದೆ.[122]

‘ಕರ್ನಾಟಕ ಕನ್ನಡ ವಿಷಯ ವಿಶ್ವಕೋಶದಲ್ಲಿ ಜಯಗೌಡ, ಗಿಡ್ಡೇಗೌಡ, ಕೆಂಪನಂಜೇಗೌಡ, ಒಂದನೇ ಕೆಂಪೇಗೌಡ ಈ ರೀತಿ ವಂಶಾವಳಿಯನ್ನು ನೀಡಲಾಗಿದೆ.’[123] ‘ಯಲಹಂಕನಾಡ ಪ್ರಭುಗಳ ಶಾಸನ ಸಂಪುಟ ಕೃತಿಯಲ್ಲಿಯೂ ಜಯಪ್ಪಗೌಡ, ಗಿಡ್ಡಪ್ಪಗೌಡ, ನಾಚಪ್ಪಗೌಡ, ಕೆಂಪನಾಚಪ್ಪರು ಎಂದು ಕ್ರಮವಾಗಿ ವಂಶಾವಳಿಯನ್ನು ಹೇಳಲಾಗಿದೆ.[124] ಶಾಸನಗಳ ಆಧಾರದ ಮೇಲೆ ಈ ವಂಶದ ಮೂಲಪುರುಷರನ್ನು ಗುರುತಿಸಬಹುದು. ನಾಡಪ್ರಭುಗಳ ಬಗೆಗೆ ದೊರಕುವ ಮೊದಲ ಶಾಸನ ಬೆಂಗಳೂರಿನ ಕ್ರಿ.ಶ.1327ರ ದೊಮ್ಮಲೂರು ಶಿಲಾಶಾಸನ.[125] ನಂತರ ಕ್ರಿ.ಶ.1328ರ ಚಿಕ್ಕಜಾಲದ ಶಿಲಾಶಾಸನ.[126] ಈ ಶಾಸನಗಳು ಹೊಯ್ಸಳರ ದೊರೆ ಮೂರನೇ ವೀರಬಲ್ಲಾಳನ ಆಳ್ವಿಕೆಯನ್ನು ಉಲ್ಲೇಖಿಸಿರುವ ಶಾಸನಗಳಾಗಿವೆ. ಈ ಶಾಸನದಲ್ಲಿ ಯಲಹಂಕನಾಡಿನ ಮಯಿಲೇಗೌಡ, ಮಾರೇಗೌಡ, ಮಲ್ಲಯ್ಯಗೌಡ, ತಾಮಿಯಪ್ಪರ ಉಲ್ಲೇಖವಿದೆ.

ಕ್ರಿ.ಶ.1341ರ ನಾಗಶೆಟ್ಟಹಳ್ಳಿಯ ಶಾಸನದಲ್ಲಿ ‘ಶ್ರೀ ಮನುಮಹಾಯೆಲಹಕ್ಕ ನಾಡಪ್ರಭುಗಳು ಬಇರಿದೇವ, ತಾಮಿಯಪ್ಪ, ಮಾಚಿದೇವ, ಕನ್ನಗೌಡ’ ಎಂಬ ಒಕ್ಕಣೆಯಿದೆ.[127] ಬಇರಿದೇವನನ್ನು ‘ಯಲಹಂಕ ನಾಡಪ್ರಭು’ ಎಂದು ಉಲ್ಲೇಖಿಸಿರುವ ಪ್ರಥಮ ಶಾಸನವಿದಾಗಿದೆ. ಈ ನಾಡಪ್ರಭುಗಳ ಪ್ರಥಮ ದೊರೆ ಬೈರೇಗೌಡ ಹಾಗೂ ಅವನ ಸಹೋದರರಾದ ತಾಮಿಯಪ್ಪ, ಮಾಚಿದೇವ, ಕನ್ನಗೌಡ, ಬೈಯಪ್ಪರ ಉಲ್ಲೇಖವು ಇದೆ. ಹೀಗೆ ಚಿಕ್ಕಜಾಲ ಮತ್ತು ದೊಮ್ಮಲೂರಿನಲ್ಲಿ ದೊರೆತ ಶಾಸನಗಳಲ್ಲೂ ಈ ಸೋದರರ ಹೆಸರಿರುವುದನ್ನು ಇಲ್ಲಿ ಗಮನಿಸಬಹುದು.

‘ಕುಕ್ಕೆ ಸುಬ್ರಹ್ಮಣ್ಯ ಶಾಸನವೇ ಅಲ್ಲದೆ ಮತ್ತೊಂದು ಶಾಸನವೂ ಸಹ ಕೆಂಪನಂಜೇಗೌಡರಿಗಿಂತಲೂ ಮೊದಲು ರಾಜ್ಯಭಾರ ಮಾಡಿದ ನಾಚಪ್ಪ ಅಥವಾ ನಂಜೇಗೌಡರನ್ನು(ನಂಜಪ್ಪಗೌಡ) ಉಲ್ಲೇಖಿಸುತ್ತದೆ. ಕೋಲಾರ ಜಿಲ್ಲೆ ಮಾಲೂರು ತಾಲ್ಲೂಕಿನ ಮಾಸ್ತಿ ಶಾಸನದಲ್ಲಿ[128] ‘ಯಲಹಂಕನಾಡ ಪ್ರಭುಗಳಾದ ನಂಜೇಗೌಡರ ಪುತ್ರರಾದ ಕೆಂಪನಂಜೇಗೌಡರ ಪುತ್ರರಾದ ಹಿರಿಯ ಕೆಂಪೇಗೌಡರು’ ಎಂಬ ಒಕ್ಕಣೆಯಿದೆ. ಆದ್ದರಿಂದ ಕೆಂಪನಂಜೇಗೌಡರ ತಂದೆಯಾದ ನಾಚಪ್ಪ ಅಥವಾ ನಂಜೇಗೌಡರು ಕೆಂಪನಂಜೇಗೌಡರಿಗಿಂತಲೂ ಮೊದಲೇ ಯಲಹಂಕ ನಾಡಿನ ಅಧಿಪತಿಯಾಗಿದ್ದರೆಂಬುದು ಖಚಿತವಾಗಿ ತಿಳಿದುಬರುತ್ತದೆ. ಯಲಹಂಕ ನಾಡಪ್ರಭುಗಳ ವಂಶಾವಳಿಯನ್ನು ಈ ಮುಂದಿನಂತೆ ಗುರುತಿಸಬಹುದು.[129]

## ಯಲಹಂಕ ನಾಡಪ್ರಭುಗಳ ವಂಶಾವಳಿ




ಕ್ರಿ.ಶ.1471ರ ನಂದಿಗುಂದ ಶಿಲಾಶಾಸನವು ಯಲಹಂಕ ನಾಡಿನ ಹಿರಿಯ ಭೈರೇಗೌಡರ ಮಗ ಮಂಚೇಗೌಡರಿಗೆ ನಂದಿಗುಂದದ ಚತುಸ್ಸೀಮೆಯನ್ನು ದಾನವಾಗಿ ನೀಡಿರುವ ವಿವರವನ್ನು ಕೊಡುತ್ತದೆ.[130] ಪ್ರಾರಂಭದ ಅರಸರಾದ ಜಯಗೌಡ, ಗಿಡ್ಡೇಗೌಡರ ಉಲ್ಲೇಖವಿರುವ ಶಾಸನಗಳು ಸಂಖ್ಯೆಯಲ್ಲಿ ಕಡಿಮೆಯೇ ದೊರೆತಿವೆ. ಆದರೂ ಇವರ ಕಾಲಕ್ಕೆ ಬೆಂಗಳೂರು ಸೇರಿದಂತೆ ಸುತ್ತಮುತ್ತಲ ಪ್ರದೇಶಗಳು ನಾಡಪ್ರಭುಗಳ ಆಳ್ವಿಕೆಗೆ ಸೇರಿತ್ತು ಎಂಬುದಕ್ಕೆ ಸಾಕ್ಷಿಯಾಗಿವೆ.

ಕೆಂಪನಂಜೇಗೌಡ(1443–1513) ಗಿಡ್ಡೇಗೌಡರ ನಂತರ ಅಧಿಕಾರಕ್ಕೆ ಬಂದ ಕೆಂಪನಂಜೇಗೌಡರು ಪ್ರಜಾನುರಾಗಿಗಳಾಗಿ, ಧರ್ಮದಿಂದ ಸುಮಾರು 70 ವರ್ಷಗಳು ಆಡಳಿತ ನಡೆಸಿದರು.[131] ಕೆಂಪನಂಜೇಗೌಡರ ಎರಡು ಶಾಸನಗಳು ನಮಗೆ ದೊರೆಯುತ್ತವೆ. ಈ ಶಾಸನಗಳು ದಾನಶಾಸನವಾಗಿವೆ. ಕೆಂಪೋಹಳ್ಳಿಯ ಕ್ರಿ.ಶ.1515ರ ಶಾಸನವು ಕೆಂಪನಂಜೇಗೌಡರ ಆಳ್ವಿಕೆಯ ಬಗ್ಗೆ ಹೇಳುತ್ತದೆ. ಈತ ವಿಜಯನಗರದ ಅರಸು ಶ್ರೀಕೃಷ್ಣದೇವರಾಯನ ಕಾಲದಲ್ಲಿ ಮಾಗಡಿ ಸೀಮೆಯನ್ನು ಆಳ್ವಿಕೆ ಮಾಡುತ್ತಿದ್ದ.[132] ಕೆಂಪನಂಜೇಗೌಡನ ನಂತರ ಆತನ ಮಗ ಹಿರಿಯ ಕೆಂಪೇಗೌಡ ಅಥವಾ ಒಂದನೇ ಕೆಂಪೇಗೌಡ ಅಧಿಕಾರವಹಿಸಿಕೊಳ್ಳುತ್ತಾನೆ.

ಒಂದನೆಯ ಕೆಂಪೇಗೌಡ(ಕ್ರಿ.ಶ.1553–1609) ವಿಜಯನಗರೋತ್ತರ ದಕ್ಷಿಣ ಭಾರತದಲ್ಲಿ ಸುಪ್ರಸಿದ್ಧನಾದ ಪ್ರಭುವೆಂದು ಪ್ರಖ್ಯಾತನಾದವನು. ಬೆಂಗಳೂರು ಕೆಂಪೇಗೌಡನೆಂದೇ ಪ್ರಸಿದ್ಧನಾಗಿರುವ ಒಂದನೇ ಕೆಂಪೇಗೌಡನನ್ನು ಹಿರಿಕೆಂಪೇಗೌಡ, ಪೆದ್ದಕೆಂಪ ಎಂದು ಕರೆಯಲಾಗುತ್ತದೆ. ಈತ ರಾಜಕೀಯ, ಸೈನಿಕ, ಆರ್ಥಿಕ, ನಗರೀಕರಣ, ಸಾಹಿತ್ಯ, ಕಲಾ ಪೋಷಕನಾಗಿದ್ದನು. ಕ್ರಿ.ಶ.16ನೇ ಶತಮಾನದಲ್ಲಿ ಯೋಜಿತ ನಗರವನ್ನು ನಿರ್ಮಾಣ ಮಾಡಬೇಕೆಂದು ತೀರ್ಮಾನಿಸಿ ಮುಂದೆ ನಿರ್ಮಾಣವಾಗುವ ನಗರಕ್ಕೆ ಕುಡಿಯುವ ನೀರಿನ ಸೌಕರ್ಯಕ್ಕಾಗಿ ಹಲವು ಕೆರೆ–ಕಟ್ಟೆಗಳನ್ನು ನಿರ್ಮಾಣ ಮಾಡಿದ ಕೀರ್ತಿ ಒಂದನೇ ಮತ್ತು ಎರಡನೇ ಕೇಂಪೇಗೌಡರಿಗೆ ಸಲ್ಲುತ್ತದೆ. ಬೆಂಗಳೂರಿನ ನಾಗರೀಕರ ಪಾಲಿಗೆ ಇವರು ಪ್ರಾತಃಸ್ಮರಣೀಯರಾಗಿದ್ದಾರೆ.

ಒಂದನೇ ಕೆಂಪೇಗೌಡನನ್ನು ಹೆಸರಿಸುವ ಸುಮಾರು 24 ಶಾಸನಗಳು ದೊರೆಯುತ್ತವೆ. ಯಲಹಂಕನಾಡಪ್ರಭುಗಳಲ್ಲಿ ಪ್ರಸಿದ್ಧನಾದ ಅರಸು ಒಂದನೇ ಕೆಂಪೇಗೌಡ. ಬೆಂಗಳೂರೆಂದ ಕೂಡಲೇ ನಮಗೆ ನೆನಪಾಗುವುದೇ ಒಂದನೇ ಕೆಂಪೇಗೌಡನ ಹೆಸರು. ಈತ ವಿಜಯನಗರ ಸಾಮ್ರಾಜ್ಯದ ಅರಸು ಶ್ರೀ ಕೃಷ್ಣದೇವರಾಯ ಮತ್ತು ಅಚ್ಚುತರಾಯನ ಕಾಲದಲ್ಲಿ ಸಾಮಂತನಾಗಿದ್ದನು ಎಂದು ದಾಸರಹಳ್ಳಿಯ ಶಿಲಾಶಾಸನದಿಂದ ತಿಳಿಯುತ್ತದೆ. ಕ್ರಿ.ಶ.1531ರ ಈ ಶಾಸನವು ಒಂದನೇ ಕೆಂಪೇಗೌಡನ ಬಗ್ಗೆ ಬೆಂಗಳೂರಿನಲ್ಲಿ ದೊರೆಯುವ ಮೊದಲ ಶಾಸನವಾಗಿದೆ.[133] ವಿಜಯನಗರ ಅರಸರ ಸಂದರ್ಭದಲ್ಲಿ ಬೆಂಗಳೂರು ಸಾಮ್ರಾಜ್ಯ ಒಂದು ಆಯಕಟ್ಟಿನ ಸ್ಥಳವಾಗಿತ್ತು. ವಿಜಯನಗರದ (ಅಚ್ಚುತರಾಯ) ವಿಶ್ವಾಸಕ್ಕೆ ಪಾತ್ರರಾದ ಕೆಂಪೇಗೌಡರಿಗೆ ಯಲಹಂಕದ ಸುತ್ತ ಇರುವ ಹಲಸೂರು, ವರ್ತೂರು, ಬೇಗೂರು, ಜಿಗಣಿ, ತಲಘಟ್ಟಪುರ, ಕುಂಬಳಗೋಡು, ಕೆಂಗೇರಿ, ಹೆಸರುಘಟ್ಟ ಬಾಣಾವರ ಮೊದಲಾದ ಗ್ರಾಮಗಳನ್ನು ಸಂವತ್ಸರಕ್ಕೆ 30 ಸಾವಿರ ವರಹಗಳ ಸುವರ್ಣಾದಾಯವಿರುವ ಹನ್ನೆರಡು ಹೋಬಳಿಗಳನ್ನು ಕೊಟ್ಟು ವಿಶೇಷ ಬಹುಮಾನವನ್ನು ಹಾಗೂ ಧರ್ಮವೀರ ಎಂಬ ಬಿರುದನ್ನು ನೀಡಿ ಪ್ರೋತ್ಸಾಹಿಸಿದರು.

ಯಲಹಂಕನಾಡ ಪ್ರಭುವಾಗಿದ್ದ ಒಂದನೇ ಕೆಂಪೇಗೌಡ ಬೆಂಗಳೂರನ್ನು ಕ್ರಿ.ಶ.1537ರಲ್ಲಿ ಸ್ಥಾಪಿಸಿದ ಎಂಬ ಪಾರಂಪರಿಕ ಹೇಳಿಕೆ ಇದೆ. ಆದರೆ ಕ್ರಿ.ಶ.890ರ ಬೇಗೂರು ಶಾಸನದಲ್ಲೇ 'ಬೆಂಗಳೂರು' ಎಂಬ ಊರು ಅಸ್ತಿತ್ವದಲ್ಲಿತ್ತು ಎಂದು ತಿಳಿಯುತ್ತದೆ. ಹಾಗೂ ಬೆಂಗಳೂರಿನ ಮಡಿವಾಳ ಸೋಮೇಶ್ವರ ದೇವಸ್ಥಾನದಲ್ಲಿನ ಕ್ರಿ.ಶ.1247ರ ಶಾಸನದಲ್ಲಿಯೂ ಬೆಂಗಳೂರು ಎಂಬ ಹೆಸರಿನ ಉಲ್ಲೇಖವಿದೆ. ಕೆಂಪೇಗೌಡನ ಶಾಸನವೊಂದು 'ಬೆಂಗಳೂರು ಕೆಂಪನಾಚಯಗೌಡರ ಕೊಮಾರ ಕೆಂಪಯಗೌಡ'[134] ಎಂದು ಮತ್ತೊಂದು ಬೆಂಗಳೂರು ನಗರ ಜಿಲ್ಲೆಯ ಯಶವಂತಪುರ

ಶಾಸನದಲ್ಲಿ 'ಬೆಂಗಳೂರ ಕೆಂಪನಂಜಯಗೌಡರ ಪುತ್ರ ಕೆಂಪೇಗೌಡರು ಕೊಟ್ಟ ಕೊಡುಗೆ'[135] ಎಂಬ ಉಲ್ಲೇಖವಿದೆ. ಈ ಶಾಸನಗಳ ಪ್ರಕಾರ ಕೆಂಪೇಗೌಡನಿಗೂ ಮೊದಲೆ ಆತನ ತಂದೆ ಕೆಂಪನಂಜಯಗೌಡರು ಬೆಂಗಳೂರಿನಲ್ಲಿ ಆಳ್ವಿಕೆ ನಡೆಸುತ್ತಿದ್ದರು ಎಂಬುದು ಸ್ಪಷ್ಟವಾಗುತ್ತದೆ. ಕೆಂಪೇಗೌಡರು ತಮ್ಮ ಉಸ್ತುವಾರಿಯಲ್ಲಿದ್ದ ಬೆಂಗಳೂರನ್ನು ವಿಸ್ತರಿಸಿ ದೊಡ್ಡ ಪಟ್ಟಣವನ್ನಾಗಿ ಮಾಡಿದ್ದಿರಬಹುದು ಮತ್ತು ಬೆಂಗಳೂರು ಕೋಟೆಯನ್ನು ಶಾಲಿವಾಹನ ಶಕ 1459ನೆಯ ಹೇವಿಳಂಬಿ ಸಂವತ್ಸರದ ಮಾಘ ಶುದ್ಧ ತ್ರಯೋದಶಿ ಶುಕ್ರವಾರದಂದು ಅಂದರೆ ಕ್ರಿ.ಶ.1538 ಜನವರಿ 14ರಂದು ನಿರ್ಮಾಣ ಮಾಡಲು ಪ್ರಾರಂಭಿಸಿದನು.[136] ಎಂಬ ವಿವರ ಬೆಂಗಳೂರಿನ ಬಖೈರಿನಲ್ಲಿದೆ. ಇದರ ಆಧಾರದಿಂದ ಕ್ರಿ.ಶ.1537ರಲ್ಲಿ ಬೆಂಗಳೂರು ನಿರ್ಮಾಣ ಮಾಡಿದ ಎನ್ನುವುದು ಸರಿ. ಮೊದಲೇ ಇದ್ದ ಒಂದು ಹಳ್ಳಿ ಬೆಂಗಳೂರು. ಇದನ್ನು ಒಂದು ನಗರವನ್ನಾಗಿ ರಚಿಸಿದವನು ಕೆಂಪೇಗೌಡ ಎನ್ನಬಹುದು.

ಒಂದನೇ ಕೆಂಪೇಗೌಡನು ತನ್ನ ಆಡಳಿತದಲ್ಲಿದ್ದ ಬೆಂಗಳೂರು ಸೀಮೆಗೆ ಸೇರಿದ ವರ್ತೂರು ಹೋಬಳಿಯ ವರ್ತೂರು ಗ್ರಾಮ, ಸೋರು ಹುಣಿಸೆ ಗ್ರಾಮ, ಹಾರುವಹಳ್ಳಿ ಗ್ರಾಮ ಈ ಮೂರು ಗ್ರಾಮಗಳನ್ನು ತಿರುಮಲಯ್ಯ ಎಂಬುವರಿಗೆ ದಾನ ನೀಡಿದ್ದಾನೆ.[137] ಇದನ್ನು ಕೆಂಪೇಗೌಡರ ಕೋಲಾರ ಜಿಲ್ಲೆಯ ಮಾಸ್ತಿಗ್ರಾಮದ ಶಾಸನ ತಿಳಿಸುತ್ತದೆ.

ಜಯಗೌಡನ ಕಾಲದಿಂದ ಆರಂಭವಾದ ಯಲಹಂಕನಾಡು ಒಂದನೇ ಕೆಂಪೇಗೌಡನ ಕಾಲಕ್ಕೆ ಸುಭಿಕ್ಷವಾಗಿ ತನ್ನ ವ್ಯಾಪ್ತಿಯನ್ನು ಬೆಂಗಳೂರು ಸುತ್ತಮುತ್ತಲಿನ ಕಡೆಗೆ ವಿಸ್ತರಿಸಿತ್ತು ಎಂಬುದು ಶಾಸನಗಳ ಆಧಾರದಿಂದ ತಿಳಿಯುತ್ತದೆ. ಬೆಂಗಳೂರಿನ ಬಖೈರಿನ ಪ್ರಕಾರ, ಕೆಂಪೇಗೌಡನು ಅಚ್ಚುತರಾಯರ ಅನುಮತಿಯನ್ನು ಪಡೆದು ಒಂದು ಕೋಟೆ ಹಾಗೂ ಪಟ್ಟಣವನ್ನು ನಿರ್ಮಿಸಿ ಅಲ್ಲಿ ತನ್ನ ರಾಜಧಾನಿಯನ್ನು ಸ್ಥಾಪಿಸುವ ಉದ್ದೇಶವನ್ನು ಹೊಂದಿರುತ್ತಾನೆ. ಇದರಿಂದ ಸಂಪ್ರೀತನಾದ ಅಚ್ಚುತರಾಯನು ಹನ್ನೆರಡು ಹೋಬಳಿಗಳನ್ನು ನೀಡುತ್ತಾನೆ. ಅವುಗಳೆಂದರೆ ಕಸಬಾ ಹಳೆ ಬೆಂಗಳೂರು, ವರ್ತೂರು ಹೋಬಳಿ, ಯಲಹಂಕನಾಡು, ಬೇವೂರು ಹೋಬಳಿ, ಹಲಸೂರು ಹೋಬಳಿ, ತೆಂಗರ ಹೋಬಳಿ(ಇಂದಿನ ಕೆಂಗೇರಿ), ತಲಘಟ್ಟಪುರ ಹೋಬಳಿ, ಜಿಗಣಿ ಹೋಬಳಿ, ಕುಂಬಳಗೋಡು ಹೋಬಳಿ, ಕನ್ನೇಲ್ಲಿ ಹೋಬಳಿ, ಬಾಣಾವರ ಹೋಬಳಿ, ಹೆಸರುಘಟ್ಟ ಹೋಬಳಿ ಈ ಹನ್ನೆರಡು ಹೋಬಳಿಗಳಿಂದ ಒಟ್ಟು ಮೂವತ್ತು ಸಾವಿರ ಪಗೋಡಗಳು ಕಂದಾಯ ಬರುತ್ತಿತ್ತು.[138] ಹೀಗೆ ಕೆಂಪೇಗೌಡನ ಕಾಲಕ್ಕೆ ಬೆಂಗಳೂರು ಉತ್ತರದಲ್ಲಿ ಹೊಳವನ ಹಳ್ಳಿಯವರೆಗೆ, ದಕ್ಷಿಣದಲ್ಲಿ ಆನೇಕಲ್‌ವರೆಗೆ, ಪೂರ್ವಕ್ಕೆ ಹೊಸಕೋಟೆ, ವರ್ತೂರುಗಳವರೆಗೆ, ಪಶ್ಚಿಮದಲ್ಲಿ ಕುಣಿಗಲ್‌ವರೆಗೆ ಹಬ್ಬಿತ್ತು. ಕೆಂಪೇಗೌಡನು ತಾನು ನಿರ್ಮಿಸಿದ ಹೊಸ ಪಟ್ಟಣಕ್ಕೆ ಹಳೆಯ ಹೆಸರಾದ

ಬೆಂಗಳೂರು ಎಂದೇ ನಾಮಕರಣ ಮಾಡಿ ಬಹುಸಂಖ್ಯೆಯ ಜನರು ಇಲ್ಲಿ ನೆಲೆಸಲು ಪ್ರೋತ್ಸಾಹಿಸಿ ಈ ಪಟ್ಟಣವನ್ನು ತನ್ನ ರಾಜ್ಯದ ರಾಜಧಾನಿಯನ್ನಾಗಿಯೂ ತನ್ನ ವಾಸಸ್ಥಳವನ್ನಾಗಿಯೂ ಮಾಡಿಕೊಂಡನು. ಹೀಗೆ ಬೆಂಗಳೂರು ಈ ವಂಶದ ಕೇಂದ್ರವಾಯಿತು.

ಇಮ್ಮಡಿ ಕೆಂಪೇಗೌಡನು ತನ್ನ ತಂದೆ ಒಂದನೇ ಕೆಂಪೇಗೌಡನ ನಂತರ ಅಧಿಕಾರ ರೂಢನಾದನು. ಕ್ರಿ.ಶ.1609–1658ರ ವರೆಗೆ ಅರಸನಾಗಿದ್ದನು. ತಂದೆಯಂತೆಯೇ ಉತ್ತಮ ರಾಜ್ಯಭಾರ ಮಾಡಿ ಪ್ರಸಿದ್ಧಿ ಪಡೆದಿದ್ದ ಈತನನ್ನು ಇಮ್ಮಡಿ ಕೆಂಪಭೂಪ, ಮಾಗಡಿ ಕೆಂಪೇಗೌಡ ಎಂದು ಕರೆಯಲಾಗುತ್ತಿತ್ತು. ಇವನ ಆಳ್ವಿಕೆಯಲ್ಲೂ ನಾಡಪ್ರಭುಗಳು ವಿಜಯನಗರ ಸಾಮ್ರಾಜ್ಯದ ಅಧೀನಕ್ಕೆ ಒಳಪಟ್ಟಿದ್ದರು. ಒಂದನೇ ಕೆಂಪೇಗೌಡ ಬೆಂಗಳೂರನ್ನು ಅಭಿವೃದ್ಧಿ ಪಡಿಸಿದರೆ ಈತ ಮಾಗಡಿ ಪ್ರದೇಶವನ್ನು ಅಭಿವೃದ್ಧಿ ಪಡಿಸಿದನು. ಈತನ ಕಾಲದ ಸುಮಾರು 27 ಶಾಸನಗಳು ದೊರೆತ್ತಿದ್ದು ಇವುಗಳಲ್ಲಿ ಹೆಚ್ಚಿನ ಶಾಸನಗಳು ಮಾಗಡಿ ಪ್ರದೇಶದಲ್ಲೇ ದೊರೆತಿವೆ.

ಬೆಂಗಳೂರಿನಲ್ಲಿ ಇಮ್ಮಡಿ ಕೆಂಪೇಗೌಡ ಕ್ರಿ.ಶ.1597ರಲ್ಲಿ ಕಾವಲು ಗೋಪುರ ನಿರ್ಮಿಸಿದ ಎಂದು ಹೇಳಲಾಗುತ್ತದೆ. ಡಾ.ಸೂರ್ಯನಾಥ ಕಾಮತ್ ಅವರು 'ಬೆಂಗಳೂರು ದರ್ಶನ' ಕೃತಿಯಲ್ಲಿ "ಇಮ್ಮಡಿ ಕೆಂಪೇಗೌಡನ ತಾಮ್ರಪಟ ಒಂದರಲ್ಲಿ ಈಗಿನ ಮಾಗಡಿ ರಸ್ತೆ ಆರಂಭಕ್ಕೆ ಕೆಂಪಾಪುರ ಅಗ್ರಹಾರದ ಸ್ಥಾಪನೆ ಮಾಡಿ, ಅದರಲ್ಲಿ 48 ವಿದ್ವಾಂಸರಿಗೆ ದಾನ ನೀಡಿದ ಉಲ್ಲೇಖವಿದೆ. ನಗರದ ನಾಲ್ಕು ಎಲ್ಲೆಕಟ್ಟುಗಳನ್ನು ಗುರುತಿಸಿ ಅಲ್ಲಿ ನಾಲ್ಕು ಕಾವಲು ಗೋಪುರಗಳನ್ನು ನಿಲ್ಲಿಸಿದನೆಂದು ಈ ಶಾಸನ ಹೇಳಿದೆ."[139] ಎಂದು ಅಭಿಪ್ರಾಯಿಸಿದ್ದಾರೆ. ಡಾ.ಎಂ.ಜಿ.ಮಂಜುನಾಥರವರು 'ಯಲಹಂಕ ನಾಡಪ್ರಭುಗಳ ಶಾಸನಸಂಪುಟ' ಕೃತಿಯಲ್ಲಿ "ಇಮ್ಮಡಿ ಕೆಂಪೇಗೌಡ ಕಾವಲು ಗೋಪುರ ನಿರ್ಮಿಸಿದ ಎಂದು ಹೇಳುವ ಪೌರೋಹಿತ್ಯ ಶಾಸನವು ಒಂದು ಕೂಟ ಶಾಸನ ಎಂದಿದ್ದಾರೆ. ಅದರಲ್ಲಿ ಹೇಳಿರುವ ಅಂಶಗಳೆಲ್ಲವೂ ಸತ್ಯಕ್ಕೆ ದೂರವಾದ ಸಂಗತಿಗಳು"[140] ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಹಾಗೆಂದ ಮೇಲೆ ಬೆಂಗಳೂರಿನ ನಾಲ್ಕು ದಿಕ್ಕುಗಳಲ್ಲೂ ನಾಲ್ಕು ಗೋಪುರಗಳನ್ನು ಇಮ್ಮಡಿ ಕೆಂಪೇಗೌಡ ಸ್ಥಾಪಿಸಿಲ್ಲ ಎಂಬ ಅಂಶ ತಿಳಿಯುತ್ತದೆ.

ಇಮ್ಮಡಿ ಕೆಂಪೇಗೌಡನ ಕಾಲಕ್ಕೆ ಯಲಹಂಕ ನಾಡಿನ ವ್ಯಾಪ್ತಿಯು ಬೆಂಗಳೂರು ನಗರ ಜಿಲ್ಲೆಯ ಬಹುಭಾಗ, ರಾಮನಗರ, ಕುಣಿಗಲ್, ಮಾಗಡಿ ತಾಲ್ಲೂಕು ಪ್ರದೇಶಗಳೂ ಸೇರಿದ್ದವು ಎಂಬುದನ್ನು ಶಾಸನಗಳಿಂದ ಅರಿಯಬಹುದು. ಕ್ರಿ.ಶ.1599ರ ಶಾಸನದ ಪ್ರಕಾರ ಇಮ್ಮಡಿ ಕೆಂಪೇಗೌಡನ ಮಲತಾಯಿಯಾದ ವೆಂಕಟಕೃಷ್ಣಾಜಮ್ಮಳು ಕುಣಿಗಲ್ ಬಳಿ 'ಕೃಷ್ಣಸಾಗರ' ಎಂಬ ಅಗ್ರಹಾರ ನಿರ್ಮಿಸಿದ್ದರ ಉಲ್ಲೇಖ ಕುಣಿಗಲ್ಲಿನ ಶಾಸನದಲ್ಲಿದೆ.[141] ಈ ಶಾಸನದ ಆಧಾರದಿಂದ ಕುಣಿಗಲ್ ಕೂಡ ಯಲಹಂಕ ನಾಡಪ್ರಭುಗಳ ಆಳ್ವಿಕೆಗೆ ಒಳಪಟ್ಟಿತ್ತು ಎಂಬುದು ಸ್ಪಷ್ಟವಾಗುತ್ತದೆ.

ಬೆಂಗಳೂರು ರಂಗನಾಥಸ್ವಾಮಿ ದೇವಾಲಯದ ಬಳಿ ದೊರೆತ ಕ್ರಿ.ಶ.1628ರ ಶಾಸನದಲ್ಲಿ ಈತನ ಉಲ್ಲೇಖವಿದೆ.[142] ವ್ಯಾಪರಿಗಳ ದಾಖಲೆ ಇರುವ ಈ ದಾನಶಾಸನ ಗಮನಿಸಿದಾಗ ಬೆಂಗಳೂರು ಇವನ ಕಾಲಕ್ಕಾಗಲೇ ವ್ಯಾಪಾರ ಕ್ಷೇತ್ರದಲ್ಲಿ ಅಭಿವೃದ್ಧಿ ಹೊಂದುತ್ತಿದ್ದ ನಗರವಾಗಿತ್ತು ಎಂಬ ಅಂಶ ಸ್ಪಷ್ಟವಾಗುತ್ತದೆ. ಹೀಗೆ ನಾಡಪ್ರಭುಗಳ ಆಡಳಿತಕ್ಕೆ ಒಳಪಟ್ಟಿದ್ದ ಬೆಂಗಳೂರನ್ನು ಕ್ರಿ.ಶ.1638ರಲ್ಲಿ ಬಿಜಾಪುರದ ಸೈನ್ಯ ರಣದುಲ್ಲಾಖಾನನ ನೇತೃತ್ವದಲ್ಲಿ ನಾಡಪ್ರಭುಗಳ ರಾಜ್ಯದ ರಾಜಧಾನಿಯಾಗಿದ್ದ ಬೆಂಗಳೂರಿನ ಮೇಲೆ ದಾಳಿ ಮಾಡಿ ತಮ್ಮ ವಶಮಾಡಿಕೊಂಡರು. ಈ ದಾಳಿಯು ನಾಡಪ್ರಭುಗಳ ಆಳ್ವಿಕೆಗೆ ಬಹಳಷ್ಟು ಘಾಸಿಯುಂಟು ಮಾಡಿತು. ನಾಡಪ್ರಭುಗಳು ರಾಜಧಾನಿ ಬೆಂಗಳೂರನ್ನು ತೊರೆದು ತಮ್ಮ ರಾಜ್ಯದ ದಕ್ಷಿಣದ ಅಂಚಿನ ಮಾಗಡಿಗೆ ತಮ್ಮ ಆಡಳಿತ ಸ್ಥಳಾಂತರಿಸಿದರು. ಮಾಗಡಿಯನ್ನು ತಮ್ಮ ಆಡಳಿತದ ಅಂತ್ಯದವರೆಗೂ ರಾಜಧಾನಿಯನ್ನಾಗಿ ಮಾಡಿಕೊಂಡರು. ಕ್ರಿ.ಶ.1638ರಿಂದ ಕ್ರಿ.ಶ.1728ರ ವರೆಗೆ ಮಾಗಡಿಯಿಂದ ಇವರು ರಾಜ್ಯಾಭಾರ ಮಾಡಿದ್ದರಿಂದ ಕೆಲವೊಮ್ಮೆ ಇವರನ್ನು ಮಾಗಡಿ ಪ್ರಭುಗಳೆಂದೂ ಗುರುತಿಸುತ್ತಾರೆ.

ಇಮ್ಮಡಿ ಕೆಂಪೇಗೌಡನ ನಂತರ ಮುಮ್ಮಡಿ ಕೆಂಪೇಗೌಡನು(1658–1678) ಆಳ್ವಿಕೆ ನಡೆಸುತ್ತಾನೆ. ಈತ ಅದ್ವಿತೀಯ ದೈವಭಕ್ತ. ಈತನನ್ನು 'ಮಳೆ ಕೆಂಪರಾಯ' ಎಂತಲೂ ಕರೆಯುತ್ತಾರೆ. ಮುಮ್ಮಡಿ ಕೆಂಪೇಗೌಡರು ಅಧಿಕಾರಕ್ಕೆ ಬಂದ ತಕ್ಷಣ ಮೈಸೂರಿನ ಅರಸರಾದ ದೊಡ್ಡದೇವರಾಜ ಒಡೆಯರ ದಾಳಿಯನ್ನು ಎದುರಿಸಬೇಕಾಯಿತು. ಈ ಯುದ್ಧದಲ್ಲಿ ಕಂದಹಾಳ ಬೆಳವತ್ತಗಳನ್ನು ಕ್ರಿ.ಶ.1660ರಲ್ಲಿ ಅಮೃತ್ತೂರು, ಚಿನ್ನಗರ ಮತ್ತು ಕುಣಿಗಲ್‌ಗಳನ್ನು ಕಳೆದುಕೊಂಡರು. ಮತ್ತೆ ಕುಣಿಗಲ್ ಪ್ರಾಂತ್ಯದ ಹೆಬ್ಬೂರು, ಅಮೃತ್ತೂರು ಪ್ರದೇಶಗಳನ್ನು ದೊಡ್ಡದೇವರಾಜ ಒಡೆಯರು ಯಲಹಂಕ ನಾಡಪ್ರಭುಗಳಿಂದ ಕಿತ್ತುಕೊಂಡರು. ಕ್ರಿ.ಶ.1667ರಲ್ಲಿ ಕುಣಿಗಲ್ ಮತ್ತು ಹುಲಿಯೂರುದುರ್ಗಗಳನ್ನು ಮೈಸೂರು ಅರಸರು ಪಡೆದುಕೊಂಡರು. ಕ್ರಿ.ಶ.1667ರ ನಂತರ ಕ್ರಿ.ಶ.1728ರ ಅವಧಿಯಲ್ಲಿ ಮುಮ್ಮಡಿ ದೊಡ್ಡವೀರಪ್ಪಗೌಡ, ಇಮ್ಮಡಿ ಕೆಂಪವೀರಪ್ಪಗೌಡ ಹಾಗೂ ಮುಮ್ಮಡಿ ಕೆಂಪವೀರಪ್ಪಗೌಡರು ಮಾಗಡಿ ಸಂಸ್ಥಾನ ಅಥವಾ ಯಲಹಂಕ ನಾಡಪ್ರಭುಗಳಾಗಿ ಆಳಿದರು. ಇದರ ತರುವಾಯ ಕ್ರಿ.ಶ.1728ರಲ್ಲಿ ಮೈಸೂರಿನ ರಾಜರಾದ ದೊಡ್ಡದೇವರಾಜ ಒಡೆಯರ ದಳವಾಯಿ ದೇವರಾಜಯ್ಯನು ಮಾಗಡಿಯ ಮೇಲೆ ದಾಳಿಮಾಡಿ ಮುಮ್ಮಡಿ ಕೆಂಪವೀರಪ್ಪಗೌಡರನ್ನು ಬಂಧಿಸಿ ಶ್ರೀರಂಗಪಟ್ಟಣದಲ್ಲಿ ಗೃಹಬಂಧನದಲ್ಲಿರಿಸಿದರು. ಅವರು ಅಲ್ಲಿಯೇ ತಮ್ಮ ಕೊನೆಯ ದಿನಗಳನ್ನು ಕಳೆದರು.[143] ಈತನ ನಂತರ ಮುಮ್ಮಡಿ ಕೆಂಪವೀರಪ್ಪ

ಗೌಡನು ಕ್ರಿ.ಶ.1705ರಲ್ಲಿ ಪಟ್ಟಕ್ಕೆ ಬರುತ್ತಾನೆ. ಈತ ಮಾಗಡಿಯಿಂದ ನೇರವಾಗಿ ಆಳ್ವಿಕೆ ನಡೆಸುತ್ತಾನೆ. ಬೆಂಗಳೂರು ಅಷ್ಟುಹೊತ್ತಿಗಾಗಲೆ ಇವರ ಕೈತಪ್ಪಿ ಹೋಗಿರುತ್ತದೆ.

ಹೀಗೆ ಯಲಹಂಕ ನಾಡಪ್ರಭುಗಳ ರಾಜಕೀಯ ಜೀವನವನ್ನು ಶಾಸನಗಳ ಮೂಲಕ ಅರಿಯಬಹುದು. ನಾಡಪ್ರಭುಗಳು ಸಾಮಂತರಾಗಿ ನಾಯಕತ್ವವನ್ನು ಪ್ರಾರಂಭಿಸಿ ಸಾಮಂತರಾಗಿಯೇ ಉಳಿದುಕೊಂಡರು. ತಮ್ಮ ಸಂಸ್ಥಾನವನ್ನು ಸಾಂಸ್ಕೃತಿಕವಾಗಿ ಪೋಷಿಸಿ, ಬೆಳೆಸಿ ಸರ್ವಾಂಗೀಣ ಅಭಿವೃದ್ಧಿಗೆ ಶ್ರಮವಹಿಸಿದ್ದಾರೆ.

## ಸುಗಟೂರು ಅರಸರು

ಹದಿನೈದನೆಯ ಶತಮಾನದ ಅಂತ್ಯ ಹಾಗೂ ಹದಿನಾರನೆಯ ಶತಮಾನದ ಆದಿಭಾಗದಲ್ಲಿ ಬೆಂಗಳೂರು ಜಿಲ್ಲೆಯ ಕೆಲವು ಭಾಗಗಳನ್ನು ಸುಗಟೂರು ಅರಸು ಮನೆತನವು ಆಳುತ್ತಿತ್ತು. ಸುಗಟೂರು ಅರಸರು ಹೊಯ್ಸಳ ಮತ್ತು ವಿಜಯನಗರದ ಅರಸರ ಕಾಲದಲ್ಲಿ ಪಾಳೆಯಗಾರರಾಗಿ ಆಳುತ್ತಿದ್ದರು. ಸುಗಟೂರು ಕೋಲಾರ ಜಿಲ್ಲೆಯಲ್ಲಿನ ಮುಖ್ಯ ಸ್ಥಳವಾಗಿದೆ. "ಈ ಸಂಸ್ಥಾನವು ತನ್ನ ಔನ್ನತ್ಯ ಕಾಲದಲ್ಲಿ ಕೋಲಾರ ಜಿಲ್ಲೆಯ ಬಹುಭಾಗ ಬೆಂಗಳೂರು ಜಿಲ್ಲೆಯ ಆಗ್ನೇಯ ಭಾಗ ಹಾಗೂ ಅದಕ್ಕೆ ಹೊಂದಿಕೊಂಡಂತೆ ಇರುವ ಇಂದಿನ ತಮಿಳುನಾಡಿನ ಧರ್ಮಗಿರಿ ಜಿಲ್ಲೆಯ ಹೊಸೂರು ಮತ್ತು ಡೆಂಕಣಿಕೋಟೆ ತಾಲೂಕಿನ ಹಲವು ಭಾಗಗಳು ಹಾಗೂ ಈಗಿನ ಆಂಧ್ರಪ್ರದೇಶದ ಚಿತ್ತೂರು ಜಿಲ್ಲೆಯ ಪುಂಗನೂರು ಪ್ರದೇಶಗಳನ್ನು ಒಳಗೊಂಡಿದ್ದಿತು."[144] ಇವರಿಗೆ ಸಂಬಂಧಿಸಿದ ಶಾಸನಗಳು ಬೆಂಗಳೂರು ಸೇರಿದಂತೆ, ಸುತ್ತಮುತ್ತಲ ಪ್ರದೇಶದಲ್ಲಿ ದೊರೆತಿವೆ. ಈ ಅರಸರನ್ನು ಶಾಸನಗಳಲ್ಲಿ ಸದಾಶಿವ ಗೋತ್ರದವರು ಎಂದು ಹೆಸರಿಸಲಾಗಿದೆ. ಈ ಮನೆತನದ ಮೂಲಪುರುಷ ಅಥವಾ ಮೊದಲ ಅರಸ ದೇವಪ್ಪಗೌಡ. ಆದರೆ ಇವನ ಕಾಲದ ಯಾವ ಒಂದು ಶಾಸನವು ದೊರೆತಿಲ್ಲ.

ಕ್ರಿ.ಶ.1559ರ ತಮ್ಮೇಗೌಡನ ಕಾಲದಲ್ಲಿ ದೊರೆತಿರುವ ಶಾಸನಗಳನ್ನು ಅನುಲಕ್ಷಿಸಿ ಹೇಳುವುದಾದರೆ ಸುಗಟೂರು ಅರಸು ರಾಜ್ಯವು ಹೊಸಕೋಟೆ, ಶಿಡ್ಲಘಟ್ಟ, ಕೋಲಾರ, ಮಾಲೂರು, ಆನೇಕಲ್ಲು ತಾಲೂಕಿನವರೆಗೂ ವ್ಯಾಪಿಸಿತ್ತು. ಬೆಂಗಳೂರನ್ನು ನೇರವಾಗಿ ಆಳದಿದ್ದರು, ಇಂದು ಬೆಂಗಳೂರು ಗ್ರಾಮಾಂತರ ಜಿಲ್ಲೆಯಾದ ಹೊಸಕೋಟೆ ಹಾಗೂ ಬೆಂಗಳೂರಿನ ನಗರ ಜಿಲ್ಲೆಗೆ ಸೇರಿದ ಆನೇಕಲ್ಲು ತಾಲೂಕಿನ ಹಲವು ಪ್ರದೇಶಗಳು ಇವರ ನಾಯಕತನಕ್ಕೆ ಸೇರಿತ್ತು. ವಿಜಯನಗರ ಕಾಲದಲ್ಲಿ ಇವರು ಸಾಮಂತ ಅಧಿಕಾರಿಗಳಾಗಿದ್ದರು. ಈ ವಿಷಯವನ್ನು ಹೊಸಕೋಟೆಯ ನಂದಗುಡಿ ಹೋಬಳಿಯಲ್ಲಿ ದೊರೆತ ಶಾಸನವು ತಿಳಿಸುತ್ತದೆ. ಈ ಶಾಸನದಲ್ಲಿ

ಸುಗಟೂರು ಅರಸರು ವಿಜಯನಗರದ ಅರಸು ಸದಾಶಿವರಾಯ ಆಳ್ವಿಕೆ ನಡೆಸುತ್ತಿದ್ದಾಗ, ತಿರುಮಲರಾಯ ಅರಸರ ಕರ್ತವ್ಯಕ್ಕೆ ಇರುವ ಸುಗಟೂರು ತಿಮ್ಮಪ್ಪಗೌಡ ಅಯ್ಯನು[145] ಎಂದಿದೆ.

ಸೂಲಿಬೆಲೆ ಹೋಬಳಿ ಅನುಪುಹಳ್ಳಿಗೆ ಸೇರಿದ ಹುಣಸೇ ತೋಪಿನಲ್ಲಿ ದೊರೆತ ಕ್ರಿ.ಶ.1560ರ ಶಾಸನವೊಂದು 'ಶ್ರೀಮನ್ಮಹಾಮಂಡಲೇಶ್ವರ ಎರಸೋಮರಾಜಯ್ಯನವರಿಗೆ ಪುಣ್ಯವಾಗಬೇಕು ಎಂದು ಸುಗಟೂರ ತಮ್ಮಪ್ಪಗಉಡರು ನೆಲುವಾಗಿಲ ಸ್ಥಳಕ್ಕೆ ಸಲುವ ಅನುಪುಹಳ್ಳಿ ಗ್ರಾಮವನು ಶಿವಗಂಗೆಯ ಗಂಗಾಧರ ಲಿಂಗದ ಅಮೃತ ಪಡಿ ನೈವೇದ್ಯಕ್ಕೆ ದಾನನೀಡಿರುವ' ವಿವರವಿದೆ.[146]

ಹಿರಿಯ ತಮ್ಮೇಗೌಡನ ನಂತರ ಅವನ ಮಗ ಚಿಕ್ಕರಾಯ ತಮ್ಮೇಗೌಡನು ಪಟ್ಟಕ್ಕೆ ಬಂದನು(ಕ್ರಿ.ಶ.1474–1542). ಈತನ ಪರಾಕ್ರಮದ ಕುರುಹುಗಳೆಂಬಂತೆ ವೀರರಿಗೆ ನೆತ್ತರುಕೊಡುಗೆ, ದತ್ತಿಗಳನ್ನು ನೀಡಿದ್ದನ್ನು ಶಾಸನಗಳು ಹೇಳುತ್ತವೆ. ಹೊಸಕೋಟೆ, ಕೋಲಾರ ಸುತ್ತಮುತ್ತಲ ಪ್ರದೇಶಗಳಿಗೆ ಮಾತ್ರ ಸೀಮಿತವಾಗಿದ್ದ ಈ ಅರಸರ ಪ್ರದೇಶ ಇವನ ಕಾಲದಲ್ಲಿ ಬಹುಭಾಗವಾಗಿ ವಿಸ್ತರಿಸಿತು. ಹಾಗೂ ಆನೇಕಲ್ಲು ಇವರ ವಶದಲ್ಲೇ ಇತ್ತು. ಕ್ರಿ.ಶ.1564ರ ಅನುಪುಹಳ್ಳಿಯಲ್ಲಿ ದೊರೆತ ಶಾಸನವು ಈತ ಸದಾಶಿವರಾಯ ಮಹಾರಾಯರ ಆಳ್ವಿಕೆಯ ಸಂದರ್ಭದಲ್ಲಿ ಸುಗುಟೂರಿನ ನಾಯಕನಾಗಿದ್ದ ವಿಷಯ ತಿಳಿಸುತ್ತದೆ. ಸದಾಶಿವ ಗೋತ್ರದ ಮುಮ್ಮಡಿ ಚಿಕ್ಕರಾಯ ತಮ್ಮಪ್ಪ ಗೌಡರೈವ ಪುತ್ರರಾದ ತಮ್ಮಯ್ಯಗೌಡಅಯ್ಯನವರ ಪುತ್ರರಾದ ಚಿಕ್ಕರಾಯ ತಮ್ಮೇಗೌಡರೈಯ್ಯನವರು ಎಂಬ ಸುಗಟೂರು ಅರಸರ ವಂಶಾವಳಿಯ ಬಗ್ಗೆ ಈ ಶಾಸನ ಮಾಹಿತಿಯನ್ನು ನೀಡುತ್ತದೆ.[147]

ಚಿಕ್ಕರಾಯ ತಮ್ಮೇಗೌಡರ ಮಗನಾದ ಇಮ್ಮಡಿ ತಮ್ಮೇಗೌಡನ ಕ್ರಿ.ಶ.1600ರ ಶಾಸನವು ಆನೇಕಲ್ಲು ತಾಲೂಕಿನಲ್ಲಿ ದೊರಕಿದೆ.[148] ಕಾಡುಜಕ್ಕನಹಳ್ಳಿಯನ್ನು ತಿಮ್ಮ ಎಂಬುವನಿಗೆ ನೆತ್ತರು ಕೊಡುಗೆಯಾಗಿ ನೀಡಿದ ವಿವರವಿದೆ. ಮುಮ್ಮಡಿ ಚಿಕ್ಕರಾಯನು ನಂಜಪ್ಪಗೌಡರು ಗೊಲ್ಲ ಬಾಲ ಎಂಬುವನ ಮಗ ಎರಮಾದನಿಗೆ ನೆತ್ತರು ಕೊಡುಗೆಯಾಗಿ ಹೊಲವನ್ನು ಕೊಟ್ಟಿರುವ ವಿವರವಿದೆ.[149] ಸುಗಟೂರು ಅರಸರ ಶಾಸನಗಳು ಹೆಚ್ಚಾಗಿ ನೆತ್ತರು ಕೊಡುಗೆಯ ವಿಷಯವನ್ನು ತಿಳಿಸುತ್ತವೆ.

ಮುಮ್ಮಡಿ ತಮ್ಮೇಗೌಡ(1605–1642) ತನ್ನ ತಂದೆ ಇಮ್ಮಡಿ ತಮ್ಮೇಗೌಡನ ನಂತರ ಅಧಿಕಾರ ವಹಿಸಿಕೊಳ್ಳುತ್ತಾನೆ. ಆನೇಕಲ್ಲು ತಾಲ್ಲೂಕಿನಲ್ಲಿ ಕ್ರಿ.ಶ.1614ರ ಕಾಲಕ್ಕೆ ಸೇರುವ ಈತನ ಒಂದು ದಾನ ಶಾಸನದಲ್ಲಿ 'ಸುಗಟೂರಿನ ನಾಡಪ್ರಭುಗಳಾದ ಚಿಕ್ಕರಾಯ ತಮ್ಮೆಗೌಡರ ಪುತ್ರರಾದ ಇಮ್ಮಡಿ ತಮ್ಮಪ್ಪಗೌಡರ ಪುತ್ರರಾದ ಮುಮ್ಮಡಿ ತಮ್ಮೇಗೌಡರು' ಎಂದಿದೆ.[150]

ಮುಮ್ಮಡಿ ಚಿಕ್ಕರಾಯ ತಮ್ಮೇಗೌಡರ ಆಳ್ವಿಕೆಯನ್ನು ಆನೇಕಲ್ಲಿನ ಬಿದುರುಗೆರೆ ಗ್ರಾಮದಲ್ಲಿ ದೊರೆತ ಕ್ರಿ.ಶ.1640ರ ಶಾಸನವೊಂದು ಹೇಳುತ್ತದೆ.[151] ಹಾಗೂ ಕೂಲಿಸಾಹೇಬರಿಂದ ಬಂದ ತಾಮ್ರಶಾಸನವೊಂದು 'ರಂಗರಾಯ ದೇವರು ಆಳ್ವಿಕೆ ಮಾಡುತ್ತಿದ್ದಾಗ ಸುಗಟೂರು ಮುಮ್ಮಡಿ ಚಿಕ್ಕರಾಯ ತಮ್ಮೇಗೌಡರವರ ಪುತ್ರರಾದ ತಮ್ಮೇಗೌಡರು'[152] ಎಂದು ಈತನ ಆಳ್ವಿಕೆಯನ್ನು ಹೇಳುತ್ತದೆ. ಸುಗಟೂರಿನ ಅರಸರ ವಂಶಾವಳಿ ತಿಳಿಯಲು ಈ ಶಾಸನಗಳು ಸ್ವಲ್ಪ ಮಟ್ಟಿಗೆ ಸಹಾಯಕವಾಗಿವೆ.

ಹೀಗೆ ಸುಗಟೂರು ಅರಸರು ಬೆಂಗಳೂರು ನಗರ ಜಿಲ್ಲೆಯ ಆನೇಕಲ್ಲು ತಾಲೂಕಿನ ಪ್ರದೇಶವನ್ನು ಹೆಚ್ಚು ಕಾಲ ಆಳ್ವಿಕೆ ನಡೆಸಿದ್ದಾರೆ. ವಿಜಯನಗರ ಸಾಮ್ರಾಜ್ಯದಲ್ಲಿ ಸಾಮಂತ ಪ್ರಭುಗಳಾಗಿ ಸೇವೆ ಸಲ್ಲಿಸಿದ್ದಾರೆ.

## ಜಿಗಣಿ ನಾಯಕರು

ಜಿಗಣಿ ಹೋಬಳಿ ಆನೇಕಲ್ಲು ತಾಲ್ಲೂಕಿನಲ್ಲಿದೆ. ಇದು ಇಂದಿನ ಬೆಂಗಳೂರು ದಕ್ಷಿಣದಲ್ಲಿದೆ. ಈ ಪ್ರದೇಶವನ್ನು ಜಿಗಣಿ ನಾಯಕರು ಆಳುತ್ತಿದ್ದರು. ಜಿಗಣಿ ನಾಯಕರ ಎರಡು ಶಾಸನಗಳು ಬೆಂಗಳೂರಿನಲ್ಲಿ ದೊರೆಯುತ್ತವೆ. ಒಂದು ತಮಿಳು ಶಾಸನವಾದರೆ, ಮತ್ತೊಂದು ಕನ್ನಡ ಶಾಸನ. ಕ್ರಿ.ಶ.1302ರ ಆನೇಕಲ್ಲಿನ ದೊಡ್ಡಕೆರೆ ಕಟ್ಟೆ ಮೇಲೆ ಇರುವ ತಮಿಳು ಶಾಸನದಲ್ಲಿ ಜಿಗಣಿ ನಾಯಕ ಎಂಬ ಉಲ್ಲೇಖವಿದೆ.[153] ಈ ಶಾಸನ ಹೊಯ್ಸಳ ದೊರೆ ವೀರಬಲ್ಲಾಳನ ಕಾಲದ್ದು. ಈತ ರಾಜ್ಯಭಾರ ಮಾಡುತ್ತಿದ್ದ ಸಂದರ್ಭದಲ್ಲಿ ವಿಚ್ಚಚಾಯ ನಾಯಕ ಮತ್ತು ಸಿಂಗಯ ನಾಯಕರು ಜಿಗಣಿಯನ್ನು ಆಳುತ್ತಿದ್ದರು ಎಂದಿದೆ.

ಜಿಗಣಿ ಗ್ರಾಮದಲ್ಲೇ ಕ್ರಿ.ಶ.1422ರ ಶಾಸನವೊಂದು ದೊರೆತಿದೆ. ವಿಜಯನಗರ ಸಾಮ್ರಾಜ್ಯದ ಅರಸ ವೀರ ವಿಜಯರಾಯನ ಕಾಲದ ಶಾಸನವಿದು. ಮಂಚಯನಾಯಕರ ಮಕ್ಕಳಾದ ನಂಜಯ್ಯ, ಮಾದೇವನಾಯಕರು, ಚಿಕ್ಕ ಸಂಗಮ ನಾಯಕರು ಜಿಗಣಿಯಲ್ಲಿ ಸಕಲ ಸಾಮ್ರಾಜ್ಯವನ್ನು ಆಳುತ್ತಿದ್ದರು ಎಂದಿದೆ.[154] ಬೆಂಗಳೂರು ನಗರ ಜಿಲ್ಲೆಯಲ್ಲಿ ಜಿಗಣಿ ನಾಯಕರಿಗೆ ಸಂಬಂಧಿಸಿದಂತೆ ದೊರೆತಿರುವ ಈ ಶಾಸನಗಳಿಂದ ಇವರ ಆಳ್ವಿಕೆ ಇತ್ತು ಎಂಬುದನ್ನು ಗುರುತಿಸಬಹುದು. ಈ ಶಾಸನಗಳ ಆಧಾರದ ಮೇಲೆ ಈ ನಾಯಕರು ಹೊಯ್ಸಳರ ಕಾಲದಿಂದ ವಿಜಯನಗರ ಕಾಲದವರೆಗೂ ಜಿಗಣಿ ಪ್ರದೇಶವನ್ನು ಆಳುತ್ತಿದ್ದರು ಎಂದು ಹೇಳಬಹುದು.

## ಮರಾಠರು

ಮರಾಠ ಸರದಾರರು ಕರ್ನಾಟಕದಲ್ಲಿ ಆಳ್ವಿಕೆ ನಡೆಸಿದ್ದರು ಎಂಬುದಕ್ಕೆ ಹಲವು ಐತಿಹಾಸಿಕ ದಾಖಲೆಗಳಿವೆ. ಅಂತಹ ದಾಖಲೆಗಳಲ್ಲಿ ಬಖೈರುಗಳು (ಐತಿಹಾಸಿಕ ವಿವರಗಳನ್ನೊಳಗೊಂಡ ಗದ್ಯರೂಪದ ಬರಹವನ್ನು 'ಬಖೈರು' ಎಂದು ಕರೆಯಲಾಗುತ್ತದೆ.) ಮತ್ತು ಶಾಸನಗಳನ್ನು ಹೆಸರಿಸಬಹುದು. ಬೆಂಗಳೂರಿನ ಬಖೈರಿನ ಪ್ರಕಾರ, ಇಮ್ಮಡಿ ಏಕೋಜಿ, ಅವನ ತಂದೆ ಸೂರತ್ ಸಿಂಗ್, ಅವನ ತಂದೆ ಶಾಂಭೋಜಿ, ಅವನ ತಂದೆ ಶಹಜೀ ಮತ್ತು ಶಿವಾಜಿರಾಜಾ ಮತ್ತು ಆತನ ವಂಶಸ್ಥರು ಬೆಂಗಳೂರಿಗೆ ಬಂದು, ಬೆಂಗಳೂರು ಪಾಳೇಗಾರ ಇಮ್ಮಡಿ ಕೆಂಪೇಗೌಡರಿಂದ ಶಕ ವರ್ಷ 1528ರ ಪ್ರಭವ ಸಂವತ್ಸರದಲ್ಲಿ ಅಂದರೆ ಕ್ರಿ.ಶ.1606ರಲ್ಲಿ ಬೆಂಗಳೂರನ್ನು ವಶಪಡಿಸಿಕೊಂಡರು. ಇಮ್ಮಡಿ ಕೆಂಪೇಗೌಡನು ಮಾಗಡಿಗೆ ಹೊರಟು ಹೋದನು. ಕ್ರಿ.ಶ.1686ರಿಂದ ಮರಾಠ ವಂಶದ ನಾಲ್ಕು ತಲೆಮಾರಿನವರು ಒಟ್ಟು 81 ವರ್ಷಗಳ ಕಾಲ ಬೆಂಗಳೂರನ್ನು ಆಳಿದರು ಎಂದಿದೆ.[155]

ನಗರ ಜಿಲ್ಲೆಯಲ್ಲಿ ದೊರೆತಿರುವ ಮರಾಠರ ಶಾಸನಗಳನ್ನು ಗಮನಿಸುವುದಾದರೆ ಇವು ಬಹುತೇಕ ದೇವಾಲಯ ಮತ್ತು ಕೆರೆಗಳಿಗೆ ನೀಡಿರುವ ದಾನದ ವಿವರವಿರುವ ಶಾಸನವಾಗಿವೆ. ಕ್ರಿ.ಶ.1544ರ ಅಲ್ಲಾಳಸಂದ್ರ ಗ್ರಾಮದ ಊರ ಬಾಗಿಲ ಬಳಿ ಉತ್ತರ ಕಡೆ ಇರುವ ಶಿಲಾಶಾಸನ ಮರಾಠರ ಕಾಲದ್ದು. ಮರಾಠರ ವಿಠಲೇಶ್ವರದೇವ ಮಹಾ ಅರಸುಗಳಿಗೆ ಒಳ್ಳೆಯದಾಗಲಿ ಎಂದು ಅಲ್ಲಾಳಸಂದ್ರ ಗ್ರಾಮವನ್ನು ಜೆಕ್ಕೂರಿನ ಅಲ್ಲಾಳನಾಥ ದೇವರಿಗೆ ದಾನ ನೀಡಲಾಗಿದೆ.[156] ಅಂದರೆ ವಿಜಯನಗರ ಕಾಲಕ್ಕಾಗಲೆ ಮರಾಠರಿಗೂ ಬೆಂಗಳೂರಿಗೂ ಸಂಬಂಧವಿತ್ತು ಎಂದು ತಿಳಿಯುತ್ತದೆ.

ವಿಜಯನಗರದ ಪತನದ ನಂತರ ಮರಾಠರ ಉಲ್ಲೇಖ ಸಿಗುವುದು ಷಾಹಜಿಯ ಬಗ್ಗೆ. ಬೆಂಗಳೂರಿನ ಜಹಗೀರದಾರನಾಗಿದ್ದ ಷಾಹಜಿಯು(1639–64) ಬಹಳ ದಕ್ಷನೂ, ಶೂರನೂ, ಉತ್ತಮ ರಾಜಕಾರಣಿಯೂ ಆಗಿದ್ದನು. ಷಾಹಜಿಯ ಹಿರಿಯ ಮಗ ಸಂಬಾಜಿರಾಯನ ಕ್ರಿ.ಶ.1647ರ ಶಾಸನವೊಂದರಲ್ಲಿ ಈತ ಚನ್ನಬಸವಪ್ಪ ಒಡೆರಿಗೆ ಹಂಚಿಪುರವನ್ನು ಕೊಟ್ಟಿರುವುದಾಗಿ ಹೇಳಿದೆ.[157] ಮರಾಠರ ಕಾಲದ ಮತ್ತೊಂದು ಶಾಸನ ಲಕ್ಕೂರಿನಲ್ಲಿ ದೊರೆತಿದೆ. ಕ್ರಿ.ಶ.1657ರಲ್ಲಿ ಅಜಾರಖಾನ್ ಮಹಾರಾಜ ಶ್ರೀ ಸಹುಜಿರಾಜ ಸಾಹೇಬ್‌ಗೆ ಒಳಿತಾಗಲಿ ಎಂದು ಲಕ್ಕೂರು ಹೊಲಗದ್ದೆಯನ್ನು ನೀಡಬೇಕೆಂದು ಚಂದಖಾನವರಿಗೆ ಅಪ್ಪಣೆ ನೀಡಿರುವ ಶಾಸನವಾಗಿದೆ. ಮರಾಠರು ತಮ್ಮ ಆಡಳಿತಾವಧಿಯಲ್ಲಿ ಗ್ರಾಮ, ಹಳ್ಳಿಯನ್ನು ದಾನವಾಗಿ ನೀಡಿರುವ ಶಾಸನಗಳೇ ಹೆಚ್ಚು ದೊರೆಯುತ್ತವೆ.

ಕ್ರಿ.ಶ.1727ರ ಶಾಸನವು ಮನಕೋಜಿರಾಜ ಸಾಹೇಬ ಹಡಕನಹಳ್ಳಿ ಭೈರೇಗೌಡನಿಗೆ ಕೆರೆಯನ್ನು ಕೊಡುಗೆ ನೀಡಿರುವುದನ್ನು ತಿಳಿಸುತ್ತದೆ.[158] ಹಾಗೂ ಹೊಸಕೋಟೆಯಲ್ಲಿ ಅನುಜಿಗೆ ಸಂಬಂಧಿಸಿದ ಎರಡು ಶಾಸನಗಳು ದೊರೆತಿವೆ. ಕ್ರಿ.ಶ.1728ಕ್ಕೆ ಸೇರುವ ಈ ಶಾಸನಗಳು ಅನುಜಿ ಶೇಷೋ ಪಂತರಿಗೆ ಸೂಲಿಬೆಲೆ ಊರಿನ ಮುಂದಿನ ದೊಡ್ಡಕೆರೆ ಮತ್ತು ವೀರಣ್ಣನ ಕೆರೆಯನ್ನು ಕಟ್ಟಿಸಿ ನೀಡಿದ್ದನ್ನು ತಿಳಿಸುತ್ತವೆ[159]

ಷಾಹಜಿಯ ಮತ್ತೊಬ್ಬ ಮಗ ಏಕೋಜಿಯ ಕಾಲದ ಶಾಸನವು ಮಲ್ಲೇಶ್ವರದಲ್ಲಿ ದೊರಕಿದೆ. ಇಂದಿನ ಮಲ್ಲೇಶ್ವರದಲ್ಲಿರುವ ಕಾಡುಮಲ್ಲಿಕಾರ್ಜುನ ದೇವರ ದೇವಾಲಯಕ್ಕೆ ವರ್ತಕರು ದಾನ ನೀಡಿರುವ ಉಲ್ಲೇಖವಿದೆ. ಈ ಕಾಡುಮಲ್ಲಿಕಾರ್ಜುನ ದೇವಾಲಯವನ್ನು ವೆಂಕಾಜಿ ಅಥವಾ ಏಕೋಜಿಯೇ ಕಟ್ಟಿಸಿದನೆಂದು ಪ್ರತೀತಿ ಇದೆ. ಒಂದು ದಿನ ವೆಂಕಾಜಿಯು ಬೆಂಗಳೂರಿನ ಉತ್ತರ ದಿಕ್ಕಿನಲ್ಲಿರುವ ಮಲ್ಲಾಪುರ ಎಂಬ ಹಳ್ಳಿಯ ಬಳಿ ಕುದುರೆಯ ಮೇಲೆ ಕುಳಿತು ಹೋಗುತ್ತಿದ್ದನು. ಆ ಹಳ್ಳಿಯ ಸುತ್ತಲೂ ಕಾಡು ಬೆಳೆದಿತ್ತು. ಒಂದು ಎತ್ತರವಾದ ಸ್ಥಳದಲ್ಲಿ ನಾಲ್ಕಾರು ದೊಡ್ಡಮರಗಳ ನಡುವೆ ಒಂದು ಶಿವಲಿಂಗ ಅಡಗಿತ್ತು. ಊರಿನ ಜನರು ವೆಂಕಾಜಿಗೆ ಅದನ್ನು ತೋರಿಸಿ, ಈ ಉದ್ಭವ ಲಿಂಗಕ್ಕೆ ಒಂದು ಗುಡಿ ಕಟ್ಟಿಸಿಕೊಡಿರೆಂದು ಬೇಡಿಕೊಂಡರು. ವೆಂಕಾಜಿಯು ಆ ಉದ್ಭವ ಲಿಂಗವಿದ್ದ ಕಡೆಯಲ್ಲಿಯೇ ಒಂದು ಚಿಕ್ಕ ಗುಡಿಯನ್ನು ಕಟ್ಟಿಸಿಕೊಟ್ಟನು ಎಂಬ ಐತಿಹ್ಯಗಳಿವೆ.[160] ಈ ಕತೆ ನಿಜವೆಂಬುದಕ್ಕೆ ಯಾವುದೇ ಸಾಕ್ಷ್ಯಾಧಾರಗಳಿಲ್ಲದಿದ್ದರೂ ಈ ದೇವಾಲಯಕ್ಕೆ 'ಮೇದರನಿಂಗನಹಳ್ಳಿ' ಎಂಬ ಗ್ರಾಮವನ್ನು ದಾನವಾಗಿ ಕೊಟ್ಟಿರುವ ವಿಷಯ ಮಲ್ಲೇಶ್ವರ ದೇವಾಲಯದಲ್ಲಿರುವ ಬಂಡೆಯ ಮೇಲೆ ಇರುವ ಶಾಸನದಿಂದ ತಿಳಿಯುತ್ತದೆ. ಈ ಶಾಸನದಲ್ಲಿ ಉಕ್ತವಾಗಿರುವ ಮಲ್ಲಾಪುರವೇ ಈಗಿನ ಮಲ್ಲೇಶ್ವರವಾಗಿದೆ.

ಷಾಹಜಿಯ ಮರಣದನಂತರ ಬೆಂಗಳೂರಿನ ಒಡೆತನವನ್ನು ಏಕೋಜಿ ವಹಿಸಿಕೊಂಡನು. ಮುಂದೆ ಬೆಂಗಳೂರನ್ನು ವೆಂಕೋಜಿ ಯಾರಿಗಾದರು ಮಾರಾಟ ಮಾಡಿಬಿಡಬೇಕೆಂದು ನಿರ್ಧರಿಸಿಕೊಂಡನು. ಈ ವಿಷಯ ಹೇಗೋ ಮೈಸೂರಿನ ಅರಸನಾದ ಚಿಕ್ಕದೇವರಾಜ ಒಡೆಯರ ಕಿವಿಗೆ ಬಿದ್ದಿತು. ರಾಜಧಾನಿಯಾದ ಶ್ರೀರಂಗಪಟ್ಟಣದಲ್ಲಿದ್ದ ಅವರು ಇಂತಹ ಸದಾವಕಾಶವನ್ನು ಕಳೆದುಕೊಳ್ಳಬಾರದೆಂದೂ, ತಾವೇ ಬೆಂಗಳೂರನ್ನು ಕ್ರಯಕ್ಕೆ ತೆಗೆದು ಕೊಳ್ಳಬೇಕೆಂದು ನಿರ್ಧರಿಸಿದರು. ಮುಂದೆ ವೆಂಕಾಜಿಗೆ ಕೊಡಲೊಪ್ಪಿದ ಮೂರು ಲಕ್ಷ ರೂಪಾಯಿಗಳನ್ನು ಚಿಕ್ಕದೇವರಾಜರು ಖಾಸಿಂಖಾನನಿಗೆ ಕೊಟ್ಟು ಬೆಂಗಳೂರನ್ನು ತಮ್ಮ ವಶಕ್ಕೆ ತೆಗೆದುಕೊಂಡರು.[161] ಏಕೋಜಿಯು ತಂಜಾವೂರಿಗೆ ಹಿಂದಿರುಗಿದನು. ಬೆಂಗಳೂರು ಜಿಲ್ಲೆಯನ್ನು ಬಿಟ್ಟು ಹೊಸಕೋಟೆ ಮುಂತಾದವುಗಳನ್ನೊಳಗೊಂಡ ಸಿರಾ ಸುಭವನ್ನು ಕಾಸಿಂ ಖಾನನು ಆಳಿದನು. ಅಂದಿನಿಂದ

ಬೆಂಗಳೂರು ಪ್ರದೇಶವನ್ನು ಚಿಕ್ಕದೇವರಾಯ ಮತ್ತು ಇತರ ಮೈಸೂರರಸರ ಅಧೀನದಲ್ಲಿ ಪಾರುಪತ್ತೇದಾರರು ನಿರ್ವಹಿಸತೊಡಗಿದರು.[162] ಹೀಗೆ ಬೆಂಗಳೂರು ಮರಾಠರಿಂದ ಮೈಸೂರು ಒಡೆಯರ ಅಧೀನಕ್ಕೆ ಸೇರಿಕೊಂಡಿತು.

## ಮೈಸೂರು ಅರಸರು

ವಿಜಯನಗರ ಸಾಮ್ರಾಜ್ಯವು ಪತನವಾದನಂತರ, ಅವರ ಸಾಮಂತ ರಾಜ್ಯಗಳಾಗಿದ್ದ ಹಲವಾರು ಚಿಕ್ಕಪುಟ್ಟ ಸಂಸ್ಥಾನಗಳು ಸ್ವತಂತ್ರವಾಗಿ ತಲೆಯೆತ್ತಿ ನಿಂತವು. ಹಾಗೇ ನೆಲೆಯೂರಿ ತಲೆಎತ್ತಿದ್ದ ಸಂಸ್ಥಾನಗಳಲ್ಲಿ ಮೈಸೂರು ಸಂಸ್ಥಾನವೂ ಒಂದು. ವಿಜಯನಗರದ ಸಾಮಂತ ರಾಜ್ಯವಾಗಿದ್ದ ಸಣ್ಣ ಮೈಸೂರು ಸಂಸ್ಥಾನವು ಮುಂದೆ ಬೃಹದಾಕಾರವಾಗಿ ಬೆಳೆಯಿತು. ಮೈಸೂರು ಒಡೆಯರ ಮೂಲ ಪುರುಷ ಆತ್ರೇಯಗೋತ್ರದ ಯದುರಾಯರಿಂದ ಪ್ರಾರಂಭವಾಗಿ ಕೊನೆಯ ಮಹಾರಾಜರಾದ ಜಯಚಾಮರಾಜೇಂದ್ರ ಒಡೆಯರವರೆಗೆ ಸುಮಾರು 25 ಮಂದಿ ರಾಜರುಗಳು ಸುಮಾರು 550 ವರ್ಷಗಳಕಾಲ ರಾಜ್ಯಭಾರ ನಡೆಸಿದರು. ಪ್ರಾರಂಭದ ಒಡೆಯರ ಯಾವ ಶಾಸನವು ಬೆಂಗಳೂರಿನಲ್ಲಿ ದೊರೆತಿಲ್ಲ. ಮೈಸೂರು ಸಂಸ್ಥಾನದ ಹದಿನಾಲ್ಕನೆಯ ಅರಸರಾದ ಚಿಕ್ಕದೇವರಾಜ ಒಡೆಯರು (1672–1704) ಅತ್ಯಂತ ದಕ್ಷ ಹಾಗೂ ಸಮರ್ಥ ಆಡಳಿತಗಾರರಾಗಿದ್ದರು. ಇವರ ಕಾಲದಲ್ಲಿ ಮೈಸೂರು ರಾಜ್ಯವು ವಿಸ್ತಾರವಾಗಿ ಬೆಳೆಯಿತು.

ಕ್ರಿ.ಶ.1687ರಲ್ಲಿ ಮೊಗಲರು ಬೆಂಗಳೂರನ್ನು ವಶಪಡಿಸಿಕೊಂಡು ಸುಮಾರು ಮೂರು ವರ್ಷಗಳ ಕಾಲ ಸಿರಾ ಪ್ರಾಂತ್ಯದ ಮೊಗಲ್ ಸುಬೇದಾರನ ಅಧೀನದಲ್ಲಿತ್ತು. ಕ್ರಿ.ಶ.1690ರಲ್ಲಿ ಸಿರಾ ಸುಬೇದಾರ್ ಬೆಂಗಳೂರನ್ನು ಚಿಕ್ಕದೇವರಾಯ ಒಡೆಯರಿಗೆ ಮೂರು ಲಕ್ಷ ಪಗೋಡಗಳಿಗೆ(1673–1704) ಮಾರಾಟ ಮಾಡಿದ. ಹೀಗೆ ಬೆಂಗಳೂರು ಮೈಸೂರು ರಾಜ್ಯದ ಭಾಗವಾಯಿತು. ಚಿಕ್ಕದೇವರಾಜ ಒಡೆಯರು ಬೆಂಗಳೂರನ್ನು ಕ್ರಯಕ್ಕೆ ಪಡೆದ ಮೇಲೆ ಬೆಂಗಳೂರಿನಲ್ಲಿ ಹಲವು ಸುಧಾರಣೆಗಳನ್ನು ತಂದರು. ಹಿಂದೆ ಕೆಂಪೇಗೌಡರು ಕಟ್ಟಿಸಿದ ಕೋಟೆಯ ದಕ್ಷಿಣಕ್ಕೆ ತಗಲಿಯೇ ಒಂದು ಕಿರಿದಾದ ಆದರೆ ಧೀರ್ಘವೃತ್ತಾಕಾರದ ಬಲವಾದ ಮಣ್ಣಿನ ಕೋಟೆ ಕಟ್ಟಿಸಿದನು. ಈಗ ಕಾಣುವ ಹಳೆಯ ಕೋಟೆಯ ಹೆಬ್ಬಾಗಿಲು ಈ ಹೊಸದಾಗಿ ಕಟ್ಟಿಸಿದ ಕೋಟೆಯ ಪಕ್ಕದಲ್ಲೇ ಇತ್ತು. ಹನ್ನೆರಡು ಹೋಬಳಿಗಳನ್ನು ಒಳಗೊಂಡ ಬೆಂಗಳೂರು ಪ್ರದೇಶವನ್ನು ನೋಡಿಕೊಳ್ಳಲು ಚಿಕ್ಕದೇವರಾಯನು ದಳವಾಯಿ ದೊಡ್ಡಯ್ಯ ಎಂಬುವನನ್ನು ನೇಮಿಸಿದ್ದ. ಬೆಂಗಳೂರಿನ ವ್ಯಾಪಾರ ಕೈಗಾರಿಕೆಗಳನ್ನು ಬೆಳೆಸಲು ವಿಶೇಷ ಗಮನ ನೀಡಿದ. ತಮಿಳು ನಾಡಿನ ಬಾರಾಮಹಲ್ ನಿಂದ ನೂರಾರು ನೇಕಾರರನ್ನು ತಂದು ಬೆಂಗಳೂರಿನಲ್ಲಿ ನೆಲೆಗೊಳಿಸಿದನೆಂಬ ಐತಿಹ್ಯವೂ ಇದೆ.[163]

ಮೈಸೂರು ಅರಸರು ದಳವಾಯಿ ದೊಡ್ಡಯ್ಯನ ನಂತರ ಈತನ ಚಿಕ್ಕಪ್ಪನಾದ ಮಾಲಾರಂಗಯ್ಯನು ಜಿಲ್ಲೆಯ ಆಡಳಿತವನ್ನು ನಿರ್ವಹಿಸಿದನು. ಈತನ ನಿರ್ವಹಣೆಯ ಕಾಲದಲ್ಲಿ ವ್ಯಾಪಾರ ವ್ಯವಹಾರವನ್ನು ಪ್ರೋತ್ಸಾಹಿಸಲಾಯಿತು. ನಂತರ ಮೈಸೂರು ದೊರೆಗಳ ಸಂಬಂಧಿಯಾದ ಗುರಿಕಾರ ಮಲ್ಲರಾಜಯ್ಯನು ಪಾರುಪತ್ತೇಗಾರನಾಗಿ ಎರಡು ವರ್ಷಗಳ ಕಾಲ ಈ ಜಿಲ್ಲೆಯನ್ನು ಆಳ್ವಿಕೆ ಮಾಡಿದನು. ನಂತರ ದಳವಾಯಿ ಕಳಲೆ ನಂಜರಾಜಯ್ಯ ಸ್ವತಃ ತಾನೇ ಬೆಂಗಳೂರಿಗೆ ಬಂದು ವ್ಯಾಪಾರಿಗಳನ್ನು ಪ್ರೋತ್ಸಾಹಿಸಿ ಎಂಟು ವರ್ಷಗಳ ಕಾಲ ಅಧಿಕಾರಿಯಾಗಿದ್ದನು. ಮುಂದೆ ಕಂಠೀರವಯ್ಯ ಎರಡು ವರ್ಷಗಳ ಕಾಲ ಈ ಪ್ರದೇಶದ ವ್ಯವಸ್ಥಾಪಕನಾದನು. ಲಿಂಗರಾಜಯ್ಯನು ಈ ಪ್ರದೇಶವನ್ನು ಆಳಿದನು. ಬೆಂಗಳೂರಿನ ಕಂದಾಚಾರದ ಶಾನುಭೋಗನಾದ ದಾಸಪ್ಪನ ಮಗನಾದ ಹೇಬಣ್ಣನು ಮೈಸೂರು ದೊರೆಗಳ ಪ್ರೀತಿಗೆ ಪಾತ್ರನಾಗಿ ಈ ಪ್ರದೇಶದ ಪಾರುಪತ್ಯವನ್ನು ವಹಿಸಿದನು. ಮೈಸೂರಿನಲ್ಲಿ ಚಿಕ್ಕದೇವರಾಜ ಒಡೆಯರನ್ನು ಆಳ್ವಿಕೆಯಿಂದ ಕೆಳಗಿಳಿಸಿ ಕಂಠೀರವ ನರಸರಾಜ ಒಡೆಯರ ಆಳ್ವಿಕೆ ಪ್ರಾರಂಭವಾಯಿತು. ಈ ಸಂದರ್ಭದಲ್ಲಿ ವೆಂಕಣ್ಣನು ಬೆಂಗಳೂರಿನ ಪಾರುಪತ್ತೇಗಾರನಾದನು. ಆನಂತರ ಸುಂಗಯ್ಯ ಎಂಬುವನು ಎರಡು ವರ್ಷಗಳಕಾಲ, ಉಗ್ರಾಣ ಸುಬ್ರಾಯ, ಬೇಲೂರ್ ವೆಂಕಣ್ಣ, ಸುಂಕದ ಲಕ್ಷ್ಮೀರಮಣಯ್ಯ, ಕಸಬಾ ವೆಂಕಟಗಿರಿಯಯ್ಯ, ಅಪ್ಪಾರೆಡ್ಡಿ ಕೆಂಪೇಗೌಡ, ಅನಂತಗಿರಿ ದೇವರಾಜಯ್ಯ, ಅಪ್ಪಾರೆಡ್ಡಿ ಲಿಂಗನರಸಯ್ಯ, ಕೋರ ದಾಸಪ್ಪ, ಕಂಚಬಸೆಟ್ಟಿ ಕ್ರಮವಾಗಿ ಒಂದೊಂದು ವರ್ಷಗಳ ಕಾಲ ಆಳ್ವಿಕೆ ನಡೆಸಿದರು. ಕಂಚಬಸೆಟ್ಟಿಯು ಆಡಳಿತ ನಿರ್ವಹಣೆಯಲ್ಲಿ ಉತ್ತಮವಾಗಿಲ್ಲದಿದ್ದರಿಂದ ಚನ್ನರಾಜಯ್ಯ, ತಿಮ್ಮರಾಜಯ್ಯರು ಅಧಿಕಾರಿಗಳಾದರು.[164] ಹೀಗೆ ಮೈಸೂರು ಅರಸರು ಬೆಂಗಳೂರು ಜಿಲ್ಲೆಯನ್ನು ಸುಮಾರು ಅರವತ್ತೆಂಟು ವರ್ಷಗಳ ಕಾಲ ಆಳಿದರು. ಕ್ರಿ.ಶ.1698ರ ಚಿಕ್ಕದೇವರಾಜ ಒಡೆಯರ ಕಾಲದ ಶಾಸನದಲ್ಲಿ ದೇವರ ಪ್ರತಿಷ್ಠಾಪನೆ ಮಾಡಿಸಿದ್ದರ ವಿವರವಿದೆ.[165] ಈತನ ಮತ್ತೊಂದು ಶಾಸನ ಅಕ್ಕತಂಗಿಯರ ಡೊಣೇ ಬಳಿ ಅರೇಬಂಡೇ ಮೇಲಿದೆ.[166] ಈ ಶಾಸನ ಕ್ರಿ.ಶ.1698ರ ಕಾಲದ್ದಾಗಿದೆ. ಗಿರಿದುರ್ಗಕ್ಕೆ ಕಲ್ಲು ಕೋಟೆ ಕಟ್ಟುವುದಕ್ಕೆ ಆರಂಭ ಮಾಡಿರುವ ವಿಷಯ. ಹಾಗೂ ಈಗಾಗಲೇ ಪೂರ್ವದಿಕ್ಕಿನ ಊರಬಾಗಿಲು ಪೂರ್ಣವಾಗಿರುವ ವಿಷಯವನ್ನು ತಿಳಿಸುತ್ತದೆ. ಆದರೆ ಇದು ಯಾವ ಗಿರಿದುರ್ಗ ಎಂಬ ವಿಷಯ ತಿಳಿಯುವುದಿಲ್ಲ.

ಚಿಕ್ಕದೇವರಾಜನ ಮಗ ಶ್ರೀ ಕಂಠೀರವ ನರಸರಾಜ ಒಡೆಯರ(1704–1713) ಶಾಸನವೊಂದು ಬೆಂಗಳೂರಿನಲ್ಲಿದೆ. ಕ್ರಿ.ಶ.1705ರ ಈ ಶಾಸನವು 'ಶ್ರೀದೇವರಾಜ ಒಡೆಯನವರ ಪುತ್ರರಾದ ಶ್ರೀವೀರ ಚಿಕ್ಕದೇವ ಮಹಾರಾಜ ಒಡೆಯರವರ ಪುತ್ರರಾದ ಶ್ರೀಕಂಠೀರವ ನರಸರಾಜ

ಒಡೆಯರವರು ಶ್ರೀರಂಗ ಪಟ್ಟಣದ ಸಿಂಹಾಸನಾರೂಢರಾಗಿ ರಾಜ್ಯಾಭಾರ ಮಾಡುತ್ತಿದ್ದು ತಮ್ಮ ಆಳ್ವಿಕೆಗೆ ಸಲ್ಲುವ ಬೆಂಗಳೂರು ಕೋಟೆಯ ಒಳಗೆ ತಮ್ಮ ಅಪ್ಪಾಜಿಯವರು ಕಟ್ಟಿಸಿರುವ ವೆಂಕಟೇಶ್ವರ ದೇವಸ್ಥಾನಕ್ಕೆ ದಾನ ನೀಡಿರುವ ಶಾಸನವಾಗಿದೆ.'[167] ಇಮ್ಮಡಿ ಕೃಷ್ಣರಾಜ ಒಡೆಯರ್(1734–1766) ರವರ ಶಾಸನವು ಬಿಂಗೀಪುರ ಗ್ರಾಮದಲ್ಲಿ ದೊರಕಿದೆ. ಇದು ಕೃಷ್ಣರಾಜ ಒಡೆಯರ್ ಅತ್‌ವಲ್‌ಶಾಹಗೆ ಬರೆಸಿಕೊಟ್ಟ ತಾಮ್ರಶಾಸನವಾಗಿದೆ. ಮುಸ್ಲಿಂರಿಗೆ ಬೆಂಗಳೂರ ಸ್ಥಳದ ಜಿಗಣಿ ಹೋಬಳಿಯ ಬಿಂಗೀಪುರ ಗ್ರಾಮದ ಹುಟ್ಟುವಳಿಯನ್ನು ಎರಡು ಸಾವಿರ ಕ್ರಯಕ್ಕೆ ಹೈದರಲಿ ಬಾದುರನು ಪಡೆದಿದ್ದ ಕಾರಣ ಈ ಗ್ರಾಮವನ್ನು ದಾನ ನೀಡಬೇಕು ಎಂದಿದೆ.[168]

ಆನೇಕಲ್ಲು ತಾಲ್ಲೂಕಿನ ವಾಜರಹಳ್ಳಿಯ ಬಂಡೆ ಮೇಲೆ ಕ್ರಿ.ಶ.1765ರ ಶಾಸನವಿದೆ. ಮಹಿಸೂರು ನಗರದ ಸಿಂಹಾಸನದ ಆಳ್ವಿಕೆಗೆ ಸಲ್ಲುವ ಬೆಂಗಳೂರು ವಳಿತದ ಜಿಗಣಿ ಹೋಬಳಿ ವಾಜರಹಳ್ಳಿ ಎಂದಿದೆ. ಇದು ಯಾವ ಅರಸನ ಕಾಲದ್ದು ಎಂಬುದು ತಿಳಿಯುವುದಿಲ್ಲ. ಆದರೆ ಮೈಸೂರು ಸಂಸ್ಥಾನದ ಆಳ್ವಿಕೆಗೆ ಬೆಂಗಳೂರು ಸೇರಿತ್ತು ಎಂಬುದನ್ನು ತಿಳಿಸುತ್ತದೆ.

## ಹೈದರ್–ಅಲಿ

ಕರ್ನಾಟಕದ ಇತಿಹಾಸದಲ್ಲಿ ಹೈದರಾಲಿಯ ಆಳ್ವಿಕೆ ಅತ್ಯಂತ ಮಹತ್ವಪೂರ್ಣವಾದುದು. ಈತ ಮೈಸೂರು ರಾಜ್ಯದ ವಿಸ್ತರಣೆಯಲ್ಲಿ ಪ್ರಮುಖ ಪಾತ್ರವನ್ನು ವಹಿಸಿದ್ದನು. ಮೈಸೂರಿನ ರಾಜಕೀಯ ರಂಗಕ್ಕೆ ಹೈದರನ ಕೊಡುಗೆ ಅಪಾರ. ಈತನ ನಿಷ್ಠೆಗೆ ಚಿಕ್ಕ ಕೃಷ್ಣರಾಜ ಒಡೆಯರು ಹೈದರನಿಗೆ ಹೊಸ ಕೋಟೆ, ಕೋಲಾರ, ದೊಡ್ಡಬಳ್ಳಾಪುರಗಳ ಜೊತೆಗೆ ಬೆಂಗಳೂರನ್ನೂ ಜಹಗೀರಾಗಿ ಕೊಟ್ಟರು. ಇದೇ ಕಾರಣದಿಂದಲೇ ಹೈದರನಿಗೆ ಬೆಂಗಳೂರಿನ ಮೇಲೆ ಹೆಚ್ಚಿನ ಅಭಿಮಾನ, ವ್ಯಾಮೋಹ ಹಾಗೂ ಆಸಕ್ತಿ.[169] ಹೀಗೆ ಎರಡನೇ ಕೃಷ್ಣರಾಜ ಒಡೆಯರಿಂದ ಕ್ರಿ.ಶ.1759ರಲ್ಲಿ ಹೈದರನು ಬೆಂಗಳೂರನ್ನು ಜಹಗೀರಾಗಿ ಪಡೆದು ಬೆಂಗಳೂರನ್ನು ಸೈನ್ಯ ಪಟ್ಟಣವಾಗಿ ಮಾಡಿದ. ಕ್ರಿ.ಶ.1762ರಲ್ಲಿ ಸಿರಾವನ್ನು ಗೆದ್ದು ಅದರ ನವಾಬನಾದ. ಚಿಕ್ಕಬಳ್ಳಾಪುರ, ಮಡಕಸಿರಾ, ದೊಡ್ಡಬಳ್ಳಾಪುರ, ಪೆನುಕೊಂಡ ಇವುಗಳನ್ನೆಲ್ಲಾ ಗೆದ್ದ. ಬೆಂಗಳೂರಲ್ಲಿ ಚಿಕ್ಕದೇವರಾಯ ಕಟ್ಟಿಸಿದ್ದ ಕೋಟೆಯನ್ನು ಶಿಲಾಮಯವಾಗಿ ಮಾಡಿ ಭದ್ರಪಡಿಸಿದ(1762). ಬೆಂಗಳೂರು ಉತ್ತಮ ವಾಣಿಜ್ಯ ಮತ್ತು ಕೈಗಾರಿಕಾ ನಗರವಾಗಿ ಬೆಳೆಯಲು ಹೈದರನ ಕೊಡುಗೆ ದೊಡ್ಡದು. ಬುಕಾನಾನ್ ಇದನ್ನು ಒತ್ತಿಹೇಳಿದ್ದಾನೆ.[170] ಆದರೆ ಬೆಂಗಳೂರಿನಲ್ಲಿ ಹೈದರನಿಗೆ ಸಂಬಂಧಿಸಿದ ಯಾವುದೇ ಶಾಸನವು ದೊರೆತಿಲ್ಲ.

ಹೈದರನು ಬೆಂಗಳೂರು ಪ್ರದೇಶದ ನಿರ್ವಹಣೆಗಾಗಿ ಕಿಲ್ಲೇದಾರರು ಮತ್ತು ಅಮಲ್ದಾರರೆಂಬ ಅಧಿಕಾರಿಗಳನ್ನು ನೇಮಿಸಿದ್ದನು. ಇಬ್ರಾಹಿಂ ಸಾಹೇಬ, ಹುಸೇನ್ ಸಾಬ್ ಕಿಲ್ಲೇದಾರ, ಮಿರ್ಜಾ ಇಸ್ಮಾಯಿಲ್ ಹುಸೇನ್ ಬೇಗ್, ಹೈದರ್ ಹುಸೇನ್ ಎಂಬ ನಾಲ್ವರು ಕಿಲ್ಲೇದಾರರೂ ಹಾಗೂ ಕಬ್ಬೂರ್ ಬೇಗ್, ಜಾಫರ್ ಆಲಿ ಖಾನ್, ಗುಲಾಂ ರೇಜಾ, ದಾಸಪ್ಪ, ದಾನಪ್ಪ ಎಂಬ ಅಮಲ್ದಾರರು ಈ ಪ್ರದೇಶದ ಅಧಿಕಾರಿಗಳಾಗಿದ್ದರು.[171] ಹೀಗೆ ತನ್ನ ಅಧೀನದಲ್ಲಿದ್ದ ಬೆಂಗಳೂರಿನಲ್ಲಿ ಇಂದಿಗೂ ಪ್ರಸಿದ್ಧಿಯನ್ನು ಹೊಂದಿರುವ ಲಾಲ್‌ಬಾಗ್ ಎಂಬ ಸುಂದರ ಉದ್ಯಾನವನವನ್ನೂ, ಕೋಟೆಯೊಳಗಡೆ ಒಂದು ಸುಂದರವಾದ ಮಹಲ್ ಅಥವಾ ಅರಮನೆಯನ್ನು ಕಟ್ಟಿಸತೊಡಗಿದನು (1781). ಈ ಅರಮನೆಯ ಕಾಮಗಾರಿ ಕೆಲಸ ಆರಂಭವಾದುದು ಕ್ರಿ.ಶ.1781ರಲ್ಲಿ. ಆದರೆ ದುರದೃಷ್ಟವೆಂಬಂತೆ ಮಾರನೆಯ ವರ್ಷವೇ ಅಂದರೆ ಕ್ರಿ.ಶ.1782ರಲ್ಲಿ ಹೈದರನು ತೀರಿಕೊಂಡನು. ಹೀಗಾಗಿ ತಾನು ಆರಂಭಿಸಿದ ಅರಮನೆ ಕೆಲಸವನ್ನು ಪೂರೈಸಲಾಗದೆ, ಅರಮನೆಯನ್ನು ಕಾಣುವ ಯೋಗ ಹೈದರನಿಗಿರಲಿಲ್ಲ. ಮುಂದೆ ಟಿಪ್ಪು ಈ ಅರಮನೆ ಕೆಲಸವನ್ನು ಮುಂದುವರಿಸಿದನು.[172]

## ಟಿಪ್ಪು ಸುಲ್ತಾನ್

ಮೈಸೂರು ಹುಲಿ ಎಂದೇ ಪ್ರಸಿದ್ಧಿ ಪಡೆದ ಟಿಪ್ಪು ಹೈದರಾಲಿಯ ಮಗ. ಬೆಂಗಳೂರು ಗ್ರಾಮಾಂತರ ಜಿಲ್ಲೆ ದೇವನಹಳ್ಳಿಯಲ್ಲಿ ಕ್ರಿ.ಶ.1753ರಲ್ಲಿ ಜನಿಸಿದನು. ತಂದೆ ಹೈದರನ ನಂತರ ಅಧಿಕಾರದ ಚುಕ್ಕಾಣಿ ಹಿಡಿದನು. ಹೈದರನ ಕಾಲದಲ್ಲಿ ಬೆಂಗಳೂರು ಪ್ರದೇಶದ ಅಮಲ್ದಾರನಾಗಿದ್ದ ದಾಸಪ್ಪನನ್ನು ವಜಾಗೊಳಿಸಿ ಗುಲಾಂ ಹೈದರನನ್ನು ಅಮಲ್ದಾರನನ್ನಾಗಿ ಮಾಡಿದನು. ಈತ ಎಂಟು ವರ್ಷಗಳ ಕಾಲ ಅಮಲ್ದಾರನಾಗಿದ್ದನು. ಹಾಗೂ ಅರ್ಕಾಟಿನ ರಾಯಜೀಯ ಅಳಿಯನಾದ ಜೋಗೀ ಪಂತನನ್ನು ಸಮಸ್ತ ಬೆಂಗಳೂರು ಪ್ರದೇಶದ ಅಸಫನನ್ನಾಗಿ ನೇಮಿಸಿ ಈ ಪ್ರದೇಶದ ಎಲ್ಲಾ ಅಮಲ್ದಾರರೂ ಇವನ ಅಧೀನದಲ್ಲಿರುವಂತ ಅಧಿಕಾರ ನೀಡಿದನು. ಮುಂದೆ ಟಿಪ್ಪು ಕಾಲದವರೆಗೂ ಅಮಲ್ದಾರರಾಗಿದ್ದವರೆಂದರೆ, ಮಸ್ತಾನ್ ಸಾಬ್ ಅಸಫನಾಗಿ, ಮಹಮದ್ ಆಲಿ ಮಹಕರ್, ಅಬ್ದುಲ್ ಕರೀಮ್, ಗುಲಾಂ ಮೋಹಿದೀನ್, ಗುಲಾಂ ಮೊಹಮದ್ ಹೀಗೆ ಕ್ರಮವಾಗಿ ಅಧಿಕಾರವನ್ನು ಪಡೆದಿದ್ದರು.[173] ಹೈದರನ ಮರಣದ ನಂತರ ಅಧಿಕಾರ ವಹಿಸಿಕೊಂಡ ಟಿಪ್ಪು ಬ್ರಿಟಿಷರೊಂದಿಗೆ ಯುದ್ಧವನ್ನು ಮುಂದುವರಿಸಿದನು. ಈ ಯುದ್ಧದಲ್ಲಿ ಜಯಗಳಿಸಿದರೂ ಅಪಾರ ನಷ್ಟವನ್ನು ಅನುಭವಿಸಿದನು. ಕ್ರಿ.ಶ.1790–92ರಲ್ಲಿ ಮೂರನೆಯ ಆಂಗ್ಲೋ–ಮೈಸೂರು ಯುದ್ಧವಾಯಿತು. ಕ್ರಿ.ಶ.1791ರಲ್ಲಿ ಕಾರ್ನ್‌ವಾಲೀಸ್ ಮದ್ರಾಸಿನಿಂದ ಬೆಂಗಳೂರಿನ ಮೇಲೆ ಸಾಗಿ ಅದನ್ನು ಗೆದ್ದ (ಮಾರ್ಚ್ 1791) ಬೆಂಗಳೂರನ್ನು ಲೂಟಿ ಮಾಡಿದ. ಹೀಗೆ ಲಾರ್ಡ್‌ಕಾರ್ನ್‌ವಾಲೀಸನ ನೇತೃತ್ವದಲ್ಲಿ ಬ್ರಿಟಿಷರು ಟಿಪ್ಪುವನ್ನು ಸೋಲಿಸಿ ಬೆಂಗಳೂರನ್ನು ಒಂದು

ವರ್ಷ ವಶಪಡಿಸಿಕೊಂಡಿದ್ದರು. ಶ್ರೀರಂಗಪಟ್ಟಣದ ಒಪ್ಪಂದದಂತೆ ಬೆಂಗಳೂರನ್ನು ಟಿಪ್ಪು ಸುಲ್ತಾನ್‌ನಿಗೆ ಹಿಂತಿರುಗಿಸಲಾಯಿತು.[174] 1799ರಲ್ಲಿ ನಡೆದ ನಾಲ್ಕನೇ ಆಂಗ್ಲೋ–ಮೈಸೂರು ಯುದ್ಧದಲ್ಲಿ ಟಿಪ್ಪು ಮರಣ ಹೊಂದಿದ. ವಿಭಜನೆ ಒಪ್ಪಂದದಂತೆ ಬೆಂಗಳೂರು(ಮೈಸೂರು ರಾಜ್ಯ) ಮೂರನೇ ಕೃಷ್ಣರಾಜ ಒಡೆಯರ್‌ರವರ ಆಳ್ವಿಕೆಯಲ್ಲಿ ಸೇರಿತು.

ಬೆಂಗಳೂರಿನ ಕೋಟೆಯ ಅರಮನೆಯಲ್ಲಿ ಈತನಿಗೆ ಸಂಬಂಧಿಸಿದ ಪಾರ್ಸಿ ಅಕ್ಷರದಲ್ಲಿರುವ ಶಾಸನವೊಂದು ದೊರೆಯುತ್ತದೆ.[175] ಅರಮನೆಯ ವರ್ಣನೆಯನ್ನು ಈ ಶಾಸನ ಒಳಗೊಂಡಿದೆ. ಅರಮನೆಯ ಸೌಂದರ್ಯ ಮತ್ತು ಈ ಅರಮನೆ ಸಂತೋಷದ ಸೌಧವಾಗಿದೆ. ಎಂಬ ವಿವರಗಳನ್ನು ಒಳಗೊಂಡಿದೆ. ತನ್ನ ತಂದೆ ಹೈದರನು ಕಟ್ಟಿಸಲು ಪ್ರಾರಂಭಿಸಿದ ಅರಮನೆಯನ್ನು ಆತನ ಮರಣದ ನಂತರ ಟಿಪ್ಪು ಪೂರೈಸಿದ. ಅರಮನೆಯನ್ನು ಪೂರ್ತಿ ಕಟ್ಟಿ ಮುಗಿಸಲು ಹತ್ತು ವರ್ಷಗಳ ಕಾಲ ಹಿಡಿಯಿತು. ಅಂದರೆ ಕ್ರಿ.ಶ.1791ರಲ್ಲಿ ಅರಮನೆಯ ಕಾರ್ಯವನ್ನು ಟಿಪ್ಪು ಮುಂದುವರಿಸಿ, ಪೂರ್ಣಗೊಳಿಸಿದನು. ನಾವೀಗ ಕಾಣುತ್ತಿರುವುದು ಅರಮನೆಯ ಒಂದು ಭಾಗ ಮಾತ್ರ. ಬ್ರಿಟಿಷರು ತಮ್ಮ ಅಧಿಕಾರವಧಿಯಲ್ಲಿ ಈ ಅರಮನೆ ಕಟ್ಟಡದ ಸ್ವಲ್ಪ ಭಾಗವನ್ನು ಕೆಡವಿ ಮಧ್ಯಭಾಗವನ್ನು ಮಾತ್ರ ಉಳಿಸಿದ್ದಾರೆ.[176]

ಒಟ್ಟಾರೆ ಬೆಂಗಳೂರಿನಲ್ಲಿ ದೊರೆತ ಶಾಸನಗಳನ್ನು ಕ್ರೋಢಿಕರಿಸಿ ನಗರವನ್ನು ಆಳಿದ ರಾಜಮನೆತನಗಳಾದ ಗಂಗ, ಚೋಳ, ನೊಳಂಬ, ಹೊಯ್ಸಳ, ವಿಜಯನಗರ, ಮೈಸೂರು ಒಡೆಯರು, ಹೈದರಾಲಿ ಮತ್ತು ಟಿಪ್ಪು ಆಡಳಿತವನ್ನು ಗುರುತಿಸಲಾಗಿದೆ.

## ಫ್ರಾನ್ಸಿಸ್ ಬುಕನನ್ ಕಂಡ ಬೆಂಗಳೂರು

ಡಾ.ಫ್ರಾನ್ಸಿಸ್ ಬುಕನನ್ ಬ್ರಿಟಿಷರ ಕಂಪನಿ ಸರ್ಕಾರದಲ್ಲಿ ಬಂಗಾಳ ಪ್ರಾಂತ್ಯದ ವೈದ್ಯನಾಗಿ ಸೇವೆಸಲ್ಲಿಸುತ್ತಿದ್ದ. ಭಾರತದ ಗವರ್ನರ್ ಆದ ಮಾರ್ಕ್ವಿಸ್ ವೆಲ್ಲೆಸ್ಲಿ ಅವರ ಅನುಮತಿ ಪ್ರಕಾರ ಫ್ರಾನ್ಸಿಸ್ ಬುಕನನ್ ಮದ್ರಾಸಿನಿಂದ ಮೈಸೂರು, ಕೆನರಾ ಮತ್ತು ಮಲಬಾರ್ ಪ್ರಾಂತಗಳಲ್ಲಿ ಪ್ರವಾಸ ಮಾಡಿ ಅಲ್ಲಿನ ವ್ಯವಸಾಯ, ಕಲೆಗಳು, ವಾಣಿಜ್ಯೋದ್ಯಮ, ಮತವಿಚಾರಗಳು, ನಡವಳಿಕೆ, ಪದ್ಧತಿಗಳು, ಜನರ ಜೀವನ ಕ್ರಮ, ಪುರಾತತ್ವ ವಿಷಯಗಳನ್ನು ಅಧ್ಯಯನ ಮಾಡಿ ವರದಿಯನ್ನು ಸಲ್ಲಿಸಲು 24–2–1800ರಲ್ಲಿ ನಿಯೋಜಿಸಲಾಯಿತು. ಈತನ ಒಟ್ಟು ಪ್ರವಾಸದ ದಿನಗಳು ಒಂದು ವರ್ಷ, 2 ತಿಂಗಳು, 13 ದಿನಗಳನ್ನು ಒಳಗೊಂಡಿತ್ತು. ಇದರಲ್ಲಿ ಈಗಿನ ಬೆಂಗಳೂರನ್ನು ಸುತ್ತಲು ಈತ ತೆಗೆದು ಕೊಂಡ ಅವಧಿ ಜೂನ್ 22 ರಿಂದ ಜುಲೈ 2 ರವರೆಗೆ ಬ್ಯಾಂಗಲಜೋರ್‌ನಲ್ಲಿದ್ದೆ ಎಂದು ಹೇಳಿಕೊಳ್ಳುತ್ತಾನೆ. (ಬೆಂಗಳೂರನ್ನು ಬುಕನನ್ ಬ್ಯಾಂಗಲಜೋರ್ ಎಂದು ಆಂಗ್ಲ

ಭಾಷೆಯಲ್ಲಿ ಕರೆದಿದ್ದಾನೆ.) ಈತ ಶ್ರೀರಂಗಪಟ್ಟಣ, ಬೆಂಗಳೂರು, ದೊಡ್ಡಬಳ್ಳಾಪುರ, ಕಾವೇರಿ ಜಲಾನಯನ ಪ್ರದೇಶ, ಕೆನರಾ–ಮಂಗಳೂರು–ಬೈಂದೂರು–ಸೋಂದ, ಇಕ್ಕೇರಿ–ಚಿತ್ರಕಲ್–ಹಿರಿಯೂರು–ಶ್ರೀರಂಗಪಟ್ಟಣ–ಮದ್ರಾಸ್ ಈ ರಾಜ್ಯಗಳ ಉದ್ದಕ್ಕೂ ತಾನು ಕಂಡುಂಡ ಅನುಭವಗಳನ್ನು ಮೂರು ಸಂಪುಟಗಳಲ್ಲಿ 'A Journey from madras through the countries of mysore canara and malbar' ಎಂಬ ಹೆಸರಿನಲ್ಲಿ ಕ್ರಿ.ಶ.1807 ಪ್ರಕಟಿಸಿದ್ದಾನೆ.

ಈತ ಬೆಂಗಳೂರು ನಗರವನ್ನು ಹೈದರ್ ಕಟ್ಟಿ ಬೆಳೆಸಿದ ಎನ್ನುತ್ತಾನೆ. ರಾಜನ ನ್ಯಾಯಯುತ ಆಡಳಿತ ಕಾಲದಲ್ಲಿ ವಾಣಿಜ್ಯೋದ್ಯಮಿಗಳು ಸಂತೃಪ್ತರಾಗಿದ್ದರು. ಟಿಪ್ಪು ತನ್ನ ಆಡಳಿತದ ಕಾಲದಲ್ಲಿ ಆರ್ಕಾಟ್ ಮತ್ತು ಹೈದರಾಬಾದ್ ಜೊತೆ ವ್ಯಾಪಾರ ವ್ಯವಹಾರವನ್ನು ನಿಲ್ಲಿಸಿದನು. ಇದರಿಂದ ಸ್ಥಳೀಯ ವ್ಯಾಪಾರಿಗಳು ಟಿಪ್ಪು ಹೇಳಿದಷ್ಟು ಬೆಲೆಕೊಟ್ಟು ಕೆಲವು ವಸ್ತುಗಳನ್ನು ಕೊಳ್ಳಬೇಕಾಗಿತ್ತು. ಇದರ ಜೊತೆಗೆ ಲಾರ್ಡ್‌ಕಾರ್ನ್‌ವಾಲೀಸನು ದಂಡೆತ್ತಿ ಬಂದು ಬೆಂಗಳೂರಿನಲ್ಲಿದ್ದ ಸಿರಿವಂತರನ್ನು ಲೂಟಿ ಮಾಡತೊಡಗಿದನು. ಶ್ರೀಮಂತರು ಚಿನ್ನ ಬೆಳ್ಳಿ ವಸ್ತುಗಳನ್ನು ಕೋಟೆಯೊಳಕ್ಕೆ ಸಾಗಿಸಿಬಿಟ್ಟಿದ್ದರು. ಕೆಲವು ಕಾಲ ಇಡೀ ಪ್ರದೇಶವು ನಿರ್ಜನವಾದಂತೆ ಕಾಣುತ್ತಿತ್ತು ಎಂದು ದಾಖಲಿಸುತ್ತಾನೆ. ಇಲ್ಲಿನ ಜನರ ಕೃಷಿ, ಕೈಗಾರಿಕಾ ಪದ್ಧತಿ, ಭೂಮಿ ಅಳತೆ, ಮಾನದಂಡಗಳು, ಜಾತಿ, ಜನಾಂಗ, ಉಡುಪು, ಗಾಣ ತಯಾರಿಕೆಯ ಬಗ್ಗೆ ದಾಖಲಿಸುತ್ತಾನೆ.[177]

ಬೆಂಗಳೂರಿನಲ್ಲಿ ಹದಿನೆಂಟನೇ ಶತಮಾನದಲ್ಲಿ ತಯಾರಿಕೆ ಮಾಡಲಾಗುತ್ತಿದ್ದ ವಿವಿಧ ರೀತಿಯ ಎಣ್ಣೆಗಳು, ಅದರ ವಿಧಾನಗಳ ಬಗ್ಗೆ ಹಾಗೂ ಇತರ ಊರುಗಳೊಂದಿಗೆ ಹೊಂದಿದ್ದ ವ್ಯಾಪಾರ, ಆಮದಾಗುತ್ತಿದ್ದ ವಸ್ತುಗಳು, ವ್ಯಾಪಾರಿಗಳು, ಹಣದ ವಹಿವಾಟಿನ ಬಗ್ಗೆ ತಿಳಿಸಿದ್ದಾನೆ. ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ಬೆಂಗಳೂರಿನ ಜನರು ಅದಾಗಲೇ ಕೈಗಾರಿಕಾ ಕ್ಷೇತ್ರದಲ್ಲಿ, ವಾಣಿಜ್ಯೋದ್ಯಮದಲ್ಲಿ ಮುಂದುವರೆದಿದ್ದು ಆರ್ಥಿಕ ಪರಿಸ್ಥಿತಿಯು ಉತ್ತಮವಾಗಿತ್ತು ಎಂಬುದು ಸ್ಪಷ್ಟವಾಗುತ್ತದೆ.

## ರಾಜರ ನಂತರದ ಬೆಂಗಳೂರು/ಬ್ರಿಟಿಷರ ಆಳ್ವಿಕೆ

ಕ್ರಿ.ಶ.1799ರಲ್ಲಿ ಟಿಪ್ಪುವಿನ ಮರಣಾನಂತರ ಬ್ರಿಟಿಷರು ಮೈಸೂರು ಸಂಸ್ಥಾನವನ್ನು ಮುಮ್ಮಡಿ ಕೃಷ್ಣರಾಜ ಒಡೆಯರಿಗೆ ಒಪ್ಪಿಸಿದಾಗ ಅವರು ಐದು ವರ್ಷದ ಬಾಲಕನಾಗಿದ್ದರು. ಹಾಗಾಗಿ ದಿವಾನ್ ಪೂರ್ಣಯ್ಯನವರೇ ಹನ್ನೊಂದು ವರ್ಷ ದಿವಾನರಾಗಿ ಆಡಳಿತ ನಡೆಸಿದರು. ಸಣ್ಣ ಪುಟ್ಟ ಪಾಳೇಗಾರರೆಲ್ಲ ಬಂಡೇಳಲು ಪ್ರಾರಂಭಿಸಿದರು. ಇವರೆಲ್ಲರನ್ನು ಹತ್ತಿಕ್ಕುವಲ್ಲಿ ಪೂರ್ಣಯ್ಯನವರು ಮುಂದಾದರು. ಕ್ರಿ.ಶ.1831ರಲ್ಲಿ ನಗರ ದಂಗೆಯ ನಂತರ ಬ್ರಿಟಿಷರು ತಮ್ಮ

ನೇರ ಆಳ್ವಿಕೆಗೆ ಒಳಪಡಿಸಿಕೊಂಡರು. ಕ್ರಿ.ಶ.1831 ರಿಂದ ಕ್ರಿ.ಶ.1881ರ ವರೆಗಿನ ಕಮಿಷನರ ನೇರ ಆಳ್ವಿಕೆಗೆ ಮೈಸೂರು ಒಳಗಾಯಿತು. ಈ ಸಂದರ್ಭದಲ್ಲೇ ಬೆಂಗಳೂರನ್ನು ಅಭಿವೃದ್ಧಿ ಪಡಿಸಿದರು. ಮಾರ್ಕ್‌ಕಬ್ಬನ್(1834–1861), ಲೆವಿಸ್ ಬೆಂಥಾಮ್ ಬೌರಿಂಗ್(1862–1870) ಇವರ ಕಾಲದಲ್ಲಿ ಬೆಂಗಳೂರಿನಲ್ಲಿ ಹಲವು ಕಾರ್ಯಚಟುವಟಿಕೆಯನ್ನು ಜಾರಿಗೆ ತಂದರು.

## ಮಾರ್ಕಕಬ್ಬನ್

ಕಬ್ಬನ್ ಕಮಿಷನರ್ ಆಗಿ ಅಧಿಕಾರಕ್ಕೆ ಬಂದಾಗ ಬೆಂಗಳೂರಿನಲ್ಲಿ ಹಲವು ಹೊಸ ಚಟುವಟಿಕೆಗಳು ನಡೆದವು. ಕ್ರಿ.ಶ.1839ರಲ್ಲಿ ಬೆಂಗಳೂರಿನಲ್ಲಿ ಲಂಡನ್ ಮಿಷನ್‌ನವರು ಶಾಲೆಯನ್ನು ತೆರೆದರು. ಕ್ರಿ.ಶ.1840ರಲ್ಲಿ ವೆಸ್ಲಿಯನ್ ಮಿಷನ್‌ನ ಮೂಲಕ ಮುದ್ರಣವನ್ನು ಗ್ಯಾರೆಟ್ ಆರಂಭಿಸಿದ. ಕ್ರಿ.ಶ.1853ರಲ್ಲಿ ಬೆಂಗಳೂರು–ಮೈಸೂರು ನಡುವೆ ತಂತಿ(ಟೆಲಿಗ್ರಾಫ್) ಸಂಪರ್ಕ ಪ್ರಾರಂಭವಾಯಿತು. ಮದ್ರಾಸಿಗೆ ರೈಲುಸಂಪರ್ಕ ಸಾಧಿಸಲು ಜೋಲಾರ್ ಪೇಟೆ–ಬೆಂಗಳೂರು ಮಾರ್ಗವನ್ನು ಕ್ರಿ.ಶ.1859ರಲ್ಲಿ ಆರಂಭಿಸಿದರು. ಒಂದು ಹಳೆಯ ಪಗೋಡಾ(ವರಹ)ಗಳ ಬದಲಿಗೆ ಬ್ರಿಟಿಷರ ಹೊಸ ಬೆಳ್ಳಿ ರೂಪಾಯಿ(ಒಂದು ತೊಲೆಯದು)ಯನ್ನು ಕ್ರಿ.ಶ1854ರಲ್ಲಿ ಚಲಾವಣೆಗೆ ತರಲಾಯಿತು. ಕ್ರಿ.ಶ.1834ರಿಂದ ಬ್ರಿಟಿಷ್ ಕಾನೂನುಗಳಂತೆ ನಡೆಯುವ ನ್ಯಾಯಾಲಯಗಳನ್ನು ಸ್ಥಾಪಿಸಿದ. ಇದರಿಂದ ತಾಲ್ಲೂಕು, ಪಟ್ಟಣ, ಮುನ್ಸಿಫ್, ಸಾದರ್ ಮುನ್ಸಿಫ್, ಪ್ರಧಾನ್ ಸಾದರ್ ಮುನ್ಸಿಫ್ ಮತ್ತು ಐರೋಪ್ಯ ಅಧಿಕಾರಿಗಳ ನ್ಯಾಯಾಲಯಗಳ ಸ್ಥಾಪನೆ ಆಯಿತು. ಇದಲ್ಲದೆ ಮೂರು ಜನ ನ್ಯಾಯಾಧೀಶರಿರುವ ಮೇಲ್ಮನವಿ ನ್ಯಾಯಾಲಯ ಹಾಗೂ ಕಮಿಷನರ್ ನ್ಯಾಯಲಯ ಕೂಡ ಜಾರಿಗೆ ಬಂದವು. ನ್ಯಾಯಲಯಗಳು ಲಿಖಿತ ತೀರ್ಪು ನೀಡುವುದು ಕಡ್ಡಾಯವಾಯಿತು.[178] ಹೀಗೆ ಮಾರ್ಕ್‌ಕಬ್ಬನ್ ಕಮಿಷನರ್ ಆಗಿ ಬೆಂಗಳೂರಿನಲ್ಲಿ ಹಲವು ಹೊಸ ಯೋಜನೆಗಳನ್ನು ಜಾರಿಗೆತಂದನು.

## ಬೌರಿಂಗ್

ಬೆಂಗಳೂರು ನಗರದಲ್ಲಿ ಹಾಗೂ ಕಂಟೋನ್ಮೆಂಟ್ ಪ್ರದೇಶಗಳಲ್ಲಿ ಮುನಿಸಿಪಾಲಿಟಿಗಳು ಸ್ಥಾಪನೆಯಾದವು(1863). ಅಲ್ಲದೆ ಬ್ರಿಟಿಷ್ ಪ್ರಾಂತಗಳಲ್ಲಿ ಚಲಾವಣೆಯಲ್ಲಿದ್ದ ಕಾಗದದ ಹಣವನ್ನು(ನೋಟು) ಇಲ್ಲಿಯೂ ಚಲಾವಣೆಗೆ ತಂದ(1864). ಕಂಟೋನ್ಮೆಂಟ್ ಪ್ರದೇಶದಲ್ಲಿ 1868 ಗ್ಯಾಸ್‌ನಿಂದ ಉರಿಯುವ ಬೀದಿದೀಪ ಹಾಕಿಸಿದರು. ಕ್ರಿ.ಶ.1867ರಲ್ಲಿ ಅಠಾರಾ ಕಚೇರಿ, ಸೆಂಟ್ರಲ್ ಕಾಲೇಜು ಕಟ್ಟಡಗಳು ಇವನ ಕಾಲದಲ್ಲಿ ನಿರ್ಮಾಣವಾದ ಐರೋಪ್ಯ ಶೈಲಿಯ ಹೊಸ ರಚನೆಗಳಾಗಿವೆ. 1866ರಲ್ಲಿ ಸರಕಾರಿ ಹೈಸ್ಕೂಲು ಸ್ಥಾಪನೆ ಆಗಿ, 1870ರಲ್ಲಿ ಅದು ಕಾಲೇಜಾಗಿ,

1875ರಲ್ಲಿ ಅದಕ್ಕೆ ಸೆಂಟ್ರಲ್ ಕಾಲೇಜು ಎಂದು ಹೆಸರಿಟ್ಟರು. 1866ರಲ್ಲಿ ಸರಕಾರಿ ಮುದ್ರಣಾಲಯ ಸ್ಥಾಪನೆಗೊಂಡಿತು. ಇದೇ ಕಾಲದಲ್ಲಿ 1859ರಲ್ಲಿ ಬೆಂಗಳೂರು 'ವೃತ್ತಾಂತ ಬೋಧಿನಿ', 1865ರಲ್ಲಿ 'ಕರ್ನಾಟಕ ಪ್ರಕಾಶಿಕಾ', 1866ರಲ್ಲಿ 'ಮೈಸೂರು ಗೆಜೆಟ್' ಪತ್ರಿಕೆಗಳು ಪ್ರಕಟವಾದವು.[179] ಹೀಗೆ ಕಮಿಷನರ್ ಆಳ್ವಿಕೆಯಲ್ಲಿ ಬೆಂಗಳೂರು ಉತ್ತಮ ಸ್ಥಿತಿಯಲ್ಲಿ ನಡೆಯಿತು.

## ದಿವಾನರ ಕಾಲದಲ್ಲಿ ಬೆಂಗಳೂರು

ಕಮಿಷನರ್‌ರ ಆಳ್ವಿಕೆಗೆ ಒಳಪಟ್ಟಿದ್ದ ಮೈಸೂರು ರಾಜ್ಯವನ್ನು ಬ್ರಿಟಿಷರು 1881ರಲ್ಲಿ ಪುನಃ ಮೈಸೂರಿನ ಹತ್ತನೆಯ ಚಾಮರಾಜ ಒಡೆಯರಿಗೆ ವಹಿಸಿಕೊಡಲಾಯಿತು. ಈ ಸಂದರ್ಭದಲ್ಲಿ ಜೆ.ಬಿ.ಗೋರ್ಡಾನ್ ಬೆಂಗಳೂರಿನಲ್ಲಿ ಬ್ರಿಟಿಷ್ ರೆಸಿಡೆಂಟ್ ಆಗಿದ್ದ. ಚಾಮರಾಜ ಒಡೆಯರ್ 1894ರ ವರೆಗೆ ಆಳ್ವಿಕೆ ಮಾಡಿದರು. ಇವರ ನಂತರ ನಾಲ್ವಡಿ ಕೃಷ್ಣರಾಜ ಒಡೆಯರು ಉತ್ತರಾಧಿಕಾರಿಯಾದರು. ಈ ಸಂದರ್ಭದಲ್ಲಿ ದಿವಾನರುಗಳು ಪ್ರಮುಖರಾಗಿದ್ದರು. ಅವರಲ್ಲಿ ಮುಖ್ಯರಾದವರು ಸರ್ ಎಂ.ವಿಶ್ವೇಶ್ವರಯ್ಯ ಮತ್ತು ಸರ್ ಮಿರ್ಜಾಇಸ್ಮಾಯಿಲ್. ಮೈಸೂರು ರಾಜ್ಯದ ಪ್ರಮುಖ ಆಡಳಿತ ಕೇಂದ್ರಗಳಲ್ಲಿ ಒಂದಾದ ಬೆಂಗಳೂರನ್ನು ಇವರ ಕಾಲದಲ್ಲಿ ಉನ್ನತ ಸ್ಥಿತಿಗೆ ಏರಿಸಿದರು. 1912ರಲ್ಲಿ ಸರ್.ಎಂ.ವಿಶ್ವೇಶ್ವರಯ್ಯನವರು ನಾಲ್ವಡಿ ಕೃಷ್ಣರಾಜ ಒಡೆಯರ ಆಳ್ವಿಕೆಯಲ್ಲಿ ಮೈಸೂರಿನ ದಿವಾನರಾಗಿ ನೇಮಕಗೊಂಡರು. ಸರ್.ಎಂ.ವಿಶ್ವೇಶ್ವರಯ್ಯ ದಿವಾನರಾದಾಗಲೇ ಬೆಂಗಳೂರಿನಲ್ಲಿ ಮೈಸೂರು ಬ್ಯಾಂಕ್(1913), ಹೆಬ್ಬಾಳದಲ್ಲಿ ಕೃಷಿಶಾಲೆ(1912), ಬೆಂಗಳೂರಿನಲ್ಲಿ ಇಂಜಿನಿಯರಿಂಗ್ ಕಾಲೇಜು(1917), ಮೈಸೂರು ಚೇಂಬರ್ ಆಫ್ ಕಾಮರ್ಸ್, ಕನ್ನಡ ಸಾಹಿತ್ಯ ಪರಿಷತ್ತು(1915), ಮೈಸೂರು ವಿಶ್ವವಿದ್ಯಾಲಯ(1916) ಮುಂತಾದ ಸಂಸ್ಥೆಗಳನ್ನು ಸ್ಥಾಪಿಸಿದರು.[180]

ನಂತರ ಮಿರ್ಜಾ ಇಸ್ಮಾಯಿಲ್‌ರವರು 1926 ರಿಂದ 1941ರವರೆಗೆ ದಿವಾನರಾಗಿದ್ದರು. ಇವರ ಅಧಿಕಾರವಧಿಯಲ್ಲಿ ಬೆಂಗಳೂರಿನಲ್ಲಿ ಹಿಂದೂಸ್ತಾನ್ ಏರೋನಾಟಿಕ್ಸ್ ಲಿಮಿಟೆಡ್(ಹೆಚ್.ಎ.ಎಲ್), ಗಾಜಿನ ಕಾರ್ಖಾನೆ, ಪಿಂಗಾಣಿ ಪಾತ್ರೆ ಕಾರ್ಖಾನೆ, ಜಕ್ಕೂರಿನಲ್ಲಿ ವಿಮಾನ ನಿಲ್ದಾಣವನ್ನು ನಿರ್ಮಿಸಿದರು. ಬೆಂಗಳೂರಿನಲ್ಲಿ ರಾಷ್ಟ್ರೀಯ ಮಾನಸಿಕ ಆರೋಗ್ಯ ಮತ್ತು ನರರೋಗ ಶಸ್ತ್ರಚಿಕಿತ್ಸೆ ಸಂಸ್ಥೆ (NIMHANS-national institute of mental health and neuro suregery) ಸ್ಥಾಪಿಸಿದರು. ಬೆಂಗಳೂರು ಮತ್ತು ಮೈಸೂರಿನಲ್ಲಿ ರೇಡಿಯೋ ಕೇಂದ್ರಗಳನ್ನು ಆರಂಭಿಸಿದರು.[181] ಹೀಗೆ ಒಬ್ಬರಾದ ನಂತರ ಮತ್ತೊಬ್ಬರು ಅಧಿಕಾರಕ್ಕೆ ಬಂದ ದಿವಾನರುಗಳಿಂದ ಹಲವಾರು ಗಮನಾರ್ಹ ಅಭಿವೃದ್ಧಿ ಯೋಜನೆಗಳು ನಡೆದವು. ಈ ಕಾಲಾವಧಿಯಲ್ಲಿ ಮೈಸೂರು ಮಾದರಿ ರಾಜ್ಯ ಮತ್ತು ಬೆಂಗಳೂರು ಮಾದರಿ ನಗರವಾಗಿ ಅಭಿವೃದ್ಧಿಗೊಂಡವು.

ಬೆಂಗಳೂರಿನ ಪ್ರಾಗಿತಿಹಾಸದ ಪ್ರಕಾರ ಕ್ರಿ.ಪೂ. ಹತ್ತುಸಾವಿರ ಅಂದರೆ ಇಂದಿಗೆ ಸುಮಾರು ಹನ್ನೆರಡು ಸಾವಿರ ವರ್ಷಗಳಷ್ಟು ಪ್ರಾಚೀನ ಕಾಲದ ಆದಿಶಿಲಾಯುಗ, ಸೂಕ್ಷ್ಮಶಿಲಾಯುಗದ ಆಯುಧಗಳು ದೊರೆತಿರುವುದರಿಂದ ಇಂದಿನ ಬೆಂಗಳೂರು ಪ್ರದೇಶದ ಜನವಸತಿಯ ಪ್ರಾಚೀನತೆ ಹನ್ನೆರಡು ಸಾವಿರ ವರ್ಷಗಳಷ್ಟು ಎಂದು ಹೇಳಬಹುದು. ಹೀಗೆ ಬೆಂಗಳೂರು ಗಂಗರ ಕಾಲದಲ್ಲಿ ಅಸ್ತಿತ್ವಕ್ಕೆ ಬಂದು ನಂತರ ಚೋಳರು, ಹೊಯ್ಸಳರು, ವಿಜಯನಗರದ ಅರಸರು ಮರಾಠರು ಯಲಹಂಕನಾಡಪ್ರಭುಗಳು, ಮೈಸೂರಿನ ಒಡೆಯರು, ಹೈದರಾಲಿ, ಟಿಪ್ಪು ನಂತರ ಬ್ರಿಟೀಷ್ ಕಮಿಷನರ್‌ಗಳು ಹೀಗೆ ಹಲವಾರು ಅರಸರುಮನೆತನಗಳು ಮತ್ತು ಅಧಿಕಾರಿಗಳ ಆಳ್ವಿಕೆಗೊಳಪಟ್ಟಿದ್ದುದನ್ನು ಗಮನಿಸಬಹುದು.

## ಕೊನೆ ಟಿಪ್ಪಣಿಗಳು

1. EC IX ಅನುಬಂಧ ಸಂಪುಟ, ಬೆಂಗಳೂರು–174, ಬೇಗೂರು, ಪು.3
2. ಡಾ.ಸೂರ್ಯನಾಥ ಕಾಮತ್, ಪ್ರೊ.ಎಂ.ಎಚ್.ಕೃಷ್ಣಯ್ಯ(ಸಂ)–ಬೆಂಗಳೂರು ದರ್ಶನ, ಪು.1
3. ಪೂರ್ವೋಕ್ತ–ಬೆಂಗಳೂರು ದರ್ಶನ, ಪು.91–92
4. ಡಾ.ಭೈರಮಂಗಲ ರಾಮೇಗೌಡ, ಪ್ರೊ.ಎಂ.ಜಿ.ಚಂದ್ರಶೇಖರಯ್ಯ(ಸಂ)–ಬೆಂಗಳೂರು ಬಾಗಿನ, ಪು.7
5. ಬಿ.ಎಲ್.ರೈಸ್(ಸಂ)–EC IX ಬೆಂಗಳೂರು–70, ಸುಂಕೇನಹಳ್ಳಿ, ಪು.27
6. ಡಾ.ಸೂರ್ಯನಾಥ ಕಾಮತ್, ಪ್ರೊ.ಎಂ.ಎಚ್.ಕೃಷ್ಣಯ್ಯ(ಸಂ)–ಬೆಂಗಳೂರು ದರ್ಶನ, ಪು.1
7. ಪೂರ್ವೋಕ್ತ–ಬೆಂಗಳೂರು ದರ್ಶನ, ಪು.1
8. ಪೂರ್ವೋಕ್ತ –ಬೆಂಗಳೂರು ದರ್ಶನ, ಪು.184
9. ವಾರ್ತಾಭಾರತಿ(ಪತ್ರಿಕೆ)–ದಿನಾಂಕ 8 ಜುಲೈ 2016
10. ಡಾ.ಆರ್.ಗೋಪಾಲ್(ಸಂ)–ಬೆಂಗಳೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪು.19
11. ಕೆ.ಬಿ.ಶಿವತಾರಕ್–ಕರ್ನಾಟಕದ ಪುರಾತತ್ವ ನೆಲೆಗಳು, ಪು.559
12. ಡಾ.ಸೂರ್ಯನಾಥ ಕಾಮತ್, ಪ್ರೊ.ಎಂ.ಎಚ್.ಕೃಷ್ಣಯ್ಯ(ಸಂ)–ಬೆಂಗಳೂರು ದರ್ಶನ, ಪು.6
13. ಇಂಡಿಯನ್ ಆರ್ಕಿಯಾಲಜಿ–ಎ ರಿವ್ಯೂ, 1979–80, ಪು.101
14. ಡಾ.ಎಂ.ಜಿ.ಮಂಜುನಾಥ–ಕೆಂಗೇರಿಯ ಸಾಂಸ್ಕೃತಿಕ ಪರಂಪರೆ, ಪು.3–4
15. ದೇವರಕೊಂಡಾರೆಡ್ಡಿ–ಬನ್ನೇರುಘಟ್ಟ–ಪ್ರಾಗೈತಿಹಾಸಿಕ ಕಾಲದಿಂದ ಇಂದಿನವರೆಗೆ, ದೇವರಕೊಂಡಾರೆಡ್ಡಿ, ಸೂರ್ಯನಾಥಕಾಮತ್(ಸಂ), ಇತಿಹಾಸ ದರ್ಶನ, ಸಂಪುಟ–8, ಪು.1–4
16. ಡಾ.ಸ್ಮಿತಾರೆಡ್ಡಿ–ಆನೇಕಲ್ಲು ತಾಲ್ಲೂಕಿನ ಮೇಲೂರು ದಿಣ್ಣೆ ಹಾಗೂ ಕಾಳನಾಯಕನಹಳ್ಳಿಯ ಶಿಲಾಯುಗದ ನಿವೇಶನಗಳು, ಎಂ.ಜಿ. ನಾಗರಾಜು, ಪಿ.ವಿ.ಕೃಷ್ಣಮೂರ್ತಿ(ಸಂ)– ಇತಿಹಾಸದರ್ಶನ, ಸಂಪುಟ–14, ಪು13–14
17. ಸೂರ್ಯನಾಥ ಕಾಮತ್, ಪಿ.ವಿ.ಕೃಷ್ಣಮೂರ್ತಿ(ಸಂ)–ಇತಿಹಾಸ ದರ್ಶನ, ಸಂಪುಟ–11, 1996, ಪು.23,25
18. ಡಾ.ಸ್ಮಿತಾರೆಡ್ಡಿ–ದೊಡ್ಡನಾಗಮಂಗಲದ ಗಂಗರ ಶಾಸನ, ಎಂ.ಜಿ.ನಾಗರಾಜು, ಪಿ.ವಿ.ಕೃಷ್ಣಮೂರ್ತಿ(ಸಂ)– ಇತಿಹಾಸ ದರ್ಶನ, ಸಂಪುಟ–13, ಪು.13,14

19.ಎಂ.ಲೋಕೇಶ್, ಪಿ.ಗೋಪಿ–ಮುನಿನಗರದ ಶಿಲಾಯುಗದ ಸಮಾಧಿಗಳು, ಎಂ.ಜಿ.ನಾಗರಾಜು, ಪಿ.ವಿ.ಕೃಷ್ಣಮೂರ್ತಿ(ಸಂ), ಇತಿಹಾಸ ದರ್ಶನ, ಸಂಪುಟ–13, ಪು.12

20.ಎಂ.ಜಿ.ಮಂಜುನಾಥ–ಕೆಂಗೇರಿಯ ಸಾಂಸ್ಕೃತಿಕ ಪರಂಪರೆ, ಪು.7,8

21.EC IX ಅನುಬಂಧ ಸಂಪುಟ, ಬೆಂಗಳೂರು–174, ಬೇಗೂರು, ಪು.37

22.ಬಿ.ಎಲ್.ರೈಸ್(ಸಂ)–EC IX ಬೆಂಗಳೂರು–68, ಮಡಿವಾಳ, ಪು.26

23.ಎಲ್.ಎಸ್.ಶೇಷಗಿರಿರಾವ್(ಸಂ)–ಬೆಂಗಳೂರು ದರ್ಶನ, ಪು.19

24.ಬಿ.ಎಲ್.ರೈಸ್(ಸಂ)–EC IX ಬೆಂಗಳೂರು–127, ಕೊಡಿಗೆಹಳ್ಳಿ, ಪು.47

25.ಪೂರ್ವೋಕ್ತ, ಬೆಂಗಳೂರು–93, ಬೇಗೂರು, ಪು.35

26.ಪೂರ್ವೋಕ್ತ, ನೆಲಮಂಗಲ–107, ಶಿವಗಂಗೆ, ಪು.119

27.ಪೂರ್ವೋಕ್ತ, ಹೊಸಕೋಟೆ–64, ನಗರೇನಹಳ್ಳಿ, ಪು.211

28.ಪೂರ್ವೋಕ್ತ–ಬೆಂಗಳೂರು–118, ಕೊತ್ತನೂರು, ಪು.48

29. ಪೂರ್ವೋಕ್ತ–ಬೆಂಗಳೂರು–1, ಬಳ್ಳಾಪುರ ಪೇಟೆ, ಪು.2

30. ಸೂರ್ಯನಾಥ ಕಾಮತ್, ಪ್ರೊ.ಎಂ.ಎಚ್.ಕೃಷ್ಣಯ್ಯ (ಸಂ)–ಬೆಂಗಳೂರು ದರ್ಶನ, ಪು.16

31.ಬ.ನ.ಸುಂದರರಾವ್–ಬೆಂಗಳೂರು ಇತಿಹಾಸ, ಮುನ್ನುಡಿ ಪು.3

32.ಸೂರ್ಯನಾಥ ಕಾಮತ್, ಪ್ರೊ.ಎಂ.ಎಚ್.ಕೃಷ್ಣಯ್ಯ (ಸಂ)–ಬೆಂಗಳೂರು ದರ್ಶನ, ಪು.17

33.ಡಾ.ಬಿ.ನಂಜುಂಡಸ್ವಾಮಿ–ಬೆಂಗಳೂರು ನಗರದ ಇನ್ನೊಂದು ಹೆಸರು 'ಕಲ್ಯಾಣನಗರ' ಇದರ ಉಲ್ಲೇಖ ಇರುವ ಬೆಂಗಳೂರು ನಗರೇಶ್ವರ ದೇವಾಲಯದ ಶಿಲಾಶಾಸನ, ದೇವರಕೊಂಡಾರೆಡ್ಡಿ, ಜಿ.ಕೆ.ದೇವರಾಜಸ್ವಾಮಿ(ಸಂ)–ಇತಿಹಾಸ ದರ್ಶನ, ಸಂಪುಟ–29, ಪು.66

34.ಎಚ್.ತಿಪ್ಪೇರುದ್ರಸ್ವಾಮಿ–ಕರ್ಣಾಟಕ ಸಂಸ್ಕೃತಿ ಸಮೀಕ್ಷೆ, ಪು–75

35.ಸೂರ್ಯನಾಥ್ ಕಾಮತ್, ಪ್ರೊ.ಎಂ.ಹೆಚ್. ಕೃಷ್ಣಯ್ಯ (ಸಂ)–ಬೆಂಗಳೂರು ದರ್ಶನ, ಪು.6

36.ಸಾಸಲು ಜೆ.ವಿಶ್ವನಾಥ–ರಾಜಘಟ್ಟದ ಐತಿಹಾಸಿಕ ವಿವೇಚನೆ ಹಾಗೂ ದೇಗುಲವೊಂದರ ಶೋಧನೆ, ಎಂ.ಜಿ.ನಾಗರಾಜ, ಪಿ.ವಿ.ಕೃಷ್ಣಮೂರ್ತಿ(ಸಂ)–ಇತಿಹಾಸ ದರ್ಶನ, ಸಂಪುಟ–19, ಪು.6,7

37.ಹಾ.ಮಾ.ನಾಯಕ(ಸಂ): ಕರ್ನಾಟಕ ವಿಷಯ ವಿಶ್ವಕೋಶ, ಪು.447

38.ಬಿ.ಎಲ್.ರೈಸ್(ಸಂ)–EC-IX ಬೆಂಗಳೂರು–83, ಬೇಗೂರು, ಪು.30

39.ಪೂರ್ವೋಕ್ತ, ಬೆಂಗಳೂರು-41, ಪಟ್ಟಂದೂರು, ಪು.19

40.ಪೂರ್ವೋಕ್ತ, ಬೆಂಗಳೂರು-55, ಕೃಷ್ಣರಾಜಪುರ, ಪು.23

41.ಪೂರ್ವೋಕ್ತ, ಬೆಂಗಳೂರು-36, ದಾಸರಹಳ್ಳಿ, ಪು.18

42.ಪೂರ್ವೋಕ್ತ, ದೇವನಹಳ್ಳಿ-67, ಚಂದಪ್ಪಹಳ್ಳಿ, ಪು.187

43.ಪೂರ್ವೋಕ್ತ, ಬೆಂಗಳೂರು-79, ಅಗರ, ಪು.28

44.ಪೂರ್ವೋಕ್ತ, ಬೆಂಗಳೂರು-83, ಬೇಗೂರು, ಪು.30

45.ಪೂರ್ವೋಕ್ತ, ಆನೇಕಲ್ಲು-73, ಬೊಮ್ಮೊಂಡಹಳ್ಳಿ, ಪು.253

46.ಸ್ಮಿತಾರೆಡ್ಡಿ-ಆನೇಕಲ್ಲು ತಾಲೂಕಿನ ಹೆಬ್ಬಗೋಡಿಯಲ್ಲಿ ದೊರೆತ ಗಂಗರ ಅಪ್ರಕಟಿತ ಶಾಸನ, ಎಂ.ಜಿ.ನಾಗರಾಜ, ಪಿ.ವಿ.ಕೃಷ್ಣಮುರ್ತಿ(ಸಂ)-ಇತಿಹಾಸದರ್ಶನ, ಸಂಪುಟ-19, ಪು.364

47.ಬಿ.ಎಲ್ ರೈಸ್(ಸಂ)- EC-IX ಬೆಂಗಳೂರು-87, ಬೇಗೂರು, ಪು.31

48.ಪ್ರೊ.ಎಂ.ಜಿ.ಮಂಜುನಾಥ-ಬೆಂಗಳೂರಿನ ಪ್ರದೇಶಗಳು ಪಲ್ಲವರ ಆಳ್ವಿಕೆಗೊಳಪಟ್ಟಿತ್ತೆ (ಅಪ್ರಕಟಿತ ಲೇಖನ)

49.ಬಿ.ಎಲ್.ರೈಸ್(ಸಂ)-ಹೊಸಕೋಟೆ-12, ಪು.198)

50.ಪೂರ್ವೋಕ್ತ, ನೆಲಮಂಗಲ-61, ಪು.80

51.ಡಾ.ಎಸ್.ಎನ್.ಶಿವರುದ್ರಸ್ವಾಮಿ-ಭಾರತದ ಇತಿಹಾಸ, ಪು.297

52.ಪೂರ್ವೋಕ್ತ, ಪು.302

53.ಬಿ.ಎಲ್.ರೈಸ್(ಸಂ)- EC-IX ದೇವನಹಳ್ಳಿ-42, ಪು.176

54.ಎ ಆರ್ ಐ 1965-66 ಸಂ-13 ಪು.359-60

55.ಬೆಂಗಳೂರು-37, ದಾಸರಹಳ್ಳಿ, ಪು.18

56.ಬಿ.ಎಲ್.ರೈಸ್(ಸಂ)-EC-IX, ಹೊಸಕೋಟೆ-111, ಕಮ್ಮಸಂದ್ರ, ಪು.224

57.ಡಾ.ಎಸ್.ಎನ್.ಶಿವರುದ್ರಸ್ವಾಮಿ-ಭಾರತದ ಇತಿಹಾಸ, ಪು.399

58.ಬಿ.ಎಲ್.ರೈಸ್(ಸಂ)-ನೆಲಮಂಗಲ-1 ಸೋಲದೇವನಹಳ್ಳಿ, ಪು.55

59.ಪೂರ್ವೋಕ್ತ, ನೆಲಮಂಗಲ-37, ಹುಸ್ಕೂರು, ಪು.67

60.ಬಿ.ಎಲ್.ರೈಸ್-EC-IX ಬೆಂಗಳೂರು-32, ಕೆಂಪಾಪುರ, ಪು.17

61.ಪೂರ್ವೋಕ್ತ, ಆನೇಕಲ್ಲು-74, ಬೊಮ್ಮೊಂಡಹಳ್ಳಿ, ಪು.252

62.ಪೂರ್ವೋಕ್ತ, ನೆಲಮಂಗಲ–3, ಬಿನ್ನಮಂಗಲ, ಪು.58

63.ಎಚ್.ಜಯಮ್ಮಕರಿಯಣ್ಣ–ನೊಳಂಬರ ಇತಿಹಾಸ ದರ್ಶನ, ಪು.20

64.ಬಿ.ಎಲ್.ರೈಸ್(ಸಂ)–EC-IX ಬೆಂಗಳೂರು–40, ವರ್ತೂರು, ಪು.19

65.ಎಂ.ಎಸ್.ಕೃಷ್ಣಮೂರ್ತಿ– ದ ನೊಳಂಬರು, ಪು.12

66.ಬಿ.ಎಲ್.ರೈಸ್(ಸಂ)–EC-IX ಹೊಸಕೋಟೆ–9, ದಳಸಿಗೆರೆಗ್ರಾಮ, ಪು.196

67.ಪೂರ್ವೋಕ್ತ, ದೊಡ್ಡಬಳ್ಳಾಪುರ–9, ಜಕ್ಕಸಂದ್ರ, ಪು.136

68.ಪೂರ್ವೋಕ್ತ, ಹೊಸಕೋಟೆ–111, ಕಮ್ಮಸಂದ್ರ, ಪು.224

69.B.L.Rice-Mysore A Gazetteer compiled for government p.251

70.ಎಂ.ವಿ.ಕೃಷ್ಣರಾವ್, ಕೇಶವಭಟ್ಟ(ಸಂ)–ಕರ್ನಾಟಕ ಇತಿಹಾಸ ದರ್ಶನ, ಪು.220

71.ಪೂರ್ವೋಕ್ತ–ಕರ್ನಾಟಕ ಇತಿಹಾಸ ದರ್ಶನ, ಪು.227

72.ಬಿ.ಎಲ್.ರೈಸ್(ಸಂ) ಬೆಂಗಳೂರು–85ಸಿ ಬೇಗೂರು, ಪು.31

73.ಬಿ.ಎಲ್.ರೈಸ್ EC-IX ಆನೇಕಲ್ಲು–52, ವೊಂಪಲುಗಟ್ಟ, ಪು.248

74.ಪೂರ್ವೋಕ್ತ, ಬೆಂಗಳೂರು–25, ಚಿಕ್ಕಬಾಣಾವರ, ಪು.14

75.ಪೂರ್ವೋಕ್ತ, ಬೆಂಗಳೂರು–112, ವಸಂತಹಳ್ಳಿ, ಪು.41

76.ಪೂರ್ವೋಕ್ತ, ಆನೇಕಲ್ಲು–30, ಚಮೇನಹಳ್ಳಿ, ಪು.242

77.ಪೂರ್ವೋಕ್ತ, ಬೆಂಗಳೂರು–11, ದೊಮ್ಮಲೂರು, ಪು.11

78.ಪೂರ್ವೋಕ್ತ, ಬೆಂಗಳೂರು–91ಎ, ಬೇಗೂರು, ಪು.32

79.ಪೂರ್ವೋಕ್ತ, ಬೆಂಗಳೂರು–111, ರಾಮಸಮುದ್ರ, ಪು.40

80.ಪೂರ್ವೋಕ್ತ, ಬೆಂಗಳೂರು–53, ದೊಡ್ಡನೆಕ್ಕುಂದಿ, ಪು.23

81.ಪೂರ್ವೋಕ್ತ, ಬೆಂಗಳೂರು–24, ಗಾಣಿಗರಹಳ್ಳಿ, ಪು.14

82.ಪೂರ್ವೋಕ್ತ, ಬೆಂಗಳೂರು–21, ಜಕ್ಕೂರು, ಪು.13

83.ಪೂರ್ವೋಕ್ತ, ಬೆಂಗಳೂರು–45, ದೊಡ್ಡಕನ್ನೆಲ್ಲಿ, ಪು.20

84.ಪೂರ್ವೋಕ್ತ, ಬೆಂಗಳೂರು–101, ಕೋನಪ್ಪನ ಅಗ್ರಹಾರ, ಪು.36

85.ಪೂರ್ವೋಕ್ತ, ಬೆಂಗಳೂರು–97, ಬೇಗೂರು, ಪು.36

86.ಪೂರ್ವೋಕ್ತ, ಬೆಂಗಳೂರು–27, ತಿಂಡ್ಲು, ಪು.15

87.ಪೂರ್ವೋಕ್ತ, ಬೆಂಗಳೂರು–132, ದ್ಯಾವಸಂದ್ರ, ಪು.50

88.ಪೂರ್ವೋಕ್ತ, ಆನೇಕಲ್ಲು–29, ಕತ್ತರಿಗುಪ್ಪೆ, ಪು.242

89. ಪೂರ್ವೋಕ್ತ, ಆನೇಕಲ್ಲು–82, ಬನ್ನೇರುಘಟ್ಟ, ಪು.254

90. ಪೂರ್ವೋಕ್ತ, ಬೆಂಗಳೂರು–81, ಅಗರ, ಪು.29

91. ಪೂರ್ವೋಕ್ತ, ಬೆಂಗಳೂರು–67, ಮಡಿವಾಳ, ಪು.26

92. ಪೂರ್ವೋಕ್ತ, ಬೆಂಗಳೂರು–73, ಪು.27

93. ಪೂರ್ವೋಕ್ತ, ಬೆಂಗಳೂರು–71, ಇಬ್ಬಲೂರು, ಪು.27

94. ಪೂರ್ವೋಕ್ತ, ಬೆಂಗಳೂರು–122, ಕನ್ನೆಲ್ಲಿ, ಪು.44

95. ಪೂರ್ವೋಕ್ತ, ಆನೇಕಲ್ಲು–86, ಬನ್ನೇರುಗಟ್ಟ, ಪು.255

96. ಪೂರ್ವೋಕ್ತ, ಆನೇಕಲ್ಲು–79, ಪು.255

97. ಪೂರ್ವೋಕ್ತ, ಆನೇಕಲ್ಲು–64, ಪು.250

98. ಪೂರ್ವೋಕ್ತ, ಬೆಂಗಳೂರು–127, ಕೊಡಿಗೆಹಳ್ಳಿ, ಪು.47

99. ಪೂರ್ವೋಕ್ತ, ಆನೇಕಲ್ಲು–39, ಚಿಂತಲಮಡಿವಾಳ, ಪು.244

100. ಪೂರ್ವೋಕ್ತ, ದೇವನಹಳ್ಳಿ–56, ದೊಡ್ಡಜಾಲ, ಪು.183

101. ಪೂರ್ವೋಕ್ತ, ಬೆಂಗಳೂರು–26, ದೊಮ್ಮಸಂದ್ರ, ಪು.15

102. ಪೂರ್ವೋಕ್ತ, ಬೆಂಗಳೂರು–123, ಗೊಗಂಡಿಪುರ, ಪು.45

103. ಪೂರ್ವೋಕ್ತ, ಬೆಂಗಳೂರು–52, ಮಾರತ್ತಹಳ್ಳಿ, ಪು.22

104. ಬೆಂಗಳೂರು–ಅನುಬಂಧ EC-IX–161, ಪು.33

105. ಡಾ.ಆರ್.ಗೋಪಾಲ್(ಸಂ)–ನಾಡಪ್ರಭು ಕೆಂಪೇಗೌಡರ ಜೀವನ ಮತ್ತು ಸಾಧನೆಗಳು, ಪು.126

106. ಪೂರ್ವೋಕ್ತ, ಪು.127

107. ಬಿ.ಎಲ್.ರೈಸ್(ಸಂ)–EC-IX ಬೆಂಗಳೂರು–80, ಅಗರ, ಪು.29

108. ಬೆಂಗಳೂರು–ಅನುಬಂಧ EC-IX ಆನೇಕಲ್ಲು–100, ಪು.7

109. ಬಿ.ಎಲ್.ರೈಸ್(ಸಂ)–EC-IX ಬೆಂಗಳೂರು–19, ಪು.12

110. ಬೆಂಗಳೂರು–ಅನುಬಂಧ EC-IX ನೆಲಮಂಗಲ–186, ಪು.131

111. ಬಿ.ಎಲ್.ರೈಸ್(ಸಂ)– EC-IX ಬೆಂಗಳೂರು–57, ದಾಸರಹಳ್ಳಿ, ಪು.24

112. ಪೂರ್ವೋಕ್ತ, ಆನೇಕಲ್ಲು–22, ಕೂತುಗೊಂಡಹಳ್ಳಿ, ಪು.241

113. ಪಿ.ವಿ.ಕೃಷ್ಣಮೂರ್ತಿ–ಕುಕ್ಕಲನಾಡು ಒಂದು ಪ್ರಾಚೀನ ಪ್ರಾದೇಶಿಕ ವಿಭಾಗ, ಇತಿಹಾಸ ದರ್ಶನ, ಸಂಪುಟ.7 ಪು.144,145

114. ಬಿ.ಎಲ್.ರೈಸ್(ಸಂ)–EC-IX ನೆಲಮಂಗಲ–12, ಕಿತ್ತನಹಳ್ಳಿ, ಪು.61

115. ಪೂರ್ವೋಕ್ತ, ನೆಲಮಂಗಲ–9, ಮಂತಾಳು, ಪು.60

116. ಪೂರ್ವೋಕ್ತ, ಬೆಂಗಳೂರು–110, ಬ್ಯಾಡರಹಳ್ಳಿ, ಪು.39

117. ಪೂರ್ವೋಕ್ತ, ನೆಲಮಂಗಲ–19, ಪು.63

118. ಪೂರ್ವೋಕ್ತ, ದೇವನಹಳ್ಳಿ–50, ಪು.181

119. ಪೂರ್ವೋಕ್ತ, ಬೆಂಗಳೂರು–117, ವಡೆಯರಹಳ್ಳಿ, ಪು.42

120. ಪೂರ್ವೋಕ್ತ, ಬೆಂಗಳೂರು–26, ದೊಮ್ಮಸಂದ್ರ, ಪು.15

121. ಸೂರ್ಯನಾಥ ಕಾಮತ್, ಪ್ರೊ.ಎಂ.ಎಚ್.ಕೃಷ್ಣಯ್ಯ(ಸಂ)– ಬೆಂಗಳೂರು ದರ್ಶನ, ಪು.12

122. ಡಾ.ಸೂರ್ಯನಾಥಕಾಮತ್–ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಪು.70

123. ಡಾ.ಹಾ.ಮಾ.ನಾಯಕ(ಸಂ)–ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ, ಪು.1214

124. ಎಂ.ಜಿ.ಮಂಜುನಾಥ(ಸಂ)–ಯಲಹಂಕ ನಾಡಪ್ರಭುಗಳ ಶಾಸನ ಸಂಪುಟ, ಪು. xxxvii

125. ಬೆಂಗಳೂರು–ಅನುಬಂಧ EC-IX–165 ಪು.35

126. ಬಿ.ಎಲ್.ರೈಸ್(ಸಂ)– EC-IX-ದೇವನಹಳ್ಳಿ–60, ಪು.184

127. ಎಂ.ಜಿ.ಮಂಜುನಾಥ(ಸಂ)–ಯಲಹಂಕ ನಾಡಪ್ರಭುಗಳ ಶಾಸನ ಸಂಪುಟ, ನಾಗಶೆಟ್ಟಹಳ್ಳಿ–4 ಪು.9

128. ಪೂರ್ವೋಕ್ತ, ಮಾಸ್ತಿ–24, ಪು.43

129. ಪೂರ್ವೋಕ್ತ, ಪು.xxxiii

130. ಬಿ.ಎಲ್.ರೈಸ್(ಸಂ)– EC-IX- ದೊಡ್ಡಬಳ್ಳಾಪುರ–26, ಪು.141

131. ಬಿ.ಎಲ್.ರೈಸ್–ಮೈಸೂರು ಗೆಜೆಟಿಯರ್, ಪು.20

132. ಬಿ.ಎಲ್.ರೈಸ್(ಸಂ)–EC-IX – ಮಾಗಡಿ–45, ನಾರಸಂದ್ರ, ಪು.117

133. ಪೂರ್ವೋಕ್ತ, ಬೆಂಗಳೂರು–57, ದಾಸರಹಳ್ಳಿ, ಪು.24

134. ಅನುಬಂಧ ಸಂಪುಟ, ನೆಲಮಂಗಲ–107, ಶಿವಗಂಗೆ, ಪು.119

135. ಪೂರ್ವೋಕ್ತ, ಬೆಂಗಳೂರು–170, ಪು.26

136. ಎಂ.ಜಿ.ಮಂಜುನಾಥ(ಸಂ)–ಬೆಂಗಳೂರಿನ ಬಖೈರುಗಳು, ಪು.19

137. ಎಂ.ಜಿ.ಮಂಜುನಾಥ(ಸಂ)–ಯಲಹಂಕ ನಾಡಪ್ರಭುಗಳ ಶಾಸನ ಸಂಪುಟ, ಮಾಸ್ತಿ, ಪು.43

138. ಎಂ.ಜಿ.ಮಂಜುನಾಥ(ಸಂ)–ಬೆಂಗಳೂರಿನ ಬಖೈರುಗಳು, ಪು.42

139. ಡಾ.ಸೂರ್ಯನಾಥ ಕಾಮತ್, ಪ್ರೊ.ಎಂ.ಎಚ್.ಕೃಷ್ಣಯ್ಯ (ಸಂ)–ಬೆಂಗಳೂರು ದರ್ಶನ, ಪು.15

140. ಡಾ.ಎಂ.ಜಿ.ಮಂಜುನಾಥ–ಯಲಹಂಕ ನಾಡಪ್ರಭುಗಳ ಶಾಸನ ಸಂಪುಟ, ಪು.xxxvi

141. ಪೂರ್ವೋಕ್ತ, ಕೃಷ್ಣಸಾಗರ–43, ಪು.70

142. ಬಿ.ಎಲ್.ರೈಸ್(ಸಂ)– EC-IX-ಬೆಂಗಳೂರು–1, ಪು.1

143. ಡಾ.ಆರ್.ಗೋಪಾಲ್(ಸಂ)–ನಾಡಪ್ರಭು ಕೆಂಪೇಗೌಡರ ಜೀವನ ಮತ್ತು ಸಾಧನೆಗಳು, ಪು.112

144. ಪಿ.ವಿ.ಕೃಷ್ಣಮೂರ್ತಿ–ಸುಗಟೂರು ವೀರಶೈವ ಅರಸು ಮನೆತನ, ಪು.7

145. ಬಿ.ಎಲ್.ರೈಸ್(ಸಂ)– EC-IX ಹೊಸಕೋಟೆ–1, ನಂದಗುಡಿ ಹೋಬಳಿ, ಪು.194

146. ಪೂರ್ವೋಕ್ತ, ಹೊಸಕೋಟೆ–73, ಅನುಪುಹಳ್ಳಿ, ಪು.214

147. ಪೂರ್ವೋಕ್ತ, ಹೊಸಕೋಟೆ–73, ಅನುಪುಹಳ್ಳಿ, ಪು.214

148. ಪೂರ್ವೋಕ್ತ, ಆನೇಕಲ್ಲು–71 ಕಾಡುಜಕ್ಕನಹಳ್ಳಿ, ಪು.252

149. ಪೂರ್ವೋಕ್ತ, ಹೊಸಕೋಟೆ–54, ಸೂಲಿಬಲೆ, ಪು.208

150. ಪೂರ್ವೋಕ್ತ, ಆನೇಕಲ್ಲು–47, ಪು.245

151. ಪೂರ್ವೋಕ್ತ, ಆನೇಕಲ್ಲು–60, ಬಿದುರುಗೆರೆ, ಪು.249

152. ಪೂರ್ವೋಕ್ತ, ಹೊಸಕೋಟೆ–105, ಪು.221

153. ಬಿ.ಎಲ್.ರೈಸ್, ಆನೇಕಲ್ಲು–80, ಪು.253

154. ಪೂರ್ವೋಕ್ತ, ಆನೇಕಲ್ಲು–70, ಜಿಗುಣಿ ಪು.251

155. ಎಂ.ಜಿ.ಮಂಜುನಾಥ(ಸಂ)–ಬೆಂಗಳೂರಿನ ಬಖೈರುಗಳು, ಪು.19

156. ಪೂರ್ವೋಕ್ತ, ಬೆಂಗಳೂರು–60, ಅಲ್ಲಾಳಸಂದ್ರ, ಪು.24

157. ಪೂರ್ವೋಕ್ತ, ದೊಡ್ಡಬಳ್ಳಾಪುರ–28, ಹಂಚಿಪುರಹಳ್ಳಿ, ಪು.207

158. ಪೂರ್ವೋಕ್ತ, ಹೊಸಕೋಟೆ–46, ಹಡಕನಹಳ್ಳಿ, ಪು.141

159. ಪೂರ್ವೋಕ್ತ, ಹೊಸಕೋಟೆ–53, ಹಡಕನಹಳ್ಳಿ, ಪು.207

160. ಬ.ನ.ಸುಂದರ ರಾವ್–ಬೆಂಗಳೂರಿನ ಇತಿಹಾಸ, ಪು.111

161. ಪೂರ್ವೋಕ್ತ – ಪು.105

162. ಡಾ.ಎಂ.ಜಿ.ಮಂಜುನಾಥ–ಬೆಂಗಳೂರಿನ ಬಖೈರುಗಳು, ಪು.49

163. ಸೂರ್ಯನಾಥಕಾಮತ್, ಎಂ.ಎಚ್.ಕೃಷ್ಣಯ್ಯ(ಸಂ)–ಬೆಂಗಳೂರು ದರ್ಶನ, ಪು.24

164. ಡಾ.ಎಂ.ಜಿ.ಮಂಜುನಾಥ–ಬೆಂಗಳೂರಿನ ಬಖೈರುಗಳು, ಪು.49–54

165. ಬಿ.ಎಲ್.ರೈಸ್(ಸಂ)–EC-IX ನೆಲಮಂಗಲ–66, ಪು.84

166. ಪೂರ್ವೋಕ್ತ, ನೆಲಮಂಗಲ–65, ಪು.83

167. ಪೂರ್ವೋಕ್ತ, ಬೆಂಗಳೂರು–118, ಕೊತ್ತನೂರು, ಪು.43

168. ಪೂರ್ವೋಕ್ತ, ಆನೇಕಲ್ಲು–90, ಬಿಂಗೀಪುರ, ಪು.246

169. ಬ.ನ.ಸುಂದರರಾವ್–ಬೆಂಗಳೂರಿನ ಇತಿಹಾಸ, ಪು.141

170. ಡಾ.ಸೂರ್ಯನಾಥಕಾಮತ್, ಎಂ.ಎಚ್.ಕೃಷ್ಣಯ್ಯ(ಸಂ)–ಬೆಂಗಳೂರು ದರ್ಶನ, ಪು.27

171. ಡಾ.ಎಂ.ಜಿ.ಮಂಜುನಾಥ–ಬೆಂಗಳೂರಿನ ಬಖೈರುಗಳು, ಪು.54,55

172. ಪೂರ್ವೋಕ್ತ, ಪು.190

173. ಡಾ.ಎಂ.ಜಿ.ಮಂಜುನಾಥ–ಬೆಂಗಳೂರಿನ ಬಖೈರುಗಳು, ಪು.56

174. ಡಾ.ಸೂರ್ಯನಾಥಕಾಮತ್, ಎಂ.ಎಚ್.ಕೃಷ್ಣಯ್ಯ(ಸಂ)–ಬೆಂಗಳೂರು ದರ್ಶನ, ಪು.25

175. ಬಿ.ಎಲ್.ರೈಸ್(ಸಂ)–EC-IX ಬೆಂಗಳೂರು–7, ಪು.10

176. ಬಿ.ಎಲ್.ರೈಸ್(ಸಂ)–EC-IX ಬೆಂಗಳೂರು–7, ಪು.10

177. Francis Buchanan- A Journey from madras through the countries of mysore canara and malbar, p-193,194

178. ಡಾ.ಸೂರ್ಯನಾಥಕಾಮತ್, ಎಂ.ಎಚ್.ಕೃಷ್ಣಯ್ಯ(ಸಂ)–ಬೆಂಗಳೂರು ದರ್ಶನ, ಪು.38

179. ಪೂರ್ವೋಕ್ತ–ಬೆಂಗಳೂರು ದರ್ಶನ, ಪು.40

180. ಪೂರ್ವೋಕ್ತ –ಬೆಂಗಳೂರು ದರ್ಶನ, ಪು.46

181. ಪೂರ್ವೋಕ್ತ –ಬೆಂಗಳೂರು ದರ್ಶನ, ಪು.46

---

# ಅಧ್ಯಾಯ–ಎರಡು

## ಆಡಳಿತ ಪದ್ಧತಿ

ಪ್ರಾಚೀನ ಕಾಲದಲ್ಲಿ ರಾಜ ಮಹಾರಾಜರು ಉತ್ತಮವಾಗಿ ಆಡಳಿತ ನಡೆಸಲು ತಮ್ಮ ಸಾಮ್ರಾಜ್ಯವನ್ನು ಹಲವಾರು ರೀತಿಯಲ್ಲಿ ಭೌಗೋಳಿಕ ವಿಭಾಗವನ್ನಾಗಿ ಮಾಡಿಕೊಳ್ಳುತ್ತಿದ್ದುದನ್ನು ಗಮನಿಸಬಹುದು. ಅಂದಿನ ಆಡಳಿತ ವ್ಯವಸ್ಥೆಯನ್ನು ರಾಜ್ಯಾಡಳಿತ ಮತ್ತು ಗ್ರಾಮಾಡಳಿತಗಳೆಂದು ಎರಡು ರೀತಿಯಲ್ಲಿ ವಿಂಗಡಿಸಿಕೊಳ್ಳಬಹುದು. ಹಲವು ಗ್ರಾಮಗಳು, ಊರುಗಳು ಸೇರಿ ರಾಜ್ಯವಾಗಿರುತ್ತದೆ. ಪ್ರತಿಯೊಂದು ಗ್ರಾಮವು ಪ್ರತ್ಯೇಕವಾದ ಸಣ್ಣ ಆಡಳಿತ ಘಟಕಗಳಂತ್ತಿತ್ತು. ಕರ್ನಾಟಕವನ್ನು ಆಳಿದ ಅರಸು ಮನೆತನಗಳ ಬೃಹತ್ ರಾಜ್ಯವ್ಯವಸ್ಥೆಯಲ್ಲಿ ಬೆಂಗಳೂರಿನ ಆಡಳಿತವ್ಯವಸ್ಥೆ ಹೇಗಿತ್ತು ಎಂಬುದನ್ನು ಈ ಅಧ್ಯಾಯದಲ್ಲಿ ಶಾಸನಾಧಾರಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸಲಾಗಿದೆ. ಆಡಳಿತ ವ್ಯವಸ್ಥೆ ಹೇಗಿತ್ತು? ರಾಜ್ಯಡಳಿತದಲ್ಲಿ ರಾಜನ ಸ್ಥಾನವೇನು? ಇತರೆ ಅಧಿಕಾರಿ ವರ್ಗಗಳು, ಪ್ರಾಂತೀಯ ವಿಭಾಗಗಳನ್ನು ಶಾಸನಗಳ ಹಿನ್ನೆಲೆಯಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಹಾಗೂ ವಿವಿಧ ರಾಜಮನೆತನಗಳ ಆಳ್ವಿಕೆಯಲ್ಲಿ ಬೆಂಗಳೂರಿನ ಆಡಳಿತ ಪದ್ಧತಿಯನ್ನು ಕುರಿತು ಈ ಅಧ್ಯಯನದಲ್ಲಿ ವಿವರಿಸಲಾಗುವುದು.

ಆಡಳಿತ ಎಂಬ ಪದವು ಇಂಗ್ಲೀಷ್‌ನ Administration ಎನ್ನುವ ಪದಕ್ಕೆ ಸಂವಾದಿಯಾಗಿದೆ. 'ಆಳ್' ಎಂಬ ಧಾತುವಿನಿಂದ ಬಂದ ಆಳು, ಆಳ್ವಿಕೆ, ಎಂಬ ಪದಗಳು ಬಳಕೆಯಲ್ಲಿವೆ. ಕೌಟಿಲ್ಯನ ಅರ್ಥಶಾಸ್ತ್ರದ ಪ್ರಕಾರ ಆಡಳಿತ ಎಂದರೆ, "ರಾಜ್ಯದಲ್ಲಿ ನಡೆಯುವ ಎಲ್ಲಾ ರೀತಿಯ ಆರ್ಥಿಕ ಚಟುವಟಿಕೆಗಳನ್ನು ನೋಡಿಕೊಳ್ಳಲು ಪ್ರತ್ಯೇಕ ಅಧಿಕಾರಿಗಳನ್ನು ನೇಮಿಸುವುದು. ಉದಾಹರಣೆಗೆ, ಕೃಷಿ ಭೂಮಿಯ ಲೆಕ್ಕಪತ್ರ, ತೆರಿಗೆ, ಮಾರಾಟ, ಸೈನಿಕವ್ಯವಸ್ಥೆ ಹೀಗೆ ಪ್ರತಿಯೊಂದು ಕೆಲಸಕ್ಕೂ ಅಧಿಕಾರಿಯನ್ನು ನೇಮಕಮಾಡಬೇಕು. ಆ ಅಧಿಕಾರಿಗಳು ವ್ಯವಸ್ಥಿತವಾಗಿ ತಮ್ಮ ಕೆಲಸವನ್ನು ನಿರ್ವಹಿಸಿಕೊಂಡು ಸುವ್ಯವಸ್ಥಿತ ಆಡಳಿತ ನಡೆಸಬೇಕು ಎಂಬ ಅರ್ಥದಲ್ಲಿ ಹೇಳಿದ್ದಾನೆ".[1] ರಾಜರು ತಮ್ಮ ಶಕ್ತಿ ಸಾಮರ್ಥ್ಯಗಳಿಗನುಸಾರವಾಗಿ ಆಡಳಿತವನ್ನು ನಡೆಸುವುದರ ಮೂಲಕ ರಾಜ್ಯದ ಸುಭಿಕ್ಷೆಯನ್ನು ಕಾಪಿಟ್ಟುಕೊಳ್ಳುತ್ತಿದ್ದರು. ಬದಲಾವಣೆಗಳು, ಏರಿಳಿತಗಳು, ರಾಜಕೀಯ ಅಸ್ಥಿರತೆ, ಯುದ್ಧ ಮೊದಲಾದವು ರಾಜಕೀಯ ಆಡಳಿತದಲ್ಲಿ ಕಂಡುಬರುವ ನಿರಂತರ ಪ್ರಕ್ರಿಯೆಗಳು. ಬೆಂಗಳೂರನ್ನು ಶಾತವಾಹನರಿಂದ ಮೈಸೂರು ಅರಸರವರೆಗೂ ಹಲವು ರಾಜವಂಶಗಳು ಆಳ್ವಿಕೆ ನಡೆಸಿದ್ದಾರೆ. ಅವರಿಗೆ ಅಧೀನರಾಗಿದ್ದ ಸಣ್ಣ–ಪುಟ್ಟ ಪಾಳೇಗಾರರು ಮತ್ತು ನಾಡಪ್ರಭುಗಳು ಕಾಣಸಿಗುತ್ತಾರೆ. ಈ ರೀತಿ ಆಳಿದ ರಾಜರ ಕೈಯಲ್ಲೇ

ಅಧಿಕಾರ ಕೇಂದ್ರೀಕೃತವಾಗಿರುತ್ತಿತ್ತು. ಒಂದು ರಾಜವಂಶದ ಅಧಿಕಾರವಧಿ ಕೊನೆಗೊಂಡು ಆ ಜಾಗಕ್ಕೆ ಮತ್ತೊಂದು ರಾಜವಂಶ ಬಂದರೂ ಆಡಳಿತ ಪದ್ಧತಿ ಬಹುತೇಕ ಒಂದೇ ರೀತಿಯಲ್ಲೇ ಮುಂದುವರಿಯುತ್ತಿತ್ತು. ಗಂಗ, ರಾಷ್ಟ್ರಕೂಟ, ಹೊಯ್ಸಳ, ವಿಜಯನಗರ ಅರಸರು ಹೀಗೆ ಒಬ್ಬರ ನಂತರ ಒಬ್ಬರು ಆಳ್ವಿಕೆ ನಡೆಸಿದರೂ ಅದೇ ಆಡಳಿತ ಪದ್ಧತಿ ಮುಂದುವರಿದುಕೊಂಡು ಬರುತ್ತಿತ್ತು. ಆದರೆ ಕಾಲ, ಜನರ ಅವಶ್ಯಕತೆಗಳಿಗೆ ತಕ್ಕಂತೆ ಸ್ವಲ್ಪಮಟ್ಟಿನ ಬದಲಾವಣೆಗಳು ಕಂಡುಬರುತ್ತಿದ್ದವು.

ರಾಜ್ಯದ ಆಡಳಿತ ವ್ಯವಸ್ಥೆಯಲ್ಲಿ ರಾಜನೇ ಪ್ರಧಾನ ಅಧಿಕಾರಿ. ನ್ಯಾಯಾಡಳಿತ ರಾಜನ ಜವಾಬ್ದಾರಿಯಾಗಿತ್ತು. ರಾಜರು ದೈವಾಂಶ ಸಂಭೂತರು ಎಂಬ ನಂಬಿಕೆ ಜನಸಾಮಾನ್ಯರಲ್ಲಿ ಇತ್ತು. ರಾಜ ಪ್ರತ್ಯಕ್ಷ ದೈವ ಎಂದು ಜನರು ನಂಬಿದ್ದರು. ಶಾಸನಗಳಲ್ಲಿ ರಾಜರನ್ನು ಶೌರ್ಯ, ಸಾಹಸಗಳಿಗೆ ಹೆಸರಾದ ದೇವತೆಗಳೊಂದಿಗೆ ಹೋಲಿಸಿ ಹೇಳಲಾಗುತ್ತಿತ್ತು. ಸಾಮಾನ್ಯವಾಗಿ ರಾಜನ ಜೇಷ್ಠಪುತ್ರನೇ ಮುಂದಿನ ರಾಜನಾಗುತ್ತಿದ್ದನು ಅಥವಾ ಉತ್ತರಾಧಿಕಾರಿಯಾಗುತ್ತಿದ್ದನು. ರಾಜನಲ್ಲಿ ಮುಖ್ಯವಾಗಿ ಇರಬೇಕಾದ ಅರ್ಹತೆ ಶೌರ್ಯ ಹಾಗೂ ವಿವೇಚನಾ ಶಕ್ತಿ. ರಾಜ್ಯವು ವಿಶಾಲವಾಗಿದ್ದುದರಿಂದ ದೇಶ, ರಾಜ್ಯ, ಸೀಮೆ, ನಾಡು, ವಿಷಯ, ಗ್ರಾಮಗಳನ್ನಾಗಿ ವಿಭಾಗಿಕರಿಸಿಕೊಂಡಿದ್ದರು. ಈ ವಿಭಾಗೀಕರಣವು ಆಡಳಿತವನ್ನು ವಿಕೇಂದ್ರೀಕರಿಸಲು ಸಹಾಯಕವಾಗುತ್ತಿತ್ತು. ಆಡಳಿತ ವಿಭಾಗಗಳನ್ನು ಸುವ್ಯವಸ್ಥೆಯಿಂದ ನಡೆಸಿಕೊಂಡು ಹೋಗಲು ದಕ್ಷ ಅಧಿಕಾರಿಗಳನ್ನು ನೇಮಕಮಾಡಲಾಗುತ್ತಿತ್ತು. ರಾಜನಿಗೆ ಸಹಾಯಕವಾಗಿ ಮಂತ್ರಿಗಳೂ ಇತರ ಅಧಿಕಾರಿಗಳೂ ಇರುತ್ತಿದ್ದರು. ಜನರನ್ನು ಸಂಪರ್ಕಿಸಲು ಇತರ ಕೆಲಸ ಕಾರ್ಯಗಳನ್ನು (ತೆರಿಗೆ, ಸೈನ್ಯ, ಹಣಕಾಸು) ನಿರ್ವಹಿಸಲು ಇತರೆ ಅಧಿಕಾರಿಗಳನ್ನು ನೇಮಕ ಮಾಡಲಾಗುತ್ತಿತ್ತು. ಮಹಾಪ್ರಧಾನಿ, ಇತರೆ ಮಂತ್ರಿಗಳು, ದಂಡನಾಯಕ, ಭಂಡಾರಿ, ಸಂಧಿವಿಗ್ರಹಿ, ಸೇನಾಧಿಪತಿ, ಧರ್ಮಾಧಿಕರಣ, ಸೇನಬೋವ. ಹೀಗೆ ಮೊದಲಾದ ಅಧಿಕಾರಿಗಳು ಇರುತ್ತಿದ್ದರು. ಇಂತಹ ಆಡಳಿತ ವ್ಯವಸ್ಥೆಯ ರೂಪರೇಷೆಗಳು ತಿಳಿಯಲು ಶಾಸನಗಳು ಮುಖ್ಯ ಆಕರಗಳಾಗಿವೆ. ಬೆಂಗಳೂರು ನಗರ ಜಿಲ್ಲೆಯನ್ನು ಆಳಿದ ರಾಜಮನೆತನಗಳ ರಾಜಕೀಯ ಚರಿತ್ರೆಯನ್ನು ಅಧ್ಯಯನಕ್ಕೆ ಒಳಪಡಿಸಿದಂತೆ ಅವರ ಆಡಳಿತ ವ್ಯವಸ್ಥೆಯ ವೈಖರಿಯನ್ನು ಶಾಸನಗಳ ಮೂಲಕ ತಿಳಿಯಬಹುದು.

## ಗಂಗರ ಕಾಲದ ಆಡಳಿತ ಪದ್ಧತಿ

ಗಂಗರ ಕಾಲದಲ್ಲಿ ರಾಜಪ್ರಭುತ್ವವಿತ್ತು. ರಾಜನಲ್ಲಿ ಆಡಳಿತ ಕೇಂದ್ರೀಕೃತವಾಗಿತ್ತು. ರಾಜರು ಪ್ರಶಸ್ತಿಗಳನ್ನು ಹೊಂದಿದ್ದರು. ಈ ಪ್ರಶಸ್ತಿಗಳು ಅವರ ಶೌರ್ಯ, ಪರಾಕ್ರಮ ವಂಶದ ಬಗ್ಗೆ ಮಾಹಿತಿ ನೀಡುವುದರ ಜೊತೆಗೆ ಆಡಳಿತದ ಅನುಕೂಲಕ್ಕಾಗಿ ಮಾಡಿಕೊಳ್ಳಲಾದ ವಿಭಾಗೀಕರಣದ ರೀತಿಯನ್ನು ತಿಳಿಸುತ್ತವೆ. ಕ್ರಿ.ಶ.900ರ ಶಾಸನವು ಕೊಂಗಣಿವರ್ಮನನ್ನು

'ಕುವಲಾಲಪುರವರವರಾಧೀಶ್ವರ'[2] ಎಂದು ಹೊಗಳಿದೆ. ಗಂಗರು ಪ್ರಾರಂಭದಲ್ಲಿ ಕೋಲಾರವನ್ನು ತಮ್ಮ ರಾಜಧಾನಿಯಾಗಿ ಮಾಡಿಕೊಂಡಿದ್ದರು. ಇದೇ ಶಾಸನದಲ್ಲಿ ನೀತಿಮಾರ್ಗನನ್ನು ನಂದಿಗಿರಿಯ ದೊರೆ ಎಂದಿದೆ. ಹೀಗೆ ಕೆಲವು ರಾಜರುಗಳು ತಮ್ಮ ರಾಜಧಾನಿಯ ಹೆಸರನ್ನೇ ಬಿರುದುಗಳಲ್ಲಿ ಸೇರಿಸಿಕೊಳ್ಳುತ್ತಿದ್ದರು. ಅವರೊಂದಿಗೆ ಅವರ ಆಳ್ವಿಕೆಯ ರಾಜಧಾನಿಯು ಅಮರವಾಗುತ್ತಿತ್ತು.

"ಶ್ರೀಮಜ್ಜಾಹ್ನವೇಯಕುಲಾಮಲವ್ಯೋಮಾವ ಭಾಸವ ಭಾಸ್ಕರಃ ಸ್ವಖಡ್ಗೈಕಪ್ರಹಾರಬಣ್ಢಿ ತಮಹಾಶಿಲಾಸ್ತಂಭಲಬ್ಧ ಬಲ ಪರಾಕ್ರಮೋದಾರುಣಾರಿಗಣ ವಿದಾರಣೋಪ ಲಬ್ಧಬ್ರಣವಿಭೂಷಣ ಭೂಷಿತಃ ಕಾಣ್ವಾಯ(ನ) ಸಗೋತ್ರಃ ಶ್ರೀ ಮತ್ಕೊಂಗಣಿವರ್ಮಧರ್ಮ ಮಹಾರಾಜಾಧಿರಾಜಃ ತಸ್ಯ ಪುತ್ರಃ ಪಿತುರನ್ವಾಗತಗುಣಯಕ್ತೋ ವಿದ್ಯಾವಿನಯ ವಿಹಿತವೃತ್ತಃ ಸಮ್ಯಕ್ಪ್ರಜಾಪಾಲನ ಮಾತ್ರಾಧಿಗತರಾಜ್ಯ ಪ್ರಯೋಜನೋವಿದ್ವತ್ಯಾವಿ ಕಾಞ್ಚನೆ ನಿಕಷೋ ಫಲಭತೋ ನೀತಿಶಾಸ್ತ್ರಸ್ಯ ವ್ಯಕ್ತ ಪ್ರಯೋಕ್ತ್ಯ ಕುಸುತೋ ದತ್ತಕಸೂಸ್ತ್ರ ವೃತ್ತೇಕ ಪ್ರಣೀತಾಶ್ರೀಮನ್ಮಮಾಧವ ಮಹಾರಾಜಾಧಿರಾಜಃ ಪಿತೃ ಪೈತಾಮಹಾ ಗುಣಯುಕ್ತೋನೇಕ ಚಾತುರ್ದ್ಧನ್ತು ಯುದ್ಧವಾಪ್ತ ಚತುರ ಅಧಿಸಮಿಲಾಸ್ವದಿತಯರಾ ಶ್ರೀಮದ್ಧರಿವರ್ಮ್ಮ ಮಹಾರಾಜಃ(ಹರಿವರ್ಮ) ತತ್ಪುತ್ರೋ ದ್ವಿಜಗುರು ದೇವತಾವೂವನಪರೋ ನಾರಾಯಣ ಚರಣಧಾನು ಧ್ಯಾತಃ ಶ್ರೀ ಮಾನ್ವಿಷ್ಣು ಗೋಪ ಮಹಾಧಿರಾಜಃ"[3] ಎಂಬ ಒಕ್ಕಣೆ ಇದೆ. ಗಂಗರ ಕಾಲದ ಈ ಶಾಸನದ ಪಾಠವು ವಿಶೇಷವಾಗಿದೆ. ವಿಷ್ಣುಗೋಪನ ಶಾಸನವಾಗಿದ್ದು, ಆತನ ಪೂರ್ವಜ ರಾಜರ ಶಕ್ತಿ, ಗುಣ, ವಿದ್ಯೆ ಕೀರ್ತಿಯನ್ನು ಹೊಗಳುವ ವಿಷಯವಿದೆ. ಜನರು ರಾಜರನ್ನು ಪ್ರತ್ಯಕ್ಷ ದೇವರು ಎಂಬ ನಂಬಿಕೆ ಹೊಂದಿದ್ದರು. ಅಂತಹ ರಾಜರು ಸಕಲ ಗುಣ ಸಂಪನ್ನರಾಗಿದ್ದರು.

ದಂಡನಾಯಕ, ಸರ್ವಾಧಿಕಾರಿ (ಪ್ರಧಾನಮಂತ್ರಿ), ಮನೆವೆರ್ಗ್ಗಡೆ, ಹಿರಿಯಭಂಡಾರಿ, ಸೇನಾಧಿಪತಿ, ಮಹಾಪಸಾಯತ ಮತ್ತು ಸಂಧಿವಿಗ್ರಹಿ ಇವರು ದೈನಂದಿನ ಆಡಳಿತದಲ್ಲಿ ರಾಜನಿಗೆ ನೆರವಾಗುವುದಲ್ಲದೆ ರಾಜನೊಡನೆ ಸಂಚಾರಗಳಿಗೂ ದಂಡಯಾತ್ರೆಗಳಿಗೂ ಹೋಗುತ್ತಿದ್ದರು. ಬೆಂಗಳೂರಿನ ಪ್ರದೇಶದಲ್ಲಿ ಗಂಗರ ಕಾಲದ ಅಧಿಕಾರಿಗಳ ಉಲ್ಲೇಖಗಳನ್ನು ಈ ಮುಂದಿನಂತೆ ಹೆಸರಿಸಬಹುದು. ಕ್ರಿ.ಶ.797ರ ಮಣ್ಣೆ ಶಾಸನದಲ್ಲಿ, ಗಂಗದೊರೆ ಮಾರಸಿಂಹನ ಸೇನಾನಿ ಶ್ರೀವಿಜಯನು ಮಣ್ಣೆಯಲ್ಲಿ ಬಸದಿಯೊಂದನ್ನು ನಿರ್ಮಿಸಿದನು ಎಂಬ ವಿಷಯದ ಒಕ್ಕಣೆಯಿದೆ.[4] ಕ್ರಿ.ಶ.750ರ ಶಾಸನವು ಕರಿಕನಾಡನ್ನು ಉಲ್ಲೇಖಿಸುತ್ತದೆ.[5] ಈ ನಾಡಿನ ಬಿದಿರ್ಕ್ಕಲ್ಲನ್ನು ಕುಕ್ಕರನೆಂಬ ಪಾಳೇಗಾರನು ಆಳುತ್ತಿದನು. ಕಿ.ಶ.820ರ ಶಿವಮಾರನ ಕಾಲದ ಶಾಸನದಲ್ಲಿ ಮೊರಸು ನಾಡಿನ ಉಲ್ಲೇಖವಿದೆ.[6] ರಾಚಮಲ್ಲನ ಕಾಲದಲ್ಲಿ ನೊಳಂಬ ಶಿವಮಾರನು ಮೊರಸುನಾಡನ್ನು ಆಳುತ್ತಿದ್ದನು. ಮೊರಸುನಾಡು ಬೆಂಗಳೂರಿನ ಅತೀ ಪ್ರಾಚೀನ ಆಡಳಿತ ವಿಭಾಗವಾಗಿದೆ. ಈ ನಾಡನ್ನು ಮುಂದಿನ

ಅರಸರ ಆಡಳಿತದಲ್ಲೂ ಹಾಗೆ ಉಳಿಸಿಕೊಂಡಿರುವುದು ಶಾಸನಗಳಿಂದ ತಿಳಿದುಬರುತ್ತದೆ. ಕ್ರಿ.ಶ.870ರ ಶಾಸನದಲ್ಲಿ ಇರ್ವ್ವಲಿಯೂರಿನ ಅಧಿಕಾರಿ ಇರುಗಮಯ್ಯ ಎಂಬುವನ ಉಲ್ಲೇಖವಿದೆ.[7] ಅಧಿಕಾರಿಗಳು ಆಡಳಿತದ ಅವಿಭಾಜ್ಯ ಅಂಗಗಳಿದ್ದಂತೆ. ಹೀಗೆ ಗಂಗರ ಕಾಲದಲ್ಲಿ ಸೇನಾನಿಯಾಗಿ ಶ್ರೀವಿಜಯನಿದ್ದರೆ, ನಾಡುಗಳ ಅಧಿಪತಿಗಳಾಗಿ ಶಿವಮಾರನಿದ್ದನು. ಊರಿನ ಅಧಿಕಾರಿಯಾಗಿ ಇರುಗಮಯ್ಯ ಎಂಬುವನಿದ್ದನು.

ಗಂಗರ ಕಾಲದಲ್ಲಿ ಬೆಂಗಳೂರು ಪ್ರಾಂತ್ಯದ ನಾಯಕನಾಗಿ ನಾಗತ್ತರ ಎಂಬುವನಿದ್ದನು. ಈತ ಗಂಗರ ಸಾಮಂತ ದೊರೆಯಾಗಿದ್ದನು. ಸಾಮಂತ ಅಧಿಕಾರಿಗಳು ಸಾಮ್ರಾಜ್ಯದ ಆಡಳಿತ ವಿಭಾಗಗಳನ್ನು ಆಳುತ್ತಿದ್ದರು. ಹಾಗೂ ದಂಡನಾಯಕರಾಗಿ ವೀರತ್ವದಿಂದ ಹೋರಾಡಿ ರಾಜ್ಯ ರಕ್ಷಣೆಗೆ ಮುಂದಾಗುತ್ತಿದ್ದರು. ಇಂತಹ ಅಧಿಕಾರಿಗಳಿಗೆ ರಾಜನು ಸಾಮಂತ ಅಧಿಕಾರಿಯ ಪಟ್ಟ ಕಟ್ಟಿ ನಾಡುಗಳ ಆಳ್ವಿಕೆಯ ಜವಾಬ್ದಾರಿ ನೀಡಲಾಗುತ್ತಿತ್ತು. ಕ್ರಿ.ಶ.900 ರ ಶಾಸನದಲ್ಲಿ[8] ಎರೆಯಪ್ಪನ ಸಾಮಂತಾಧಿಕಾರಿ ನಾಗತ್ತರನಿಗೆ ಬೆಂಪೂರು 12 ಊರುಗಳನ್ನು ನೀಡಲಾಗಿತ್ತು ಎಂದು ತಿಳಿಯುತ್ತದೆ. ಬೆಂಗಳೂರು ಪ್ರಾಂತ್ಯದ ಸಾಮಂತ ಅಧಿಕಾರಿಯಾಗಿ ನಾಗತ್ತರನು ನೇಮಕಗೊಂಡಿದ್ದನು. ದೊಡ್ಡಬೇಗೂರಿನಲ್ಲಿ ದೊರೆತಿರುವ ನಾಗತ್ತರನ ಶಾಸನದಲ್ಲಿ ಈತನನ್ನು ವೃಷಭ ಲಾಂಚನಂ, ಸಮರಪ್ರವೀಣಂ, ಕಾಮಿನೀಕಾಮಂ, ಸತ್ಯರಾಧೇಯಂ, ಸಾಮಂತಸುಂದರಂ, ಲೀಲಾಪುರಂದರಂ, ಘಟೇಯಂ, ಮುಂತಾದ ವಿಶೇಷಣಗಳಿಂದ ಹೊಗಳಿದೆ. ಈತನು ಸತ್ಯವಾಕ್ಯ ಪೆರ್ಮಾಡಿಯ(868–905) ಕಾಲದಿಂದಲೂ ಬೆಂಪೂರು ನಾಡನ್ನು ನೋಡಿಕೊಳ್ಳುತ್ತಿದ್ದ. ಎರೆಯಪ್ಪನ(886–921) ಕಾಲದಿಂದಲೂ ಇದೇ ನಾಡಿನ ಅಧಿಕಾರಿಯಾಗಿದ್ದನು.[9] ಇವನ ಉಲ್ಲೇಖ ನಮಗೆ ಕ್ರಿ.ಶ.900ರ ಬೇಗೂರು ಶಾಸನದಲ್ಲಿ ಮತ್ತು ಕ್ರಿ.ಶ.900ರ ಕಾಲದ ನಾಗೇಶ್ವರ ದೇವಾಲಯದಲ್ಲಿರುವ ಶಾಸನದಲ್ಲಿ ಉಲ್ಲೇಖವಿದೆ. ಈ ಶಾಸನವು ನಾಗತ್ತರನ ವೀರಮರಣವನ್ನು ಹೇಳುತ್ತದೆ. ನಾಗತ್ತರ ಎಂಬುವನು ಸ್ವರ್ಗಕ್ಕೆ ಹೋಗುತ್ತಿದ್ದಾನೆ ಎಂದು ಹೇಳುವ ಶಾಸನ. ಕ್ರಿ.ಶ.900ರ ಮತ್ತೊಂದು ಶಾಸನವು ನಾಗತ್ತರನ ಆಳು ಮಂಗಳ ಬೀವಣ್ಣನೆಂಬುವನು ವೀರಾವೇಶದಿಂದ ಹೋರಾಡಿ ತುರುಕಾಳಗದಲ್ಲಿ ಮಡಿದಿರುವ ವಿಷಯ ತಿಳಿಸುತ್ತದೆ.[10]

## ರಾಷ್ಟ್ರಕೂಟರ ಆಡಳಿತ ಪದ್ಧತಿ

ಬೆಂಗಳೂರು ನಗರ ಜಿಲ್ಲೆಯಲ್ಲಿ ರಾಷ್ಟ್ರಕೂಟರ ಶಾಸನಗಳು ದೊರತಿರುವುದು ವಿರಳ. ದೊರೆತಿರುವ ಶಾಸನಗಳನ್ನು ಗಮನಿಸಿ ಹೇಳುವುದಾದರೆ, ರಾಷ್ಟ್ರಕೂಟರು ತಮ್ಮನ್ನು ಯದುವಂಶದವರೆಂದು ಹೇಳಿಕೊಂಡಿದ್ದಾರೆ. ತಾವು ಕೃಷ್ಣನ ವಂಶದವರೆಂದು ಶಾಸನಗಳಲ್ಲಿ ವರ್ಣಿಸಿಕೊಂಡಿದ್ದಾರೆ. ರಾಜರು ದೈವಾಂಶ ಸಂಭೂತರು ಎಂಬ ಕಲ್ಪನೆ ಇತ್ತು. ರಾಜ ಪ್ರತ್ಯಕ್ಷ ದೈವ

ಎಂದು ಜನರೂ ನಂಬಿದ್ದರು. ರಾಜನು ದಕ್ಷನಾಗಿದ್ದು ಆಡಳಿತ ಚಾಕಚಕ್ಯತೆಯನ್ನು ಹೊಂದಿರುತ್ತಿದ್ದನು. ರಾಜ ಪ್ರಭುತ್ವ ವಂಶಪಾರಂಪರ್ಯವಾಗಿ ಬರುತ್ತಿತ್ತು. ಸಾಮಾನ್ಯವಾಗಿ ಹಿರಿಯ ಮಗ ರಾಜನಾಗುತ್ತಿದ್ದ. ಕೆಲವೊಮ್ಮೆ ದಕ್ಷತೆ, ಅರ್ಹತೆಗಳನ್ನು ಪರಿಗಣಿಸಿ ಕಿರಿಯ ಮಗನನ್ನು ಉತ್ತರಾಧಿಕಾರಿಯಾಗಿ ನೇಮಿಸುತ್ತಿದ್ದರು. ರಾಷ್ಟ್ರಕೂಟರ ಅರಸ 3ನೇ ಗೋವಿಂದ ರಾಜನಾಗಿದ್ದನ್ನು ಇಲ್ಲಿ ಉದಾಹರಿಸಬಹುದು.

ಕ್ರಿ.ಶ.802ರ ಶಾಸನದಲ್ಲಿ ಗೋವಿಂದನನ್ನು ಮಹಾರಾಜ ಎಂದು ಉಲ್ಲೇಖಿಸಲಾಗಿದೆ.[11] ಸ್ತಂಭನ ಬಗ್ಗೆ ಹೇಳುವ ಈ ಶಾಸನ ಆತನ ಅಣ್ಣ 3ನೇ ಗೋವಿಂದನನ್ನು ಮಹಾರಾಜ ಎಂದು ಕರೆದಿದೆ. ಹಾಗಾಗಿ ರಾಜತ್ವ ತಮ್ಮನಿಗೆ ದೊರಕಿರುವುದು ಕಾಣಸಿಗುತ್ತದೆ.

ಕ್ರಿ.ಶ.900 ಶಾಸನದಲ್ಲಿ ಕೈವಾರ ನಾಡನ್ನು ಕನ್ನಡದ ಅರಸನೊಬ್ಬ ಆಳುತ್ತಿದ್ದ ವಿಚಾರ ತಿಳಿಯುತ್ತದೆ.[12] ರಾಷ್ಟ್ರಕೂಟರು ಆಡಳಿತದ ದೃಷ್ಟಿಯಿಂದ ರಾಜ್ಯವನ್ನು ನಾಡುಗಳನ್ನಾಗಿ ವಿಭಾಗಿಸಿಕೊಂಡಿದ್ದರು. ಕ್ರಿ.ಶ.914ರ ಶಾಸನವು ರಾಷ್ಟ್ರಕೂಟರ ದೊರೆ ಅಕಾಲವರ್ಷನ ಕಾಲದ್ದಾಗಿದೆ. ಇವನ ಕಾಲದಲ್ಲಿ ಮಣ್ಣೆ–300, ಕುಣುಂಗ್ಗಿಲ್–500 ಪ್ರದೇಶಗಳನ್ನು ಆಳುತ್ತಿದ್ದನು.[13] ಇದರಿಂದ ರಾಷ್ಟ್ರಕೂಟರು ಪ್ರಾದೇಶಿಕತೆ ಗುರುತಿಸುವಲ್ಲಿ ಸಂಖ್ಯೆಯನ್ನು ಬಳಸುತ್ತಿದ್ದರೆಂಬುದು ಸ್ಪಷ್ಟವಾಗುತ್ತದೆ.

## ಚೋಳರ ಕಾಲದ ಆಡಳಿತ ಪದ್ಧತಿ

ಚೋಳರ ಶಾಸನಗಳಲ್ಲಿ ರಾಜನನ್ನು ಒಡೆಯರ್, ನಾಯರಾರ್ ಮತ್ತು ಚಕ್ರವರ್ತಿ ಎಂದು ಕರೆಯಲಾಗಿದೆ. ಇತರ ರಾಜವಂಶಗಳಲ್ಲಿರುವಂತೆ ಚೋಳರ ಕಾಲದಲ್ಲಿಯೂ ರಾಜನು ಕೇಂದ್ರಬಿಂದುವಾಗಿದ್ದನು. ಚೋಳರ ಆಡಳಿತ ಪದ್ಧತಿ ಉತ್ತಮವಾಗಿತ್ತು. ಆಡಳಿತದಲ್ಲಿ ರಾಜನಿಗೆ ಸಲಹೆ ಸೂಚನೆ ನೀಡಲು ಅಧಿಕಾರಿಗಳನ್ನು ನೇಮಿಸಿಕೊಂಡಿದ್ದರು. ಕ್ರಿ.ಶ.997ರ ಶಾಸನವು ಗನ್ನರಸ ಕುಱುಕುಂದ ನಾಡನ್ನು ಆಳುತ್ತಿದ ವಿಷಯವನ್ನು ತಿಳಿಸುತ್ತದೆ. ಇವನ ಅಣ್ಣ ನಾಯಕ ಶ್ರೀಧರಯ್ಯನು ಗಾವುಂಡನಾಗಿದ್ದನು. ಸಿನ್ದಗಾವುಂಡ ಎಂಬುವನು ಸತ್ತಿಮಂಗಲವನ್ನು ಆಳುತ್ತಿದ್ದನು.[14] ಗಾವುಂಡ/ಗೌಡ ಅಧಿಕಾರವನ್ನು ಒಂದೇ ಕುಟುಂಬದವರಿಗೆ ನೀಡುತ್ತಿದ್ದರು ಎಂದು ತಿಳಿದು ಬರುತ್ತದೆ.

ಕ್ರಿ.ಶ.1033ರ ರಾಜೇಂದ್ರ ಚೋಳನ ಶಾಸನ ಕ್ರಮವಾಗಿ ನೆಲಮಂಗಲ ತಾಲ್ಲೂಕಿನಲ್ಲಿರುವ ಗೋಪಾಲಕೃಷ್ಣ ಸ್ವಾಮಿ ದೇವಾಲಯದಲ್ಲಿ ಮತ್ತು ಕ್ರಿ.ಶ.1051ರ ಶಾಸನ ನೆಲಮಂಗಲದ ಸೋಲಮಂಗಲದಲ್ಲಿ ದೊರಕಿದೆ. ಈ ಎರಡು ಶಾಸನದಲ್ಲಿಯೂ ರಾಜೇಂದ್ರ ಚೋಳ ದೇವನ ಮಂತ್ರಿ ಮತ್ತು ದಂಡನಾಯಕನಾಗಿದ್ದ ವಾಮನಯ್ಯನ ಉಲ್ಲೇಖವಿದೆ. ಸೋಲಮಂಗಲದಲ್ಲಿ

ದೊರೆತ ಶಾಸನವು ಈತನು ಮೌನಿಮುನಿಯ ಹೆಸರಿನಲ್ಲಿ ಸಿದ್ದೇಶ್ವರ ಭವನವನ್ನು ಕಟ್ಟಿಸಿದನೆಂದು ತಿಳಿಸಿದರೆ, ಕ್ರಿ.ಶ.1033ರ ಶಾಸನವು ಸಿದ್ಧೇಶ್ವರ ದೇವಾಲಯವನ್ನು ಕಟ್ಟಿಸಿ ದತ್ತಿ ಬಿಟ್ಟ ವಿಷಯವನ್ನು ತಿಳಿಸುತ್ತದೆ.

ಆಡಳಿತದ ಅನುಕೂಲತೆಯ ದೃಷ್ಟಿಯಿಂದ ಚೋಳರ ಕಾಲದಲ್ಲಿ ರಾಜ್ಯವನ್ನು ಮಂಡಲ, ಒಳನಾಡು, ನಾಡು ಮತ್ತು ಕುಟ್ರುಂ ಎಂಬ ಪ್ರಾದೇಶಿಕ ವಿಭಾಗಗಳ ವರ್ಗೀಕರಣವಿತ್ತು. ಹೊಯ್ಸಳರ ಕಾಲದ ಆಡಳಿತ ವ್ಯವಸ್ಥೆಯನ್ನು ಗಮನಿಸಿದರೆ ಈ ವಿಭಾಗಗಳು ಕಾಣಸಿಗುತ್ತವೆ. ಚೋಳರನ್ನು ಸೋಲಿಸಿದ ಹೊಯ್ಸಳರು ಚೋಳರ ಆಡಳಿತ ಪದ್ಧತಿಯನ್ನೇ ಹೆಚ್ಚಾಗಿ ಅಳವಡಿಸಿಕೊಂಡಿದ್ದರು.

ಕ್ರಿ.ಶ.1051ರ ಶಾಸನವು[15] ಚೋಳರ ಕಾಲದಲ್ಲಿದ್ದ ಮಂಡಲ ಮತ್ತು ನಾಡುಗಳನ್ನು ಹೆಸರಿಸುತ್ತದೆ. ಹಾಗೂ ಬೆಂಗಳೂರು ಸುತ್ತ–ಮುತ್ತ ಅಸ್ತಿತ್ವದಲ್ಲಿದ್ದ ನಾಡುಗಳ ಉಲ್ಲೇಖವಿದೆ. 'ಕುಕ್ಕನೂರು ನಾಡಗಾವುಂಡನ ಮಗ ರಟ್ಟಕುಳಕಾಲಚೋಳ ಗಾವುಂಡ, ಬಾಣಾಪುರದ ವಿಕ್ರಮಚೋಳ ಗಾವುಂಡ, ಆಲೂರ ಚೋಳಗಾವುಂಡ, ಪಟ್ಟಂದೂರ ಉತ್ತಮ ಚೋಳಗಾವುಂಡ, ಬಾಳೆಯವಾಡಿಯ ಮುಮ್ಮಡಿ ಚೋಳಗಾವುಂಡ' ಎಂಬ ಉಲ್ಲೇಖವಿದೆ. ನಾಡಿನ ಅಧಿಪತಿಯಾಗಿ ಗಾವುಂಡರಿರುತ್ತಿದ್ದರು. ಕಿ.ಶ.1080ರ ಕುಲೋತುಂಗ ಚೋಳನ ಕಾಲದ ಶಾಸನದಲ್ಲಿ ಸಣ್ಣೆನಾಡು, ಕುಕ್ಕರನಾಡು ಮತ್ತು ವಿಕ್ರಮ ಚೋಳನಾಡುಗಳ ಉಲ್ಲೇಖವಿದೆ.[16]

## ಹೊಯ್ಸಳರ ಕಾಲದ ಆಡಳಿತ ಪದ್ಧತಿ

ತಲಕಾಡನ್ನು ವಶಪಡಿಸಿಕೊಂಡಿದ್ದ ಚೋಳರನ್ನು ಸದೆಬಡಿದು ಅಧಿಕಾರ ಗದ್ದುಗೆಯನ್ನು ಏರಿದವರು ಹೊಯ್ಸಳರು. ಚೋಳರ ಕಾಲದ ಆಡಳಿತ ಪದ್ಧತಿಯನ್ನು ಹೆಚ್ಚಿನ ಬದಲಾವಣೆಗಳಿಲ್ಲದೆ ಅಳವಡಿಸಿಕೊಂಡರು. ಹೊಯ್ಸಳರ ಕಾಲದಲ್ಲಿದ್ದ ನಾಡುಗಳನ್ನು ಗಮನಿಸಿದರೆ ಈ ಮಾತು ಸ್ಪಷ್ಟವಾಗುತ್ತದೆ. ಮುಡಿಗೊಣ್ಡ ಚೋಳಮಂಡಲ, ರಾಜೇಂದ್ರಚೋಳ ವಳನಾಡು, ರಾಜರಾಜ ಚೋಳ ವಳನಾಡು ಮುಂತಾದವು. ಪ್ರಾರಂಭದ ಹಂತದಲ್ಲಿ ಚೋಳರ ಆಡಳಿತ ಪದ್ಧತಿಯನ್ನೇ ಬಳಸುತ್ತಿದ್ದರೂ ಮುಂದೆ ಹೊಯ್ಸಳರ ಮೂರನೇ ವೀರ ಬಲ್ಲಾಳನ ಆಳ್ವಿಕೆಯ ಪ್ರಾರಂಭಕ್ಕಾಗಲೆ ಆಡಳಿತದಲ್ಲಿ ಬದಲಾವಣೆಗಳು ಕಾಣಸಿಗುತ್ತದೆ.

ಹೊಯ್ಸಳರ ಕಾಲದಲ್ಲಿ ಹಿಂದಿನ ರಾಜಮನೆತನದಲ್ಲಿದ್ದಂತೆಯೇ ರಾಜನೇ ಪ್ರತ್ಯಕ್ಷ ದೇವರು ಎಂದು ನಂಬಲಾಗಿತ್ತು. 'ಒಂದು ದೇಶದ ಜನಜೀವನವು ಆ ದೇಶದ ರಾಜನನ್ನು ಅವಲಂಬಿಸಿದ್ದಿತು. ಅವನ ಏಳುಬೀಳುಗಳೇ ರಾಜ್ಯದ ಏಳುಬೀಳು[17] ಎಂಬ ನಂಬಿಕೆ ಇತ್ತು. ಈ ಮಾತಿಗೆ ಪೂರಕವೆಂಬಂತೆ ಬೆಂಗಳೂರು ನಗರ ಜಿಲ್ಲೆಯಲ್ಲಿ ದೊರೆತ ಶಾಸನಗಳಲ್ಲಿ ಈ ವಂಶದ

ರಾಜರ ಹೆಸರಿನ ಜೊತೆಗೆ ದೇವ ಎಂದು ಬಳಸಲಾಗಿದೆ. ಪೊಯ್ಸಳದೇವ, ನರಸಿಂಗ ದೇವರು, ನರಸಿಂಹ ದೇವರಸ, ಬಲ್ಲಾಳ ದೇವರಸ ಎಂದು ಹೇಳಿರುವುದು ರಾಜನೇ ಪ್ರತ್ಯಕ್ಷ ದೈವ ಎಂದು ಜನರು ನಂಬಿದ್ದರು ಎಂಬುದನ್ನು ಸೂಚಿಸುತ್ತದೆ. 'ರಾಜ್ಯತ್ವದ ಮೂಲಗುರಿ ಒಂದೇ ಆಗಿರುತ್ತಿತ್ತು. ದುಷ್ಟಶಿಕ್ಷಣ ಶಿಷ್ಟರಕ್ಷಣ ಮತ್ತು ಆ ಮೂಲಕ ಸಮಾಜದಲ್ಲಿ ಸುವ್ಯವಸ್ಥೆಯನ್ನ ಏರ್ಪಡಿಸುವುದು. ರಾಜನೇ ಸರ್ವತಂತ್ರ ಸ್ವತಂತ್ರ ಸರ್ವಾಧಿಕಾರಿ. ಅವನಿಗೆ ಸಹಾಯಕರಾಗಿ ಮಂತ್ರಿಗಳೂ ಇತರ ಅಧಿಕಾರಿಗಳೂ ಇರುತ್ತಿದ್ದರು. ಮಂತ್ರಿಗಳಲ್ಲಿ ಮುಖ್ಯನಾದವನನ್ನು ಮಹಾಪ್ರಧಾನಿ ಎಂದು ಕರೆಯಲಾಗುತ್ತಿತ್ತು. ಈ ಮಹಾಪ್ರಧಾನಿಯಲ್ಲದೆ ಇತರ ಮಂತ್ರಿಗಳು ದಂಡನಾಯಕರು, ಸರ್ವಾಧಿಕಾರಿಗಳು, ಭಂಡಾರಿ, ಸಂಧಿವಿಗ್ರಹಿ, ಸೇನಾಧಿಪತಿ, ಧರ್ಮಾಧಿಕರಣ, ಧರ್ಮಕಾರಣಿಕ, ಈ ಮೊದಲಾದ ಹೆಸರುಗಳು ಗಂಗರು ಮತ್ತು ಚಾಲುಕ್ಯರ ಆಡಳಿತದಲ್ಲಿ ಕಂಡು ಬರುತ್ತದೆ. ದಂಡಾಧಿಕಾರಿ, ದಂಡಾಧೀಶ ಅಥವಾ ದಣ್ಣಾಯಕ ಎಂಬ ಹೆಸರು ಕೆಲವು ವೇಳೆ ಮಹಾಮಂತ್ರಿ ಸ್ಥಾನಕ್ಕೂ ಇದ್ದಂತೆ ಕಂಡುಬರುತ್ತದೆ.'[18]

ಹಾಗಾಗಿ ಆಡಳಿತದ ದೃಷ್ಟಿಯಿಂದ ಮತ್ತು ರಾಜ್ಯದಲ್ಲಿ ಶಾಂತಿ ಸುವ್ಯವಸ್ಥೆಯನ್ನು ಕಾಪಾಡಿಕೊಳ್ಳಲು ಹಲವು ಅಧಿಕಾರಿಗಳನ್ನು, ಮಂತ್ರಿಗಳನ್ನು ನೇಮಕ ಮಾಡಿಕೊಂಡಿದ್ದರು. ಈ ಅಧಿಕಾರಿಗಳನ್ನು ಶಾಸನಗಳಲ್ಲಿ ಈ ಮುಂದಿನಂತೆ ಹೆಸರಿಸಬಹುದು. ಕ್ರಿ.ಶ.1329ರ ಹಾಡೋನಹಳ್ಳಿ ಶಾಸನದಲ್ಲಿ ವೀರಬಲ್ಲಾಳನ ಮಹಾಪ್ರಧಾನ ಪುಂನಣ ಅಥವಾ ಪೊನ್ನಣ್ಣ ಎಂಬ ಉಲ್ಲೇಖವಿದೆ.[19] ಇವರ ಮಕ್ಕಳು ಶ್ರೀಕಾಮೆಯದಂಣಾಯಕರು ಎಂದಿದೆ. ಒಂದೇ ಮನೆಯವರಿಗೆ ಇತರ ಅಧಿಕಾರಗಳು ಹಂಚಿಕೆಯಾಗುತ್ತಿತ್ತು ಎಂದು ತಿಳಿಯುತ್ತದೆ. ಕಾಮೆಯ ದಂಡನಾಯಕನು ಮುಮ್ಮಡಿ ಬಲ್ಲಾಳನ ಕಾಲದಲ್ಲಿ ಮಹಾಪ್ರಧಾನ ದಂಡನಾಯಕನಾಗಿ ಅರಕನಕೆರೆಯ ಸ್ಥಳವನ್ನು ಆಳುತ್ತಿದ್ದನು. ಇವನ ತಂದೆ ಮಹಾಪ್ರಧಾನ ಪೊನ್ನಣ್ಣ. ಅನಾದಿ ಅಗ್ರಹಾರ ಬಲ್ಲಾಳನ ಪುರವಾದ ಕಿತ್ತನ ಕೆರೆಯನ್ನು ಕಾಮೆಯ ದಂಡನಾಯಕನು ಸಬ್ಬಗೊಡುಗೆಯಾಗಿ (ಸರ್ವಕೊಡುಗೆ) ನೀಡಿದ್ದನೆಂದು ಅರಸೀಕೆರೆ ತಾಲ್ಲೂಕಿನ ಮಾಡಾಳು ಗ್ರಾಮದಲ್ಲಿ ದೊರೆತ ಶಾಸನದಿಂದ ತಿಳಿದು ಬರುತ್ತದೆ.[20] ಕ್ರಿ.ಶ.1327ರ ದೇವನಹಳ್ಳಿ ಶಾಸನ[21] ಮತ್ತು ಕ್ರಿ.ಶ.1330ರ ಹೊಸಕೋಟೆ ಶಾಸನಗಳಲ್ಲಿ ಮಹಾಪ್ರಧಾನ ಪೊನ್ನಣ್ಣನ ಉಲ್ಲೇಖ[22] ದೊರೆಯುತ್ತದೆ.

ಮಹಾಸಾಮಂತಾಧಿಪತಿ ಪೆಂಮದೇವರಸರಸರ ಮಕ್ಕಳು ಅಲ್ಲಯ್ಯ ಎಂಬ ವಿಷಯ ಕ್ರಿ.ಶ 1342ರ ಗಾಣಿಗರಹಳ್ಳಿ ಶಾಸನದಲ್ಲಿ ಉಕ್ತವಾಗಿದೆ.[23] ಕ್ರಿ.ಶ.1342ರ ನಾಗಶೆಟ್ಟಿ ಹಳ್ಳಿ ಗ್ರಾಮದಲ್ಲಿ ದೊರೆತ ಮತ್ತೊಂದು ಶಾಸನವು ಮಹಾಸಾಮಂತಾಧಿಪತಿ ಚಿಕ್ಕಬೈರೆಯನಾಯಕ ಮತ್ತು ಅವನ ಮೈದುನ ತೊಳೆಯನಾಯಕರನ್ನು ಹೆಸರಿಸುತ್ತದೆ.[24] ಹೊಯ್ಸಳರು ಮಹಾಪಾಸಾಯಿತರು ಹಾಗೂ

ಸರ್ವಾಧಿಕಾರಿ ಎಂಬ ಅಧಿಕಾರಿಗಳನ್ನು ನೇಮಕ ಮಾಡಿಕೊಂಡಿದ್ದರು. ಇವರು ಮುಖ್ಯ ಆಡಳಿತಗಾರರಾಗಿದ್ದರು. ಮಹಾಪಸಾಯ್ತರು ಮಂತ್ರಿಪರಿಷತ್ತಿನಲ್ಲಿ ಒಬ್ಬರಾಗಿದ್ದರು. ಪಸಾಯಿತನಿಗೆ ಸಾಮಂತರಾಜನೆಂದೂ ವಸ್ತ್ರವನ್ನು ಸಿದ್ಧಪಡಿಸುವವನೆಂದೂ ಅರ್ಥ ಹೇಳಿರುವುದನ್ನು ಒಪ್ಪದ ವಿದ್ವಾಂಸರು, 'ಪಸಾಯಿತ' ಎಂಬ ಶಬ್ಧ 'ಪ್ರಸಾದಿತ' ಎಂಬ ಶಬ್ದದಿಂದ ಬಂದಿದೆ. ಇವರು ಚಕ್ರವರ್ತಿ ಅಥವಾ ಮಹಾಮಂಡಳೇಶ್ವರರ ಒಂದು ಹುದ್ದೆಯನ್ನೋ ಅಥವಾ ಸ್ಥಾನಮಾನವನ್ನೋ ಪಡೆದವರಾಗಿರುತ್ತಿದ್ದರು. ಕೆಲವೊಮ್ಮೆ ಯಾವುದೇ ಹುದ್ದೆಯನ್ನು ಪಡೆಯದೇ ಇರಲೂಬಹುದು ಎಂದು ಅಭಿಪ್ರಾಯಿಸಲಾಗಿದೆ.[25] ಕ್ರಿ.ಶ.1297ರ ದೊಂಬಲೂರಿನ ಶಾಸನದಲ್ಲಿ ಮಹಾಪಸಾಯಿತ ಶಾಂಡಿಲ್ಯನ್ ಕೋಯಿಲ್ ಮೊದಲಿಯಾರ್‌ನ ಉಲ್ಲೇಖವಿದೆ.[26] ಮತ್ತು ಕ್ರಿ.ಶ.1242ರ ಗಾಣಿಗರ ಹಳ್ಳಿಯ ಶಾಸನದಲ್ಲಿ 'ಮಹಾಪಾಸಾಯಿತರು ಮೀಸೆಯರಗಂಡ ಚಿಕ್ಕಬೈರೆನಾಯಕರು ಹಾಗೂ ಅವರ ಮೈದುನ ಚೋಳಯನಾಯಕರು'[27] ಎಂದಿದೆ.

ಕ್ರಿ.ಶ.1308ರ ಹೆಬ್ಬಾಳ ಶಾಸನದಲ್ಲಿ ಸರ್ವಾಧಿಕಾರಿ ಉರಿಯಣ್ಣ ಎಂಬುವನ ಉಲ್ಲೇಖವಿದೆ.[28] ಕ್ರಿ.ಶ.1308ರ ಹೆಬ್ಬಾಳದ ಶಾಸನ ದೇವಣ್ಣನ ಮಗ ಮುದೆಯಅಯ್ಯ ದಂಡನಾಯಕನನ್ನು ಹೆಸರಿಸುತ್ತದೆ.[29] ಹಾಗು ಕ್ರಿ.ಶ.1140ರ ಚಿಕ್ಕಬಾಣಾವರದ ಶಾಸನ ದಂಡನಾಯಕ ಮುದೆಯಅಯ್ಯನು ಕದಂಬೂರಿನಲ್ಲಿ ಕಾದಾಡಿ ಸತ್ತ ವಿಷಯವನ್ನು ಹೇಳುತ್ತದೆ.[30] ದಂಡನಾಯಕ ಹೆಸರೇ ಸೂಚಿಸುವಂತೆ ಸೇನೆಯ ಮುಖ್ಯಸ್ಥ ಪದವಿಯಾಗಿರುತ್ತದೆ. ಕ್ರಿ.ಶ.1342ರ ಕಾಲದ ಶಾಸನವು ಮನೆಯ ಎಕ್ಕಟಿಗನನ್ನು ಹೆಸರಿಸುತ್ತದೆ.[31] ಎಕ್ಕಟಿಗ ಎಂದರೆ ಗೂಢಚಾರ[32] ಎಂಬ ಅರ್ಥವಿದೆ. ಕ್ರಿ.ಶ.1341ರ ಅಲ್ಲಾಳಸಂದ್ರ ಶಾಸನದಲ್ಲಿ 'ಸೇನಬೋವ ಅಲ್ಲಾಳ'[33] ಎಂದು ಉಲ್ಲೇಖವಿದೆ. ಕ್ರಿ.ಶ.1343ರ ಶಾಸನದಲ್ಲಿ ಸಣ್ಣೆರಾಜ್ಯದ ಸೇನಬೋವ ಪೆರುಂಬಾಚಾರಿ ಸಾತುವೆಲ ಅಲ್ಲಾಳನಿಗೆ ಕಾಡುಗೋಡಿ ಸ್ಥಳದ ಗದ್ದೆ, ನಾಲ್ಕು ಸೀಮೆ ಹೊಲವನ್ನು ಸರ್ವಮಾನ್ಯವಾಗಿ ನೀಡಲಾಗಿದೆ. ಸೇನಬೋವರು ದಾನವನ್ನು ಪಡೆಯುತ್ತಿದ್ದರು ಎಂಬುದು ಈ ಶಾಸನದಿಂದ ವೇದ್ಯವಾಗುತ್ತದೆ. ಹಾಗೂ ಜನರೊಂದಿಗೆ ನೇರ ಸಂಪರ್ಕ ಇರುವಂತಹ ಅಧಿಕಾರಿ. ಸ್ಥಳೀಯವಾಗಿ ಪ್ರಭಾವಿಯಾದ ಅಧಿಕಾರಿ. ಈತನು ತೆರಿಗೆ ಸಂಗ್ರಹಿಸುವುದು, ಶಿಲಾಶಾಸನ ಬರೆಸುವ ಕಾರ್ಯವನ್ನು ನಿರ್ವಹಿಸುತ್ತಿದ್ದನು. ರಾಜನು ನೀಡುವ ದಾನಗಳಲ್ಲಿ ಅವರೊಂದಿಗೆ ಇರುವುದನ್ನು ಶಾಸನಗಳು ತಿಳಿಸುತ್ತವೆ. ಹೊಯ್ಸಳರ ಕಾಲದಲ್ಲಿ ಊರಿನ ಮುಖ್ಯಸ್ಥರಾಗಿ ಗಾವುಂಡರು ಇರುತ್ತಿದ್ದರು. ಬಲ್ಲಾಳನ ಕಾಲದಲ್ಲಿ ಮಾಚಿಗವುಡಗೆ ಊರನ್ನು ಕೊಡುಗೆಯಾಗಿ ನೀಡಿರುವ ವಿಷಯ ಕ್ರಿ.ಶ.1322ರ ಕೃಷ್ಣರಾಜಪುರ ಶಾಸನದಿಂದ ತಿಳಿದುಬರುತ್ತದೆ.[34] ಹೀಗೆ ಗ್ರಾಮವೊಂದನ್ನು ದಾನನೀಡಿ ಆ ಊರಿನ ಜವಾಬ್ದಾರಿಯನ್ನು ಗಾವುಂಡರಿಗೆ ವಹಿಸಲಾಗುತ್ತಿತ್ತು.

## ವಿಜಯನಗರ ಕಾಲದ ಆಡಳಿತ ಪದ್ಧತಿ

ವಿಜಯನಗರ ಸಾಮ್ರಾಜ್ಯವನ್ನು ಆಡಳಿತದ ಅನುಕೂಲಕ್ಕೋಸ್ಕರ ಪೆನುಗೊಂಡೆರಾಜ್ಯ, ಉದಯಗಿರಿರಾಜ್ಯ, ಚಂದ್ರಗಿರಿರಾಜ್ಯ, ತುಳುವರಾಜ್ಯ ಎಂದು ವಿಭಾಗೀಕರಣಗೊಂಡಿತ್ತು. ವಿಸ್ತಾರವಾದ ಸಾಮ್ರಾಜ್ಯವನ್ನು ಆಡಳಿತದ ಅನುಕೂಲಕ್ಕಾಗಿ ಹೀಗೆ ಹಲವು ವಿಭಾಗೀಕರಣವನ್ನು ಮಾಡಿಕೊಂಡು ಅಧಿಕಾರಿಗಳನ್ನು ನೇಮಿಸಿಕೊಂಡಿದ್ದರು. ವಿಜಯನಗರ ಕಾಲದ ಶ್ರೇಣೀಕೃತ ಆಡಳಿತ ಹಂತಗಳು ಈ ಮುಂದಿನಂತಿದ್ದುದ್ದನ್ನು ಗುರುತಿಸಬಹುದು. ಸಾಮ್ರಾಟ, ಮಂಡಲೇಶ್ವರ, ಮಹಾಪ್ರಧಾನ, ದಂಡನಾಯಕರು, ಪ್ರಧಾನರು, ಮಂತ್ರಿಗಳು, ಪಾಳೇಗಾರ, ಗ್ರಾಮಗೌಡ ಹೀಗೆ ಅಧಿಕಾರ ಹಂಚಿಕೆಯಾಗುತ್ತಿತ್ತು. ಹರಿಹರ, ಬುಕ್ಕ, ಎರಡನೇ ದೇವರಾಯ, ಸಾಳ್ವನರಸಿಂಹ, ಕೃಷ್ಣದೇವರಾಯ ಮೊದಲಾದ ರಾಜರ ಕಾಲದಲ್ಲಿ ಸರ್ಕಾರ ಅತ್ಯುತ್ತಮ ವ್ಯವಸ್ಥೆಯನ್ನು ಪಡೆಯಿತು. ಸುವ್ಯವಸ್ಥಿತ ಆಡಳಿತವನ್ನು ನಡೆಸಲು ವಿಜಯನಗರದ ಅರಸರು ಹೀಗೆ ಅಧಿಕಾರಿಗಳನ್ನು ನೇಮಿಸಿಕೊಂಡು ರಾಜ್ಯಭಾರ ನಡೆಸಿರುವುದು ಶಾಸನಗಳಿಂದ ತಿಳಿಯಬಹುದು.

ಗಂಗರ ಕಾಲದಲ್ಲಿ ಇದ್ದಂತೆ ಸಂಖ್ಯೆಯ ಆಧಾರಿತ ವಿಭಾಗಿ ಕ್ರಮಗಳು ವಿಜಯನಗರ ಅರಸರ ಕಾಲದಲ್ಲಿ ಕಾಣಬರುವುದಿಲ್ಲ. ಹಾಗೂ ಹೊಯ್ಸಳರಿಗಿಂತ ಸ್ವಲ್ಪ ಮಟ್ಟಿನ ಬದಲಾವಣೆಯೊಂದಿಗೆ ರಾಜ್ಯವನ್ನು ವಿಭಾಗಿಸಿಕೊಂಡಿದ್ದರು. ವಿಜಯನಗರ ಅರಸರ ಪ್ರಾಂತೀಯ ಘಟಕಗಳನ್ನು ಈ ಮುಂದಿನಂತೆ ಹೆಸರಿಸಬಹುದು.[35]

- ದೇಶ/ರಾಜ್ಯ
- ಚಾವಡಿ/ಮಾಗಣಿ/ವಳಿತ/ವೇಂಠೆ
- ನಾಡು/ಸೀಮೆ
- ಸ್ಥಳ
- ಗ್ರಾಮ

ಎಂಬುದಾಗಿ ವಿಭಾಗಿಕ್ರಮಗಳಿದ್ದವು. ಇವಲ್ಲದೆ ಪಟ್ಟಣ, ಪುರ, ಅಗ್ರಹಾರ ಮತ್ತು ವ್ರಿತ್ತಿ ಎಂಬ ವಿಭಾಗಿ ಕ್ರಮಗಳನ್ನು ಕಾಣಬಹುದು. ವಿಜಯನಗರ ಅರಸರ ಕಾಲದಲ್ಲಿ ಪುರಗಳು ಸ್ಥಾಪನೆಯಾದವು. ವೀರೂಪಾಕ್ಷಪುರ[36], ದೇವರಾಯಪುರ, ತಿಮ್ಮಣ್ಣರಾಜಪುರಗಳ[37] ಸ್ಥಾಪನೆ ಮಾಡಿ ದಾನ ನೀಡಿರುವ ಉಲ್ಲೇಖಗಳಿವೆ. ಪುರಗಳು ವ್ಯಾಪಾರ–ವಾಣಿಜ್ಯೋದ್ಯಮದ ಕೇಂದ್ರಗಳಷ್ಟೇ ಆಗಿರದೆ ಸಾಂಸ್ಕೃತಿಕ ಚಟುವಟಿಕೆಗಳ ಕೇಂದ್ರಗಳೂ ಆಗಿದ್ದವು. ಕ್ರಿ.ಶ.1140ರ ದೊಮ್ಮಲೂರಿನ ಶಾಸನದಲ್ಲಿ ಸೊಂಡೆಕೊಪ್ಪವನ್ನು ವೇಂಠೆಯನ್ನಾಗಿ ವಿಭಾಗಿಸಿಕೊಂಡಿರುವುದರ ಬಗೆಗೆ ಮಾಹಿತಿ

ಇದೆ. ವೇಂಠೆ ಎಂಬುದು ಆಡಳಿತದ ವಿಭಾಗಗಳಲ್ಲಿ ಒಂದು. ವೇಂಠೆಯೊಳಗೆ ನಾಡು, ಸೀಮೆ, ಗ್ರಾಮ, ಸ್ಥಳಗಳು ಸೇರಿ ಹೋಗಿದ್ದವು. ಇವುಗಳು ಆಡಳಿತದ ಸಣ್ಣ ಘಟಕಗಳಾಗಿದ್ದವು.

ಕ್ರಿ.ಶ.1364 ರ ಶಾಸನದಲ್ಲಿ ಬುಕ್ಕಣ್ಣನ ಮಗ ಕಂಪಣ್ಣ ಮುಳುಬಾಗಿಲು ಪಟ್ಟಣವನ್ನು ಆಳುತ್ತಿದ್ದನು ಎಂದು ತಿಳಿದು ಬರುತ್ತದೆ.[38] ಪಿ.ವಿ.ಕೃಷ್ಣಮೂರ್ತಿಯವರು ಹೇಳುವಂತೆ, 'ಮುಳವಾಯಿ ಅಥವಾ ಮುಳುಬಾಗಿಲು ರಾಜ್ಯವು ಕೋಲಾರ ಜಿಲ್ಲೆಯ ಮುಳಬಾಗಿಲು, ಮಾಲೂರು, ಬೆಂಗಳೂರು ಜಿಲ್ಲೆಯ ಹೊಸಕೋಟೆ, ಬೆಂಗಳೂರು ದಕ್ಷಿಣ, ಆನೇಕಲ್ಲು ತಾಲೂಕುಗಳ ಪ್ರದೇಶಗಳ ಜೊತೆಗೆ ಇಂದಿನ ತಮಿಳುನಾಡಿನ ಧರ್ಮಪುರಿ ಜಿಲ್ಲೆಯ ಅನೇಕ ಭಾಗಗಳು ಈ ರಾಜ್ಯದಲ್ಲಿ ಅಂತರ್ಗತವಾಗಿದ್ದವು. ಬೆಂಗಳೂರು ಜಿಲ್ಲಾ ಪ್ರದೇಶದ ಮಟ್ಟಿಗೆ ಮುಳವಾಯಿ ರಾಜ್ಯದಲ್ಲಿ ಬೇಹೂರುನಾಡು ಮತ್ತು ತುರೈವಳಿನಾಡುಗಳು ಸೇರಿದ್ದುವೆಂಬ ಅಂಶ ಶಾಸನಗಳಲ್ಲಿ ಉಕ್ತವಾಗಿದೆ. ಬೆಂಗಳೂರು ಜಿಲ್ಲೆಯ ಸಾರಕ್ಕಿ, ಬೇಹೂರು(ಬೇಗೂರು), ಹುಸುಕೂರು, ಬೇಲೂರು, ಬೆಟ್ಟದಹಳ್ಳಿ, ವೊಗಟ್ಟು(ವಾಗಟ) ಮುಂತಾದ ಗ್ರಾಮಗಳು ಶಾಸನೋಕ್ತವಾಗಿವೆ.'[39]

ವಿಸ್ತಾರವಾದ ರಾಜ್ಯವನ್ನು ನೋಡಿಕೊಳ್ಳಲು ಅಗತ್ಯವಾದ ಅಧಿಕಾರಿಗಳ ನೇಮಕ ಮಾಡಿಕೊಳ್ಳಲಾಗುತ್ತಿತ್ತು. ಶಾಸನಗಳಲ್ಲಿ ಉಕ್ತವಾಗಿರುವ ಅಧಿಕಾರಿಗಳ ಹೆಸರುಗಳು ಈ ಮುಂದಿನಂತಿವೆ. ಬುಕ್ಕಣ್ಣ ಒಡೆಯನ ಮಗ ಮಲ್ಲಪ್ಪ ಒಡೆಯನು ರಾಜ್ಯವಾಳುತ್ತಿದ್ದಾಗ ಮಹಾಸಾಮಂತಾಧಿಪತಿ ಗಾವುಂಡ ಗಂಡ ಬಾಚಣಳ್ಳಿ ರಾಯರ ಮಗ ವೀರಭದ್ರದೇವ ಕ್ರಾಂತಿ ಮಾಡುವ ರಾಹುತರ ಗಂಡ ವೆಂಣಿಕುಲ ಮಾಯಿನಾಯ್ಕನ ಕುಮಾರ ಮಲ್ಲಪನಾಗಿದ್ದು ಎಂಬುದು ಕ್ರಿ.ಶ.1362ರ ಶಾಸನದಿಂದ ತಿಳಿದು ಬರುತ್ತದೆ.[40] ಅಧಿಕಾರಿಗಳೂ ಪ್ರಶಸ್ತಿಗಳನ್ನು ಹೊಂದಬಹುದಿತ್ತು ಎಂಬುದು ಈ ಶಾಸನದಿಂದ ತಿಳಿಯುತ್ತದೆ. ಕ್ರಿ.ಶ.1495ರ ಶಾಸನವೊಂದರಲ್ಲಿ,[41] 'ಮಹಾಮಂಡಲೇಶ್ವರ ಗೊಡೆರಾಯರೂ ನಾರಾಯಣ ಅಕಳಂಕ ಮಲರಾಯ ಹುಲಿರಾಯ ಗಂಡಭೇರುಂಡ ಭಾರದ್ವಾಜ ಗೋತ್ರದ ಹುಲಿಯ ಸಾಮಯ್ಯದೇವ ಮಹಾ ಅರಸುಗಳ ಕುಮಾರರು ಅನಂತಯ್ಯ ದೇವ ಮಹಾಅರಸರುಗಳು' ಎಂದಿದೆ. ಹಾಗೂ ಸ್ಥಾನಪತಿ ಎಂಬ ಅಧಿಕಾರಿಯ ಉಲ್ಲೇವಿದೆ. ಶಾಸನದಲ್ಲಿ ಸ್ಥಾನಪತಿ ತಿಮ್ಮರಸನ ವಂಶಾವಳಿ ಮುಂದಿನಂತಿದೆ. ತಿಮ್ಮರಸ(ಕಾಶ್ಯಪ ಗೋತ್ರ), ತಿಪ್ಪರಸರು, ಲಕ್ಕರಸರು(ಮಕ್ಕಳು), ಹರಿಯತಿಕ್ಕಣಗಳೂ ಇವರ ನಾಯಕತ್ವದಲ್ಲಿ ಕುಕ್ಕಲನಾಡಿನ ಕನ್ನೆಲ್ಲಿಯ ಸ್ಥಳವನ್ನು ತಿಮ್ಮಣನಿಗೆ ನೀಡಿರುವ ಉಲ್ಲೇಖವಿದೆ. ಮಹಾಮಂಡಲೇಶ್ವರರು, ಮಹಾಸಾಮಂತರು, ಮಹಾಪ್ರಭುಗಳು, ರಾಜ್ಯಾಧಿಪತಿಗಳು, ಮಹಾಪ್ರಭುಗಳು ಇವೆಲ್ಲವು ಸಮಾನವಾದ ಹುದ್ದೆಗಳೆಂದು ಶಾಸನಗಳಿಂದ ತಿಳಿದುಬರುತ್ತದೆ.

ವೀರದೇವರಾಯನ ಕಾಲದಲ್ಲಿ ದಂಡನಾಯಕ ಹಯಕಸ ಎಂಬುವನು ಇದ್ದನು.[42] ಹಾಗೂ ಮಹಾಪ್ರಧಾನ (ಮಂತ್ರಿ) ಈರಣ್ಣ ನಾಯಕ[43] ಎಂಬುವವರಿದ್ದರು. ರಾಜನಿಗೆ ಸಲಹೆ, ಸಹಕಾರ ನೀಡಲು ಮಂತ್ರಿಗಳ ನೇಮಕವಾಗುತ್ತಿತ್ತು. ಮಂತ್ರಿಮಂಡಲದಲ್ಲಿ ಪ್ರಧಾನಮಂತ್ರಿಯು ಪ್ರಮುಖನಾಗಿರುತ್ತಿದ್ದನು. ಆಡಳಿತವು ಇವನ ನಿಯಂತ್ರಣದಲ್ಲಿರುತ್ತಿತ್ತು. 'ಶ್ರೀಮನು ಮಹಾ ಮೂವರು ರಾಯರಗಂಡ ಜುಂಜುಓಬಯ್ಯನಾಯಕರ ಮಕ್ಕಳು ಜಕಮುದ್ದೇನಾಯಕ ತನಕ್ಕೆ ಮೊರಸುನಾಡಿನ ಚೊಕ್ಕದೇವ ಸೀಮೆ ಪ್ರದೇಶವು ಸೇರಿತ್ತು.'[44] ಕ್ರಿ.ಶ.1427ರ ಶಾಸನವು ಪ್ರತಾಪದೇವನ ಭಂಟ ವೋಬಯ್ಯನಾಯಕ ಈತನ ಮಕ್ಕಳಾದ ಚಿಕ್ಕತಿಮ್ಮಯ್ಯ ನಾಯಕರು ಹಾಗೂ ಮೊರಸುನಾಡ ಮಹಾಪ್ರಭು ಚೊಕ್ಕದೇವನು ಎಂಬ ಉಲ್ಲೇಖವಿದೆ.[45] ಕ್ರಿ.ಶ.1431ರ ಕೊಡಿಗೆಹಳ್ಳಿ ಶಾಸನದಲ್ಲಿ ದೇವರಾಯರ ಮಹಾಪ್ರಧಾನಿ ಮಂಗಪ್ಪದಂಣಾಯಕನ ಉಲ್ಲೇಖವಿದೆ.[46]

ಹೊಯ್ಸಳರ ಕಾಲದಲ್ಲೇ ನಾಯಕತನವೆಂಬ ಪದವಿಯು ಇದ್ದು, ಅದು ವಿಜಯನಗರದ ಅರಸರ ಕಾಲದಲ್ಲೂ ಮುಂದುವರಿದಿರುವುದು ಶಾಸನಗಳಿಂದ ತಿಳಿಯುತ್ತದೆ. ಕ್ರಿ.ಶ.1418ರ ಶಾಸನದಲ್ಲಿ 'ಶ್ರೀಮನು ಮಹಾ ಮೂವರು ರಾಯರ ಗಂಡ ಜುಂಜು ಓಬಯ್ಯನಾಯಕರ ಮಕ್ಕಳು ಜಕಮುದ್ದೇ ನಾಯಕರು ಹಿಮ್ಮರೆನಾಡನ್ನು ಆಳುತ್ತಿದ್ದರು.'[47] ಕ್ರಿ.ಶ.1427ರ ಬಿದುರುಗುಪ್ಪೆ ಶಾಸನದ ಪ್ರಕಾರ ಜುಂಜು ಓಬಯ್ಯನಾಯಕನ ಮತ್ತೊಬ್ಬಮಗ ಚಿಕ್ಕತಿಮ್ಮಯನು ಮೊರಸುನಾಡನ್ನು ಆಳುತ್ತಿದ್ದ ಎಂದು ತಿಳಿಯುತ್ತದೆ. ಮಂಚಯನಾಯಕರ ಮಕ್ಕಳಾದ ನಂಜಯ, ಮಾದೇವನಾಯಕ, ಚಿಕ್ಕಸಂಗಮ ನಾಯಕರು ಜಿಗುನಿಯ ನಾಯಕರಾಗಿದ್ದರು.[48] ಹಾಗೂ ಸೋಲೂರ ಬಸವಪ್ಪನಾಯಕನ ಮಗ ಕೃಷ್ಣಪ್ಪನಾಯಕ ಸಿವನಸಮುದ್ರ ಸ್ಥಳದ ನಾಯಕತನ ಹೊಂದಿದ್ದನು.[49] ಅಚ್ಚುತರಾಯನ ಕಾಲದ ಶಾಸನದಲ್ಲಿ ಬನಿಕ ದಂಡನಾಯಕನ ಮಗ ತಿಮ್ಮನಾಯಕನೆಂಬುವನು ಎಂಬ ಉಲ್ಲೇಖವಿದೆ.[50] ಈ ಶಾಸನಗಳ ಆಧಾರದ ಮೇಲೆ ನಾಯಕತನವು ವಂಶಪಾರಂಪರ್ಯವಾಗಿ ಬರುತ್ತಿತ್ತು ಎಂಬುದು ಸ್ಪಷ್ಟವಾಗುತ್ತದೆ.

ಒಂದು ಹಳ್ಳಿ ಅಥವಾ ಗ್ರಾಮಕ್ಕೆ ಮುಖ್ಯಸ್ಥರಾಗಿ ಗವುಡ ಅಥವಾ ಗಾವುಂಡರಿರುತ್ತಿದ್ದರು. ರಾಜರು ಇಂತಹ ಗಾವುಂಡರನ್ನು ಮುಂದಿಟ್ಟುಕೊಂಡು ದಾನ ನೀಡುತ್ತಿದ್ದರು. ಬಲ್ಲಗಾವುಂಡನೆಂಬುವನು ಸಂತೆಯೊಂದನ್ನು ಕಟ್ಟಿಸಿದ್ದನು.[51] ಕ್ರಿ.ಶ.1347ರ ಬೇಗೂರು ಹೋಬಳಿಯಲ್ಲಿ ದೊರೆತ ಶಾಸನದಲ್ಲಿ ಕಲಿನಾಡಪ್ರಭು ಗೌಡರ ಮಕ್ಕಳು ಹೊನ್ನಪ್ಪನವರು ನೀಡಿದ ಕೊಡುಗೆ ಎಂದಿದೆ. ಊರ ಗೌಡರಿಗೆ ದಾನ ನೀಡುವ ಅಧಿಕಾರ ಇತ್ತು. ಹಾಗೂ ಕಲಿನಾಡ ಪ್ರಭು ಎಂಬ ಪ್ರಶಸ್ತಿಯನ್ನು ಹೊಂದಿದ್ದ ಉಲ್ಲೇಖವಿದೆ.

## ಯಲಹಂಕ ನಾಡಪ್ರಭುಗಳ ಆಡಳಿತ ಪದ್ಧತಿ

ಯಲಹಂಕ ನಾಡಪ್ರಭುಗಳು ವಿಜಯನಗರದ ಅಧೀನದಲ್ಲಿ ನಾಡಪ್ರಭುಗಳಾಗಿ ಬೆಂಗಳೂರು ಸೇರಿದಂತೆ ಸುತ್ತ-ಮುತ್ತಲ ಪ್ರದೇಶದಲ್ಲಿ ಆಳ್ವಿಕೆ ನಡೆಸಿದರು. ಇವರ ಆಡಳಿತ ವ್ಯವಸ್ಥೆ ವಿಜಯನಗರ ಅರಸರ ಆಡಳಿತ ವ್ಯವಸ್ಥೆಯನ್ನೇ ಮೂಲವಾಗಿಸಿಕೊಂಡು ಒಡಮೂಡಿದೆ. ನಾಡಪ್ರಭುಗಳು ಸುಮಾರು 150 ವರ್ಷಗಳ ಕಾಲ ವಿಜಯನಗರ ಅರಸರ ನೇರ ಅಧೀನದಲ್ಲಿದ್ದರು. ನಾಡಪ್ರಭುಗಳು ಆಡಳಿತ ವ್ಯವಸ್ಥೆಯನ್ನು ಗ್ರಾಮದಿಂದ ನಡೆಸುತ್ತಿದ್ದರು. ಗ್ರಾಮವನ್ನು ನೋಡಿಕೊಳ್ಳುವ ಅಧಿಕಾರಿಯನ್ನು 'ಗೌಡ'ಎಂದು ಕರೆಯಲಾಗುತ್ತಿತ್ತು. ಗ್ರಾಮದ ಮುಖ್ಯಸ್ಥ ರಾಜನಿಗೂ ಮತ್ತು ಪ್ರಜೆಗಳ ನಡುವೆ ಮಧ್ಯವರ್ತಿಯಾಗಿರುತ್ತಿದ್ದನು. ಜನರಿಂದ ಕಂದಾಯ ವಸೂಲಿ ಮಾಡುವುದು, ಗ್ರಾಮವನ್ನು ನಿರ್ವಹಿಸುವುದು ಈತನ ಕರ್ತವ್ಯವಾಗಿತ್ತು. 'ಗೌಡಿಕೆ' ವಂಶಪಾರಂಪರ್ಯವಾಗಿ ನಡೆದುಕೊಂಡು ಹೋಗುತ್ತಿತ್ತು. ಗೌಡರನ್ನು ಅಥವಾ ಗ್ರಾಮದ ಮುಖ್ಯಸ್ಥರನ್ನು ರಾಜನು ನೇಮಕಮಾಡುತ್ತಿದ್ದನು. ಡಾ.ವಿ.ಶ್ರೀನಿವಾಸನ್ ಆಡಳಿತ ವ್ಯವಸ್ಥೆಯ ಪಟ್ಟಿಯನ್ನು ಈ ಮುಂದಿನಂತೆ ನೀಡಿದ್ದಾರೆ. ನಾಡು ಅಥವಾ ಸೀಮೆ ಕೆಳಸ್ತರದಲ್ಲಿ ಸ್ಥಳ ಮತ್ತು ಗ್ರಾಮಗಳಾಗಿ ವಿಂಗಡಿತವಾಗಿತ್ತು. ಯಲಹಂಕನಾಡ ಪ್ರಭುಗಳು ಮಹಾಮಂಡಲೇಶ್ವರರಾಗಿದ್ದು ಯಲಹಂಕ, ಮಾಗಡಿ, ಹೊಸಕೋಟೆ ಮತ್ತು ಮುಳಬಾಗಿಲು ನಾಡುಗಳನ್ನು ಹೊಂದಿದ್ದರು. ನಾಡಿನ ಅಧಿಪತಿ, ಸ್ಥಳಪ್ರಭು ಅಥವಾ ಸ್ಥಳಗೌಡನಾಗಿದ್ದು, ಸೇನೆ, ನ್ಯಾಯ, ದತ್ತಿ, ಟಂಕಸಾಲೆ ಮತು ಸಾರ್ವಜನಿಕ ಕಾರ್ಯಗಳನ್ನು ನಿರ್ವಹಿಸುತ್ತಿದ್ದನು. ನಾಡು, ಸೀಮೆಗಳು ಹಲವು ಗ್ರಾಮಗಳನ್ನೆ ಹೊಂದಿದ್ದವು. ಗೌಡ ಅಥವಾ ಗಾವುಂಡ ಅಥವಾ ಪಟೇಲ ಗ್ರಾಮಾಡಳಿತಕ್ಕೆ ಆಯಗಾರರನ್ನು ಸೇವೆಯಲ್ಲಿರಿಸಿಕೊಂಡಿದ್ದನು.[52]

ಕರ್ಲಮಂಗಲ ಶ್ರೀಕಂಠಯ್ಯನವರು ಗೌಡಕುಲವಿಭೂಷಣ ಕೆಂಪೇಗೌಡನ ಜಯ ಪ್ರಶಸ್ತಿಯ ಮುನ್ನುಡಿಯಲ್ಲಿ ಇಮ್ಮಡಿ ಕೆಂಪೇಗೌಡ ರಾಜ್ಯ ವಿಸ್ತಾರವು ಈಗಿನ ಬೆಂಗಳೂರು, ತುಮಕೂರು, ಮೈಸೂರು, ಕೋಲಾರ, ಹಾಸನ ಜಿಲ್ಲೆ, ಆಂಧ್ರ ಪ್ರದೇಶದ ಅನಂತಪುರ, ಕಡಪ, ಚಿತ್ತೂರು ಜಿಲ್ಲೆಗಳನ್ನು, ತಮಿಳುನಾಡಿನ ಸೇಲಂ ಜಿಲ್ಲೆಯ ಬಹುಭಾಗ, ಕೊಯಮತ್ತೂರು ಜಿಲ್ಲೆಯ ಸ್ವಲ್ಪ ಭಾಗಗಳನ್ನು ಹೊಂದಿತ್ತು. ಮಲೆನಾಡಿನ ಅಧಿಪತಿ ಹಂಪನೂ ಕೆಂಪೇಗೌಡನು ಅಧಿಪತ್ಯವನ್ನೊಪ್ಪಿಕೊಂಡಿದ್ದ ಎಂದು ಅಭಿಪ್ರಾಯ ಪಟ್ಟಿದ್ದಾರೆ. ಪ್ರೊ.ಹ.ಕ.ರಾಜೇಗೌಡರು "ಬೆಂಗಳೂರು ಕೆಂಪೇಗೌಡ ಮತ್ತು ಅವನ ವಂಶಸ್ಥರು" ಕೃತಿಯಲ್ಲಿ ಇವರ ರಾಜ್ಯ ವಿಸ್ತಾರದ ಬಗ್ಗೆ 'ದಕ್ಷಿಣದ ಕಾವೇರಿಯಿಂದ ಉತ್ತರದ ಹಿಂದೂಪುರದವರೆಗೆ ಪಶ್ಚಿಮದ ನುಗ್ಗೇಹಳ್ಳಿಯಿಂದ

ಪೂರ್ವದ ಕೃಷ್ಣಗಿರಿಯವರೆಗೆ ಮಹಾಯಲಹಂಕ ನಾಡು ಪಸರಿಸಿತ್ತು" ಎಂದು ಅಭಿಪ್ರಾಯ ಪಟ್ಟಿದ್ದಾರೆ.

ಆದರೆ ಈ ಇಬ್ಬರೂ ವಿದ್ವಾಂಸರ ಹೇಳಿಕೆಗಳಿಗೂ ಯಾವುದೇ ಆಧಾರಗಳಿಲ್ಲದಿರುವುದರಿಂದ ಈ ಹೇಳಿಕೆಗಳನ್ನು ಒಪ್ಪಲು ಸಾಧ್ಯವಿಲ್ಲ ಎಂದು ಡಾ.ಎಂ.ಜಿ.ಮಂಜುನಾಥರು 'ಯಲಹಂಕ ನಾಡಪ್ರಭುಗಳ ರಾಜ್ಯವು ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕೋಲಾರ ಜಿಲ್ಲೆ, ತುಮಕೂರು ಜಿಲ್ಲೆ, ತಮಿಳುನಾಡಿನ ಕೃಷ್ಣಗಿರಿ ಜಿಲ್ಲೆಯವರೆಗೆ ಮಾತ್ರ ವ್ಯಾಪಿಸಿತ್ತು' ಎಂದು ಅಭಿಪ್ರಾಯ ಪಟ್ಟಿದ್ದಾರೆ.[53] ಯಲಹಂಕ ನಾಡಪ್ರಭುಗಳ ಶಾಸನಗಳು ಈ ಪ್ರದೇಶದಲ್ಲಿ ದೊರೆತಿರುವುದು ಈ ಹೇಳಿಕೆಗೆ ಸಾಕ್ಷಿಯಾಗಿವೆ ಎನ್ನಬಹುದು.

ಕ್ರಿ.ಶ.1532ರ ದಾಸರಹಳ್ಳಿ ಶಾಸನದಲ್ಲಿ[54] ವಿಜಯನಗರದ ಅರಸು ಅಚ್ಚುತದೇವರಾಯ ತನ್ನ ಆಳ್ವಿಕೆಯ ಸಂದರ್ಭದಲ್ಲಿ ಕೆಂಪೇಗೌಡರಿಗೆ ಯಲಹಂಕ ರಾಜ್ಯವನ್ನು ಅಮರನಾಯಕತನಕ್ಕೆ ಕೊಟ್ಟ ವಿಷಯ ತಿಳಿಯುತ್ತದೆ. ಈತನಿಗೆ ಕ್ರಿ.ಶ.1538ರಲ್ಲಿ ಆತ ಬೆಂಗಳೂರಿನಲ್ಲಿ ಕೋಟೆ ಮತ್ತು ಪಟ್ಟಣವನ್ನು ನಿರ್ಮಾಣ ಮಾಡಿ ಪೂರ್ಣಗೊಳಿಸಿದ್ದಕ್ಕೆ ಸುಪ್ರೀತನಾಗಿ ರಾಜ ಕಸಬೇ ಹಳೇ ಬೆಂಗಳೂರು, ವರ್ತೂರು, ಯಲಹಂಕ, ಬೇವೂರು, ಹಲಸೂರು, ಕೆಂಗೇರಿ, ತಲಘಟ್ಟಪುರ, ಜಿಗಣಿ, ಕುಂಬಳಗೂಡು, ಕನ್ನೆಲ್ಲಿ, ಬಾಣಾವರ, ಹೆಸರುಘಟ್ಟ ಮೊದಲಾದ ಹನ್ನೆರಡು ಹೋಬಳಿಗಳನ್ನು ತಮ್ಮ ಆಳ್ವಿಕೆಗೆ ಒಳಪಡಿಸಿಕೊಳ್ಳಲು ಒಪ್ಪಿಗೆ ನೀಡಿದನೆಂಬ ಸಂಗತಿ ಬೆಂಗಳೂರಿನ ಐತಿಹಾಸಿಕ ಬಖೈರಿನಿಂದ ತಿಳಿಯುತ್ತದೆ.[55] ಆದರೆ ಯಲಹಂಕನಾಡ ಪ್ರಭುಗಳ ಶಾಸನಗಳಲ್ಲಿ ಸಿವನಸಮುದ್ರ ಸೀಮೆ[56] ಬೆಂಗಳೂರು ಸೀಮೆ[57] ಮಾಗಡಿ ಸೀಮೆ, ಸೊಂಡೆಕೊಪ್ಪ ಹೋಬಳಿ, ಮಾಗಡಿ ಹೋಬಳಿ, ಯಲೆಯೂರು ಹೋಬಳಿ, ಗೊತ್ತಿಗೆರೆ ಹೋಬಳಿ, ಚಕ್ರಭಾವಿ ಹೋಬಳಿಗಳು ಮಾತ್ರ ಶಾಸನಗಳಿಂದ ತಿಳಿದುಬರುವ ಹೋಬಳಿಗಳಾಗಿವೆ. ಹಾಗೂ ಬೆಂಗಳೂರು ಪೇಟೆ, ಬೆಂಗಳೂರು ಮುತ್ಯಾಲಪೇಟೆಗಳು ಶಾಸನೋಕ್ತವಾಗಿವೆ. ಬೆಂಗಳೂರು ವಿಜಯನಗರ ಅರಸರ ಕಾಲಕ್ಕಾಗಲೇ ದೊಡ್ಡ ವ್ಯಾಪಾರ ಕೇಂದ್ರವಾಗಿತ್ತು. ಹಾಗಾಗಿ ಬೆಂಗಳೂರಿನಲ್ಲಿ ಹಲವು ಪೇಟೆಗಳೂ ಜನ್ಮತಾಳಿದವು. ಇಂದಿಗೂ ಈ ಪೇಟೆಗಳನ್ನು ಇದೇ ಹೆಸರುಗಳಿಂದಲೇ ಕರೆಯಲಾಗುತ್ತಿದೆ.

ನಾಡಪ್ರಭುಗಳ ಸೈನ್ಯವ್ಯವಸ್ಥೆಯ ಬಗ್ಗೆ ಹೇಳುವುದಾದರೆ, ಪ್ರಬಲವಾದ ಸೇನಾಪಡೆಯನ್ನು ಹೊಂದಿದ್ದರು. 'ಕ್ರಿ.ಶ.1540ರ ಶಾಸನದಲ್ಲಿ ಯಲಹಂಕನಾಡಿನ ಸಿವನಸಮುದ್ರದಲ್ಲಿದ್ದ ವಿಠಲೇಶ್ವರ ದೇವಮಹಾಅರಸು'[58] ಎಂದಿದೆ. ನಾಡಪ್ರಭುಗಳು ಸೈನ್ಯ ಸಮೇತರಾದ ನಾಯಕರನ್ನು ಹೊಂದಿದ್ದರು ಎಂದು ತಿಳಿದುಬರುತ್ತದೆ. ಹಾಗೂ ನೆಲಮಂಗಲದ ಕ್ರಿ.ಶ.1532ರ ಶಾಸನದ[59] ಪ್ರಕಾರ ಯಲಹಂಕ

ನಾಡಿನ ಆಡಳಿತದಲ್ಲಿ 33 ಚಾವಡಿಗಳಿದ್ದವು. ಈ ಚಾವಡಿಗಳಿಂದ ನ್ಯಾಯ ತೀರ್ಮಾನ ಮಾಡಲಾಗುತ್ತಿತ್ತು.

ಹೀಗೆ ಯಲಹಂಕ ನಾಡಪ್ರಭುಗಳು ತಮ್ಮ ಆಡಳಿತವ್ಯವಸ್ಥೆಯನ್ನು ಉತ್ತಮ ರೀತಿಯಲ್ಲಿ ಸುವ್ಯವಸ್ಥೆಯಿಂದ ನಡೆಸಿಕೊಂಡು ಹೋಗುತ್ತಿದ್ದರು. ಹಾಗಾಗಿಯೇ ಇಂದಿಗೂ ಯಲಹಂಕನಾಡ ಪ್ರಭುಗಳ ಹೆಸರು ಬೆಂಗಳೂರಿನಲ್ಲಿ ಚಿರಸ್ಥಾಯಿಯಾಗಿ ಉಳಿದಿದೆ.

## ಮೈಸೂರು ಅರಸರ ಕಾಲದ ಆಡಳಿತ ವ್ಯವಸ್ಥೆ

ವಿಜಯನಗರದ ಕಾಲದಿಂದಲೂ ಆಚರಣೆಯಲ್ಲಿದ್ದ ಆಡಳಿತ ಪದ್ಧತಿಯನ್ನೇ ಬಹುತೇಕ ಮೈಸೂರು ಒಡೆಯರು ಅನುಸರಿಸುತ್ತಾ ಬಂದಿದ್ದರು. ಅದರಂತೆ ಬೆಂಗಳೂರು ಪ್ರಾಂತ್ಯದ ಮೇಲ್ವಿಚಾರಣೆಗೆ ಒಬ್ಬ ಹಿರಿಯ ಪಾರುಪತ್ತೇಗಾರನನ್ನು ನೇಮಿಸಿದರು. ಗ್ರಾಮಾಂತರಗಳಲ್ಲಿ ಬಾರಬಲೂತಿ ಪದ್ಧತಿ ಜಾರಿಯಲ್ಲಿತ್ತು. ಅದರಂತೆ ಪ್ರತಿ ಗ್ರಾಮಕ್ಕೂ ಒಬ್ಬೊಬ್ಬ ಗೌಡ ಅಥವಾ ಪಟೇಲ, ಶಾನುಭೋಗ, ಜೋಯಿಸ, ಅಕ್ಕಸಾಲೆ, ಅಗಸ, ನಾವಿದ ಅಥವಾ ಕ್ಷೌರಿಕ, ತೋಟಿ, ತಳವಾರ, ನೀರುಗಂಟಿ, ಬಡಗಿ, ಕಮ್ಮಾರ, ಕುಂಬಾರ ಹೀಗೆ ಹನ್ನೆರಡು ಮಂದಿ ಆಯಗಾರರನ್ನು ನೇಮಕ ಮಾಡಿಕೊಳ್ಳುತ್ತಿದ್ದರು.[60] ಮೈಸೂರು ಅರಸರ ಶಾಸನಗಳು ಬೆಂಗಳೂರು ನಗರದಲ್ಲಿ ದೊರಕುವುದು ಕಡಿಮೆ ಪ್ರಮಾಣದಲ್ಲಿ ಹಾಗಾಗಿ ಶಾಸನಗಳ ಹಿನ್ನೆಲೆಯಲ್ಲಿ ಇವರ ಆಡಳಿತ ವ್ಯವಸ್ಥೆ ನಗರ ಜಿಲ್ಲೆಯಲ್ಲಿ ಹೇಗಿತ್ತು ಎಂದು ತಿಳಿಯುವುದು ಅಸ್ಪಷ್ಟವಾಗಿದೆ. ದೊರೆತಿರುವ ಶಾಸನಗಳ ಆಧಾರದಿಂದಲೇ ಹೇಳುವುದಾದರೆ, ಕ್ರಿ.ಶ.1760ರ ಕೃಷ್ಣರಾಜ ಒಡೆಯರ ಶಾಸನದಲ್ಲಿ[61] ಬೆಂಗಳೂರು ಸ್ಥಳ, ಜಿಗಣಿ ಹೋಬಳಿ, ಬಿಂಗೀಪುರ ಗ್ರಾಮ ಎಂಬ ಉಲ್ಲೇಖವಿದೆ. ಮತ್ತೊಂದು ಶಾಸನದಲ್ಲಿ[62] ಮೈಸೂರ ನಗರ ಸಿಂಹಾಸನದ ಆಳ್ವಿಕೆಗೆ ಸೇರುವ ಬೆಂಗಳೂರು ವಳಿತದ ಜಿಗಣಿ ಹೋಬಳಿಯ ವಾಜರಹಳ್ಳಿ ಎಂಬ ಉಲ್ಲೇಖವಿದೆ. ಹೀಗೆ ಬೆಂಗಳೂರು ಪ್ರದೇಶವನ್ನು ಆಡಳಿತದ ದೃಷ್ಟಿಯಿಂದ ವಳಿತ, ಹೋಬಳಿ, ಹಳ್ಳಿ(ಗ್ರಾಮ) ಎಂದು ವಿಭಾಗಿಸಿಕೊಂಡು ಆಡಳಿತ ನಡೆಸುತ್ತಿದ್ದರು ಎಂಬುದು ಸ್ಪಷ್ಟವಾಗುತ್ತದೆ.

## ಪ್ರಾಚೀನ ಬೆಂಗಳೂರಿನ ಪ್ರಾದೇಶಿಕ ವಿಭಾಗಗಳು

## ಗಂಗವಾಡಿ ತೊಂಬತ್ತಾರು ಸಾವಿರ

ಕ್ರಿ.ಶ.900ರ ಬೇಗೂರು ಶಾಸನದಲ್ಲಿ ಗಂಗವಾಡಿ ತೊಂಬತ್ತಾರು ಸಾವಿರ[63] ಎಂಬ ಉಲ್ಲೇಖವಿದೆ. ಗಂಗರ ಆಡಳಿತದ ಪರಿಯನ್ನು ಹೇಳುವ ಈ ಶಾಸನವು ಇಂದು ಬೆಂಗಳೂರು ಮ್ಯೂಸಿಯಂನಲ್ಲಿದೆ. ಗಂಗರ ಆಡಳಿತ ಪ್ರದೇಶದಲ್ಲಿ ಬೇಗೂರು ಸೇರಿದಂತೆ ಅದರ ಸುತ್ತಲ ಪ್ರದೇಶವೆಲ್ಲವು ಗಂಗವಾಡಿಯ ಪ್ರದೇಶಗಳಾಗಿತ್ತು. ಗಂಗರು ಸಂಖ್ಯೆಯನ್ನು ಆಡಳಿತದಲ್ಲಿ ಬಳಸುತ್ತಿದ್ದರು. ರೈಸ್‌ರವರು ಹೇಳುವಂತೆ, "ಈ ರೀತಿಯ ಸಂಖ್ಯೆಗಳು ಆ ವಿಭಾಗದ ಉತ್ಪತ್ತಿಯನ್ನು ಚಿನ್ನದ ನಾಣ್ಯಗಳಲ್ಲಿ ಸೂಚಿಸುತ್ತದೆಂದು. ಈ ಅರ್ಥದಲ್ಲಿಯೂ ಸಂಖ್ಯೆಗಳು ಕೆಲವು ಕಡೆ ಪ್ರಯೋಗವಾಗಿರಬಹುದೆಂದು ಹೇಳಲು ಅವಕಾಶವಿದೆ. ಆದರೆ ಎಲ್ಲ ಕಡೆಗೂ ಅದನ್ನು ಅನ್ವಯಿಸುವುದು ಕಷ್ಟವಾಗುತ್ತದೆ. ಬನವಾಸಿ 12000, ಗಂಗವಾಡಿ 96000, ನೊಳಂಬವಾಡಿ 32000 ಇತ್ಯಾದಿಗಳಲ್ಲಿ ಅವುಗಳ ಹೆಸರಿನ ಮುಂದೆ ಆ ಸಂಖ್ಯೆ ಬಹು ಕಾಲ ಉಳಿದುಕೊಂಡು ಬಂದಿತ್ತು. ಅವುಗಳ ಉತ್ಪತಿ ಆ ಎಲ್ಲ ಶತಮಾನಗಳಲ್ಲಿಯೂ ಒಂದೇ ಬಗೆಯದಾಗಿತ್ತೇ? ಎಂಬ ಸಂದೇಹ ಬರುತ್ತದೆ. ಅಲ್ಲದೆ ಆ ಅಂಕಿಗಳನ್ನು ಆ ರಾಜ್ಯಗಳ ಉತ್ಪತ್ತಿ ಎಂದು ತೆಗೆದುಕೊಂಡರೆ, ಅತ್ಯಂತ ಹೆಚ್ಚಿನ ಮೌಲ್ಯದ 'ಕಳಂಜು' ಎಂಬ ಚಿನ್ನದ ನಾಣ್ಯದಿಂದ ಪರಿಗಣಿಸಿದರೂ ಅದು ಬಹಳ ಸ್ವಲ್ಪವೆಂಬಂತೆ ಕಾಣುತ್ತದೆ. ಅಲ್ಲದೆ ಆಗ ಕಂದಾಯವನ್ನು ವಸೂಲು ಮಾಡುವ ಕ್ರಮ, ಹಣದ ರೂಪಕ್ಕಿಂತ ಧಾನ್ಯದ ರೂಪದಲ್ಲಿ ಪಡೆಯುವುದೇ ಹೆಚ್ಚು ಪ್ರಚಲಿತವಾಗಿತ್ತು. ಆದುದರಿಂದ ರೈಸ್‌ರ ಅಭಿಪ್ರಾಯ ಎಲ್ಲ ಕಡೆಯಲ್ಲಿಯೂ ಅನ್ವಯಿಸುವುದಿಲ್ಲವೆನ್ನಬೇಕಾಗುತ್ತದೆ."[64]

ಡಾ.ಎಚ್.ತಿಪ್ಪೇರುದ್ರಸ್ವಾಮಿಯವರು ಹೇಳುವಂತೆ, "ಸಾವಿರ ಹಳ್ಳಿಗಳನ್ನುಳ್ಳ ದೊಡ್ಡ ವಿಭಾಗ 'ನಾಡು' ಎಂದು ನಿರ್ದೇಶಿತವಾಗಿ ಅನಂತರ ಚಿಕ್ಕ ವಿಭಾಗಗಳಿಗೂ ಅನ್ವಯವಾಗಲು ತೊಡಗಿರಬೇಕು. ಆದರೆ 'ಸಾವಿರ' ಎಂಬ ಹೆಸರುಮಾತ್ರ ಅದಕ್ಕೆ ಉಳಿದುಕೊಂಡು ಬಂದಂತೆ ತೋರುತ್ತದೆ. ಆದುದರಿಂದ ಬನವಾಸಿ 12,000, ಗಂಗವಾಡಿ 96,000, ನೊಳಂಬವಾಡಿ 32,000, ತೊಂಡೈ 48,000–ಇವುಗಳನ್ನು ಹೀಗೆ ಕರೆದಿರುವುದರ ಅರ್ಥ ಅವುಗಳಲ್ಲಿ ಕ್ರಮವಾಗಿ 12, 96, 32, 48, ಆಡಳಿತ ವಿಭಾಗಗಳು ಅಂದರೆ ನಾಡುಗಳು ಇದ್ದುವೆಂಬುದು. ಸದ್ಯಕ್ಕೆ ಈ ಸಂಖ್ಯೆಗಳಿಗೆ ಕೊಡಬಹುದಾದ ವಿವರಣೆ" ಎನ್ನುತ್ತಾರೆ. ಹೀಗಾಗಿ ನಾಡಿನ ಜೊತೆಯಲ್ಲಿ ಬಂದಿರುವ ಸಂಖ್ಯೆಯ ಆಧಾರಗಳಿಂದ ಆ ನಾಡಿನ ಗಾತ್ರವನ್ನು ತಿಳಿಯಬಹುದು. ಇಲ್ಲಿ ಗಮನಿಸಬೇಕಾದ ಮತ್ತೊಂದು

ಅಂಶವೆಂದರೆ ರಾಜ್ಯವಿಸ್ತಾರವಾದಾಗಲೂ ರಾಜ್ಯದ ವಿಸ್ತಾರ ಕುಗ್ಗಿದಾಗಲೂ ಈ ಸಂಖ್ಯೆಯನ್ನೇ ಬಳಸುತ್ತಿದ್ದರು. ಇದು ಆಡಳಿತದ ಅನುಕೂಲಕ್ಕಾಗಿ ಬಳಸುತ್ತಿದ್ದ ಪ್ರಯೋಗಗಳಾಗಿದ್ದವು.

### ಗಂಗ ಆರುಸಾಸಿರ (ಗಂಗ–6000)

ಕ್ರಿ.ಶ.870ರ ನೊಳಂಬರ ಕಾಲದ ಶಾಸನದಲ್ಲಿ ಗಂಗ ಆರುಸಾಸಿರದ ಉಲ್ಲೇಖವಿದೆ.[65] ಬೆಂಗಳೂರು ಜಿಲ್ಲೆಯ ಶಾಸನಗಳಲ್ಲಿ ಉಕ್ತವಾಗಿರುವ ಈ ಪ್ರದೇಶಕ್ಕೆ ಸಂಬಂಧಿಸಿದ ಗ್ರಾಮಗಳೆಂದರೆ –ಎರೆಯಪ ಮಂಗಲ, ಮೆರೂರುಕುನ್ದಣಿ, ನೆಲ್ಲಿಗೆಟ್ಟೆ ಗ್ರಾಮಗಳು. ಮೊರಸುನಾಡು 'ಗಂಗ ಆರುಸಾವಿರ' ಪ್ರದೇಶದ ಒಂದು ಭಾಗ. ಈ ಪ್ರದೇಶವು ಸಾಮಾನ್ಯವಾಗಿ ನೊಳಂಬರ ಅಧೀನದಲ್ಲಿತ್ತು[66]

### ಕರಿಕನಾಡು

ಕ್ರಿ.ಶ.750ರ ಶಾಸನವು ಕರಿಕನಾಡನ್ನು[67] ಉಲ್ಲೇಖಿಸುತ್ತದೆ. ಈ ನಾಡಿನಲ್ಲಿರುವ ಬಿದಿರ್ಕಲ್ಲನ್ನು ಕುಕ್ಕರ ಎಂಬುವನು ಆಳ್ವಿಕೆ ಮಾಡುತ್ತಿರುತ್ತಾನೆ. ಈ ಗ್ರಾಮ ಇಂದಿನ ಯಶವಂತಪುರದ ದೊಡ್ಡಬಿದಿರ್ಕಲ್ಲು ಪ್ರದೇಶವಾಗಿದೆ. ಅಂದರೆ ಕರಿಕನಾಡು ಬೆಂಗಳೂರು ನಗರ ಯಶವಂತಪುರ ಸುತ್ತ–ಮುತ್ತಲಿನ ಪ್ರದೇಶವನ್ನು ಒಳಗೊಂಡಿತ್ತು ಎಂಬುದು ಈ ಶಾಸನದಿಂದ ತಿಳಿಯಬಹುದು.

### ಮೊರಸುನಾಡು

ಗಂಗರ ಆಳ್ವಿಕೆಯ ಕಾಲದಿಂದ ವಿಜಯನಗರ ಅರಸರ ಕಾಲದಲ್ಲಿ ಪಾಳೇಗಾರರಾಗಿದ್ದ ಯಲಹಂಕ ನಾಡಪ್ರಭುಗಳ ಅವಧಿಯವರೆಗೂ ಮೊರಸುನಾಡು ಅಸ್ತಿತ್ವದಲ್ಲಿತ್ತು ಎಂಬ ಅಂಶ ಕ್ರಿ.ಶ. ಸುಮಾರು 820ರ ವರ್ತೂರಿನಲ್ಲಿ ದೊರೆತ ಗಂಗರ ಶಿವಮಾರನ ಶಾಸನದಲ್ಲಿ ಉಲ್ಲೇಖವಾಗಿದೆ.[68] ಕ್ರಿ.ಶ.1110 ಬೆಂಗಳೂರು ದಕ್ಷಿಣ ತಾಲ್ಲೂಕಿನ ಬೇಗೂರು ಶಾಸನದಲ್ಲಿ ಈ ನಾಡಿನ ಉಲ್ಲೇಖವಿದೆ.[69] ಕ್ರಿ.ಶ.1274ರ ಶಾಸನದಲ್ಲಿ ರಾಜೇಂದ್ರ ಚೋಳ ಒಳನಾಡಿನ ಮೊರಸುನಾಡು ಎಂದು ಉಲ್ಲೇಖವಾಗಿದೆ. ಈ ತಮಿಳುಶಾಸನದಲ್ಲಿ 'ಮುರುಶುನಾಡು' ಎಂದು ಕರೆದಿದೆ.[70] ನಾಗೇಶ್ವರ ದೇವಸ್ಥಾನದ ತಳಪಾದಿಯ ಕಲ್ಲಿನ ಮೇಲೆ ಇರುವ ಕ್ರಿ.ಶ.1110ರ ಹೊಯ್ಸಳ ವೀರಬಲ್ಲಾಳನ ಕಾಲದ ಶಾಸನದಲ್ಲಿ 'ಮುರುಸುನಾಡು' ಎಂಬ ಉಲ್ಲೇಖವಿದೆ. ಇದು ಮೊರಸುನಾಡೇ ಆಗಿದೆ.[71] ಕ್ರಿ.ಶ.1410ರ ವಿಜಯನಗರದ ಅರಸು ಹರಿಹರನ ಕಾಲದ ಶಾಸನ ಮೊರಸುನಾಡನ್ನು 'ಹಿರಸ ನಾಡು' ಎಂದು ಕರೆದಿದೆ.[72]

## ಬೆಂಪೂರು ಪನ್ನೆರಡು

ಬೆಂಗಳೂರು ಜಿಲ್ಲೆಯ ಆನೇಕಲ್ಲು ತಾಲ್ಲೂಕು ಮತ್ತು ಬೆಂಗಳೂರು ನಗರ ದಕ್ಷಿಣ ತಾಲ್ಲೂಕಿನ ಅನೇಕ ಗ್ರಾಮಗಳು ಈ ನಾಡಿಗೆ ಸೇರಿದ್ದವು. ಕ್ರಿ.ಶ.900ರ ಬೇಗೂರು ಶಾಸನದಲ್ಲಿ ಬೆಂಪೂರು ಪನ್ನೆರಡು ಎಂಬ ಉಲ್ಲೇಖವಿದೆ. ಇದು ಗಂಗರ ಕಾಲದ ಸಣ್ಣ ಆಡಳಿತ ಘಟಕವಾಗಿತ್ತು. ಈ ಹನ್ನೆರಡು ಗ್ರಾಮಗಳನ್ನು ಶಾಸನದಲ್ಲಿ ಉಲ್ಲೇಖಿಸಲಾಗಿದೆ. ಅವುಗಳೆಂದರೆ, ಬೆಂಪೂರು(ಬೇಗೂರು), ತೊವಗೂರು(ತೋಗೂರು), ಪೂವಿನಪುಲ್ಲಿಮಂಗಲ(ಹುಲಿಮಂಗಲ), ಇಗ್ಗಲೂರು(ಇಗ್ಗಲೂರು), ಕೂಡಲ್(ಕೂಡಲು), ಸಾರಮು(ಸಾರಕ್ಕಿ), ಕೂತನಿಡುನಲ್ಲೂರು, ನಲ್ಲೂರು, ಕೊಮರಂಗುಂಡು, ಡುಗ್ಮೊನೆಲ್ಮಲ್ಲಿ, ಗಳಂಜವಾಗಿಲು ಇವುಗಳೆಲ್ಲವೂ ಸೇರಿ 12 ಗ್ರಾಮಗಳಾಗಿವೆ. ಈ ಬೆಂಪೂರುನಾಡೇ ಮುಂದೆ ವಿಜಯನಗರದ ಅರಸರ ಕಾಲಕ್ಕೆ ಬೇಹೂರುನಾಡು ಎಂದು ಗುರುತಿಸಿಕೊಂಡಿದೆ. ಕ್ರಿ.ಶ. 1432ರ ಇಮ್ಮಡಿ ದೇವರಾಯನ ಶಾಸನವೊಂದರಲ್ಲಿ ಮುಳುವಾಗಿಲು ರಾಜ್ಯದ ಸಾರಕ್ಕಿಯ ಪೆಮ್ಮಯ್ಯನಾಯ್ಕರು ಬೇಹೂರನಾಡಿನ ಹುಸ್ಕೂರಿನಲ್ಲಿ ಭೂಮಿದಾನ ನೀಡಿದ ವಿಷಯವಿದೆ. ಇದರಿಂದಾಗಿ ಈ ನಾಡನ್ನು ಪೆಮ್ಮೆಯನಾಯ್ಕರು ಆಳುತ್ತಿದ್ದರೆಂದು ಹೇಳಬಹುದು. ಸಾರಕ್ಕಿ ಮತ್ತು ಬೇಗೂರು ಗ್ರಾಮಗಳು ಈಗ ಬೆಂಗಳೂರು ನಗರದ ಭಾಗವಾಗಿವೆ.

## ಸಟಿಕ್ಸೆನಾಡು

ಕ್ರಿ.ಶ.900ರ ರಾಷ್ಟ್ರಕೂಟರ ಶಾಸನದಲ್ಲಿ ಸಟ್ನೆನಾಡು–300 ಎಂಬ ಉಲ್ಲೇಖವಿದೆ.[73] ಕ್ರಿ.ಶ.1434ರ ಹೊಯ್ಸಳ ವೀರಬಲ್ಲಾಳನ ಕಾಲದ ಶಾಸನದಲ್ಲಿ 'ಮಹಾಸಣ್ಣೆನಾಡು' ಎಂದಿದೆ.[74] ಈ ನಾಡಿನ ದಕ್ಷಿಣಕ್ಕೆ 'ತೊಜಿಳವಿತ್ತಿ'ಯು ಇದ್ದಿತೆಂದು ಇದೇ ಶಾಸನ ತಿಳಿಸುತ್ತದೆ. ಹೊಯ್ಸಳರ ಕಾಲದ ಶಾಸನಗಳಾದ ಕ್ರಿ.ಶ.1346 ರ ಸಾದರಮಂಗಲ ಶಾಸನ[75] ಕ್ರಿ.ಶ1381ರ ಬೇಲೂರಿನ ಮುನಿಯಪ್ಪನ ಹೊಲದಲ್ಲಿ ದೊರೆತ ತಮಿಳು ಶಾಸನದಲ್ಲಿ ಸಣ್ಣೆ ನಾಡಿನ ಉಲ್ಲೇಖವಿದೆ.[76] ರಾಷ್ಟ್ರಕೂಟರ ಕಾಲದಲ್ಲಿ ಅಸ್ತಿತ್ವದಲ್ಲಿದ್ದ ಈ ನಾಡು ಹೊಯ್ಸಳರ ಕಾಲದಲ್ಲೂ ಅಸ್ತಿತ್ವದಲ್ಲಿತ್ತು ಎಂಬುದನ್ನು ಈ ಶಾಸನಗಳು ತಿಳಿಸುತ್ತವೆ.

## ಕುಕ್ಕಲನಾಡು

ಸುಮಾರು ಕ್ರಿ.ಶ.750ರ ಗಂಗರ ಶ್ರೀಪುರುಷನ ಕಾಲದ ಶಾಸನದಲ್ಲಿ 'ಕುಕ್ಕರೆನಾಡು' 'ಕುಕ್ಕರ ಪಾಳಿಕ್ಕಾರೆನಾಡು'[77] ಎಂಬ ಉಲ್ಲೇಖವಿದೆ. ಅಂದರೆ ಈ ನಾಡು ಗಂಗರ ಕಾಲದಲ್ಲೇ ಅಸ್ತಿತ್ವದಲ್ಲಿತ್ತು ಎಂಬುದು ಸ್ಪಷ್ಟ. ಗಂಗರನ್ನು ಸೋಲಿಸಿ ಗಂಗವಾಡಿಯನ್ನು ವಶಪಡಿಸಿಕೊಂಡ ಚೋಳರ ಕಾಲದ

ಶಾಸನವೊಂದರಲ್ಲಿ ಈ ನಾಡಿನ ಉಲ್ಲೇಖವಿದೆ. ಕ್ರಿ.ಶ.1051ರ ರಾಜೇಂದ್ರ ದೇವ ಚೋಳನ ಕಾಲದ ಶಾಸನ ಸೋಲದೇವನ ಹಳ್ಳಿಯಲ್ಲಿ ದೊರೆತಿದ್ದು, ಇದರಲ್ಲಿ ಕುಕ್ಕಲನಾಡಿನ ಉಲ್ಲೇಖವಿದೆ.[78]

ಚೋಳರನ್ನು ಗಂಗವಾಡಿಯಿಂದ ಸೋಲಿಸಿ ಓಡಿಸಿದ ಹೊಯ್ಸಳರ ಆಳ್ವಿಕೆಯ ಕಾಲದಲ್ಲಿ ಕುಕ್ಕಲನಾಡಿನ ವ್ಯಾಪ್ತಿ ದೊಡ್ಡದಾಯಿತು. ಕ್ರಿ.ಶ.1336ರ ಬ್ಯಾಡರಹಳ್ಳಿ ಮತ್ತು ಕ್ರಿ.ಶ.1340ರ ರಾಮಸಮುದ್ರದಲ್ಲಿ ದೊರಕಿರುವ ವೀರಬಲ್ಲಾಳನ ಕಾಲದ ಶಾಸನದಲ್ಲಿ 'ಶ್ರೀಮನು ಮಹಾಸಾಮಂತಾಧಿಪತಿ ನರಲೋಕಗಂಡ ಮಯಿಲೆಯ ನಾಯಕರು ಕುಕ್ಕಲನಾಡನಾಳುತ್ತಿರೆ' ಎಂದಿದೆ. ಹಾಗೂ 'ಶ್ರೀ ಮನುಮಹಾಕುಕ್ಕಲನಾಡ ಮಹಾಪ್ರಭು ಕಿತ್ತನೆಲೆಯ ಹೊನ್ನೇಗೌಡನ ಮಕ್ಕಳು' ಎಂದಿದೆ.[79] ಬ್ಯಾಡರಹಳ್ಳಿ ಶಾಸನ[80] ಮತ್ತು ಕಿತ್ತನಲ್ಲಿ[81] ಶಾಸನದಲ್ಲಿ ಈ ನಾಡಿನ ಉಲ್ಲೇಖವಿದೆ. ವಿಜಯನಗರದ ಪ್ರೌಢದೇವರಾಯನ ಕಾಲದಲ್ಲಿ ಕುಕ್ಕಲ ನಾಡನ್ನು ಬುಕ್ಕನಾಯಕ ಆಳುತ್ತಿದ್ದ ಎಂದು ಕ್ರಿ.ಶ.1430ರ ದೊಮ್ಮಸಂದ್ರದ ಶಾಸನ ತಿಳಿಸುತ್ತದೆ.[82]

ಗಂಗರ ಕಾಲದಿಂದ ವಿಜಯನಗರ ಅರಸರ ಕಾಲದವರೆಗೂ ಕುಕ್ಕಲನಾಡು ಅಸ್ತಿತ್ವದಲ್ಲಿತ್ತು. ಮುಂದೆ ಯಲಹಂಕ ನಾಡಿನೊಳಗೆ ಈ ನಾಡು ಸೇರಿಹೋಯಿತು. ದೊರೆತಿರುವ ಶಾಸನಗಳ ಆಧಾರದ ಮೇಲೆ ಈ ನಾಡು ಬೆಂಗಳೂರು ನಗರದ ಕೆಲವು ಪ್ರದೇಶಗಳು ಸೇರಿದಂತೆ ಹೆಸರುಘಟ್ಟ, ಮಂಚನಬೆಲೆ, ಕಿತ್ತನಹಳ್ಳಿ, ಬ್ಯಾಡರಹಳ್ಳಿ, ನೆಲಮಂಗಲದ ಕೆಲವು ಪ್ರದೇಶಗಳು ಇದರ ವ್ಯಾಪ್ತಿಗೆ ಒಳಗಾಗುದ್ದವು.

## ಮುಡಿಗೊಣ್ಡ ಚೋಳಮಂಡಲ

ಕ್ರಿ.ಶ.1110ರ ಬೇಗೂರಿನ ನಾಗೇಶ್ವರ ದೇವಸ್ಥಾನದ ತಳಪಾದಿ ಕಲ್ಲಿನಲ್ಲಿ ಇರುವ ಹೊಯ್ಸಳರ ಕಾಲದ ಶಾಸನದಲ್ಲಿ ಮುಡಿಗೊಣ್ಡ ಚೋಳಮಂಡಲದ ಉಲ್ಲೇಖವಿದೆ.[83] ಕ್ರಿ.ಶ.1274ರ ಹಳೇಹಳ್ಳಿಯ ತಮಿಳು ಶಾಸನದಲ್ಲಿ ಈ ಪ್ರಾಂತ್ಯದ ಉಲ್ಲೇಖವಿದೆ.

## ರಾಜರಾಜ ಚೋಳ ವಳನಾಡು

ರಾಜರಾಜ ಚೋಳ ವಳನಾಡು ಚೋಳರ ಕಾಲದಲ್ಲಿದ್ದ ಪ್ರಮುಖ ಒಳನಾಡು. ದೊಮ್ಮಲೂರಿನಲ್ಲಿ ದೊರಕಿರುವ ಕ್ರಿ.ಶ. ಸುಮಾರು 1200ರ ತಮಿಳು ಶಾಸನದಲ್ಲಿ 'ಇಲೈಪಾಕ್ಕನಾಡಿನ ತೊಂಬಲೂರು' ಅಂದರೆ ಯಲಹಂಕ ನಾಡಿನ ದೊಮ್ಮಲೂರು ಪ್ರದೇಶವು ರಾಜರಾಜಚೋಳ ವಳನಾಡಿನ ಭಾಗವೆಂದು[84] ಹೇಳಿದೆ.

## ರಾಜೇಂದ್ರಚೋಳ ವಳನಾಡು

ಚೋಳ ಮತ್ತು ಹೊಯ್ಸಳರ ಕಾಲದ ಶಾಸನಗಳಲ್ಲಿ ಈ ಒಳನಾಡಿನ ಉಲ್ಲೇಖವಿದೆ. ಕ್ರಿ.ಶ.1346ರ ಹೊಯ್ಸಳರ ಕಾಲದ ಶಾಸನದಲ್ಲಿ[85] ಹಾಗೂ ಮಡಿವಾಳದ ಸೋಮೇಶ್ವರನ ದೇವಸ್ಥಾನದಲ್ಲಿ ದೊರೆತಿರುವ ಕ್ರಿ.ಶ.1366ರ ಶಾಸನದಲ್ಲಿ[86] ಈ ನಾಡು ಕಾಣಸಿಗುತ್ತದೆ. ಈ ನಾಡು ಮುಡಿಗೊಣ್ಣ ಚೋಳ ಮಂಡಲದ ಒಳನಾಡಾಗಿತ್ತು. ಕ್ರಿ.ಶ.1330ರ ಹೊಯ್ಸಳರಕಾಲದ ಶಾಸನಗಳು ಇಗ್ಗಲೂರು ಗ್ರಾಮ[87] ಮತ್ತು ಹೀಲಲ್ಲಿ[88] ಗ್ರಾಮದಲ್ಲಿ ದೊರಕಿವೆ. ಈ ಶಾಸನಗಳಲ್ಲಿ ಈ ನಾಡಿನ ಉಲ್ಲೇಖವಿದೆ.

## ಎರುಮರೈನಾಡು(ಯಮರೆನಾಡು)

ಆನೇಕಲ್ಲು ತಾಲ್ಲೂಕಿನಲ್ಲಿ ದೊರೆಕಿರುವ ಶಾಸನಗಳಲ್ಲಿ ಎರುಮರೈ ನಾಡಿನ ಉಲ್ಲೇಖವಿದೆ. ಕ್ರಿ.ಶ.1380ರ ಶಾಸನದಲ್ಲಿ ಎರುಮರೈನಾಡು ಎಂದಿದ್ದರೆ.[89] ಇದೇ ಕಾಲಘಟ್ಟದ ಆನೇಕಲ್ಲಿನಲ್ಲೇ ದೊರೆತ ಶಾಸನದಲ್ಲಿ 'ಯಮರೆ ನಾಡು' ಎಂದಿದೆ.

## ಎಲಹಕ್ಕನಾಡು(ಇಲೈಪಾಕ್ಕನಾಡು)

ಯಲಹಂಕ ನಾಡಪ್ರಭುಗಳ ಒಟ್ಟು 94 ಶಾಸನಗಳು ದೊರಕಿವೆ. ಇದರಲ್ಲಿ ಸುಮಾರು 65 ಶಾಸನಗಳು ಯಲಹಂಕನಾಡನ್ನು ಉಲ್ಲೇಖಿಸುತ್ತವೆ. ಈ ನಾಡು ಬೆಂಗಳೂರಿನ ಕೆಲವು ಭಾಗಗಳು ಸೇರಿದಂತೆ ಅದರ ಸುತ್ತ ಮುತ್ತ ಇರುವ ನೆಲಮಂಗಲ, ದೊಡ್ಡಬಳ್ಳಾಪುರ, ದೇವನಹಳ್ಳಿಯ ಕೆಲವು ಪ್ರದೇಶಗಳನ್ನು ಒಳಗೊಂಡಂತೆ ರೂಪುಗೊಂಡಿತ್ತು. ಹೊಯ್ಸಳ ಮತ್ತು ವಿಜಯನಗರ ಅರಸರ ಕಾಲದಲ್ಲಿ ಈ ನಾಡಿನ ವ್ಯಾಪ್ತಿ ವಿಸ್ತಾರವಾಗಿ ಪ್ರಖ್ಯಾತಿಯನ್ನು ಹೊಂದಿತ್ತು.

ಯಲಹಂಕನಾಡು ಹೊಯ್ಸಳರ ಕಾಲಕ್ಕೂ ಮೊದಲೇ ಚೋಳರ ಕಾಲದ ಶಾಸನಗಳಲ್ಲಿ ಕಾಣಸಿಗುತ್ತದೆ. ಕ್ರಿ.ಶ.1046ರ ಚೋಳದೊರೆ ರಾಜರಾಜ ಕೇಸರಿವರ್ಮನಾದ ರಾಜರಾಜದೇವನ ಶಾಸನದಲ್ಲಿ 'ಇಲೈಪಾಕ್ಕ'[90] ಎಂದು ಕರೆಯಲಾಗಿದೆ. ಈ ಶಾಸನದ ಪ್ರಕಾರ ಚೋಳರ ಕಾಲಕ್ಕಾಗಲೇ ಯಲಹಂಕ ನಾಡು ಅಸ್ತಿತ್ವದಲ್ಲಿತು. ಆದರೆ ಬೃಹತ್ ಮಟ್ಟದಲ್ಲಿ ಪ್ರತ್ಯೇಕ ನಾಡಾಗಿರಲಿಲ್ಲ.

ಕ್ರಿ.ಶ.1200ರ ಶಾಸನವೊಂದು ದೊಮ್ಮಲೂರಿನ ಚೊಕ್ಕನಾಥ ದೇವಾಲಯದ ತಳಪಾದಿ ಕಲ್ಲಿನಲ್ಲಿದೆ.[91] ಈ ನಾಡನ್ನು 'ಇಲೈಪಾಕ್ಕನಾಟ್ಟು' ಎಂದು ಕರೆಯಲಾಗಿದೆ. ದೊಮ್ಮಲೂರು ಈ ನಾಡಿಗೆ ಸೇರಿತ್ತು ಎಂಬ ವಿಷಯವನ್ನು ಇದೇ ಶಾಸನ ತಿಳಿಸುತ್ತದೆ. ಹಾಗೂ ಪ್ರಾರಂಭದ ಕಾಲದಲ್ಲಿ ಯಲಹಂಕ ನಾಡು ರಾಜೇಂದ್ರಚೋಳ ವಳನಾಡಿನ ಭಾಗವಾಗಿದ್ದಿತ್ತೆಂದು ಮಡಿವಾಳ ಶಾಸನ

ಉಲ್ಲೇಖಿಸುತ್ತದೆ.[92] ಹೊಯ್ಸಳರ ನಂತರ ವಿಜಯನಗರ ಅರಸರ ಕಾಲದಲ್ಲೂ ಈ ನಾಡು ಶಾಸನಗಳಲ್ಲಿ ಕಾಣಿಸುತ್ತದೆ. ವಿಜಯನಗರದ ಅರಸು ದೇವರಾಯನ ಕ್ರಿ.ಶ.1431ರ ಕಾಲದ ಶಾಸನದಲ್ಲಿ ಈ ನಾಡಿನ ಉಲ್ಲೇಖವಿದೆ.[93] ಹಾಗೂ ಕ್ರಿ.ಶ.1532ರ ಶಾಸನ ಹೆಸರುಘಟ್ಟ ಗ್ರಾಮದಲ್ಲಿ ದೊರಕಿದೆ. ಈ ಶಾಸನದಲ್ಲಿ 'ಬೇಲೂರು ಚಾವಡಿಗೆ ಸಲುವ ಎಲಹಂಕ ನಾಡ ಸಿವನಸಮುದ್ರ ಸೀಮೆಯೊಳಗಣ ಕಾಕೋಳಸ್ಥಳ'[94] ಎಂದಿದೆ. ವಿಜಯನಗರ ಕಾಲದಲ್ಲಿ ಯಲಹಂಕ ನಾಡು ಬೇಲೂರು ಚಾವಡಿಯ ಭಾಗವಾಗಿತ್ತು.

ಕ್ರಿ.ಶ.1544ರ ಅಲ್ಲಾಳಸಂದ್ರ ಶಾಸನದ ಪ್ರಕಾರ[95] ಎಲಹಂಕನಾಡಿನ ಸಿವನಸಮುದ್ರ ಸೀಮೆಗೆ ಅಲ್ಲಾಳಸಂದ್ರ ಗ್ರಾಮ ಸೇರಿತ್ತು ಎಂದು ತಿಳಿದುಬರುತ್ತದೆ. ಹೀಗೆ ಶಾಸನಗಳ ಆಧಾರದ ಮೇಲೆ ಯಲಹಂಕನಾಡು ಬೆಂಗಳೂರು ತಾಲ್ಲೂಕಿಗೆ ಸೇರಿದ ದೊಮ್ಮಲೂರು, ಇಬ್ಬಲೂರು, ಅಲ್ಲಾಳಸಂದ್ರ, ಸೋಮಿದೇವನಹಳ್ಳಿ, ಕಾಳಿತಮ್ಮನಹಳ್ಳಿ, ಜಾಲಹಳ್ಳಿ, ಜಕ್ಕೂರು, ದೇವಸಂದ್ರ, ಚೊಕ್ಕನಹಳ್ಳಿ, ಜೂಬನಹಳ್ಳಿಗಳನ್ನು ಒಳಗೊಂಡಿತ್ತು ಎಂದು ತಿಳಿಯುತ್ತದೆ.

## ತುರೈವಳಿನಾಡು

ಕ್ರಿ.ಶ.1333ರ ವೀರಬಲ್ಲಾಳನ ಕಾಲದ ಕೃಷ್ಣರಾಜಪುರದಲ್ಲಿ ದೊರೆತ ಶಾಸನದಲ್ಲಿ, ಕ್ರಿ.ಶ.1434ರ ಪಟ್ಟಂದೂರು ಶಾಸನದಲ್ಲಿ ಈ ನಾಡಿನ ಉಲ್ಲೇಖವಿದೆ.[96] ಹಾಗೂ ಹೊಯ್ಸಳರ ವೀರ ಬುಕ್ಕನ ಕಾಲದ ಕ್ರಿ.ಶ.1446ರ ಸಾದರಮಂಗಲ ಶಾಸನದಲ್ಲಿ ಈ ನಾಡಿನ ಉಲ್ಲೇಖವಿದೆ. ಕ್ರಿ.ಶ.1434 ಶಾಸನದ ಪ್ರಕಾರ ಮಾಚಿದೇವನೆಂಬುವನು ತೊಱೆವಳಿನಾಡನ್ನು ಆಳುತ್ತಿದ್ದನೆಂದು ತಿಳಿದುಬರುತ್ತದೆ.[97] ತುರೈವಳಿನಾಡಿನಲ್ಲಿ ಬೆಂಗಳೂರು ನಗರದ ಕಾಡುಗೋಡಿ, ಸಾದರಮಂಗಲ, ಇಂಮಡಿಹಳ್ಳಿ, ಪಟ್ಟಂದೂರುಗಳು ಸೇರಿದ್ದವು.

## ಪೆರಿಯನಾಡು

ಬನ್ನೇರುಘಟ್ಟದಲ್ಲಿ ದೊರೆತಿರುವ ಕ್ರಿ.ಶ.1297ರ ಹೊಯ್ಸಳ ಮುಮ್ಮಡಿ ಬಲ್ಲಾಳನ ಕಾಲದ ಶಾಸನವು  ಈ ಶಾಸನದಲ್ಲಿ ಪೆರಿಯನಾಡಿನ ಉಲ್ಲೇಖವಿದೆ.[98] ಕ್ರಿ.ಶ.1330ರ ಮತ್ತೊಂದು ಹೊಯ್ಸಳರ ವೀರಬಲ್ಲಾಳನ ಕಾಲದ ಶಾಸನದಲ್ಲಿ ಪೆರಿಯನಾಡಿನ ಉಲ್ಲೇಖವಿದೆ.[99]

## ಮಾಶಂಡಿನಾಡು

ಕ್ರಿ.ಶ.1304ರ ಹೊಯ್ಸಳ ವೀರಬಲ್ಲಾಳನ ತಮಿಳುಶಾಸನದಲ್ಲಿ 'ಮಾಶಂಡಿನಾಡು' ಎಂಬ ಉಲ್ಲೇಖವಿದೆ.[100] ಮಡಿವಾಳದ ಸೋಮೇಶ್ವರ ದೇವಸ್ಥಾನದ ಗೋಡೆಯಲ್ಲಿರುವ ಕ್ರಿ.ಶ.1366ರ

ಶಾಸನದಲ್ಲಿ ಈ ನಾಡಿನ ಉಲ್ಲೇಖವಿದೆ.[101] ಆನೇಕಲ್ಲು ತಾಲ್ಲೂಕಿನ ಹೊಮಜಿ ಗ್ರಾಮದ ಕ್ರಿ.ಶ.1300ರ ಶಾಸನದಲ್ಲಿ ಈ ನಾಡಿನ ಉಲ್ಲೇಖವಿದೆ.[102] ಪಿ.ವಿ.ಕೃಷ್ಣಮೂರ್ತಿರವರು ಹೇಳುವಂತೆ, ಮಾಶಂಡಿನಾಡು ಚೋಳರ ಕಾಲದ ಒಂದು ಪ್ರಸಿದ್ಧ ನಾಡು. ಆನೇಕಲ್ಲು ತಾಲ್ಲೂಕಿನ ಉತ್ತರಭಾಗವೂ ಸೇರಿದಂತೆ, ಕೋಲಾರ ಜಿಲ್ಲೆಯ ಮಾಲೂರು ತಾಲ್ಲೂಕು, ಧರ್ಮಪುರಿ ಜಿಲ್ಲೆಯ ಹೊಸೂರು ತಾಲ್ಲೂಕಿನ ಉತ್ತರಭಾಗದ ಪ್ರದೇಶಗಳನ್ನು ಈ ನಾಡು ಒಳಗೊಂಡಿದ್ದಿತೆಂದು ಶಾಸನಗಳಿಂದ ತಿಳಿಯುತ್ತದೆ ಎಂದು ಅಭಿಪ್ರಾಯಿಸಿದ್ದಾರೆ.[103]

## ವೆಪ್ಪೂರು ನಾಡು

ಗಂಗರ ಕಾಲದಲ್ಲಿದ್ದ ಬೆಂಪೂರು ಹನ್ನೆರಡು ಎಂಬ ಪ್ರಾದೇಶಿಕ ವಿಭಾಗವೇ ಮುಂದೆ ಚೋಳ ಮತ್ತು ಹೊಯ್ಸಳರ ಕಾಲದಲ್ಲಿ ವೆಪ್ಪೂರು ನಾಡಾಗಿ ಬದಲಾದದ್ದು ಶಾಸನಗಳಿಂದ ತಿಳಿಯಬಹುದು. ಕ್ರಿ.ಶ.1330ರ ಆನೇಕಲ್ಲು ತಾಲ್ಲೂಕಿನ ಹೀಲಲ್ಲಿ ಗ್ರಾಮದ ಶಾಸನದಲ್ಲಿ ವೆಪ್ಪೂರು ನಾಡಿನ ಉಲ್ಲೇಖವಿದೆ.[104] ಕ್ರಿ.ಶ.1365ರ ಮಡಿವಾಳದಲ್ಲಿ ದೊರೆತ ಬುಕ್ಕನ ಕಾಲದ ಶಾಸನದಲ್ಲಿ ಈ ನಾಡಿನ ಉಲ್ಲೇಖವಿದೆ. 'ತಾವರೈಕೆಱೈ ಇಂದಿನ ತಾವರೆಕೆರೆ ವೆಪ್ಪೂರುನಾಡಿನಲ್ಲಿತ್ತು ಎಂದು ತಿಳಿಯುತ್ತದೆ.[105] ಬೆಂಗಳೂರು ದಕ್ಷಿಣ ತಾಲ್ಲೂಕು ಮತ್ತು ಆನೇಕಲ್ಲು ತಾಲ್ಲೂಕಿಗೆ ಸೇರಿದ ಹಲವು ಗ್ರಾಮಗಳು ಈ ನಾಡಿನ ವ್ಯಾಪ್ತಿಗೆ ಒಳಪಟ್ಟಿತ್ತೆನ್ನಬಹುದು.

## ವೆಯೂರನಾಡು

ಕ್ರಿ.ಶ.1346ರ ದೊಡ್ಡ ಕನ್ನಲ್ಲೆ ಗ್ರಾಮದಲ್ಲಿ ದೊರೆತ ಶಾಸನದಲ್ಲಿ ವೆಯೂರುನಾಡು ಎಂಬ ಉಲ್ಲೇಖವಿದೆ. ಇರುಂಬಲಿಯೂರು ಇಂದಿನ ಇಬ್ಬಲೂರು ಈ ನಾಡಿಗೆ ಸೇರಿತ್ತು ಎಂಬುದು ಶಾಸನದಿಂದ ತಿಳಿಯುತ್ತದೆ.[106]

## ಸಾವಿತೆಯನಾಡು

ಗೆರಟಿಗನಬೆಲೆಯಲ್ಲಿ ದೊರೆತ ಕ್ರಿ.ಶ.1325ರ ಶಾಸನದಲ್ಲಿ 'ಸಾವಿತೆಯನಾಡಿನ ಗೆರಟಿನಬೆಲೆ' ಎಂದಿದೆ. ಆನೇಕಲ್ಲು ತಾಲ್ಲೂಕಿನಲ್ಲಿರುವ ಗೆರಟಿನಬೆಲೆ ಗ್ರಾಮವು ಈ ನಾಡಿಗೆ ಸೇರಿತ್ತೆನ್ನಬಹುದು.[107]

## ಹೊಮ್ಮಳಿಗೆನಾಡು

ಹೊಯ್ಸಳ ಮುಮ್ಮಡಿ ವೀರಬಲ್ಲಾಳನ ಆಳ್ವಿಕೆಯ ಕ್ರಿ.ಶ.1363ರ ಶಾಸನವೊಂದು ಬನ್ನೇರುಘಟ್ಟದ ಚಂಪಕದಾಮಸ್ವಾಮಿ ದೇವಾಲಯದಲ್ಲಿ ದೊರಕಿರುವ ಶಾಸನದಲ್ಲಿ ಈ ನಾಡಿನ ಉಲ್ಲೇಖವಿದೆ.[108] ಕ್ರಿ.ಶ. 1297ರ ಅದೇ ಅರಸನ ತಮಿಳು ಶಾಸನವು ಬನ್ನೇರುಘಟ್ಟದಲ್ಲಿ ದೊರಕಿದೆ.

ಈ ಶಾಸನದಲ್ಲಿ ಹೊಮ್ಮಳಿಗೆ ನಾಡನ್ನು 'ಪುನ್ಮಣಿಗನಾಟ್ಟು' ಎಂದು ಕರೆದಿದೆ.[109] ಶಾಸನಗಳ ಆಧಾರದ ಮೇಲೆ ಬನ್ನೇರುಘಟ್ಟದ ಆಸುಪಾಸಿನ ಸ್ಥಳಗಳು ಹೊಮ್ಮಳಿಗೆನಾಡಿಗೆ ಸೇರಿತ್ತು ಎಂದು ಕಂಡುಬರುತ್ತದೆ.

ಬೆಂಗಳೂರು ಪ್ರಾಂತ್ಯದಲ್ಲಿ ಹೀಗೆ ಸುಮಾರು ಕ್ರಿ.ಶ.900 ರಿಂದ ಕ್ರಿ.ಶ.1350ರ ಕಾಲಾವಧಿಯವರೆಗೂ ಈ ರೀತಿಯ ಪ್ರಾದೇಶಿಕ ವಿಭಾಗಗಳು ಪ್ರಚಲಿತದಲಿದ್ದು, ತದನಂತರ ಬ್ರಿಟಿಷರ ವಶಕ್ಕೆ ಸೇರಿದ ಬೆಂಗಳೂರಿನ ಆಡಳಿತ ಕ್ರಮವು ಬದಲಾಯಿತು. ಬಿ.ಎಲ್ ರೈಸ್ ಮೈಸೂರು ಗೆಜೆಟಿಯರ್‌ನಲ್ಲಿ ಹೇಳಿರುವಂತೆ ಬೆಂಗಳೂರಿನಲ್ಲಿ ಒಟ್ಟು 9 ತಾಲ್ಲೂಕುಗಳಿದ್ದವು. ಆನೇಕಲ್ಲು, ಬೆಂಗಳೂರು, ಚನ್ನಪಟ್ಟಣ, ದೇವನಹಳ್ಳಿ, ದೊಡ್ಡಬಳ್ಳಾಪುರ, ಹೊಸಕೋಟೆ, ಕಾನಕಾನಹಳ್ಳಿ, ಮಾಗಡಿ, ನೆಲಮಂಗಲ ಮತ್ತು ಒಟ್ಟು 76 ಹೋಬಳಿ, 2,799 ಹಳ್ಳಿಗಳನ್ನು ಹೆಸರಿಸುತ್ತಾರೆ.[110] ಬೆಂಗಳೂರು ತಾಲ್ಲೂಕಿನಲ್ಲಿ ಒಟ್ಟು 9 ಹೋಬಳಿಗಳಿದ್ದವು. ಅಗರ, ಬೆಂಗಳೂರು, ಬೇಗೂರು, ಹಲಸೂರು, ಕೆಂಗೇರಿ, ಕೃಷ್ಣರಾಜಪುರ, ವರ್ತೂರು, ಯಲಹಂಕ, ಯಶವಂತಪುರವನ್ನು ಒಳಗೊಂಡಂತೆ 370 ಹಳ್ಳಿಗಳಿದ್ದವು.[111] ಹಾಗೂ ಆನೇಕಲ್ಲು ತಾಲ್ಲೂಕು 7 ಹೋಬಳಿಗಳನ್ನು ಒಳಗೊಂಡಿತ್ತು. ಆನೇಕಲ್ಲು, ಅತ್ತಿಬಲೆ, ಬಿದರಗುಪ್ಪೆ, ಹಾರಗದ್ದೆ, ಇಗ್ಗಲೂರು, ಜಿಗಣಿ, ಸರ್ಜಾಪುರ ಮತ್ತು ಒಟ್ಟು 223 ಹಳ್ಳಿಗಳಿದ್ದವು[112] ಎಂದು ಗುರುತಿಸಲಾಗಿದೆ. ಹೀಗೆ ಬೆಂಗಳೂರಿನಲ್ಲಿ ದೊರೆತ ಶಾಸನಗಳನ್ನು ಅವಲೋಕಿಸಿದರೆ ಗಂಗರ ಕಾಲದಿಂದ ಆರಂಭಗೊಂಡು ಚೋಳ, ಹೊಯ್ಸಳ, ವಿಜಯನಗರ ಮತ್ತು ಮೈಸೂರು ಅರಸರ ಕಾಲದವರೆಗೆ ಅಸ್ತಿತ್ವದಲ್ಲಿದ್ದ ಪ್ರಾದೇಶಿಕ ವಿಭಾಗಗಳು, ಉಪವಿಭಾಗ, ಅಧಿಕಾರಿ ವರ್ಗದ ವಿವರಗಳು ಶಾಸನಗಳಲ್ಲಿ ಉಲ್ಲೇಖವಾಗಿವೆ.

## ಕೊನೆ ಟಿಪ್ಪಣಿಗಳು

1. ಕೇಶವಶರ್ಮ. ಕೆ – ಸಾಂಸ್ಕೃತಿಕ ಪರಿಕಲ್ಪನೆಗಳು, ಪು.76
2. ಬಿ.ಎಲ್ ರೈಸ್(ಸಂ)–EC-IX ಆನೇಕಲ್ಲು–73, ಬೊಮ್ಮೊಂಡಹಳ್ಳಿ, ಪು.252
3. ಪೂರ್ವೋಕ್ತ, ನೆಲಮಂಗಲ–60, ಪು.75
4. ಪೂರ್ವೋಕ್ತ, ನೆಲಮಂಗಲ–60, ಮಣ್ಣೆ, ಪು.79
5. ಪೂರ್ವೋಕ್ತ, ಬೆಂಗಳೂರು–36, ದಾಸರಹಳ್ಳಿ, ಪು.18
6. ಪೂರ್ವೋಕ್ತ, ಬೆಂಗಳೂರು–40, ವರ್ತೂರು, ಪು.19
7. ಪೂರ್ವೋಕ್ತ, ಬೆಂಗಳೂರು–79, ಅಗರ, ಪು.28
8. ಪೂರ್ವೋಕ್ತ, ಬೆಂಗಳೂರು–83, ಬೇಗೂರು, ಪು.30
9. ದೇವರಕೊಂಡಾರೆಡ್ಡಿ–ದೊಡ್ಡಬೇಗೂರಿನ ನಾಗತ್ತರನ ಶಾಸನ, ಇತಿಹಾಸ ದರ್ಶನ, ಸಂಪುಟ–2, ಪು.158
10. ಬಿ.ಎಲ್.ರೈಸ್(ಸಂ)–EC-IX ಆನೇಕಲ್ಲು–75, ಪು.252
11. ಪೂರ್ವೋಕ್ತ, ನೆಲಮಂಗಲ–61, ಪು.82
12. ಪೂರ್ವೋಕ್ತ, ಹೊಸಕೋಟೆ–12, ಪು.198
13. ಪೂರ್ವೋಕ್ತ, ದೇವನಹಳ್ಳಿ–42, ಅರದೇಶಹಳ್ಳಿ, ಪು.176
14. ಪೂರ್ವೋಕ್ತ, ಹೊಸಕೋಟೆ–111, ಪು.224
15. ಪೂರ್ವೋಕ್ತ, ನೆಲಮಂಗಲ–1, ಪು.55
16. ಪೂರ್ವೋಕ್ತ, ಬೆಂಗಳೂರು–32, ಕೆಂಪಾಪುರ, ಪು.17
17. ಡಾ.ಚಿದಾನಂದಮೂರ್ತಿ–ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.322–323
18. ಡಾ.ಎಚ್.ತಿಪ್ಪೇರುದ್ರಸ್ವಾಮಿ–ಕರ್ಣಾಟಕ ಸಂಸ್ಕೃತಿ ಸಮೀಕ್ಷೆ, ಪು.176,177
19. ಬಿ.ಎಲ್.ರೈಸ್(ಸಂ)–EC-IX ದೊಡ್ಡಬಳ್ಳಾಪುರ–14, ಹಾಡೋನಹಳ್ಳಿ, ಪು.137
20. ಎ.ಕ.10–ಅರಸೀಕೆರೆ–115, ಮಾಡಾಳು, ಪು.215
21. ಬಿ.ಎಲ್.ರೈಸ್(ಸಂ)–EC-IX ದೇವನಹಳ್ಳಿ–60, ಪು.184
22. ಪೂರ್ವೋಕ್ತ, ಹೊಸಕೋಟೆ–124, ಪು.227
23. ಪೂರ್ವೋಕ್ತ, ಬೆಂಗಳೂರು–24, ಗಾಣಿಗರಹಳ್ಳಿ, ಪು.14
24. ಪೂರ್ವೋಕ್ತ, ಬೆಂಗಳೂರು–129, ನಾಗಶೆಟ್ಟಿಹಳ್ಳಿ ಪು.48,49
25. ಡಾ.ಜೆ.ಎಂ.ನಾಗಯ್ಯ–ಆರನೆಯ ವಿಕ್ರಮಾದಿತ್ಯನ ಶಾಸನಗಳ ಒಂದು ಅಧ್ಯಯನ, ಪು.280

26.ಬಿ.ಎಲ್.ರೈಸ್(ಸಂ)–EC-IX ಬೆಂಗಳೂರು–6, ಪು.5

27.ಪೂರ್ವೋಕ್ತ, ಬೆಂಗಳೂರು–24, ಗಾಣಿಗರಹಳ್ಳಿ, ಪು.14

28.ಪೂರ್ವೋಕ್ತ, ಬೆಂಗಳೂರು–134, ಪು.50

29.ಪೂರ್ವೋಕ್ತ, ಬೆಂಗಳೂರು–134, ಹೆಬ್ಬಾಳ, ಪು.50

30.EC-IX ಅನುಬಂಧ ಸಂಪುಟ, ಬೆಂಗಳೂರು–250, ಚಿಕ್ಕಬಾಣಾವರ, ಪು.14

31.ಬಿ.ಎಲ್.ರೈಸ್(ಸಂ)–EC-IX ಬೆಂ–129 ನಾಗಶೆಟ್ಟಿ ಹಳ್ಳಿ, ಪು.48, 49

32.ಸಂಕ್ಷಿಪ್ತ ಕನ್ನಡ ನಿಘಂಟು, ಕನ್ನಡ–ಕನ್ನಡ, ಪು.130

33.ಬಿ.ಎಲ್.ರೈಸ್(ಸಂ)–EC-IX ಬೆಂಗಳೂರು–31, ಅಲ್ಲಾಳಸಂದ್ರ, ಪು.16,17

34. ಪೂರ್ವೋಕ್ತ, ಬೆಂಗಳೂರು–63, ಕೃಷ್ಣರಾಜಪುರ, ಪು.25,26

35.ಎಂ.ಎಂ.ಕಲಬುರ್ಗಿ(ಸಂ)–ಪ್ರಾಚೀನ ಕರ್ನಾಟಕದ ಆಡಳಿತ ವಿಭಾಗಗಳು, ಪು.203

36.ಪೂರ್ವೋಕ್ತ, ಬೆಂಗಳೂರು–127, ಯಶವಂತಪುರ, ಪು.47

37. ಪೂರ್ವೋಕ್ತ, ಬೆಂಗಳೂರು–123, ಗೊಗಂಡಿಪುರ, ಪು.45

38.ಬಿ.ಎಲ್.ರೈಸ್(ಸಂ)–EC-IX ಬೆಂಗಳೂರು–81, ಪು.29

39.ಎಂ.ಎಂ.ಕಲಬುರ್ಗಿ(ಸಂ)–ಪ್ರಾಚೀನ ಕರ್ನಾಟಕದ ಆಡಳಿತ ವಿಭಾಗಗಳು, ಪು.204

40. ಬಿ.ಎಲ್.ರೈಸ್(ಸಂ)–EC-IX ಆನೇಕಲ್ಲು–82, ಪು.254

41.ಪೂರ್ವೋಕ್ತ, ಬೆಂಗಳೂರು–123, ಗೊಗಂಡಿಪುರ, ಪು.45

42. ಪೂರ್ವೋಕ್ತ, ಬೆಂಗಳೂರು–122, ಕನ್ನೆಲ್ಲಿ, ಪು.45

43.ಪೂರ್ವೋಕ್ತ ಬೆಂಗಳೂರು–85, ಪು.255

44.ಪೂರ್ವೋಕ್ತ, ಆನೇಕಲ್ಲು–64, ಬಿದರಗುಪ್ಪೆ ಪು.250

45. ಪೂರ್ವೋಕ್ತ, ಆನೇಕಲ್–64, ಪು.250

46.ಪೂರ್ವೋಕ್ತ, ಬೆಂಗಳೂರು–127, ಪು.47

47.ಪೂರ್ವೋಕ್ತ, ಆನೇಕಲ್ಲು–4, ಪು.236

48.ಪೂರ್ವೋಕ್ತ, ಆನೇಕಲ್ಲು–79, ಪು.253

49.ಪೂರ್ವೋಕ್ತ, ಬೆಂಗಳೂರು–28, ಹಾರೋಹಳ್ಳಿ, ಪು.15

50.ಪೂರ್ವೋಕ್ತ, ಆನೇಕಲ್ಲು–22, ಸರ್ಜಾಪುರ, ಪು.241

51.ಪೂರ್ವೋಕ್ತ, ಆನೇಕಲ್ಲು–4, ಪು.236

52.ಡಾ.ಮುನಿರಾಜಪ್ಪ–ಮಾಗಡಿ ಸೀಮೆ ಇತಿಹಾಸ–ಸಂಸ್ಕೃತಿ,(ಮಾಗಡಿ, 2005), ಪು. 70–73

53.ಡಾ.ಎಂ.ಜಿ.ಮಂಜುನಾಥ–ಯಲಹಂಕನಾಡ ಶಾಸನ ಸಂಪುಟ, ಪು.xxxvii

54.ಬಿ.ಎಲ್.ರೈಸ್(ಸಂ)–EC-IX ಬೆಂಗಳೂರು–57, ದಾಸರಹಳ್ಳಿ, ಪು.24

55.ಡಾ.ಎಂ.ಜಿ.ಮಂಜುನಾಥ(ಸಂ)–ಬೆಂಗಳೂರಿನ ಐತಿಹಾಸಿಕ ಬಖೈರು, ಪು.42

56.ಬಿ.ಎಲ್.ರೈಸ್(ಸಂ)–EC-IX ಬೆಂಗಳೂರು–57, ದಾಸರಹಳ್ಳಿ ಪು.24

57.ಬಿ.ಎಲ್.ರೈಸ್(ಸಂ)–EC-X ಮಾಲೂರು–57, ಮಾಸ್ತಿ, ಪು.161

58.ಪೂರ್ವೋಕ್ತ, ಬೆಂಗಳೂರು–30, ಅಲ್ಲಾಳಸಂದ್ರ, ಪು.16

59.ಪೂರ್ವೋಕ್ತ, ನೆಲಮಂಗಲ–31, ಹೆಸರಘಟ್ಟ, ಪು.64

60.ಬ.ನ.ಸುಂದರರಾವ್–ಬೆಂಗಳೂರಿನ ಇತಿಹಾಸ, ಪು.122

61.ಬಿ.ಎಲ್.ರೈಸ್(ಸಂ)–EC-IX ಆನೇಕಲ್ಲು–90, ಬಿಂಗೀಪುರ, ಪು.256

62.ಪೂರ್ವೋಕ್ತ, ಆನೇಕಲ್ಲು–91, ಪು.257

63.ಪೂರ್ವೋಕ್ತ, ಬೆಂಗಳೂರು–83, ಬೇಗೂರು, ಪು.30

64.ಡಾ.ಎಚ್.ತಿಪ್ಪೇರುದ್ರಸ್ವಾಮಿ–ಕರ್ಣಾಟಕ ಸಂಸ್ಕೃತಿ ಸಮೀಕ್ಷೆ, ಪು.179

65.ಬಿ.ಎಲ್.ರೈಸ್(ಸಂ)–EC-IX ಹೊಸಕೋಟೆ–9, ಜೋಡಿದಳಸಗೆರೆ, ಪು.196

66. ಎಂ.ಎಂ.ಕಲಬುರ್ಗಿ(ಸಂ)–ಪ್ರಾಚೀನ ಕರ್ನಾಟಕದ ಆಡಳಿತ ವಿಭಾಗಗಳು, ಪು.187

67. ಬಿ.ಎಲ್.ರೈಸ್(ಸಂ)–EC-IX ಬೆಂಗಳೂರು–36, ದಾಸರಹಳ್ಳಿ, ಪು.18

68. ಪೂರ್ವೋಕ್ತ, ಬೆಂಗಳೂರು–40ಎ, ವರ್ತೂರು, ಪು.19

69.ಪೂರ್ವೋಕ್ತ, ಬೆಂಗಳೂರು–82, ಬೇಗೂರು, ಪು.29,30

70.ಪೂರ್ವೋಕ್ತ, ಆನೇಕಲ್ಲು–46, ಹಳೇಹಳ್ಳಿ, ಪು.245

71.ಪೂರ್ವೋಕ್ತ, ಬೆಂಗಳೂರು–85ಸಿ, ಬೇಗೂರು, ಪು.31

72.ಪೂರ್ವೋಕ್ತ, ಬೆಂಗಳೂರು–44, ಬಿದಿರುಗುಪ್ಪೆ, ಪು.245

73.ಪೂರ್ವೋಕ್ತ, ದೇವನಹಳ್ಳಿ–42, ಅರದೇಶನಹಳ್ಳಿ, ಪು.176

74.ಪೂರ್ವೋಕ್ತ, ಬೆಂಗಳೂರು–41, ಪು.19

75.ಪೂರ್ವೋಕ್ತ, ಬೆಂಗಳೂರು–59, ಸಾದರಮಂಗಲ, ಪು.24

76.ಪೂರ್ವೋಕ್ತ, ಬೆಂಗಳೂರು–73, ಬೇಲೂರು, ಪು.27

77.ಪೂರ್ವೋಕ್ತ, ಬೆಂಗಳೂರು–55, ಕೃಷ್ಣರಾಜಪುರ, ಪು.23

78.ಪೂರ್ವೋಕ್ತ, ನೆಲಮಂಗಲ–1 ಸೋಲದೇವನ ಹಳ್ಳಿ, ಪು.55

79.ಪೂರ್ವೋಕ್ತ, ಬೆಂಗಳೂರು–111, ರಾಮಸಮುದ್ರ, ಪು.15

80.ಪೂರ್ವೋಕ್ತ, ನೆಲಮಂಗಲ–19, ಪು.62

81.ಪೂರ್ವೋಕ್ತ, ನೆಲಮಂಗಲ–11, ಪು.61

82.ಪೂರ್ವೋಕ್ತ, ಬೆಂಗಳೂರು–26, ದೊಮ್ಮಸಂದ್ರ, ಪು.15

83.ಪೂರ್ವೋಕ್ತ, ಬೆಂಗಳೂರು–85ಸಿ, ಬೇಗೂರು, ಪು.31

84.ಪೂರ್ವೋಕ್ತ, ಬೆಂಗಳೂರು–12, ದೊಮ್ಮಲೂರು, ಪು.11

85.ಪೂರ್ವೋಕ್ತ, ಬೆಂಗಳೂರು–59, ಪು.24

86.ಪೂರ್ವೋಕ್ತ, ಬೆಂಗಳೂರು–66, ಮಡಿವಾಳ, ಪು.26

87.ಪೂರ್ವೋಕ್ತ, ಆನೇಕಲ್ಲು–62, ಇಗ್ಗಲೂರು, ಪು.250

88.ಪೂರ್ವೋಕ್ತ, ಆನೇಕಲ್ಲು–65, ಪು.250

89.ಪೂರ್ವೋಕ್ತ, ಆನೇಕಲ್ಲು–31, ಪು.16

90.ಪೂರ್ವೋಕ್ತ, ದೇವನಹಳ್ಳಿ–75, ಗಂಗವಾರ, ಪು.190

91.ಪೂರ್ವೋಕ್ತ, ಬೆಂಗಳೂರು–31, ದೊಮ್ಮಲೂರು, ಪು.11

92.ಪೂರ್ವೋಕ್ತ, ಬೆಂಗಳೂರು–66, ಮಡಿವಾಳ, ಪು.26

93.ಪೂರ್ವೋಕ್ತ, ಬೆಂಗಳೂರು–127, ಯಶವಂತಪುರ, ಪು.47

94.ಪೂರ್ವೋಕ್ತ, ನೆಲಮಂಗಲ–31, ಹೆಸರುಘಟ್ಟ, ಪು.64

95.ಪೂರ್ವೋಕ್ತ, ಬೆಂಗಳೂರು–30, ಅಲ್ಲಾಳಸಂದ್ರ ಪು.16

96.ಪೂರ್ವೋಕ್ತ, ಬೆಂಗಳೂರು–61 ಕೃಷ್ಣರಾಜಪುರ, ಪು.25

97.ಪೂರ್ವೋಕ್ತ, ಹೊಸಕೋಟೆ–155, ಬೆಳತೂರು, ಪು.233

98.ಪೂರ್ವೋಕ್ತ, ಆನೇಕಲ್ಲು–84, ಬನ್ನೇರುಘಟ್ಟ, ಪು–254

99.ಪೂರ್ವೋಕ್ತ, ಆನೇಕಲ್ಲು–62, ಇಗ್ಗಲೂರು, ಪು.250

100. ಪೂರ್ವೋಕ್ತ, ಬೆಂಗಳೂರು–53, ದೊಡ್ಡನೆಕ್ಕುಂದಿ, ಪು.23

101. ಪೂರ್ವೋಕ್ತ, ಬೆಂಗಳೂರು–65, ಅಗರ, ಪು.26

102. ಪೂರ್ವೋಕ್ತ, ಆನೇಕಲ್ಲು–34, ಪು.243

103. ಎಂ.ಎಂ.ಕಲಬುರ್ಗಿ(ಸಂ)–ಪ್ರಾಚೀನ ಕರ್ನಾಟಕದ ಆಡಳಿತ ವಿಭಾಗಗಳು, ಪು.197

104. ಬಿ.ಎಲ್.ರೈಸ್(ಸಂ)–EC-IX ಆನೇಕಲ್ಲು–67, ಪು.251

105. ಪೂರ್ವೋಕ್ತ, ಬೆಂಗಳೂರು–67, ಮಡಿವಾಳ, ಪು.26

106. ಪೂರ್ವೋಕ್ತ, ಬೆಂಗಳೂರು–47, ದೊಡ್ಡಕನ್ನೆಲ್ಲಿ, ಪು.21

107. ಪೂರ್ವೋಕ್ತ, ಆನೇಕಲ್ಲು–56, ಗೆರಟಿಗನಬೆಲೆ, ಪು.248

108. ಪೂರ್ವೋಕ್ತ, ಆನೇಕಲ್ಲು–82, ಬನ್ನೇರುಘಟ್ಟ, ಪು.254

109. ಪೂರ್ವೋಕ್ತ, ಆನೇಕಲ್ಲು–84, ಪು.254

110. B.L.Rice-Mysore Gazetteer of India,VoL-II,p.1

111. B.L.Rice-Mysore Gazetteer of India,VOL-II,p.41

112. B.L.Rice-Mysore Gazetteer of India,VOL-II,p.37

# ಅಧ್ಯಾಯ–ಮೂರು
# ಧಾರ್ಮಿಕ ಅಧ್ಯಯನ

ಕರ್ನಾಟಕವು ಹಲವು ಧರ್ಮಗಳ ತವರೂರು. ಇದನ್ನು ಸರ್ವಧರ್ಮಗಳ ಸಮನ್ವಯದ ಬೀಡು ಎಂದು ಕರೆಯಲಾಗುತ್ತದೆ. ಎಲ್ಲಾ ಕ್ಷೇತ್ರಗಳಲ್ಲೂ ಹಲವು ಧರ್ಮಗಳ ಜನರಿದ್ದು ತಮಗೆ ಅನುಗುಣವಾದ ವೈವಿಧ್ಯಮಯವಾದ ಸಂಸ್ಕೃತಿಯನ್ನು ಹೊಂದಿರುತ್ತಾರೆ. ಬೆಂಗಳೂರು ನಗರ ಇದಕ್ಕೆ ಹೊರತೇನಲ್ಲ. ಇಲ್ಲಿಯೂ ನಾನಾ ಧರ್ಮದ ನಾನಾ ಜಾತಿಯ ನಾನಾ ವರ್ಗದ ಜನರು ವಾಸಿಸುತ್ತಿದ್ದರು. ಇಂದಿಗೂ ವಾಸಿಸುತ್ತಿದ್ದಾರೆ. ಬೌದ್ಧ, ಜೈನ, ಶೈವ, ವೈಷ್ಣವ ಧರ್ಮಗಳು ಇಲ್ಲಿ ಉಚ್ಛ್ರಾಯ ಸ್ಥಿತಿಗೇರಿರುವಂತೆಯೇ ಅವನತಿಯ ಹಾದಿಯನ್ನೂ ಕಂಡಿವೆ. ಇಸ್ಲಾಂ, ಕ್ರೈಸ್ತ್ರ ಧರ್ಮಗಳೂ ಇಲ್ಲಿ ನೆಲೆಯೂರಿವೆ.

ಮೊದಲಿಗೆ 'ಧರ್ಮ' ಎಂದರೇನು? ಎಂಬ ಪ್ರಶ್ನೆ ಕಾಡುತ್ತದೆ. 'ಧರ್ಮ' ಎಂಬುದಕ್ಕೆ ನಿಘಂಟಿನಲ್ಲಿ ಧಾರಣ ಮಾಡಿದುದು, ನಿಯಮ, ಆಚಾರ, ಪುಣ್ಯ, ಪುರುಷಾರ್ಥಗಳಲ್ಲಿ ಒಂದು, ಕರ್ತವ್ಯ, ಗುಣ, ಸ್ವಭಾವ, ನ್ಯಾಯ, ದತ್ತಿ, ದಾನ, ನಿಷ್ಠೆ, ಶ್ರದ್ಧೆ, ಮತ, ದರ್ಶನ, ದಯೆ, ಕರುಣೆ, ರೀತಿ, ಕ್ರಮ, ಯಜ್ಞ, ಶಿವ ಮುಂತಾದ ಅರ್ಥಗಳು ಮತ್ತು 'ಧರ್ಮಕಾರ್ಯ' ಎಂಬುದಕ್ಕೆ ಸತ್ಕರ್ಮ, ಸತ್ಕಾರ್ಯ ಮುಂತಾದ ಅರ್ಥಗಳಿವೆ.[1] ಓಡಿಯಾ ಎಂಬ ಸಮಾಜಶಾಸ್ತ್ರಜ್ಞ "ಸಮಾಜದ ಜನರ ನಡತೆಯನ್ನು ನಿಯಂತ್ರಿಸುವ ನೈತಿಕ, ಆಧ್ಯಾತ್ಮಿಕ ಮತ್ತು ಸಾಮಾಜಿಕ ಮೌಲ್ಯಗಳನ್ನು ಸಂರಕ್ಷಿಸಿ ಪವಿತ್ರವನ್ನಾಗಿಸುವುದು ಧರ್ಮ" ಎಂದಿದ್ದಾನೆ. ಮತ್ತೊಬ್ಬ ವಿದ್ವಾಂಸ ಖಾನ್‌ಸ್ಟೋನ್ ಎಂಬುವವನು "ಧರ್ಮವು ಅನೇಕರ ಸಮೂಹವನ್ನು ಒಳಗೊಂಡಿರುತ್ತದೆ. ಕೆಲವು ವಿಶಿಷ್ಟ ನಂಬಿಕೆಗಳ ಒಂದು ವ್ಯವಸ್ಥೆಯನ್ನು ಒಳಗೊಂಡಿರುತ್ತದೆ"[2] ಎಂದಿದ್ದಾನೆ. ಹೀಗೆ ಧರ್ಮವನ್ನು ಹಲವು ವಿದ್ವಾಂಸರು ಹಲವು ರೀತಿಯಲ್ಲಿ ವ್ಯಾಖ್ಯಾನಿಸುತ್ತಾರೆ.

ನಾಲ್ಕು ಪುರುಷಾರ್ಥಗಳಲ್ಲಿ ಒಂದಾದ 'ಧರ್ಮ' ವ್ಯಾಪಕವಾದ ಅರ್ಥವನ್ನು ಹೊಂದಿದೆ. ಧರ್ಮ ಎಂಬುದು 'ಧೃ' ಎಂಬ ಸಂಸ್ಕೃತ ಶಬ್ದದಿಂದ ನಿಷ್ಪನ್ನವಾಗಿದೆ. 'ಧೃ' ಎಂದರೆ ಸಂಸ್ಕೃತದಲ್ಲಿ ಬೆಂಬಲಿಸು, ಎತ್ತಿಹಿಡಿ, ಧರಿಸು ಎಂಬರ್ಥಗಳಿವೆ. ಮಹಾಭಾರತದ ಕರ್ಣಪರ್ವದಲ್ಲಿ 'ಧಾರನಾತ್ ಧರ್ಮ ಇತ್ಯಾಹುತಿ' ಎಂದಿದೆ. ಧರ್ಮ ಎಂಬುದಕ್ಕೆ ಸಂವಾದಿಯಾಗಿ ಇಂಗ್ಲೀಷ್‌ನಲ್ಲಿ 'ರಿಲಿಜನ್' ಶಬ್ದವನ್ನು ಬಳಸಲಾಗುತ್ತದೆ. ಲ್ಯಾಟಿನ್ ಭಾಷೆಯಲ್ಲಿರುವ 'ರಿಲಿಗೋ' ಎನ್ನುವ ನಾಮಪದದಿಂದ ಇದು ನಿಷ್ಪತ್ತಿಯಾಗಿದೆ. 'ರಿಲಿಗೋ' ಪದಕ್ಕೆ ಒಂದಕ್ಕಿಂತ ಹೆಚ್ಚು ಅರ್ಥಗಳಿವೆ. 'ಭಕ್ತಿಯಿಂದ ಕೂಡಿದ 'ಪೂಜಾಕೈಂಕರ್ಯ'(ಪವಿತ್ರ) ಎಂಬುದು ಒಂದು ಅರ್ಥವಾದರೆ 'ರಿಲಿಗೇರ್' ಪದಕ್ಕೆ ಹಿಂದಿನದನ್ನು ಒಟ್ಟುಗೂಡಿಸು, ಹಿಂದಿನದಕ್ಕೆ ಅಂಟಿಕೊಂಡಿರು ಎನ್ನುವ ಅರ್ಥವಿರಬಹುದೆಂಬುದು ವಿದ್ವಾಂಸರ

ಅಭಿಪ್ರಾಯ.[3] 'ರಿಲಿಜನ್' ಪದಕ್ಕೆ ಲ್ಯಾಟಿನ್ ಭಾಷೆಯಲ್ಲಿ 'ಪೂಜ್ಯ' ಎನ್ನುವ ಅರ್ಥವಿರುವುದರಿಂದ ಅದು ಪವಿತ್ರವಾದ ಎನ್ನುವ ಅರ್ಥವನ್ನು ಪಡೆಯಬಹುದು. ಈ ಅರ್ಥದಲ್ಲೇ ರಿಲಿಜನ್ ಎನ್ನುವ ಪದ ಹೆಚ್ಚಾಗಿ ಬಳಕೆಯಲ್ಲಿರುವುದು ಎನ್ನುವುದು ವಿದ್ವಾಂಸರ ಅಭಿಪ್ರಾಯವಾಗಿದೆ.

ಧರ್ಮದ ವ್ಯಾಪ್ತಿ ವಿಶಾಲವಾದದ್ದು. ಭಾರತದಲ್ಲಿ ಧರ್ಮವು ಮನುಷ್ಯನ ಜೀವನದಲ್ಲಿ ನಿಕಟವಾಗಿ ಮಿಳಿತವಾಗಿರುವಷ್ಟು ಮತ್ತಾವ ದೇಶದಲ್ಲಿಯೂ ಆಗಿಲ್ಲ. ಅವರ ಆಚಾರ, ವ್ಯವಹಾರ, ಸಂಪ್ರದಾಯ, ನಿತ್ಯಜೀವನ, ಆಹಾರ, ಉಡುಪು, ಸಾಮಾಜಿಕ ಮತ್ತು ರಾಜಕೀಯ ವ್ಯವಹಾರವು ಒಂದೊಂದು ಧರ್ಮದಿಂದ ವಿಶೇಷ ಪರಿಣಾಮವನ್ನು ಹೊಂದಿರುತ್ತದೆ. ಇದರ ಪ್ರಾಮುಖ್ಯತೆಯನ್ನು ನಾನಾ ಧರ್ಮ ಪಂಥೀಯರ ತಾಣವಾಗಿರುವ ಬೆಂಗಳೂರಿನಲ್ಲೂ ಕಾಣಬಹುದು. ವಿಫುಲವಾದ ಧಾರ್ಮಿಕ ಮತ್ತು ಸಾಂಸ್ಕೃತಿಕ ಪರಂಪರೆಯಿಂದ ವೈವಿಧ್ಯಮಯವಾದ ಸಂಸ್ಕೃತಿಯನ್ನು ತನ್ನೊಡಲಲ್ಲಿ ಗರ್ಭೀಕರಿಸಿಕೊಂಡಿರುವ ಕಲ್ಯಾಣನಗರಿಯ ಧಾರ್ಮಿಕ ವೈಶಿಷ್ಟವನ್ನು ತಿಳಿಯುವ ಉದ್ದೇಶ ಈ ಅಧ್ಯಾಯದ್ದಾಗಿದೆ.

## ಬೌದ್ಧಧರ್ಮ

ಕ್ರಿ.ಪೂ.6ನೇ ಶತಮಾನದಲ್ಲಿ ಜನಿಸಿದ ಧರ್ಮಗಳಲ್ಲಿ ಬೌದ್ಧ ಧರ್ಮ ಅತ್ಯಂತ ಪ್ರಬಲವಾದುದು ಮತ್ತು ಪ್ರಭಾವಯುತವಾದುದು. ಭಾರತದಲ್ಲಿ ಜನಿಸಿದ ಈ ಧರ್ಮವು ಇಂದು ಚೀನಾ, ಜಪಾನ್, ಟಿಬೆಟ್, ದಕ್ಷಿಣ ಮತ್ತು ಉತ್ತರಕೊರಿಯಾ, ಮಂಚೂರಿಯ, ಮಂಗೋಲಿಯ, ಶ್ರೀಲಂಕ, ಥಾಯ್ಲೆಂಡ್ ಮುಂತಾದ ದೇಶಗಳಲ್ಲಿಯೂ ಹರಡಿದೆ. ಪೌರಾತ್ಯ ದೇಶಗಳಲ್ಲಿ ಇದರ ಪ್ರಭಾವ ಅಧಿಕವಾಗಿದ್ದರೂ ಪಶ್ಚಿಮದ ರಾಷ್ಟ್ರಗಳಲ್ಲಿಯೂ ಸಹ ಬೌದ್ಧ ಧರ್ಮದ ಅನುಯಾಯಿಗಳು ಅಪ್ಪ ಸಂಖ್ಯೆಯಲ್ಲಿ ಕಾಣಸಿಗುತ್ತಾರೆ.

ಬೌದ್ಧಧರ್ಮ ಹುಟ್ಟಿದ್ದು ಭಾರತದಲ್ಲಿಯೇ ಆದರೂ, ಇದರ ಅನುಯಾಯಿಗಳು ಭಾರತದಲ್ಲಿ ಸ್ವಲ್ಪ ಮಟ್ಟಿಗೆ ಕಡಿಮೆ ಸಂಖ್ಯೆಯಲ್ಲಿಯೇ ಇದ್ದಾರೆಂದು ಹೇಳಬಹುದು. ಬುದ್ಧನಿಂದ ಸ್ಥಾಪನೆಯಾದ ಬೌದ್ಧಧರ್ಮ ಭಾರತದಲ್ಲಿ ಕ್ರಿ.ಪೂ.6ನೇ ಶತಮಾನಕ್ಕಾಗಲೆ ಪ್ರಬಲವಾಗಿ ಹರಡಿತ್ತು. ಹೀಗೆ ಭಾರತದಲ್ಲಿ ಸ್ಥಾಪನೆಯಾದ ಬೌದ್ಧಧರ್ಮ ಕರ್ನಾಟಕದಲ್ಲೂ ವ್ಯಾಪಿಸಿ ಹಲವು ಕಾಲ ಪ್ರಚಲಿತದಲ್ಲಿತ್ತು. ಕರ್ನಾಟಕದಲ್ಲಿ ಬೌದ್ಧಧರ್ಮದ ಅತ್ಯಂತ ಪ್ರಾಚೀನ ಕುರುಹುಗಳೆಂದರೆ ಮಧ್ಯಕರ್ನಾಟಕದ ಚಿತ್ರದುರ್ಗಜಿಲ್ಲೆಯ ಸಿದ್ಧಾಪುರ, ಜಟಿಂಗರಾಮೇಶ್ವರ, ಬ್ರಹ್ಮಗಿರಿ, ಉತ್ತರಕರ್ನಾಟಕದ ಸನ್ನತಿ, ಕಣಗನಹಳ್ಳಿ, ಉದಯಗೋಳಂ, ಮಸ್ಕಿ ಮತ್ತು ಕೊಪ್ಪಳಗಳಲ್ಲಿ ಸಿಕ್ಕಿರುವ ಅಶೋಕನ ಕ್ರಿಸ್ತಪೂರ್ವ ಮೂರನೇ ಶತಮಾನದ ಶಾಸನಗಳು. ಆದರೆ ಬೌದ್ಧಧರ್ಮ

ಕರ್ನಾಟಕದಲ್ಲಿ ಪ್ರಬಲವಾಗಿತ್ತು ಎನ್ನುವುದಕ್ಕಿಂತ ಮೌರ್ಯ ಸಾಮ್ರಾಜ್ಯ ಇಲ್ಲಿಯವರೆಗೆ ಹಬ್ಬಿತ್ತು ಎಂಬುದಕ್ಕೆ ಇವು ಪ್ರಬಲವಾದ ಆಕರಗಳು. ಮಹಾವಂಶ ಮತ್ತು ದೀಪವಂಶಗಳ ಪ್ರಕಾರ ಮೊಗ್ಗಲಿಪುತ್ತ ತಿಸ್ಸನು(ಅಶೋಕನನ್ನು ಬೌದ್ಧಧರ್ಮಕ್ಕೆ ಮತಾಂತರಗೊಳಿಸಿದವನು) ಥೇರನಾದ ಮಹಾದೇವನನ್ನು ಮಹಿಷಮಂಡಲಕ್ಕೂ(ಈಗಿನ ಮೈಸೂರು) ರಖ್ಖಿತ ಎಂಬ ಥೇರನನ್ನು ವನವಾಸಿಗೂ(ಈಗಿನ ಬನವಾಸಿ) ಬೌದ್ಧಧರ್ಮ ಪ್ರಚಾರಕ್ಕೆ ಕಳುಹಿಸಿಕೊಟ್ಟನು.[4] ಹೀಗೆ ಕರ್ನಾಟಕದಲ್ಲಿ ಮೂರನೇ ಶತಮಾನದ ಹೊತ್ತಿಗಾಗಲೇ ಬೌದ್ಧದರ್ಮವು ಪ್ರಚಾರಕ್ಕೆ ಬಂದಿತ್ತು. ಹಾಗೂ ದೊರೆತಿರುವ ಅಶೋಕನ ಶಾಸನಗಳು ಕರ್ನಾಟಕದಲ್ಲಿ ಇವನಕಾಲಕ್ಕಾಗಲೇ ಬೌದ್ಧಧರ್ಮ ನೆಲಯಾಗಿತ್ತು ಎಂಬುದಕ್ಕೆ ಸಾಕ್ಷಿಯಾಗಿವೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆ ದೊಡ್ಡಬಳ್ಳಾಪುರ ತಾಲ್ಲೂಕಿನ ರಾಜಘಟ್ಟದಲ್ಲಿ ಬೌದ್ಧಧರ್ಮಕ್ಕೆ ಸೇರಿರುವ ಕುರುಹುಗಳು ಉತ್ಖನನದಿಂದ ಪತ್ತೆಯಾಗಿವೆ. ಕ್ರಿ.ಶ. 2–3 ನೆಯ ಶತಮಾನಕ್ಕೆ ಸೇರಿದ ಶಾತವಾಹನರ ಕಾಲದ ಬೌದ್ಧ ಚೈತ್ಯಾಲಯವೊಂದರ ಅವಶೇಷಗಳು ಹಾಗೂ ಮಣ್ಣಿನ ಮುದ್ರೆಯ ಮೇಲೆ ಬರಹವನ್ನು ಹೊಂದಿರುವ ಮುನ್ನೂರಕ್ಕೂ ಹೆಚ್ಚಿನ ಸಂಖ್ಯೆಯ ಹರಕೆಯ ಸ್ತೂಪಗಳು ರಾಜಘಟ್ಟದಲ್ಲಿ ಪತ್ತೆಯಾಗಿವೆ. ಬೃಹತ್ ಶಿಲಾ ಸಂಸ್ಕೃತಿಯ ನೆಲೆಗಳೂ ಕಾಣಸಿಗುತ್ತವೆ. ಇಲ್ಲಿ ನಡೆದ ಶೋಧದಿಂದ ಇದು ಬೌದ್ಧಧರ್ಮದ ಪ್ರಮುಖ ನೆಲೆಯಾಗಿತ್ತು ಎಂಬುದು ತಿಳಿಯುತ್ತದೆ. ಗಂಗರ ರಾಜಧಾನಿ ಮಣ್ಣೆ ಹಾಗೂ ಬೆಂಗಳೂರು ನಗರ ಈ ಪರಿಸರಕ್ಕೆ ಸನಿಹವೇ ಇರುವುದರಿಂದ ಬೆಂಗಳೂರು ಬೌದ್ಧಧರ್ಮದ ನೆಲೆ ಹೊಂದಿತ್ತು ಎಂಬುದು ತಿಳಿಯುತ್ತದೆ.

ವಿದ್ವಾಂಸರೊಬ್ಬರು ರಾಜಘಟ್ಟದಲ್ಲಿ ನಡೆದ ಶೋಧವನ್ನು ಹೀಗೆ ದಾಖಲಿಸುತ್ತಾರೆ. “ಮಣ್ಣಿನ ಮೇಲೆ ಗಾರೆಯನ್ನು ನೊರೆದು ಮಾಡಿರುವ ಬುದ್ಧ ವಿಗ್ರಹದ ತಲೆ ಮೊದಲು ಲಭ್ಯವಾಯಿತು. ರಾಜಘಟ್ಟದ 60 ಎಕರೆ ಬೂದಿಗುಂಡಿಯಲ್ಲಿ ದೊರೆತ ಬುದ್ಧ ವಿಗ್ರಹದ ತಲೆ ಸಾತ್ವಿಕ ನಗೆಯ ಅಪರೂಪದ ಶಿಲ್ಪ ಇದಾಗಿದೆ. ಈ ವಿಗ್ರಹ 8 ಸೆಂ.ಮಿ. ಉದ್ದ 6 ಸೆಂ.ಮೀ. ಅಗಲವಿದೆ. ಆದಿಚರಿತ್ರೆ ಕಾಲಕ್ಕೆ ಸೇರುವ ಶಾತವಾಹನ ಲಕ್ಷಣಗಳ ಸಾವಿರಾರು ಇಟ್ಟಿಗೆಗಳು ಈ ಭಾಗದಲ್ಲಿ ದೊರಕಿವೆ. ಮಣ್ಣಿನಿಂದ ಮಾಡಿದ ಹರಕೆ ಸ್ತೂಪಗಳು ಈ ಗ್ರಾಮದಲ್ಲಿ ದೊರೆತಿವೆ. ಬ್ರಾಹ್ಮೀ ಲಿಪಿಯ, ಸಂಸ್ಕೃತ ಪ್ರಾಕೃತ ಭಾಷೆಯ ಈ ಶಾಸನಗಳು ಈ ಹರಕೆಯ ಸ್ತೂಪಗಳಲ್ಲಿ ಸಾಮಾನ್ಯವಾಗಿ ಕಂಡು ಬರುತ್ತವೆ. “ಯೇ ಧಮಾ ಹೇತುಪ್ಪ ಭವಾ ತೇಸ ಹೇತು ತಥಾಗತೊ ಆ ಹೇ ತೇಸ ಚ ಯೋ ನಿರೋಧೋ ಏವವಾದೀ ಮಹಾಮಣೋ” ಮುದ್ರೆಯಿಂದ ಮುದ್ರೆಗೆ ಈ ಪಾಠದಲ್ಲಿ ಸ್ವಲ್ಪ ವ್ಯತ್ಯಾಸ ಕಂಡು ಬಂದರೂ ಆಶಯ ಏಕರೂಪವಾಗಿರುವುದು ತಿಳಿಯುತ್ತದೆ.

ಈ ಧಾರ್ಮಿಕ ಹರಕೆಯ ಸ್ತೂಪ ಶಾಸನದ ಅರ್ಥ, "ಕಾರಣ ಸರಣಿಯಿಂದ ಉತ್ಪನ್ನವಾಗುವ ಯಾವ ಧರ್ಮ ಇದೆಯೋ ಅದರಲ್ಲಿನ ಕಾರಣಗಳನ್ನು ತಥಾಗತನು ತಿಳಿಸಿದ್ದಾನೆ. ಈ ಕಾರಣಗಳನ್ನು ನಿರೋಧಿಸುವುದು ಹೇಗೆಂಬುದನ್ನು ತೋರಿಸಿದ್ದಾನೆ. ಮಹಾ ಶ್ರವಣವಾದ ಇದು." ಈ ಸಾಲುಗಳು ಬೌದ್ಧ ಪಾಳೀ ಗ್ರಂಥಗಳಲ್ಲಿನ ಒಂದು ಗಾಥೆಯಾಗಿದೆ. ಇದನ್ನು ಕ್ರಿ.ಶ.3ನೇ ಶತಮಾನದ ಬ್ರಾಹ್ಮಿಲಿಪಿಯಲ್ಲಿ ಬರೆಯಲಾಗಿದ್ದು ಇಂಥ ಚಿಕ್ಕ ಸ್ತೂಪಗಳನ್ನು ಪ್ರಾಚೀನ ಹಾಗೂ ಮಧ್ಯಕಾಲೀನ ಬೌದ್ಧ ಯಾತ್ರಾ ಸ್ಥಳಗಳಲ್ಲಿ ಭಕ್ತರು ದೊಡ್ಡ ಸ್ತೂಪಗಳ ಬಳಿಯಲ್ಲಿ ತಂದು ಹರಕೆ ಒಪ್ಪಿಸುವ ಪದ್ಧತಿ ಇತ್ತು. ಬೌದ್ಧರ ಈ ಪದ್ಧತಿಯನ್ನು ಕುರಿತು ಕ್ರಿ.ಶ.7ನೆಯ ಶತಮಾನದಲ್ಲಿ ಭಾರತಕ್ಕೆ ಭೇಟಿ ನೀಡಿದ ಚೀನಾದ ಹ್ಯುಯೆನ್‌ತ್ಸಾಂಗ್ ತಿಳಿಸಿದ್ದಾನೆ. ಕರ್ನಾಟಕದ ಸನ್ನತಿಯಲ್ಲಿ ಇಂಥ ಒಂದು ದೊಡ್ಡ ಸ್ತೂಪ ದೊರತಿದೆ ಆದರೆ ರಾಜಘಟ್ಟದಲ್ಲಿ ಸಾವಿರಾರು ಚಿಕ್ಕ ಹರಕೆಯ ಸ್ತೂಪಗಳು ಸಿಗುವುದರಿಂದ ಇಲ್ಲಿ ಒಂದು ದೊಡ್ಡ ಸ್ತೂಪವಿರಲೇಬೇಕು ಎಂಬುದು ವಿದ್ವಾಂಸರ ಅಭಿಪ್ರಾಯ.[5] ಈ ಎಲ್ಲಾ ಶೋಧದಿಂದ ರಾಜಘಟ್ಟವು ಶಾತವಾಹನರ ಕಾಲದಲ್ಲಿ ಪ್ರಸಿದ್ಧ ಬೌದ್ಧಕೇಂದ್ರವಾಗಿತ್ತು ಎಂಬುದು ತಿಳಿಯುತ್ತದೆ.

ಅಶೋಕನ ಶಾಸನವನ್ನು ಹೊರತುಪಡಿಸಿ ಕರ್ನಾಟಕದಲ್ಲಿ ಬೌದ್ಧಧರ್ಮದ ಉಲ್ಲೇಖವಿರುವ ಶಾಸನವೊಂದು ತುಮಕೂರಿನ ಗೂಳೂರು ಹೋಬಳಿ ಕೈದಾಳ ಗ್ರಾಮದಲ್ಲಿರುವ ಪ್ರಸನ್ನದೇವಸ್ಥಾನದಲ್ಲಿ ದೊರಕಿದೆ. ಶಾಸನದ ಪ್ರಾರ್ಥನ ಶ್ಲೋಕದಲ್ಲಿ "ಜಯಂತಿ ಯಸ್ಯಾವದತೋಪಿಭಾರತೀ ವಿಭೂತಯಸ್ತೀರ್ಥ ಕೃತೋಪಿ ನೈಹ್ರಿತೇ(?) ಶಿವಾಯ ಧಾತ್ರೇ ಸುಗತಾಯ ವಿಷ್ಣವೇ ಜಿನಾಯ ತಸ್ಮೈ ಸಕಳಾತ್ಮನೇ ನಮಃ!!" ಎಂದಿದೆ.[6] ಕ್ರಿ.ಶ.1151ರ ಮೊದಲನೇ ನರಸಿಂಹನ ಕಾಲದ ಈ ಶಾಸನದ ಪ್ರಾರ್ಥನಾ ಪದ್ಯದಲ್ಲಿ ಶಿವ, ಬ್ರಹ್ಮ, ಸುಗತ(ಬುದ್ಧ), ವಿಷ್ಣು, ಜಿನ ಇವೆಲ್ಲ ಪರಮಾತ್ಮನಿಗೆ ಇರುವ ಬೇರೆ ಬೇರೆ ಹೆಸರುಗಳು ಎಂದು ಹೇಳಿದೆ. ತುಮಕೂರಿನಲ್ಲಿ ಬೌದ್ಧಧರ್ಮ ಅಸ್ತಿತ್ವದಲ್ಲಿತ್ತು ಎಂಬುದು ತಿಳಿಯುತ್ತದೆ. ಹಾಗೂ ಅದೇ ರೀತಿ ಮಾಗಡಿ ಬಳಿಯ ಕಲ್ಯವು ಬೌದ್ಧಧರ್ಮದ ಕೇಂದ್ರ ಸ್ಥಳವಾಗಿತ್ತು ಎಂದು ಚಿದಾನಂದಮೂರ್ತಿಗಳು ಗುರುತಿಸುತ್ತಾರೆ. ತುಮಕೂರು ಜಿಲ್ಲೆಯ ತಿಪಟೂರು ತಾಲ್ಲೂಕಿನ ತುರುವೇಕೆರೆ ಗ್ರಾಮದ ಕ್ರಿ.ಶ.1533ರ ತಾಮ್ರಶಾಸನದ ಪಠ್ಯ ಈ ರೀತಿಯಾಗಿದೆ, "ಅಷ್ಟಾದಶೈತಾ ವೃತ್ತೀನಾಂ ಕೃತ್ವಾ ರಾಜಾತಿ ಧಾರ್ಮಿಕಃ। ಅವಸನ್ನಗರೀ ಮೇನಾಮ್ ನಳಿನಾವತಿ ಸಂಜ್ಞಿತಾಮ್। ತಸ್ಯಾಶ್ಚ ಪೂರ್ವದಿಗ್ಭಾಗೇ ಭೈರವಾದ್ರಿರಿತಿ ಸ್ಥಿತಃ। ತಸ್ಯಾದ್ರೇರ್ದಕ್ಷಿಣೇ ಭಾಗೇ ನಾಮ್ನಾ ತ್ರೇಲಿಂಗನಪಾಲಕಾ। ಶ್ರೀನಿವಾಸಪುರೀ ಚೇತಿ ಪ್ರತಿನಾಮ್ನಾಚ ಬೌದ್ಧವಾಸಮಹಾಪುರೀ। ಕಲವತೀತಿ ವಿಖ್ಯಾತಾ ತೂತ್ತರೇ ಹರಿಣಾಟವೀ। ಏವಂ ವಿರಾಜಿತ ಗ್ರಾಮರತ್ನೇ ಸಸ್ಯಮನೋಹರೇ ನವಭ್ಯೋ ದ್ವಿಜವರ್ಯೇಭ್ಯೋವೃತ್ತೀ ರೇತಾದದೌನೃಪಃ।"

ಎಂದಿದೆ.[7] ಈ ಶಾಸನದಲ್ಲಿ ಉಕ್ತವಾಗಿರುವ 'ಕಲಾವತಿ ನಗರ, ಬೌದ್ಧವಾಸಾಮಹಾಪುರಿ' ಎಂಬುದನ್ನು ಮಾಗಡಿ ತಾಲ್ಲೂಕಿನ ಕಲ್ಯ ಎಂಬುದಾಗಿದೆ ಎಂದು ಡಾ.ಚಿದಾನಂದಮೂರ್ತಿಯವರು ಗುರುತಿಸಿದ್ದಾರೆ. ಹಾಗೂ ಈ ತಾಮ್ರಪಟದಲ್ಲಿ ಉಲ್ಲೇಖಗೊಂಡಿರುವ ಕಲಾವತಿ ನಗರವೇ ಈಗಿನ ಕಲ್ಯ ಎಂದು ವಾದಿಸಿ, ಈ ಕಲಾವತಿ ನಗರದಲ್ಲಿ ಬೌದ್ಧ ಧರ್ಮೀಯರು ವಾಸವಾಗಿದ್ದರು. ಹಾಗೂ ಶಾಸನೋಕ್ತ ನಳಿನಾವತಿ ಇಂದಿನ ತಿಪ್ಪಸಂದ್ರ ಹೋಬಳಿಯ ತಾವರೆಕೆರೆ ಎಂಬ ಗ್ರಾಮ, ಹರಿಣಾಟವಿ ಇಂದಿನ ಹುಲ್ಲೇನಹಳ್ಳಿ, ಭೈರವಾದ್ರಿ ಈಗಿನ ಭೈರವದುರ್ಗ ಎಂಬ ಗುಡ್ಡ(ಈ ಗುಡ್ಡದ ಬದಿಯಲ್ಲಿ ಬೈರಾಪುರವಿದೆ) ಹಾಗೂ 'ಬೌದ್ಧವಾಸಾಮಹಾಪುರೀ' ಎನಿಸಿದ ಕಲಾವತಿ ಅಥವಾ ಕಲ್ಯದ ಭೌಗೋಳಿಕ ಪ್ರದೇಶಗಳನ್ನು ಗುರುತಿಸಿದ್ದಾರೆ.[8] ಈ ಎಲ್ಲಾ ಅಂಶಗಳನ್ನು ಪರಿಶೀಲಿಸಿದಾಗ ರಾಜಘಟ್ಟ ಮತ್ತು ಕಲ್ಯ ಬೌದ್ಧಕೇಂದ್ರವಾಗಿತ್ತು ಹಾಗೂ ಇದರ ಸಮೀಪದ ಬೆಂಗಳೂರಿನ ಸುತ್ತಮುತ್ತಲ ಪ್ರದೇಶಗಳು ಬೌದ್ಧಧರ್ಮದ ಪ್ರಭಾವಕ್ಕೆ ಒಳಗಾಗಿದ್ದವು. ರಾಜಘಟ್ಟದಿಂದ ಉತ್ತರಕ್ಕೆ ಸನ್ನತಿ, ಪೂರ್ವಕ್ಕೆ ಕನ್ನಳ್ಳಿ ಹಾಗೂ ಪಶ್ಚಿಮದ ಕಡೆ ಕಲ್ಯ ಪ್ರದೇಶಗಳಿವೆ. ಇವೆಲ್ಲವೂ ಬೌದ್ಧಕೇಂದ್ರಗಳಾಗಿದ್ದವು.

ಬೌದ್ಧಧರ್ಮಕ್ಕೆ ತದನಂತರದಲ್ಲಿ ರಾಜಾಶ್ರಯ ಕಡಿಮೆಯಾಗುತ್ತಾ ಬಂದಿತು. ಜೈನಧರ್ಮವು ರಾಜಾಶ್ರಯ ಪಡೆಯಿತು. ಗಂಗರ ಕಾಲಕ್ಕಾಗಲೇ ಬೌದ್ದಧರ್ಮದ ಪ್ರಭಾವ ಕಡಿಮೆಯಾಗಿ ಜೈನಧರ್ಮವು ಉಚ್ಛ್ರಾಯ ಸ್ಥಿತಿಯಲ್ಲಿತ್ತು. ಕ್ರಿ.ಶ. ಒಂದು, ಎರಡನೆಯ ಶತಮಾನಗಳಿಂದ ಕನ್ನಡ ನಾಡಿನಲ್ಲಿ ಬೇರೂರಿದ್ದ ಬೌದ್ಧಧರ್ಮ ಸುಮಾರು ಹತ್ತು-ಹನ್ನೆರಡನೆಯ ಶತಮಾನದ ಹೊತ್ತಿಗೆ ಜನರ ಅನುಸರಣೆಯಿಂದ ಕ್ಷೀಣಿಸುತ್ತಾ ಬಂದಿತು.

ಪ್ರಸ್ತುತ ಕಾಕ್ಸ್‌ಟೌನ್‌ನ ಬುದ್ಧವಿಹಾರ ರಸ್ತೆಯಲ್ಲಿರುವ ಬೆಂಗಳೂರು ಬುದ್ಧ ಸೊಸೈಟಿಯನ್ನು ಅಯೋಧಿದಾಸ ಪಂಡಿತರ್ ಎಂಬುವವರು 1907ರಲ್ಲಿ ಪ್ರಾರಂಭಿಸಿದರು. 1954ರ ಜುಲೈ 8ರಂದು ಡಾ.ಅಂಬೇಡ್ಕರ್ ಇಲ್ಲಿಗೆ ಭೇಟಿಕೊಟ್ಟಿದ್ದರು.[9] ಹಾಗೂ ಬೆಂಗಳೂರಿನ ಗಾಂಧಿನಗರದ ಕಾಳಿದಾಸ ಮಾರ್ಗದಲ್ಲಿ ಬೌದ್ಧ ಧರ್ಮದ ಕೇಂದ್ರವಾದ ಮಹಾಬೋಧಿ ಸೊಸೈಟಿ ಎಂಬ ಸಂಸ್ಥೆಯಿದೆ. 1956ರಲ್ಲಿ ಪೂಜ್ಯ ಆಚಾರ್ಯ ಬುದ್ಧ ರಕ್ಷಿತ ಥೇರರಿಂದ ಸ್ಥಾಪಿತವಾದ ಈ ಸಂಸ್ಥೆ ದಕ್ಷಿಣ ಭಾರತದ ಪ್ರಥಮ ಹಾಗೂ ಪ್ರಸಿದ್ಧ ಬೌದ್ಧಧರ್ಮ ಕೇಂದ್ರವಾಗಿದೆ. ವಾಣಿಜ್ಯ ಚಟುವಟಿಕೆಯ, ಸದಾ ಜನಜಂಗುಳಿಯಿಂದ ಕೂಡಿರುವ ಗಾಂಧಿನಗರದಲ್ಲಿ ಮಹಾಬೋಧಿ ಸಂಸ್ಥೆ ಇದ್ದರೂ, ಪ್ರಶಾಂತತೆಯ ವಾತಾವರಣವನ್ನು ಶಾಂತಿಯನ್ನು ಕಾಪಿಟ್ಟುಕೊಂಡಿದೆ. ವಿಶಾಲವಾದ ಧ್ಯಾನ ಮಂದಿರದೊಳಗೆ ಬುದ್ಧನ ವಿಗ್ರಹವಿದೆ. ಇದು ಲೋಹದ ಪ್ರತಿಮೆಯಾಗಿದೆ. ಈ ವಿಗ್ರಹದ ಎಡಭಾಗದಲ್ಲಿ ಬುದ್ಧನ ಅಗ್ರಶಿಷ್ಯರಾದ ಸಾರಿಪುತ್ರ ಮತ್ತು ಮೊಗ್ಗಲಾ ಅವರ ಪ್ರತಿಮೆಗಳಿವೆ. ಈ

ಪ್ರತಿಮೆಗಳು 1996ರಲ್ಲಿ ಥೈಲ್ಯಾಂಡಿನಿಂದ ತರಿಸಲಾಗಿದೆ. ಮಂದಿರದ ಪ್ರವೇಶ ದ್ವಾರದಲ್ಲಿ ಸುಂದರವಾದ ಸ್ತೂಪವಿದೆ. ಈ ಸ್ತೂಪ ಸಾಂಚಿ ಮಾದರಿಯ ರೀತಿಯಲ್ಲಿದೆ. ಇದು ದಕ್ಷಿಣ ಭಾರತದಲ್ಲಿ ಕಳೆದ ಸಾವಿರ ವರ್ಷಗಳ ಅನಂತರ ಸ್ಥಾಪನೆಗೊಂಡ ಪ್ರಥಮ ಸ್ತೂಪವೆಂಬುದು ಗಮನಾರ್ಹ ಅಂಶ. ಈ ಸ್ತೂಪದ ಗರ್ಭದಲ್ಲಿ ಬರ್ಮಾದಿಂದ ತಂದಿರುವ ಬುದ್ಧನ ಅಸ್ಥಿಯ ಚೂರು, ಆತನ ವಿಚಾರಗಳನ್ನೊಳಗೊಂಡ ಸಾಹಿತ್ಯ ಮುಂತಾದ ವಸ್ತುಗಳನ್ನಿಡಲಾಗಿದೆ. ಈ ಮಂದಿರದ ಒಳಗೆ ಬುದ್ಧನ ಜೀವನ ಚರಿತ್ರೆಯನ್ನು ತಿಳಿಸುವ ಚಿತ್ರಗಳನ್ನೂ ಕಾಣಬಹುದು. ಇತ್ತೀಚಿನ ದಿನಗಳಲ್ಲಿ ಬೌದ್ಧಧರ್ಮ ಪ್ರಚಾರಗೊಂಡು ಬೆಂಗಳೂರು ಸೇರಿದಂತೆ ಕರ್ನಾಟಕದೆಲ್ಲೆಡೆ ಈ ಧರ್ಮದ ಅನುಯಾಯಿಗಳು ಕಾಣಸಿಗುತ್ತಾರೆ.

## ಜೈನಧರ್ಮ

'ಜೈನ' ಎಂದರೆ, 'ಜಿನನನ್ನು ಪೂಜಿಸುವವ ಜೈನ'. 'ಜಿನ' ಶಬ್ಧದ ಅರ್ಥ ಜಯಶೀಲ. ಅಹಿಂಸೆಯ ತಳಹದಿಯ ಮೇಲೆ ಜೈನಧರ್ಮ ಸ್ಥಾಪನೆಯಾಗಿದೆ. ಜೈನಧರ್ಮ ಹುಟ್ಟಿದ್ದು ಉತ್ತರ ಭಾರತದಲ್ಲಿಯಾದರೂ ಹೆಚ್ಚು ಪ್ರಚಾರವಾದದ್ದು ದಕ್ಷಿಣ ಭಾರತದಲ್ಲಿ. ಶ್ರವಣಬೆಳಗೊಳ, ಕಾರ್ಕಳ, ಮೂಡಬಿದರೆ, ಹುಮ್ಚ, ಲಕ್ಷ್ಮೇಶ್ವರ ಮೊದಲಾದ ಸ್ಥಳಗಳೂ ಕರ್ನಾಟಕದಲ್ಲಿರುವ ಜೈನ ಕೇಂದ್ರಗಳು. ಕರ್ನಾಟಕದಲ್ಲಿ ಜೈನಧರ್ಮ ಯಾವಾಗ ಪ್ರಾರಂಭವಾಯಿತು ಎಂದು ಸ್ಪಷ್ಟವಾಗಿ ಹೇಳಬರುವುದಿಲ್ಲ. ಜೈನ ಧರ್ಮವು ಆಳ್ವಿಕೆ ನಡೆಸಿದ ರಾಜರ, ಅಧಿಕಾರಿಗಳ, ಪಂಡಿತರ, ಆಶ್ರಯ ಪಡೆದುದಷ್ಟೇ ಅಲ್ಲದೆ ಕವಿಗಳು, ಪಂಡಿತರು, ವಿದ್ವಾಂಸರು ಜೈನಧರ್ಮದ ತತ್ವವನ್ನು ಬಳಸಿಕೊಂಡು ಸಾಹಿತ್ಯ ರಚನೆಗೆ ತೊಡಗಿದರು. ಹಾಗೂ ಜನಸಾಮಾನ್ಯರು ಅನುಸರಿಸಿಕೊಂಡು ಬಂದರು. ಹೀಗೆ ಕರ್ನಾಟಕದಲ್ಲಿ ಜೈನಧರ್ಮ ಹೆಚ್ಚು ಪ್ರಚಾರಗೊಂಡಿತು. ಜೈನ ಆಚಾರ್ಯರ ಮಾರ್ಗದರ್ಶನದಲ್ಲಿ ಈ ಧರ್ಮದ ಅನುಸರಣೆಯನ್ನು ಮುಂದುವರಿಸಿಕೊಂಡು ಬಂದ ಕೆಲವು ಜನರು ಇಂದಿಗೂ ಈ ಧರ್ಮದ ಅನುಯಾಯಿಗಳಾಗಿದ್ದಾರೆ.

ಕರ್ನಾಟಕವನ್ನು ಆಳಿದ ಪ್ರಮುಖ ರಾಜಮನೆತನಗಳಲ್ಲಿ ಒಂದಾದ ಗಂಗರು ಜೈನಧರ್ಮವನ್ನು ಪೋಷಿಸಿಕೊಂಡು ಬಂದದ್ದಷ್ಟೇ ಅಲ್ಲದೆ, ಅದರ ಅನುಯಾಯಿಗಳಾಗಿದ್ದರು. ಗಂಗರಸರ ಕಾಲದಲ್ಲಿ ಜೈನಧರ್ಮ ರಾಜಧರ್ಮವಾಗಿತ್ತೆಂದರೆ ತಪ್ಪಾಗದು. ಹಾಗಾಗಿ ರಾಜಧಾನಿ ಬೆಂಗಳೂರು ನಗರವು ಗಂಗರ ಆಳ್ವಿಕೆಗೆ ಒಳಪಟ್ಟಿದ್ದರಿಂದ ಇಲ್ಲಿಯೂ ಜೈನ ಧರ್ಮ ನೆಲೆಸಿತ್ತು ಎಂಬುದರಲ್ಲಿ ಯಾವುದೇ ಸಂಶಯಗಳಿಲ್ಲ. ಜೈನ ಧರ್ಮದ ಕುರುಹುಗಳಾಗಿ ಇವರ ಕಾಲದ ಜೈನಶಾಸನಗಳು ದೊರೆಯುತ್ತವೆ.

ಕ್ರಿ.ಶ.797ರ ಮಣ್ಣೆ ಶಾಸನದಲ್ಲಿ ಶಾಲ್ಮಲೀ ವಿಷಯದ ಶಾಲ್ಮಲೀ ಗ್ರಾಮದಲ್ಲಿ ಕೊಂಡಕುಂದಾನ್ವಯದ ಪ್ರಭಾಚಂದ್ರನಿಗಾಗಿ ಗಂಗದೊರೆ ಮಾರಸಿಂಹನ ಸೇನಾನಿ ಶ್ರೀವಿಜಯನು ಮಣ್ಣೆಯಲ್ಲಿ ಬಸದಿಯೊಂದನ್ನು ನಿರ್ಮಿಸಿದನು ಎಂಬ ವಿಷಯದ ಒಕ್ಕಣೆಯಿದೆ.[10] ಕುಂದಕುಂದಾಚಾರ್ಯರು(ಕೊಂಡ ಕುಂದಾಚಾರ್ಯ) ಜೈನ ಧರ್ಮದ ಆಚಾರ ವಿಚಾರವನ್ನು ಪ್ರಚಾರಮಾಡಿದ್ದಾರೆ. ಶಾಸ್ತ್ರಗ್ರಂಥವನ್ನು ರಚಿಸಿದ್ದಾರೆ. ಪ್ರಭಾಚಂದ್ರ ಆಚಾರ್ಯರಿಗೆ ಬಸದಿಯನ್ನು ಶ್ರೀವಿಜಯನು ಕಟ್ಟಿಸಿಕೊಟ್ಟದ್ದನ್ನು ಈ ಶಾಸನವು ದಾಖಲಿಸಿದೆ.

ಸುಮಾರು ಕ್ರಿ.ಶ.802ರ ರಾಷ್ಟ್ರಕೂಟರ ಶಾಸನದಲ್ಲಿ ಪ್ರಭೂತವರ್ಷನ ಆಜ್ಞೆಯ ಮೇರೆಗೆ ಮಣ್ಣೆಯ ಬಸದಿಗೆ ಒಂದು ಗ್ರಾಮವನ್ನು ದಾನ ನೀಡಿದ್ದನ್ನು ದಾಖಲಿಸಿದೆ. ಮಹಾವಿಜಯ ವಿಕ್ಷೇಪಾಧಿಪತಿ ಶ್ರೀವಿಜಯ ರಾಜನಿಂದ ನಿರ್ಮಾಣವಾದ ಜಿನಭವನಕ್ಕೆ ಮಾನ್ಯಪುರದ ನೆಲೆವೀಡಿನಲ್ಲಿದ್ದಾಗ ಜಿನಭವನದ ಅಂಗಭೋಗ ರಂಗಭೋಗಗಳಿಗಾಗಿ ಪೆರ್ವ್ವಡಿ ಎಂಬ ಗ್ರಾಮವನ್ನು ಚತುಸ್ಸಮಯಗಳಿಗೊದಗುವಂತೆ ಸರ್ವಭಾದಾಪರಿಹಾರವಾಗಿ ನೀಡಲಾಗಿದೆ.[11] ಗಂಗರ ಕಾಲದಲ್ಲಿ ಸ್ಥಾಪನೆಯಾದ ಈ ಜಿನಬಸದಿಗೆ ರಾಷ್ಟ್ರಕೂಟರು ದಾನನೀಡಿ ಜೈನಧರ್ಮಕ್ಕೆ ಪ್ರೋತ್ಸಾಹವನ್ನು ನೀಡಿದ್ದಾರೆ.

ಕ್ರಿ.ಶ.900ರ ಬೇಗೂರು ಕೋಟೆಯ ದ್ವಾರದ ಬಳಿಯಲ್ಲಿರುವ ಕಂಬವೊಂದರ ಮೇಲೆ ಹಾಕಲ್ಪಟ್ಟ ಶಾಸನವು ಗಂಗರ ಸಾಮಂತ ಅಧಿಕಾರಿ ನಾಗತ್ತರನ ಮಗಳು ತೊಂಡಬ್ಬೆಯನ್ನು ಉಲ್ಲೇಖಿಸುತ್ತದೆ.[12] ತೊಂಡಬ್ಬೆಯು ಜೈನ ಸನ್ಯಸನ ವಿಧಿಯಿಂದ ಮರಣಿಸಿದಳೆಂಬ ವಿಚಾರವನ್ನು ಈ ಶಾಸನ ತಿಳಿಸುತ್ತದೆ. ಸಮಾಧಿ ಮರಣವು ಕೇವಲ ಜೈನಮುನಿಗಳಿಗೆ ಮಾತ್ರ ಸೀಮಿತವಾಗಿರಲಿಲ್ಲ. ಪುರುಷರಂತೆ ಸ್ತ್ರೀಯರೂ ಈ ರೀತಿಯ ಪ್ರಾಣತ್ಯಾಗ ವ್ರತವನ್ನು ಕೈಗೊಂಡವರಿದ್ದರು ಎಂಬ ಅಂಶ ಶಾಸನಗಳಲ್ಲಿ ಉಕ್ತವಾಗಿದೆ. ಅಂತಹವರಲ್ಲಿ ತೊಂಡಬ್ಬೆಯು ಒಬ್ಬಳೂ ಜೈನಧರ್ಮದಲ್ಲಿ ಮುನಿವರ್ಗದ ಸ್ತ್ರೀಯರನ್ನು 'ಕಂತಿ'ಯರು ಎಂದು ಕರೆಯಲಾಗುತ್ತದೆ. ಗೃಹಿಣಿಯರನ್ನು 'ಶ್ರಾವಕಿ'ಯರೆಂದು ಕರೆಯಲಾಗುತ್ತದೆ.

ಕ್ರಿ.ಶ.950ರ ಬೇಗೂರು ಕೋಟೆಯ ಬಲಭಾಗದ ಜಗಲಿಗೆ ಸೇರಿದ ಕಲ್ಲಿನಲ್ಲಿರುವ ಶಾಸನವು ಕಂತಿಯ ಬಗ್ಗೆ ತಿಳಿಸುತ್ತದೆ.[13] ಹಾಗೂ ಜೈನಾಚಾರ್ಯ ಪೆರ್ಮಣನ್ದಿ ಭಟ್ಟಾರಕರನ್ನು ಉಲ್ಲೇಖಿಸುತ್ತದೆ. ಇವರ ಮಾರ್ಗದರ್ಶನದಲ್ಲಿ ರವಿಕಾಂತಿ ಮಂಕಬ್ಬೆ ಕಂತಿಯಾದ ವಿಷಯವನ್ನು ಹೇಳುತ್ತದೆ. ಕಂತಿಯರಾದ ಸ್ತ್ರೀಯರು ತಮ್ಮ ಮೂಲ ಹೆಸರನ್ನು ಬದಲಾಯಿಸಿಕೊಳ್ಳುವುದರ ಜೊತೆಗೆ ಹೆಸರಿನ ಜೊತೆಗೆ 'ಕಂತಿ', 'ಅಜ್ಜಿ' ಈ ರೀತಿಯಾಗಿ ಕರೆದುಕೊಳ್ಳುತ್ತಿದ್ದ ಪದ್ಧತಿ ಇತ್ತು ಎಂಬುದು ಈ ಶಾಸನದಿಂದ ವ್ಯಕ್ತವಾಗುತ್ತದೆ.

ಕುಮಾರಣಂದಿ ಭಟಾರರು ಗ್ರಾಮ, ಪುರ, ಖೇಡ, ಖರ್ವಡ, ಮಡಂಬ, ಪಟ್ಟಣ ಈ ಕ್ರಮದಿಂದ ವಿಹಾರಿಸುತ್ತಿದ್ದ ವಿಷಯ ಕ್ರಿ.ಶ.950ರ ಶಾಸನವೊಂದರಲ್ಲಿ ಬಂದಿದೆ.[14] ಜೈನ ಸನ್ಯಾಸಿಗಳು ಮಳೆಗಾಲವನ್ನು ಬಿಟ್ಟು ಉಳಿದ ಕಾಲಗಳಲ್ಲೆಲ್ಲಾ ಸಂಚರಿಸಬೇಕೆಂಬ ನಿಯಮವಿದೆ. ಅವರು ಯಾವ ಸ್ಥಳದ ವಿಷಯದಲ್ಲಿಯೂ ಅನುರಕ್ತತೆಯನ್ನು ಬೆಳಸಿಕೊಳ್ಳಕೂಡದೆಂಬುದೇ ಇದಕ್ಕೆ ಪ್ರಧಾನ ಕಾರಣ. 'ಏಕವಿಹಾರಿ'ಯಾಗಿ ಎಂದರೆ 'ಏಕಾಂಗಿ'ಯಾಗಿ ಅಥವಾ 'ಋಷಿ ಸಮುದಾಯಂಬೆರಸು' ಎಂದರೆ ಸಾಮೂಹಿಕವಾಗಿ "ಗ್ರಾಮೇಕರಾತ್ರಂ ನಗರೇ ಪಂಚರಾತ್ರಂ ಆಟವ್ಯಾಂ ದಶರಾತ್ರಂ ಎಂಬೀ ನ್ಯಾಯದಿಂ ಗ್ರಾಮ ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂಗಳಲ್ಲಿ' ಸಂಚರಿಸುತ್ತ ತಪಸ್ಸನ್ನಾಚರಿಸುತ್ತಿದ್ದರು. ಗ್ರಾಮದಲ್ಲಿ ಒಂದು ರಾತ್ರಿ, ನಗರದಲ್ಲಿ ಐದು ರಾತ್ರಿ, ಅಡವಿಯಲ್ಲಿ ಹತ್ತು ರಾತ್ರಿ ಅವರು ತಂಗಬಹುದಾಗಿದ್ದಿತು.[15] ಜೈನ ಮುನಿಗಳು ಆಚರಿಸಲಾಗುವ ಚಾತುರ್ಮಾಸದ ಚಟುವಟಿಕೆಗಳಿಂದ ಜೈನಧರ್ಮದ ಪ್ರಚಾರ ಮಾಡಿದಂತಾಗುತ್ತಿತ್ತು.

ಕಿ.ಶ.1427ರ ಬೇಗೂರು ಜಿನಬಸ್ತಿಯಾದ ಶ್ರವಣಪ್ಪನ ದಿಣ್ಣೆಯ ಬಳಿ ದೊರೆತಿರುವ ಜಿನಶಾಸನದಲ್ಲಿ ಕರಿಯಪ್ಪ ದಂಡನಾಯಕನೆಂಬುವನು ಚಕ್ಕಿಮಯ್ಯ ಜಿನಾಲಯಕ್ಕೆ ಮೊರಸು ನಾಡಿನ ಕಲಿಯೂರಿನ ಅಗ್ರಹಾರವನ್ನು ದಾನ ನೀಡಿರುವ ಉಲ್ಲೇಖವಿದೆ. ಈ ಚಕ್ಕಿಮಯ್ಯನೆಂಬುವನು ಮೂಲಸಂಘ, ದೇಶಿಗಣದ ಕೊಣ್ಡ ಕುಂದಾನ್ವಯದ ಜೈನಗುರು ಸಿದ್ಧಾನ್ತಿದೇವರ ಚಂದ್ರ ಸಿದ್ಧಾನ್ತಿ ದೇವರ ಗುಡ್ಡ ಚಕ್ಕಿಮಯ್ಯ ನಾಗಿ ಎಂಬ ವಿವರ ಇದೇ ಶಾಸನದಿಂದ ತಿಳಿದುಬರುತ್ತದೆ.

ಸಮಾಧಿ ಮರಣವನ್ನು ಹೊಂದಿದವರ ಹೆಸರಿನಲ್ಲಿ ನಿಲ್ಲಿಸುವ ಸ್ಮಾರಕಗಳಿಗೆ ಶಾಸನಗಳಲ್ಲಿ ನಿಷಿಧಿ ಎನ್ನುತ್ತಾರೆ. ಸಮಾಧಿ ಮರಣಕ್ಕೆ ಪವಿತ್ರ ಸ್ಥಳಗಳ ಅವಶ್ಯಕತೆಯನ್ನು ಜೈನಧರ್ಮ ಸೂಚಿಸುತ್ತದೆ. ನಿಷಿಧಿ ಎಂಬ ಪದಕ್ಕೆ ಕುಳಿತುಕೊಳ್ಳುವಿಕೆ, ವಿಶ್ರಮಿಸುವಿಕೆ ಎಂಬ ಅರ್ಥಗಳಿವೆ. ಜೈನ ಮತದಲ್ಲಿ ಈ ವ್ರತವನ್ನು ಅನಾದಿಕಾಲದಿಂದಲೂ ಆಚರಿಸಿಕೊಂಡು ಬಂದಿರುವ ಉಲ್ಲೇಖವಿದೆ. ಜೈನಮತವನ್ನು ಕರ್ನಾಟಕದಲ್ಲಿ ಪ್ರಥಮವಾಗಿ ಪರಿಚಯಿಸಿದವರಲ್ಲಿ ಮೊದಲಿಗರಾದ ಭದ್ರಬಾಹು, ಚಂದ್ರಗುಪ್ತರು ಸಲ್ಲೇಖನ ವ್ರತವನ್ನು ಅನುಸರಿಸಿ ಸಾವನ್ನಪ್ಪಿದ್ದಾರೆ. ಬೆಂಗಳೂರಿನ ದೊಡ್ಡಬಿದರಕಲ್ಲು ಪ್ರದೇಶದಲ್ಲಿ ನಿಷಿಧಿ ಶಾಸನವೊಂದು ದೊರಕಿದೆ.[16] ಗೌತುಬಜೀಯನ ಹೆಸರಿನಲ್ಲಿ ನಿಲ್ಲಿಸಿರುವ ನಿಷದಿ ಶಾಸನವಿದು. ಗಂಗರ ಕಾಲದಲ್ಲಿ ಹೆಚ್ಚು ಪ್ರಚಾರದಲ್ಲಿದ್ದ ಜೈನಧರ್ಮವು ವಿಜಯನಗರ ಕಾಲದಲ್ಲೂ ಅಸ್ತಿತ್ವದಲ್ಲಿತ್ತು. ಈ ಅರಸರ ಕಾಲದಲ್ಲಿ ಜೈನಧರ್ಮಿಯರಿಗೂ, ಶ್ರೀವೈಷ್ಣವರಿಗೂ ಕಲಹ ಉಂಟಾಗಿದ್ದು ಅದನ್ನು ಬುಕ್ಕರಾಯನು ಸಂಧಿ ಮಾಡಿಸಿದರ ಬಗ್ಗೆ ಮಾಗಡಿಯ ಕಲ್ಯ ಶಾಸನದಿಂದ ತಿಳಿಯುತ್ತದೆ.[17] ಈ ಶಾಸನದ ಮತ್ತೊಂದು ಪ್ರತಿ ಹಾಸನ ಜಿಲ್ಲೆಯ ಚನ್ನರಾಯ ಪಟ್ಟಣ ತಾಲ್ಲೂಕಿನ

ಶ್ರವಣಬೆಳಗೊಳದ ಭಂಡಾರಿ ಬಸ್ತಿಯಲ್ಲಿದೆ. ಶ್ರೀ ವೈಷ್ಣವ ಧರ್ಮ ಹೆಚ್ಚು ಪ್ರಚಾರಕ್ಕೆ ಬಂದಿದ್ದ ಆ ಸಂದರ್ಭದಲ್ಲಿ ಜೈನಧರ್ಮದ ಪ್ರಭಾವ ಕುಂಠಿತ ಸ್ಥಿತಿಯಲ್ಲಿತ್ತು. ಜೈನರಿಗೆ ಇನ್ನು ಮುಂದೆ ಯಾವುದೇ ಧಾರ್ಮಿಕ ತೊಂದರೆಯಾಗಬಾರದು ಎಂದು ನಡೆಸಿರುವ ರಾಜಿ ಸಂಧಾನದ ವಿಷಯವನ್ನು ತಿಳಿಸುತ್ತದೆ. ಜೈನರು ಮತ್ತು ಶ್ರೀವೈಷ್ಣವರು ಸ್ನೇಹದಿಂದ ಬದುಕುವುದನ್ನು ತಿಳಿಸುತ್ತದೆ. ಸ್ವತಃ ಬುಕ್ಕರಾಯನು ಜೈನರ ಕೈಯ ಮೇಲೆ ಶ್ರೀವೈಷ್ಣವರ ಕೈಯನ್ನು ಇಟ್ಟು ಇನ್ನು ಮುಂದೆ ಜೈನ ದರ್ಶನಕ್ಕೂ ಮತ್ತು ವೈಷ್ಣವ ದರ್ಶನಕ್ಕೂ ಯಾವುದೇ ಬೇಧ ಇಲ್ಲವೆಂದು ಹೇಳಿರುವುದನ್ನು ತಿಳಿಸುತ್ತದೆ. ವಿಜಯನಗರ ಅರಸರು ಸರ್ವಧರ್ಮ ಪೋಷಕರೂ ಆಗಿದ್ದರು ಎಂಬುದು ಈ ಶಾಸನದಿಂದ ವೇದ್ಯವಾಗುತ್ತದೆ. ಹಾಗಾಗಿ ಜೈನಧರ್ಮವು ಇವರ ಕಾಲದಲ್ಲಿ ಅಸ್ತಿತ್ವದಲ್ಲಿತ್ತು.

ಜೈನಧರ್ಮ ಗಂಗರ ಆಶ್ರಯ ಪಡೆದು ಉಚ್ಚ್ರಾಯ ಸ್ಥಿತಿಯಲ್ಲಿತ್ತು. ಚೋಳರ ಅತಿಕ್ರಮಣದಿಂದ ಕಣ್ಮರೆಯಾಗತೊಡಗಿತು. ಚೋಳರು ಶಿವಭಕ್ತರಾಗಿದ್ದರು. ಇವರು ಗಂಗವಾಡಿಯನ್ನು ವಶಪಡಿಸಿಕೊಳ್ಳುವುದರ ಜೊತೆಗೆ ಜೈನಧರ್ಮವು ಸ್ವಲ್ಪಮಟ್ಟಿಗೆ ನೆಲಕಚ್ಚಿತು. ಹೊಯ್ಸಳರು ಚೋಳರನ್ನು ಸೋಲಿಸಿದರು. ಹೊಯ್ಸಳ ದೊರೆ ವಿಷ್ಣುವರ್ಧನನ ಕಾಲದಲ್ಲಿ ಪುನಃ ಜೈನಧರ್ಮ ತಲೆಎತ್ತಿತು. ವೈಷ್ಣವಧರ್ಮದ ಪ್ರಭಾವದಿಂದ ಸುಮಾರು 14–15ನೇ ಶತಮಾನದಲ್ಲಿ ಜೈನಧರ್ಮ ಕ್ಷೀಣಗತಿಯಲ್ಲಿ ಉಸಿರಾಡತೊಡಗಿತು. ವಿಜಯನಗರ ಕಾಲಕ್ಕಾಗಲೆ ಜೈನರಿಗೂ ವೈಷ್ಣವರಿಗೂ ಕಲಹ ಉಂಟಾಗಿತ್ತು. ಸರ್ವಧರ್ಮ ಸಮನ್ವಯರಾದ ವಿಜಯನಗರದ ಅರಸರು ಈ ಧರ್ಮಕ್ಕೆ ಪೋಷಣೆ ನೀಡಿದರು. ಬೆಂಗಳೂರಿನಲ್ಲಿ ದೊರೆತಿರುವ ಶಾಸನಗಳು, ನಿಷಧಿಗಳು ಜೈನರ ಧಾರ್ಮಿಕ ಚಟುವಟಿಕೆಗಳನ್ನು ತಿಳಿಸಿಕೊಡುವ ಸಾಂಸ್ಕೃತಿಕ ದಾಖಲೆಗಳಾಗಿವೆ. ನಗರ ಜಿಲ್ಲೆಯ ಸುತ್ತಮುತ್ತ ಜೈನಧರ್ಮ ಹರಡಿಕೊಂಡಿತ್ತು ಎಂಬುದಕ್ಕೆ ದೊರೆತಿರುವ ಶಾಸನಗಳು ಸಾಕ್ಷಿಯಾಗಿವೆ.

ಜೈನಧರ್ಮ ಒಂದು ಕಾಲಕ್ಕೆ ಉಚ್ಚ್ರಾಯ ಸ್ಥಿತಿಯಲ್ಲಿದ್ದು ಅದನ್ನು ಅನುಸರಿಸಿಕೊಂಡು ಬರುತ್ತಿರುವ ಜನಸಾಮಾನ್ಯರನ್ನು ಇಂದಿಗೂ ಕಾಣಬಹುದು. ಪ್ರಸ್ತುತ ಜೈನಧರ್ಮಕ್ಕೆ ಸಂಬಂಧಿಸಿದಂತೆ ಬೆಂಗಳೂರಿನಲ್ಲಿ ಸುಮಾರು ಮೂವತ್ತೈದಕ್ಕೂ ಹೆಚ್ಚು ಜೈನ ದೇಗುಲಗಳು ಸ್ಥಾಪನೆಯಾಗಿವೆ. ಹಾಗಾಗಿ ಈ ಧರ್ಮವು ಇಲ್ಲಿ ಎಷ್ಟು ವ್ಯಾಪಕವಾಗಿ ಹರಡಿದೆಯೆಂಬುದನ್ನು ತಿಳಿಯಬಹುದು. ಶ್ವೇತಾಂಬರ ಮತ್ತು ದಿಗಂಬರ ಎರಡು ಪಂಥಗಳಿಗೆ ಸೇರಿದ ಜೈನಮಂದಿರಗಳು ಬೆಂಗಳೂರಿನಲ್ಲಿವೆ. ಜಯನಗರದ ಶಾಪಿಂಗ್ ಕಾಂಪ್ಲೆಕ್ಸ್ ಬಳಿ, ಬಸವನಗುಡಿ, ಚಿಕ್ಕಪೇಟೆಯಲ್ಲಿರುವ

ಗುರು ಮಹಾರಾಜ್ ಮಂದಿರಗಳಿವೆ. ಈ ಜೈನಮಂದಿರಗಳ ಮತ್ತೊಂದು ವಿಶೇಷತೆ ಎಂದರೆ ಅತ್ಯಂತ ಕಲಾತ್ಮಕವಾದ ಕೆತ್ತನೆಯ ಕೆಲಸಗಳನ್ನೊಳಗೊಂಡಿದೆ.

## ಶೈವಧರ್ಮ

ಕರ್ನಾಟಕದ ಪ್ರಾಚೀನ ಧರ್ಮಗಳಲ್ಲಿ ಒಂದು ಹಾಗೂ ಪ್ರಮುಖವಾದಂತಹ ಧರ್ಮ ಶೈವಧರ್ಮವಾಗಿದೆ. ಶೈವಧರ್ಮಕ್ಕೆ ಲಾಕುಳ ಸಮಯ ಎಂಬ ಮತ್ತೊಂದು ಹೆಸರಿದೆ. ಬಹುಶಃ ಈ ಹೆಸರೇ ಪ್ರಾಚೀನವಾದುದೆಂದೂ, ಇದು ಲಕುಲೀಶ ಎಂಬ ಒಬ್ಬ ಮಾನವ ವ್ಯಕ್ತಿಯನ್ನು ಸೂಚಿಸುವುದರಿಂದ ಇದರ ಸ್ಥಾನದಲ್ಲಿ ಪಶುಪತಿ ಎಂಬ ಭಗವಂತನ ಹೆಸರನ್ನಿಟ್ಟು ಪಾಶುಪತ ಸಮಯ ಎಂದು ಮುಂದಿನವರು ಹೆಸರಿಟ್ಟಿರಬೇಕು[18] ಎಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಹಾಗೂ ಕನ್ನಡ ಸಂಸ್ಕೃತಿಗೆ ಲಾಕುಳ ಶೈವರ ಮುಖ್ಯ ಕೊಡುಗೆಗಳು ಎರಡು. ಒಂದು ಹಳ್ಳಿ ಹಳ್ಳಿಗಳಲ್ಲಿ ಕಂಡು ಬರುವ ಶಿವ ದೇವಸ್ಥಾನಗಳು, ಮತ್ತೊಂದು-ಸಂಸ್ಕೃತ ಭಾಷೆಯಲ್ಲಿ ನಿಕ್ಷಿಪ್ತವಾಗಿದ್ದ ಜ್ಞಾನದ ಬೆಳಕು ಆರದಂತೆ ನೋಡಿಕೊಂಡದ್ದು. ಇವರು ಬಹುದೊಡ್ಡ ದೇವಸ್ಥಾನಗಳ ನಿರ್ಮಾಪಕರು. ತಾವು ಕಟ್ಟಿಸಿದ ಅಥವಾ ತಮಗಾಗಿ ಕಟ್ಟಿಸಿದ ದೇವಸ್ಥಾನಗಳಲ್ಲಿ ತಾವು ವಾಸಿಸುತ್ತಾ ಅಲ್ಲಿ ತಮ್ಮ ವೈಯಕ್ತಿಕ ಆಧ್ಯಾತ್ಮಿಕ ಸಾಧನೆಯ ಜೊತೆಗೆ ವಿದ್ಯಾಪ್ರಸಾರದ ದೊಡ್ಡ ಹೊಣೆಯನ್ನು ಹೊತ್ತಿದ್ದರು. ಆ ಕಾಲದಲ್ಲಿ ದೇವಸ್ಥಾನವೇ ಮಠವಾಗಿ, ಮಠವೇ ಶಾಲೆಯಾಗಿತ್ತು.[19]

ಬೆಂಗಳೂರಿನಲ್ಲಿರುವ ಅತ್ಯಂತ ಪ್ರಾಚೀನ ಶೈವ ದೇವಸ್ಥಾನವೆಂದರೆ ಬೇಗೂರಿನ ನಾಗೇಶ್ವರ ದೇವಾಲಯ. ಈ ದೇವಸ್ಥಾನದ ಒಳಭಾಗದಲ್ಲಿ ಲಕುಲೀಶನ ವಿಗ್ರಹವಿದೆ. ಈ ಲಕುಲೀಶನ ವಿಗ್ರಹಗಳು ಸಾಮಾನ್ಯವಾಗಿ ಬಲಗೈಯಲ್ಲಿ ಮಾದಲದ ಹಣ್ಣನ್ನೂ ಎಡಗೈಯಲ್ಲಿ ದಂಡ(ಲಕುಲ)ವನ್ನೂ ಹಿಡಿದಿರುತ್ತದೆ. ಲಾಕುಳ ಹಾಗೂ ಪಾಶುಪತ ಶೈವ ಸಿದ್ಧಾಂತಗಳು ಬಹು ಜನಪ್ರಿಯಗೊಂಡು ಅಂದಿನ ಸಮಾಜದಲ್ಲಿ ಅತ್ಯಂತ ಪರಿಣಾಮಕಾರಿಯಾದಂತಹ ಸ್ಥಾನವನ್ನು ಹೊಂದಿದ್ದವು. ಸಾಂಸ್ಕೃತಿಕ ಜೀವನದಲ್ಲಿ ಹಾಗೂ ಧಾರ್ಮಿಕ ಚಟುವಟಿಕೆಗಳಲ್ಲಿ ಇವರು ಪ್ರಮುಖ ಪಾತ್ರ ವಹಿಸುತ್ತಿದ್ದರು.

ಶೈವದೇವಾಲಯಗಳು ಬೆಂಗಳೂರು ನಗರ ಜಿಲ್ಲೆಯಲ್ಲಿ ಕ್ರಿ.ಶ.9ನೇ ಶತಮಾನಕ್ಕಾಗಲೇ ನಿರ್ಮಾಣಗೊಂಡಿದ್ದವು ಎಂಬುದು ಶಾಸನಗಳ ಆಧಾರಗಳಿಂದಲೇ ತಿಳಿದುಬರುತ್ತದೆ. ಇವುಗಳ ಜೀರ್ಣೋದ್ಧಾರಕ್ಕೆ, ನಿತ್ಯ ನೈವೇದ್ಯಕ್ಕೆ, ಅಂಗ ಭೋಗ-ರಂಗ ಭೋಗಕ್ಕೆ ಇನ್ನಿತರ ಚಟುವಟಿಕೆಗಳಿಗೆ ಸಾಕಷ್ಟು ಪ್ರಮಾಣದಲ್ಲಿ ನೇರವಾಗಿ ಮತ್ತು ರಾಜರ ಪರವಾಗಿ ಅವರ ಮಹಾಪ್ರಧಾನರು, ಮಂತ್ರಿಗಳು ದಾನನೀಡಿದ್ದಾರೆ.

ಸುಮಾರು ಕ್ರಿ.ಶ.830ರ ನಾಗೊಂಡಳ್ಳಿ ಶಾಸನದಲ್ಲಿ ರಾಚಮಲ್ಲ ಪೆರ್ಮಾಡಿ ಕಾಲದಲ್ಲಿ ಶಿವಭೀಮನ ಪ್ರತಿಷ್ಠಾಪನೆ ಮಾಡಿ ಹತ್ತು ಕೊಳಗ ಭತ್ತವನ್ನು ಬೆಳೆಯುವ ಜಾಗವನ್ನು ದಾನ ನೀಡಿರುವ ಉಲ್ಲೇಖವಿದೆ.[20] ದೊಡ್ಡ ಬೇಗೂರಿನ ನಾಗತ್ತರನ ಶಾಸನದ ಪ್ರಕಾರ ಬೇಗೂರಿನ ನಾಗೇಶ್ವರ(ಸೋಮೇಶ್ವರ) ದೇವಾಲಯವನ್ನು ನಾಗತ್ತರ ಕ್ರಿ.ಶ.890ರಲ್ಲಿ ಕಟ್ಟಿಸಿದ ಎಂದಿದೆ.[21] ಈ ನಾಗತ್ತರ ಗಂಗ ದೊರೆ ಎರೆಯಪ್ಪನ ಸಾಮಂತ ಅಧಿಕಾರಿಯಾಗಿದ್ದನು. ಶೈವಧರ್ಮದಲ್ಲಿ ಶಿವ ಅಧಿದೇವತೆಯಾದರೂ ಸೂರ್ಯ, ವಿಷ್ಣು, ಶಕ್ತಿ, ಮೊದಲಾದ ದೇವರನ್ನೂ ಪೂಜಿಸುತ್ತಿದ್ದರು. ಬೇಗೂರಿನ ನಾಗೇಶ್ವರ ದೇವಲಾಯದಲ್ಲಿ ಶಿವನ ಜೊತೆಗೆ ಸೂರ್ಯ, ಗಣೇಶ, ಮಹಿಷಮರ್ಧಿನಿ, ಸಪ್ತಮಾತೃಕೆಯರ ಪ್ರತಿಮೆಗಳು ಕಂಡುಬರುತ್ತವೆ. ಬೇಗೂರು ಗಂಗರ ಕಾಲದ ಮುಖ್ಯ ಆಡಳಿತ ವಿಭಾಗವಾಗಿದ್ದಷ್ಟೇ ಅಲ್ಲದೆ, ಶೈವಧರ್ಮದ ಕೇಂದ್ರವಾಗಿತ್ತು ಎಂದು ಹೇಳಬಹುದು. ಕ್ರಿ.ಶ.967ರ ಮೂಡಲಪಾಳ್ಯದ ಶಾಸನದಲ್ಲಿ ಕನ್ನರದೇವನ ಕಾಲದಲ್ಲಿ ದುರ್ವಿನೀತನ ಮಗನಾದ ಗಂಗಭೀಮ ತನ್ನ ಹಿರಿಯ ಮಗನು ಮಡಿದಾಗ ದಡಿಗೇಸ್ವರವೆಂಬ ದೇಗುಲವನ್ನು ಕಟ್ಟಿಸಿದ ಉಲ್ಲೇಖವಿದೆ.

ಶೈವದೇವಾಲಯಗಳ ಬಳಿ ಗಂಗರಿಗೆ ಸಂಬಂಧ ಪಟ್ಟ ಶಾಸನಗಳು ದೊರೆತಿವೆ. ಆದರೆ ಈ ಶಾಸನಗಳಲ್ಲಿ ಯಾವುದೇ ದೇವಾಲಯದ ಬಗ್ಗೆ ಉಲ್ಲೇಖವಿಲ್ಲ. ಮಾರೇನಹಳ್ಳಿಯ ಭೀಮೇಶ್ವರ ದೇವಾಲಯದಲ್ಲಿ ಕ್ರಿ.ಶ.735ರ ಶ್ರೀಪುರುಷನ ಕಾಲದ ಶಾಸನವೊಂದು ದೊರೆತಿದೆ.[22] ಚಿಕ್ಕಇಂಡ್ಲವಾಡಿಯ ಆಂಜನೇಯ ದೇವಾಲಯದ ಬಳಿ ಸುಮಾರು ಕ್ರಿ.ಶ.900ರ ಮತ್ತು ಬೊಮ್ಮಂಡಹಳ್ಳಿಯ ಕರಗದ ಗುಡಿ ಬಳಿ ಮತ್ತು ಜಿಗುಣಿಯ ಈಶ್ವರ ದೇವಾಲಯದ ಮೇಲ್ಚಾವಣಿಯಲ್ಲಿ ಸುಮಾರು ಕ್ರಿ.ಶ.900ರ ಶಾಸನಗಳು ದೊರೆತಿವೆ.

ರಾಷ್ಟ್ರಕೂಟರು ಜೈನಧರ್ಮಕ್ಕೆ ಪ್ರೋತ್ಸಾಹವನ್ನು ನೀಡಿದ್ದರೂ ಶೈವ ಮತಾವಲಂಬಿಗಳಾಗಿದ್ದರು. ಮಣ್ಣೆ ತಾಮ್ರಶಾಸನವು ಐದು ಹಲಗೆಗಳಿಂದ ಕೂಡಿದೆ. ಅವುಗಳನ್ನು ಸೇರಿಸಿ ಶಿವಬಿಂಬದ ಮುದ್ರೆಯೊತ್ತಲಾಗಿದೆ. ಈ ಶಾಸನ ಸುಮಾರು ಕ್ರಿ.ಶ.802ಕ್ಕೆ ಸರಿಹೊಂದುತ್ತದೆ. ರಾಷ್ಟ್ರಕೂಟ ಅರಸರು ತಮ್ಮ ವೈಯಕ್ತಿಕ ನಂಬಿಕೆಗನುಸಾರವಾಗಿ ವೈಷ್ಣವ, ಶೈವ ಮತ್ತು ಜೈನಧರ್ಮದ ಅನುಯಾಯಿಗಳಾಗಿದ್ದರು. ಒಟ್ಟಿನಲ್ಲಿ ಸರ್ವಧರ್ಮ ಸಮನ್ವಯತೆಯನ್ನು ಆದರ್ಶವನ್ನಾಗಿಟ್ಟು ಕೊಂಡಿದ್ದರು. ಇವರ ಶಾಸನಗಳ ಮಂಗಳ ಶ್ಲೋಕಗಳಲ್ಲಿ ವಿಷ್ಣು ಮತ್ತು ಶಿವ ಇಬ್ಬರನ್ನೂ ಸ್ತುತಿಸಲಾಗಿದೆ.

ಸಿದ್ದನಹಳ್ಳಿಯಲ್ಲಿ ರಾಷ್ಟ್ರಕೂಟರ ಕಾಲದ ಶಾಸನವೊಂದು ದೊರೆತಿದೆ. ಈ ಶಾಸನದ ಹೆಚ್ಚಿನ ಭಾಗ ತ್ರುಟಿತವಾಗಿದೆ. ಕಣ್ಣಡಿ(ಕನ್ನಡ) ಅರಸನೊಬ್ಬ ಕೈವಾರನಾಡನ್ನು ಆಳುತ್ತಿದ್ದ ವಿಚಾರವಿದೆ. ಹೆಚ್ಚಿನ ವಿವರಗಳು ನಷ್ಟವಾಗಿದೆ.[23] ಚೋಳರು ಶೈವಧರ್ಮದ ಆರಾಧಕರಾಗಿದ್ದರು ಎಂಬುದಕ್ಕೆ

ಶ್ರೀರಾಜೇಂದ್ರ ಚೋಳ ದೇವನ ಮಂತ್ರಿ ಮತ್ತು ದಂಡನಾಯಕನಾಗಿದ್ದ ವಾಮನಯ್ಯನು ಕುಕ್ಕನೂರ ನಾಡಿನಲ್ಲಿ ಸಿದ್ಧೇಶ್ವರ ದೇವಾಲಯವನ್ನು ಕಟ್ಟಿಸಿ ದತ್ತಿ ಬಿಟ್ಟಿದ್ದನು.[24] ತಮಿಳುನಾಡಿನಲ್ಲಿ ಶೈವಮತವನ್ನು ಪ್ರಚಾರ ಮಾಡಿದ ಅರವತ್ತುಮೂರು ಜನ ಶೈವಶರಣರ ಕೆಲವು ಶಾಸನಗಳೂ ನಮ್ಮ ನಾಡಿನಲ್ಲಿ ಕಂಡು ಬರುತ್ತವೆ. ಅಂತಹ ಶರಣರಲ್ಲಿ ಒಬ್ಬರು 'ಸಿರಿಯಾಳ ಸೆಟ್ಟಿ'. ಬೇಗೂರಿನಲ್ಲಿ ದೊರಕುವ ಕ್ರಿ.ಶ.1402ರ ಚೋಳರ ಕಾಲದ ಶಾಸನವೊಂದು ಸಿರಿಯಾಳ ಸೆಟ್ಟಿಯನ್ನು ಉಲ್ಲೇಖಿಸುತ್ತದೆ. "ತಿರುಕುಕಚ್ಚಿನಂಬಿ ತಿರಿಕೊಂಡಸೆಟ್ಟಿ, ಸಿರಿಯಾಳಸೆಟ್ಟಿ ಹೇಮಾಳಸೆಟ್ಟಿ ವಂಶವಿಸ್ತಾರಕರಾದ" ಎಂಬ ಶಾಸನವಾಕ್ಯದಿಂದ ಪ್ರಾಚೀನ ಕರ್ನಾಟಕದ ಕೆಲವು ವರ್ತಕರು ಸಿರಿಯಾಳ ಸೆಟ್ಟಿಯನ್ನು ತಮ್ಮ ಮೂಲಪುರುಷರಲ್ಲಿ ಒಬ್ಬನೆಂದು ಭಾವಿಸಿದ್ದರೆನ್ನಬಹುದು. ನಗರ ಜಿಲ್ಲೆಯ ಶೈವ ಧಾರ್ಮಿಕ ಚಟುವಟಿಕೆಗಳನ್ನು ನೋಡಿದಾಗ ಸ್ಪಷ್ಟವಾಗಿ ಶೈವ ಧರ್ಮವು ಪ್ರಥಮ ಆದ್ಯತೆಯ ಧರ್ಮವಾಗಿದ್ದಿತು ಎಂದು ಹೇಳಬಹುದು.

## ನಾಥಪಂಥ

ನಾಥಪಂಥಕ್ಕೆ ಸಿದ್ಧಮತ, ಸಿದ್ಧಮಾರ್ಗ, ಯೋಗಮಾರ್ಗ, ಅವಧೂತಮಾರ್ಗ, ಅವದೂತ ಸಂಪ್ರದಾಯ, ನಾಥಸಿದ್ಧರ ಪಂಥ ಎಂಬ ಪ್ರತಿನಾಮವಿದೆ. ನಾಥಪಂಥವು ಶೈವಧರ್ಮದ ಅಂಶವನ್ನು ಪ್ರಧಾನವಾಗಿ ಪಡೆದಿದೆ. 'ದಕ್ಷಿಣ ಭಾರತದ ಪ್ರಮುಖ ನಾಥಪಂಥದ ಕ್ಷೇತ್ರವಾದ ಆದಿಚುಂಚನಗಿರಿಯು ಪುರಾತನ ಶೈವಕೇಂದ್ರವಾಗಿ ಕ್ರಿ.ಶ.9ನೆಯ ಶತಮಾನದಲ್ಲಿಯೇ ಅಸ್ತಿತ್ವದಲ್ಲಿದ್ದ ಸಂಗತಿ ಇದುವರೆಗಿನ ಆಧಾರಗಳಿಂದ ಮನವರಿಕೆಯಾಗಿದೆ. ಆದಿಚುಂಚನಗಿರಿಯ ಅಧಿಕೃತ ಗುರುಪರಂಪರೆಯಲ್ಲಿ ಆದಿರುದ್ರ, ಕರ್ಮನಾಥ, ಸಿದ್ಧಯೋಗಿ ಈ ಮೂವರ ನಂತರ ಬಂದ ಶಿವನಾಥನೇ ಕ್ರಿ.ಶ.1029ರ ಶಾಸನದಲ್ಲಿ ಉಕ್ತವಾದ ರೂಪಶಿವ ಎಂಬುವನು ಮೌನಿನಾಥನಿಂದ ದೀಕ್ಷೆ ಹೊಂದಿ, ಉತ್ತರದಿಂದ ದಕ್ಷಿಣಕ್ಕೆ ಬಂದು ಚುಂಚನಗಿರಿ ಪೀಠದ ನಾಲ್ಕನೆಯ ಗುರುವಾಗಿ ಶಿವನಾಥನೆನಿಸಿ ಸಿದ್ಧಪೀಠಾಧಿಪತಿಯಾದನು' ಎಂದು ಕೆ.ರಾಜೇಶ್ವರಿಗೌಡ ಅವರು ಹೇಳಿದ್ದಾರೆ.[25] ಈ ಮೌನಿನಾಥನ ಉಲ್ಲೇಖವಿರುವ ಶಾಸನವು ಬೆಂಗಳೂರು ಜಿಲ್ಲೆಯಲ್ಲಿ ದೊರೆತಿದೆ. ಕ್ರಿ.ಶ.1029ರ ರಾಜೇಂದ್ರದೇವ ಚೋಳನ ಶಾಸನದಲ್ಲಿ 'ಮೌನಿನಾಥ' ಮುನಿಯ ಉಲ್ಲೇಖವಿದೆ.[26] ಮೌನಿನಾಥನನ್ನು ಈ ಶಾಸನ 'ಪರವಾದ್ಯ ದೃಷ್ಯ ನಿಜರುದ್ರರೂಪ' ಎಂದು ವರ್ಣಿಸಿದೆ. ಮೌನಿನಾಥನ ಗುರುಪರಂಪರೆಯನ್ನು ಈ ಶಾಸನ ಮುಂದಿನಂತೆ ತಿಳಿಸುತ್ತದೆ.




ರಾಜೇಂದ್ರ ದೇವಚೋಳನ ಮಂತ್ರಿ ವಾಮನಯ್ಯನು ಈ ಮುನಿಯ ಪರಮಭಕ್ತನಾಗಿದ್ದನು. ಮೌನಿನಾಥ ಮುನಿಯು ಕಾಲವಾದ ನಂತರ 'ಶಿಲಾಮಂಚ ಮತ್ತು ಸಿದ್ಧೇಶ್ವರ ಭವನವನ್ನು' ಕಟ್ಟಿಸಿರುವ ವಿಷಯವನ್ನು ಈ ಶಾಸನ ಹೇಳುತ್ತದೆ. ಅಂದರೆ ಬೆಂಗಳೂರು ಜಿಲ್ಲೆಯ ಭಾಗವೇ ಆಗಿರುವ ನೆಲಮಂಗಲ ತಾಲ್ಲೂಕು ನಾಥಪಂಥದ ಪ್ರಭಾವಕ್ಕೆ ಒಳಗಾಗಿತ್ತು ಎಂಬುದು ಈ ಶಾಸನದ ಮೂಲಕ ವೇದ್ಯವಾಗುತ್ತದೆ.

ನಾಥಪಂಥದಲ್ಲಿ ನವನಾಥ ಮುನಿಗಳಿದ್ದಾರೆ. ಇವರನ್ನು ಮತ್ಸ್ಯೇಂದ್ರನಾಥ, ಗೋರಖ್‌ನಾಥ, ಜಾಲಿಂದ್ರನಾಥ, ಶಾನಿಫ್‌ನಾಥ, ಗೆಯನಿನಾಥ ಎಂಬ ನವನಾಥ ಮುನಿಗಳನ್ನು ಹೆಸರಿಸಬಹುದು. ಇವರು ಮತ್ಸ್ಯ, ವೃಶ್ಚಿಕ, ಅಶ್ವ, ಸರ್ಪ, ಸಿಂಹ, ಯಾಳಿ, ಕರಡಿ, ಕೂರ್ಮ ಹೀಗೆ ವಿಭಿನ್ನ ವಾಹನಗಳ ಮೇಲೆ ಧ್ಯಾನದಲ್ಲಿ ಹುಕ್ಕ ಸೇದುತ್ತಾ ಕುಳಿತಿರುವ ಒಂಬತ್ತು ನಾಥರ ಉಬ್ಬು ಶಿಲ್ಪಗಳು ಬೆಂಗಳೂರಿನಲ್ಲಿ ದೊರೆಕಿವೆ. ಹಲಸೂರಿನ ಸೋಮೇಶ್ವರ ದೇವಸ್ಥಾನದ ಬಿತ್ತಿಯಲ್ಲಿ, ಬೆಂಗಳೂರಿನ ಜಲಕಂಠೇಶ್ವರ ದೇವಸ್ಥಾನದ ತೆರೆದ ಮುಖಮಂಟಪದಲ್ಲಿ ಹಾಗೂ ಬೆಳ್ಳಿ ಬಸವಣ್ಣ ದೇವಸ್ಥಾನದ ಕುಂಬಿ ಗೋಡೆಯಲ್ಲಿ ನವನಾಥರ ಶಿಲ್ಪಗಳನ್ನು ಕಾಣಬಹುದು. ಈ ನವನಾಥರ ಶಿಲ್ಪಗಳು ಒಟ್ಟಾಗಿ ಕಾಣಸಿಗುವುದು ವಿಶೇಷವಾಗಿದೆ.

ಎಸ್.ಕೆ.ಅರುಣಿರವರು ಹೇಳುವಂತೆ, "ನಾಥಪಂಥದ ನವನಾಥ ಅಥವಾ ಒಂಬತ್ತು ನಾಥರ ವರ್ಣನೆ, ಅವರ ಜೀವನ ಶೈಲಿ, ತತ್ತ್ವ ಮತ್ತು ವಾಹನ ಮತ್ತಿತರ ಮೂರ್ತಿಲಕ್ಷಣಗಳ ವಿವರಣೆ ನಮಗೆ ದೊರೆಯುತ್ತದೆ. ಆದರೆ ನವನಾಥರ ಶಿಲ್ಪಗಳನ್ನು ಒಂದೆಡೆ ರಚಿಸಿರುವ ಉದಾಹರಣೆ ಇದುವರೆಗೂ ದೊರಕಿರಲಿಲ್ಲ. ಅಲಸೂರಿನ ಸೋಮೇಶ್ವರ ದೇವಸ್ಥಾನದ ನವರಂಗದ ಹೊರಭಿತ್ತಿಯಲ್ಲಿ ವಿವಿಧ ವಾಹನಗಳ ಮೇಲೆ ಕುಳಿತು ಶೈವ ಸಂಕೇತಗಳ ಒಂಬತ್ತು ನಾಥರಂತಹ ಶಿಲ್ಪಗಳಿವೆ. ಇಲ್ಲಿಯ ಈ ಶಿಲ್ಪಗಳನ್ನು ಅಧ್ಯಯನ ನಡೆಸಿ ಡಾ.ಅನಿಲಾವರ್ಗಿಸ್ ಅವರು ಈ ಒಂಬತ್ತು ಶಿಲ್ಪಗಳ ಮೂರ್ತಿ ಲಕ್ಷಣಗಳನ್ನು ಆಧರಿಸಿ ಇವು ನವನಾಥರ ಶಿಲ್ಪಗಳೆಂದು ಇತ್ತೀಚೆಗೆ ಗುರುತಿಸಿದ್ದಾರೆ. ಸಾಮಾನ್ಯವಾಗಿ ವಿಜಯನಗರ ಕಾಲದಲ್ಲಿ ನಾಥಮುನಿಗಳ ಶಿಲ್ಪಗಳ ರಚನೆ ಅಲ್ಲಲ್ಲಿ

ಕಂಡುಬರುತ್ತವೆ. ಆದರೆ ಒಟ್ಟಿಗೆ ಒಂಬತ್ತು ನಾಥಮುನಿಗಳ ಶಿಲ್ಪಗಳು ರಚಿಸಿರುವ ಉದಾಹರಣೆಗಳು ಸಿಕ್ಕಿಲ್ಲ. ಆದರೆ ಒಟ್ಟಾಗಿ ನವನಾಥರ ಶಿಲ್ಪಗಳನ್ನು ರಚಿಸಿರುವ ಪ್ರಥಮ ಉದಾಹರಣೆ ಅಲಸೂರಿನ ಸೋಮೇಶ್ವರ ದೇವಸ್ಥಾನದ ಬಿತ್ತಿಯಲ್ಲಿರುವ ನವನಾಥರ ಶಿಲ್ಪಗಳು" ಎಂದು ಅಭಿಪ್ರಾಯಿಸಿದ್ದಾರೆ.[27] ಹೀಗೆ ಕ್ರಿ.ಶ.9–10ನೇ ಶತಮಾನದಿಂದ ಇಂದಿನವರೆಗೂ ಬೆಂಗಳೂರಿನಲ್ಲಿ ಶೈವ ಧರ್ಮದ ಶಾಖೆಯಾದ ನಾಥಪಂಥವು ಪ್ರಚಲಿತದಲ್ಲಿರುವುದನ್ನು ಗುರುತಿಸಬಹುದು.

## ಶಾಕ್ತಪಂಥ

ಮಾತೃದೈವ ಪರಿಕಲ್ಪನೆ ಮನುಷ್ಯನಲ್ಲಿ ಆದಿಯಿಂದಲೇ ಬೆಳೆದು ಬಂದಿದೆ. ಮನುಷ್ಯನ ಬದುಕಿನ ಆಗು–ಹೋಗುಗಳಿಗೆ ಸ್ತ್ರೀ ಪ್ರೇರಕ ಶಕ್ತಿಯೆಂದು ನಂಬಿದ್ದರಿಂದ ಹೆಣ್ಣನ್ನು ಶಕ್ತಿಯ ಮೂಲ, ಆದಿಶಕ್ತಿ, ಜಗನ್ಮಾತೆ ಎಂದು ಭಾವಿಸಿದ್ದರು. ಭಯ–ಭಕ್ತಿಯಿಂದ ಮಾತೃದೇವತಾರಾಧನೆ ನಡೆಸಿಕೊಂಡು ಬಂದರು. ಶಕ್ತಿಯ ಆರಾಧಕರಿಗೆ 'ಶಾಕ್ತರು' ಎಂಬ ಹೆಸರಿದೆ. ಶಾಕ್ತರ 'ಪಂಚಮಕಾರ' ಪೂಜೆಯ ಐದು ಅಂಗಗಳು ಹೀಗಿವೆ. ಮಾಂಸ(ಮಾಂಸಾಹಾರ), ಮೈಥುನ(ಸ್ತ್ರೀಸಂಗ), ಮತ್ಸ್ಯ(ಮೀನು ತಿನ್ನುವುದು), ಮದ್ಯ(ಮದ್ಯಸೇವನೆ), ಮುದ್ರ(ಹಸ್ತವಿಧಿ) ಈ ಎಲ್ಲಾ ಮಾನವ ಸಹಜ ಕ್ರಿಯೆಗಳೂ ಪೂಜಾವಿಧಿಗಳಾಗುತ್ತವೆ. ಈ ಪಂಥ ಇಂದು ಅಷ್ಟಾಗಿ ಉಳಿದಿಲ್ಲ. ಬದಲಾದ ಸ್ವರೂಪದೊಂದಿಗೆ ಕೆಲವು ಕಡೆ ಅಸ್ತಿತ್ವದಲ್ಲಿದೆ.

ವೈದಿಕ ಸಂಸ್ಕೃತಿ ಹರಡುವುದಕ್ಕೆ ಮೊದಲೇ ಭಾರತದಲ್ಲಿ ಶಕ್ತಿಪಂಥವಿತ್ತು. ಶಕ್ತಿ ಪೂಜೆ ನಡೆಯುತ್ತಿದ್ದುದಕ್ಕೆ ಆಧಾರಗಳಿವೆ. ಡಾ.ಶಶಿಭೂಷಣ್ ದಾಸ್ ಗುಪ್ತ ಅವರು 'Evolution of mother worship in India' ಎನ್ನುವ ಲೇಖನದಲ್ಲಿ ಹೀಗೆ ಹೇಳಿದ್ದಾರೆ, "ಮಾನವಶಾಸ್ತ್ರಜ್ಞರ (anthropologists) ಅಭಿಪ್ರಾಯದಂತೆ ಮಾನವರ ಎಲ್ಲ ಧಾರ್ಮಿಕ ಕ್ರಿಯೆಗಳಿಗೆ ನಾಗರಿಕತೆಯ ಆದಿಯಲ್ಲಿ ಮಾನವನಲ್ಲಿ ಮನೆ ಮಾಡಿಕೊಂಡಿದ್ದ ಭಯಮಿಶ್ರಿತ ಆಶ್ಚರ್ಯವೋ ಇಲ್ಲವೆ ನಮ್ಮ ಅಸಂಸ್ಕೃತ ಅಥವಾ ಸುಸಂಸ್ಕೃತ ಮೌಲ್ಯಗಳೋ ಇವೇ ಚಾಲಕ ಶಕ್ತಿ, ಕೆಲವೊಂದು ಮತಾಚರಣೆಗಳಿಂದ ವಿಧಿವಿಧಾನಗಳಿಂದ ಮಾತೃಪೂಜೆ ತಾಯಿಯೇ ಪ್ರಮುಖ ವ್ಯಕ್ತಿಯಾಗಿದ್ದ ಮಾತೃಮೂಲ ಕುಟುಂಬ ಪದ್ಧತಿಯಿದ್ದ ಸಾಮಾಜಿಕ ಪರಿಸರದಲ್ಲಿ ಒಂದು ಧಾರ್ಮಿಕ ಸಂಪ್ರದಾಯ–ಸಮಾರಂಭವಾಗಿ ಬೆಳೆಯಿತು. ತಾಯಿಗಿದ್ದ ಪ್ರಧಾನ ಸ್ಥಾನಮಾನಗಳೇ ಆಕೆಯನ್ನು ಸಾಮಾಜಿಕ ಹಾಗೂ ಆರ್ಥಿಕ ವ್ಯವಸ್ಥೆಯ ಶಕ್ತಿ ಸಂಕೇತವನ್ನಾಗಿಸಿದ್ದವು. ಇದರಿಂದಾಗಿ ಮಾತೃಮೂಲ ಪದ್ಧತಿಯ ಚೌಕಟ್ಟಿನೊಳಗಿದ್ದ ಪುರುಷರು ಭಯಾಶ್ಚರ್ಯಗಳಿಂದ ಕೂಡಿದವರಾಗಿ ಒಂದು ಅಲೌಕಿಕ ಶಕ್ತಿಯನ್ನು ರೂಪಿಸಿಕೊಳ್ಳಲಾರಂಭಿಸಿದಾಗ ಸಹಜವಾಗಿಯೇ ಆ ಶಕ್ತಿಯನ್ನು

ಮಾತೃಶಕ್ತಿಯಾಗಿ ರೂಪಿಸಿಕೊಂಡರು"[28] ಹಿಂದೂ ಧರ್ಮದ ಶಕ್ತಿಯುತ ಮತ್ತು ವ್ಯಾಪಕ ಪ್ರಸಾರದ ಮತಗಳಲ್ಲಿ ಒಂದಾದ ಶಾಕ್ತ ಪಂಥವು ಒಂದು ಕಾಲದಲ್ಲಿ ಈ ದೇಶದ ಬಹು ಭಾಗವನ್ನು ವ್ಯಾಪಿಸಿತ್ತು. ಈ ಮತದ ಆರಾಧ್ಯ ದೇವತೆ ಅಥವಾ ಶಕ್ತಿ. ಆರ್ಯರ ಆಗಮನ ಪೂರ್ವದಿಂದಲೂ ದೇವಿಯ ಉಪಾಸನೆ ಇದ್ದಿತೆಂದೂ, ಈಗ ಪ್ರಚಾರದಲ್ಲಿರುವ ಶಾಕ್ತಮತ ಒಂದಿಲ್ಲೊಂದು ರೂಪದಿಂದ ನಡೆಯುತ್ತ ಬಂದಿದೆ.[29] ಆರ್ಯರು ಭಾರತಕ್ಕೆ ಬಂದ ಮೇಲೆ ಆರ್ಯ ದ್ರಾವಿಡ ಸಂಪ್ರದಾಯಗಳೆರಡೂ ಸಂಗಮಿಸಿದವರು. ಆದರೂ ಮಾತೃ ದೇವತೆಗಳ ಪೂಜೆಯಲ್ಲಿ ಆರ್ಯ ದ್ರಾವಿಡ ಪದ್ಧತಿಗಳ ಭಿನ್ನತೆಯನ್ನು ಈಗಲೂ ಗಮನಿಸಬಹುದು. ಆರ್ಯರ ದೇವತಾಸ್ತುತಿಗಳಲ್ಲಿ ದ್ರಾವಿಡರ ಗ್ರಾಮದೇವತೆಗಳ ಹೆಸರಿಲ್ಲ. ಅಲ್ಲದೆ 'ಬಲಿ'ಗೆ ಪ್ರಾಧಾನ್ಯವಿಲ್ಲ. ಪಶುಬಲಿಗೆ ಬದಲಾಗಿ ನಿಂಬೆಹಣ್ಣು, ಕುಂಬಳಕಾಯಿ, ವಿವಿಧ ರೀತಿಯ ಅನ್ನ ಉಪಯೋಗಿಸಲ್ಪಡುತ್ತದೆ.

ಆರ್ಯರ ಮಾತೃಪೂಜೆ ಹೆಚ್ಚು ಸಾತ್ವಿಕ, ದ್ರಾವಿಡರ ದೇವತೆಗಳೂ ಒಂದು ರೀತಿಯ ಸಂಸ್ಕೃತೀಕರಣಕ್ಕೆ ಒಳಗಾಗಿ ಬಯಲಿನಲ್ಲಿದ್ದ ಕಲ್ಲು, ಮರಗಳಿಂದ ಹೊರಬಂದು ದೇವಾಲಯಗಳಲ್ಲಿ ಮೂರ್ತಿಗಳಾಗಿ ನೆಲೆಸಿದವು. ಲಕ್ಷ್ಮೀ ಪಾರ್ವತಿ, ಸರಸ್ವತಿಯರ ಜೊತೆಗೆ ಚಂಡಿ, ಚಾಮುಂಡಿ, ಕಾಳಿ, ದುರ್ಗೆಯರೂ ಸೇರಿದರು(ಕಾಳಿ ತಂತ್ರಪೂಜೆಯ ಸರಸ್ವತೀ ಇವರು ಮೂಲತಃ ಬೌದ್ಧ ದೇವತೆಗಳೆಂಬ ಭಾವನೆಯೂ ಇದೆ). ಜಗತ್ತಿನ ಕ್ರಿಯಾಶಕ್ತಿ, ಚಾಲಕಶಕ್ತಿ, ಪ್ರೇರಕಶಕ್ತಿ, ಪಾಲಕಶಕ್ತಿ, ಮಾತೃಶಕ್ತಿ ಎಂಬುದನ್ನರಿತ ಮಾನವ ಮಾತೃಪೂಜೆಗೆ ಅಗ್ರಸ್ಥಾನವನ್ನಿತ್ತಿದ್ದಾನೆ.[30] ಕರ್ನಾಟಕದಲ್ಲಿ ಗಂಗರ ಕಾಲದಿಂದಲೂ ಶಾಕ್ತಪಂಥ ಅಸ್ತಿತ್ವದಲ್ಲಿತ್ತು ಎಂಬುದಕ್ಕೆ ದೊರಕುವ ಶಕ್ತಿದೇವತೆಗಳ ವಿಗ್ರಹಗಳು ಮತ್ತು ಸಪ್ತಮಾತೃಕೆಯರ ವಿಗ್ರಹಗಳು ಸಾಕ್ಷಿಯಾಗಿವೆ. ಬೆಂಗಳೂರು ನಗರಜಿಲ್ಲೆಯಲ್ಲಿ ಗಂಗರ ಕಾಲಕ್ಕೆ ಸೇರಿರುವ ಶಕ್ತಿದೇವತೆಯಾದ ಮಹಿಷಮರ್ದಿನಿ ಹಾಗೂ ಸಪ್ತಮಾತೃಕೆಯರ ವಿಗ್ರಹಗಳು ದೊರೆಯುತ್ತವೆ. ಅಂದಮೇಲೆ ಬೆಂಗಳೂರಿನಲ್ಲಿ ಶಾಕ್ತಪಂಥ ಅಸ್ತಿತ್ವದಲ್ಲಿತ್ತು ಎಂಬುದು ಸ್ಪಷ್ಟವಾಗುತ್ತದೆ.

ಬೇಗೂರಿನಲ್ಲಿರುವ ನಗರೇಶ್ವರ ದೇವಾಲಯದಲ್ಲಿ ಮಹಿಷಮರ್ದಿನಿಯ ವಿಗ್ರಹವಿದೆ. ಈ ವಿಗ್ರಹ ಸುಮಾರು ಕ್ರಿ.ಶ.900 ಕಾಲದ್ದು. ಸೌಂದರ್ಯದ ದೃಷ್ಟಿಯಿಂದ ಸುಂದರವಾಗಿರುವ ಮಹಿಷಮರ್ದಿನಿ ವಿಗ್ರಹದಲ್ಲಿ ಸಿಂಹವನ್ನು ಬಿಡಿಸಲಾಗಿದೆ. ಸಿಂಹವು ಶತ್ರುವಿನ ಮೇಲೆ ಬಿದ್ದಿರುವಂತೆ ಕೆತ್ತಲಾಗಿದೆ. ಬಲಗಾಲನ್ನು ಕೋಣದ ಬೆನ್ನ ಮೇಲಿಟ್ಟು ತುಳಿಯುತ್ತಾ ಇನ್ನೊಂದು ಕಾಲನ್ನು ನೆಲದ ಮೇಲೆ ಇಟ್ಟಿದೆ. ದುರ್ಗಿಯ ದೃಷ್ಟಿ ಮಹಿಷನ ಮೇಲಿರದೆ ಎದುರಿಗೆ ನೇರವಾಗಿದೆ. ಶಿವನ ದೇವಾಲಯಗಳಲ್ಲಿ ಈ ಶಕ್ತಿದೇವರ ಉಪಸ್ಥಿತಿ ಇರುವುದನ್ನು ಗಮನಿಸಬಹುದು. ಮಣ್ಣೆಯ

ಶಾಸನವೊಂದರಲ್ಲಿ ದೇವಿಯನ್ನು ವೈಖಾಸನ ಪದ್ಧತಿಯಲ್ಲಿ ಪೂಜಿಸಬೇಕೆಂದು ತಿಳಿಸಿ ಅದಕ್ಕಾಗಿ ಕೆಲವು ದಾನಗಳನ್ನು ನೀಡಿದ್ದಾರೆ.

## ಸಪ್ತಮಾತೃಕೆಯರು

ಕರ್ನಾಟಕದಲ್ಲಿ ಗಂಗರ ಕಾಲದಿಂದಲೂ ಸಪ್ತಮಾತೃಕೆಯರ ಆರಾಧನೆ ಕಂಡು ಬರುತ್ತದೆ. ಸಪ್ತಮಾತೃಕೆಯರೆಂದರೆ ಬ್ರಾಹ್ಮೀ, ಮಾಹೇಶ್ವರೀ, ಕೌಮಾರೀ, ವೈಷ್ಣವೀ, ವಾರಹೀ, ಇಂದ್ರಾಣೀ, ಚಾಮುಂಡಿ ಎಂಬ ದೇವತೆಗಳನ್ನು ಹೆಸರಿಸಲಾಗುತ್ತದೆ. ದೇವರಕೊಂಡಾರೆಡ್ಡಿಯವರು ತಲಕಾಡಿನ ಗಂಗರ ದೇವಾಲಯಗಳು ಕೃತಿಯಲ್ಲಿ ಈ ರೀತಿ ಹೇಳುತ್ತಾರೆ, ಸಪ್ತಮಾತೃಕಾ ಶಿಲ್ಪಗಳು ಬಿಡಿಯಾಗಿ ಒರಟು ಕಲ್ಲಿನ ಮೂರ್ತಿಗಳಾಗಿರುವುದನ್ನು ಕಾಣುತ್ತೇವೆ. ಕಲ್ಲಿನ ಅಳತೆ, ಆಕಾರಕ್ಕೆ ತಕ್ಕಂತೆ ಮೂರ್ತಿಯ ಗಾತ್ರ ಮತ್ತು ಅಂಗಾಂಗಳ ವಿನ್ಯಾಸವು ಅವಲಂಬಿಸಿರುತ್ತದೆ. ಚಾಮುಂಡಿಯನ್ನುಳಿದು ಇತರ ವಿಗ್ರಹಗಳು ಒಂದು ಅಥವಾ ಒಂದೂವರೆ ಅಡಿ ಎತ್ತರದ ವಿಗ್ರಹಗಳಾಗಿರುತ್ತವೆ. ಈ ವಿಗ್ರಹಗಳು ಕರ್ನಾಟಕದ ಬೆಂಗಳೂರು, ಮೈಸೂರು, ಮಂಡ್ಯ, ಕೋಲಾರ ಜಿಲ್ಲೆಗಳಲ್ಲಿಯೇ ಅಲ್ಲದೆ ತಮಿಳುನಾಡಿನ ಧರ್ಮಪುರಿ ಮತ್ತು ಸೇಲಂ ಜಿಲ್ಲೆಗಳಲ್ಲಿಯೂ ಕಾಣಸಿಗುತ್ತವೆ. ಹುನಗುಂದ, ಬೀಚಗೊಂಡನಹಳ್ಳಿ, ಮಡಿವಾಳ, ಹಾಸನ, ಸುತ್ತೂರು, ಕೋಲಾರ, ಬೆಂಗಳೂರು, ದೊಡ್ಡಬೇಗೂರು ಮುಂತಾದ ಊರುಗಳಲ್ಲಿ ಪ್ರತ್ಯೇಕ ದೇವಾಲಯಗಳನ್ನು ಕಾಣಬಹುದಾಗಿದೆ ಎಂದು ಅಭಿಪ್ರಾಯಿಸಿದ್ದಾರೆ.[31] ಈ ಸಪ್ತಮಾತೃಕೆಯರ ವಿಗ್ರಹಗಳು ಒಟ್ಟಿಗೆ ಒಂದೇ ಪಟ್ಟಿಕೆಯಲ್ಲಿಯೂ ಕಾಣಸಿಗುತ್ತವೆ. ಹಾಗೂ ಪ್ರತ್ಯೇಕ ವಿಗ್ರಹಗಳಾಗಿಯು ಇರುವುದು ಕಾಣಸಿಗುತ್ತದೆ.

ಈ ಸಪ್ತಮಾತೃಕೆಯರನ್ನು ಜನರು ತಮ್ಮ ಪ್ರಾದೇಶಿಕತೆಯ ಹಿನ್ನೆಲೆಯಲ್ಲಿ ಕರೆದುಕೊಳ್ಳುವುದುಂಟು. ಕೆಲವು ಕಡೆ ಎಲ್ಲಾ ಮಾತೃಕೆಯರನ್ನು ಪೂಜಿಸದಿದ್ದರೂ, ಒಂದು ಮಾತೃಕೆಯೂ ಪೂಜೆಗೆ ಒಳಗಾಗುವ ಉದಾಹರಣೆಗಳಿವೆ. ಗಂಗರ ಕಾಲದ ಬೇಗೂರಿನ ನಾಗೇಶ್ವರ ದೇವಾಲಯದ ಗರ್ಭಗುಡಿಯ ಬಲಭಾಗದಲ್ಲಿ ಸಪ್ತಮಾತೃಕೆಯರ ವಿಗ್ರಹಗಳಿವೆ. ಗುಟ್ಟಹಳ್ಳಿಯಲ್ಲಿರುವ ಗವಿಗಂಗಾಧರೇಶ್ವರ ದೇವಾಲಯದ ಮೂರನೆಯ ಪ್ರಾಕಾರದಲ್ಲಿ ಸಪ್ತಮಾತೃಕೆಯರ ವಿಗ್ರಹಗಳಿವೆ. ಬೆಂಗಳೂರು ಉತ್ತರ ತಾಲೂಕಿಗೆ ಸೇರುವ ಚಿಕ್ಕಜಾಲದಲ್ಲಿರುವ ಕ್ರಿ.ಶ. ಸುಮಾರು ಹದಿನೆಂಟನೆ ಶತಮಾನಕ್ಕೆ ಸೇರುವ ಅಕ್ಕಯ್ಯಮ್ಮನ ದೇವಸ್ಥಾನದಲ್ಲಿ ಸಪ್ತಮಾತೃಕೆಯರ ವಿಗ್ರಹಗಳಿವೆ. ಬೆಂಗಳೂರು ದಕ್ಷಿಣ ತಾಲೂಕು ಕೆಂಗೇರಿಯಲ್ಲಿ ಸುಮಾರು 16ನೇ ಶತಮಾನಕ್ಕೆ ಸೇರುವ ಮಾರ್ಗದಮ್ಮ ದೇವಾಲಯ, ಹಾಗೂ ಯಲ್ಲಮ್ಮನ ದೇವಾಲಯವಿದೆ. ಬಸವನಗುಡಿಯಲ್ಲಿ ಕ್ರಿ.ಶ.16ನೇ ಶತಮಾನದ ಯಲಹಂಕ ನಾಡಪ್ರಭುಗಳ ಕಾಲದ ಶ್ರೀ ಪಾರ್ವತಿ ದೇವಾಲಯವಿದೆ.

ಹೀಗೆ ದೇವಾಲಯದಲ್ಲಿ ಪಾರ್ವತಿ, ಮೀನಾಕ್ಷಿ ಮೊದಲಾದ ಹೆಸರುಗಳಿಂದ ಆರಾಧನೆಗೆ ಒಳಗಾಗುವುದು ಒಂದು ಕಡೆಯಾದರೆ, ಊರನ್ನು ಕಾಯುವ ಗ್ರಾಮದೇವತೆಗಳಾಗಿ ಅಣ್ಣಮ್ಮ, ಮಾರಮ್ಮ, ಮುಳಕಟ್ಟಮ್ಮ, ಯಲ್ಲಮ್ಮ ಮುಂತಾದ ಹೆಸರಿನಲ್ಲಿ ಮಾತೃದೇವತಾರಾಧನೆ ಇಂದಿಗೂ ಅಸ್ತಿತ್ವದಲ್ಲಿದೆ.

## ವೈಷ್ಣವ ಧರ್ಮ

ವೈಷ್ಣವ ಧರ್ಮದ ಆರಾಧ್ಯ ದೈವ ವಿಷ್ಣು. ಕರ್ನಾಟಕದ ವೈಷ್ಣವ ಧರ್ಮದಲ್ಲಿ ಪ್ರಮುಖವಾಗಿ ಮೂರು ಸೆಲೆಗಳು ಬೆಳೆದು ಬಂದಿರುವುದನ್ನು ಕಾಣಬಹುದು. ಮೊದಲನೆಯದು ವೈದಿಕ–ಭಾಗವತ ಮೂಲದ ವೈಷ್ಣವ ಧರ್ಮ ಕ್ರಿಸ್ತಶಕದ ಮೊದಲ ಹತ್ತು ಅಥವಾ ಹನ್ನೊಂದು ಶತಕಗಳಲ್ಲಿ ಪ್ರಚಾರವಾಗಿದ್ದಿರಬೇಕು. ಎರಡನೆಯದು ರಾಮಾನುಜರು ಕರ್ನಾಟಕಕ್ಕೆ ಬರುವ ಮೊದಲೇ ಅಲ್ಪ ಸ್ವಲ್ಪ ಮಟ್ಟಿಗೆ ಪರಿಚಿತವಾಗಿದ್ದ ಆಳ್ವಾರರ ವೈಷ್ಣವಧರ್ಮ. ಅವರ ಆಗಮನದೊಂದಿಗೆ ಶ್ರೀವೈಷ್ಣವಧರ್ಮ ಹನ್ನೊಂದು–ಹನ್ನೆರಡನೆಯ ಶತಮಾನದಲ್ಲಿ ಹೆಚ್ಚು ಪ್ರಚಾರವನ್ನು ಪಡೆದು ಮುಂದೆ ವೈಭವದಿಂದ ಬೆಳೆಯಿತು. ಮೂರನೆಯದು ಕರ್ನಾಟಕದ ದಕ್ಷಿಣ ಕನ್ನಡ ಪ್ರಾಂತ್ಯದಿಂದ ಹುಟ್ಟಿಬಂದ ಮಧ್ವಾಚಾರ್ಯರಿಂದ (ಕ್ರಿ.ಶ. ಹದಿಮೂರನೆಯ ಶತಮಾನ) ಬೆಳೆದು ಬಂದ ಮಾಧ್ವ ಸಂಪ್ರದಾಯ, ಮುಂದೆ ಹರಿದಾಸ ಪರಂಪರೆಯಾಗಿ ಸಮೃದ್ಧವಾಗಿ ಬೆಳೆಯಿತು.[32] ವೈಷ್ಣವ ಧರ್ಮದ ಈ ಮೂರೂ ಪರಂಪರೆಗಳು ಒಂದರೊಳಗೊಂದು ಸೇರಿಕೊಂಡು ಇಂದಿಗೂ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡುಬಂದಿದೆ.

ರಾಮಾನುಜಾಚಾರ್ಯರು ಕರ್ನಾಟಕಕ್ಕೆ ಬರುವ ಮೊದಲೇ ಶ್ರೀವೈಷ್ಣವ ಧರ್ಮ ಅಸ್ತಿತ್ವದಲ್ಲಿತ್ತು. ‘ಶ್ರೀರಾಮಾನುಜಾಚಾರ್ಯರು ಕರ್ನಾಟಕಕ್ಕೆ ಕ್ರಿ.ಶ. 1138–39ರಲ್ಲಿ ಆಗಮಿಸಿದರೆಂದೂ, ಅವರು ಹನ್ನೆರಡು ವರ್ಷಗಳ ಕಾಲ ಮೇಲುಕೋಟೆಯಲ್ಲಿ ನೆಲೆಸಿ ಕ್ರಿ.ಶ.1170ರ ಸುಮಾರಿಗೆ ಆಚಾರ್ಯರು ಶ್ರೀರಂಗಕ್ಕೆ ಹಿಂದಿರುಗಿದರೆಂದೂ’[33] ವಿದ್ವಾಂಸರು ನಿರ್ಧರಿಸಿದ್ದಾರೆ. ಹಾಗಾಗಿ ದಕ್ಷಿಣ ಕರ್ನಾಟಕದಲ್ಲಿ ವೈಷ್ಣವಧರ್ಮವು ಹೆಚ್ಚಾಗಿ ಜನಪ್ರಿಯವಾದದ್ದು, ರಾಮಾನುಜಾಚಾರ್ಯರು ಮತ್ತು ಮಧ್ವಾಚಾರ್ಯರ ಕಾಲದಲ್ಲಿ. ರಾಮಾನುಜಾಚಾರ್ಯರ ಪ್ರಭಾವದಿಂದ ಹೊಯ್ಸಳರ ಕಾಲದಲ್ಲಿ ಹಲವಾರು ವಿಷ್ಣುವಿನ ದೇವಾಲಯಗಳು ಸ್ಥಾಪನೆಯಾದವು. ಬೆಂಗಳೂರಿನ ಪ್ರದೇಶದಲ್ಲೂ ರಾಮಾನುಜಾಚಾರ್ಯರ ಪ್ರಭಾವವಿತ್ತು ಎಂಬುದಕ್ಕೆ ದೊರಕಿರುವ ಶಾಸನಗಳು ಸಾಕ್ಷಿಯಾಗಿವೆ. ಹಾಗೂ ಇವರ ಕಾಲದಲ್ಲಿ ಹಲವು ವಿಷ್ಣುವಿನ ದೇವಾಲಯಗಳು ಬೆಂಗಳೂರಿನಲ್ಲಿ ನಿರ್ಮಾಣವಾಗಿವೆ. ಬನ್ನೇರುಘಟ್ಟದ ದಾಮೋದರ ದೇವಾಲಯ(ಚಂಪಕಧಾಮ), ದೊಮ್ಮಲೂರಿನ ಚೊಕ್ಕನಾಥ ದೇವಾಲಯ, ಕೋಟೆ ವೆಂಕಟರಮಣ ದೇವಾಲಯ ಮೊದಲಾದ

ದೇವಾಲಯಗಳು ನಿರ್ಮಾಣವಾಗಿವೆ. ಹೊಯ್ಸಳ, ವಿಜಯನಗರದ ಅರಸರ ಕಾಲದಲ್ಲಿ ದೊಮ್ಮಲೂರು ಮತ್ತು ಬನ್ನೇರುಘಟ್ಟ ವೈಷ್ಣವ ಕೇಂದ್ರಗಳಾಗಿದ್ದವು.

ಕ್ರಿ.ಶ.1530ರ ಶಾಸನವೊಂದರಲ್ಲಿ ಸಿವನಸಮುದ್ರದ ಸ್ತಲಕ್ಕೆ ಸಲುವ ಹಾರೋಹಳ್ಳಿ ಗ್ರಾಮವನ್ನು ಸಿಂಗಾಪುರದ ತಿರುವೆಂಗಳನಾತನ ಅಂಗರಂಗ ವೈಭೋಗ ಅಮೃತಪಡಿ ನೈವೇದ್ಯಕ್ಕೆ, ರಾಮನುಜ ಕೂಟಕ್ಕೆ ದಾನನೀಡಲಾಗಿದೆ.[34] ಮತ್ತೊಂದು ಶಾಸನ ಚಿಕ್ಕಬೆಟ್ಟಹಳ್ಳಿ ಗ್ರಾಮದ ಹನುಮಂತ ದೇವಾಲಯದ ಬಲಗಡೆ ದೊರಕಿರುವ ಶಾಸನದ ಪ್ರಕಾರ, ಸಿಂಗಪನಾಯಕರು ಸಿಂಗಾಪುರದಲ್ಲಿರುವಂತಹ ದೇವರ ಅಮೃತಪಡಿಯ ನೈವೇದ್ಯಕ್ಕೆ ಮತ್ತು ರಾಮಾನುಜಕೂಟಕ್ಕೆ ಬೆಟ್ಟಹಳ್ಳಿಯನ್ನು ದಾನ ನೀಡಿದ್ದಾನೆ.[35] 'ಶ್ರೀವೈಷ್ಣವ ದೇವಾಲಯಗಳು ಹಾಗೂ ಮಠಗಳಿಗೆ ಹೊಂದಿಕೊಂಡಂತೆ ರಾಮಾನುಜಕೂಟಗಳಿರುತ್ತಿದ್ದವು. ಶ್ರೀವೈಷ್ಣವರು ತಂಗಲು ಹಾಗೂ ಅವರಿಗೆ ಆಹಾರ ಒದಗಿಸಲು ನಿರ್ಮಾಣಗೊಂಡಂಥ ಮನೆಗಳಿವು ಎಂದು ತಿಳಿದುಬರುತ್ತದೆ.'[36] ಕ್ರಿ.ಶ.1879ರ ಬಿಳಕನಹಳ್ಳಿ ಗ್ರಾಮದಲ್ಲಿ ಬೃಂದಾವನದ ಮೇಲೆ ಇರುವ ಶಾಸನವು 'ಶ್ರೀಮತೇ ರಾಮಾನುಜಾಚಾರ್ಯನಮಃ' ಎಂದು ಪ್ರಾರಂಭವಾಗುತ್ತದೆ. ತೆಲುಗು ಶಾಸನವಾಗಿದ್ದು, 'ಶ್ರೀಮದ್ವೇದಮಾರ್ಗ ಪ್ರತಿಷ್ಠಾಪನಾಚಾರ್ಯೋ ತಿರುಕೋವಿಲೂರು ಯತಿರಾಜಸ್ವಾಮಿ, ತ್ರಿಶಿರಪುರಂ ತೊರಯೂರ ಪೋಲಿಸೆಟ್ಟಿ ಮಗ ಕೃಷ್ಣಪ್ಪನಾಯಕನ ಮಗ ನಾರಸಿಂಹುಲ ನಾಯನಿಯ ಅಣ್ಣ ಸುಬ್ಬರಾಯಲು ನಾಯ್ಡು' ಇವರುಗಳ ಉಲ್ಲೇಖವಿದೆ.[37]

## ವೀರಶೈವ ಧರ್ಮ

ಕರ್ನಾಟಕದ ಪ್ರಮುಖ ಧರ್ಮಗಳಲ್ಲಿ ಒಂದಾಗಿರುವ ವೀರಶೈವ ಧರ್ಮವು ಕರ್ನಾಟಕದಲ್ಲೇ ರೂಪುಗೊಂಡ ಪ್ರಾದೇಶಿಕ ಧರ್ಮವಾಗಿದೆ. ಬಸವಣ್ಣನ ಕಾಲದಲ್ಲಿ ನಡೆದ ವಚನ ಚಳವಳಿಯು ವೀರ ಶೈವಧರ್ಮದ ಸ್ಥಾಪನೆಯಲ್ಲಿ ಪ್ರಮುಖ ಪಾತ್ರವಹಿಸಿದೆ. ಶೈವ ಮತದಿಂದ ಒಡಮೂಡಿ ವೈದಿಕ ಧರ್ಮದ ಚಿಂತನೆಗಳ ವಿರೋಧವಾಗಿ ಹುಟ್ಟಿಕೊಂಡಿದ್ದೇ ವೀರಶೈವಧರ್ಮ. ವೀರಶೈವ ಮತವನ್ನು ಶಿವಾದ್ವೈತ ಮಾಹೇಶ್ವರ ಮತ, ಲಿಂಗಾಯತ ಮತ, ಷಟ್‌ಸ್ಥಲ ಸಿದ್ದಾಂತ ಮತ, ಶಿವ ಮತ, ಶಿವಧರ್ಮ, ಶಕ್ತಿ ವಿಶಿಷ್ಟಾದ್ವೈತ ಎಂಬ ಪರ್ಯಾಯ ಹೆಸರುಗಳಿಂದ ಕರೆಯುವುದು ರೂಢಿಯಲ್ಲಿದೆ. ಬಿಜ್ಜಳನ ಕಾಲದಲ್ಲಿ ಸ್ಥಾಪಿತವಾದ ವೀರಶೈವ ಧರ್ಮವು 12ನೇ ಶತಮಾನಕ್ಕಾಗಲೇ ಕರ್ನಾಟಕದಲ್ಲಿ ಸ್ಥಾಪನೆಯಾಗಿತ್ತು. ಮುಂದೆ 14, 15ನೇ ಶತಮಾನದಲ್ಲಿ ಪ್ರವರ್ಧಮಾನಕ್ಕೆ ಬಂದ ಧರ್ಮವು ನಾಡಿನ ಪ್ರಮುಖ ಧರ್ಮಗಳಲ್ಲಿ ಒಂದಾಗಿ ಉಳಿದಿದೆ. ಬಹುತೇಕ ಕನ್ನಡ ನಾಡಿನಲ್ಲೇ ರೂಪುಗೊಂಡ ಈ ಧರ್ಮವು ಕಾಲಾನಂತರದಲ್ಲಿ ನೆರೆಯ ಮಹಾರಾಷ್ಟ್ರ, ಆಂಧ್ರಪ್ರದೇಶ ಹಾಗೂ ತಮಿಳು ನಾಡುಗಳಿಗೂ ವ್ಯಾಪಿಸಿತ್ತು. ಈ ಧರ್ಮದ ಜೊತೆಗೆ

ಮಠಗಳು ಅಸ್ತಿತ್ವವನ್ನು ಪಡೆದವು. ಇಂತಹ ಮಠಗಳ ಉಲ್ಲೇಖವಿರುವ ಶಾಸನಗಳು ಬೆಂಗಳೂರಿನ ಸುತ್ತಮುತ್ತಲ ಪ್ರದೇಶದಲ್ಲಿ ದೊರೆತಿವೆ.

ವೀರಶೈವ ಧರ್ಮದ ಆದ್ಯ ಪ್ರವರ್ತಕರಾದ ಬಸವಣ್ಣ ಹಾಗೂ ಶರಣರ ವಿಷಯ ಶಾಸನಗಳಲ್ಲಿ ಉಲ್ಲೇಖವಾಗಿದೆ. ಬೆಂಗಳೂರಿಗೆ ಸುಮಾರು 16 ಕಿಲೋ ಮೀಟರ್ ದೂರದಲ್ಲಿರುವ ದೊಡ್ಡಬಳ್ಳಾಪುರದಲ್ಲಿ ದೊರೆತಿರುವ ಶಾಸನದಲ್ಲಿ ಬಸವಣ್ಣನ ಹೆಸರಿನ ಉಲ್ಲೇಖ ಸಿಗುತ್ತದೆ. ಶ್ರೀ ವೀರಬಲ್ಲಾಳನ ಹೆಸರಿನೊಂದಿಗೆ ಶಾಸನ ಆರಂಭವಾಗುತ್ತದೆ. ಬಿಜ್ಜಳನ ಕಾಲದಲ್ಲಿದ್ದ ಬಸವಣ್ಣನ ಪ್ರಭಾವವು ಹೊಯ್ಸಳರ ಕಾಲದಲ್ಲೂ ಮುಂದುವರಿದಿತ್ತು. "ಬಸಪ(ವ)ಣ ವಾಕ್ಯ ಸರಣರ ವಾಕ್ಯ – ಪ್ರಭುವಿನ ವಾಕ್ಯ ಪರಮೇಶ್ವರ ಗಂಗಾಧರವಾಕ್ಯಗಳು ವೀರಸಿಂಗೇಶ್ವರ......" ಎಂದಿದೆ.[38]

ಬೆಂಗಳೂರು ನಗರದ ಪೂರ್ವಭಾಗದ ವಿಮಾನ ಕಾರ್ಖಾನೆಗೆ ಸಮೀಪವಿರುವ 'ವಿಭೂತಿಪುರ'ದಲ್ಲಿ ವೀರಶೈವಮಠವಿದೆ. ಈ ಮಠವು ವೀರಬಲ್ಲಾಳ(ಇಮ್ಮಡಿಬಲ್ಲಾಳ)ನ ಕಾಲಕ್ಕಾಗಲೇ ಪ್ರಾರಂಭವಾಗಿರಬಹುದು. ವಿಭೂತಿಪುರ ಮಠದಲ್ಲಿ ದೊರೆತ ತಮಿಳು ಶಾಸನವು ಹೊಯ್ಸಳ ಇಮ್ಮಡಿ ಬಲ್ಲಾಳನ ಕಾಲಕ್ಕೆ ಸೇರಿರುವುದರಿಂದ ಹಾಗೂ ಈ ಶಾಸನದಲ್ಲಿ ಉಲ್ಲೇಖವಾಗಿರುವ 'ವಾಚ್ಚಿದೇವರಪುರ' ವಿಭೂತಿಪುರವೇ ಆಗಿದ್ದಿರಬಹುದು. "ತಮಿಳುನಾಡಿನ ಗಡಿಯ ಭಾಗದ ಸೂಳಿಗಿರಿ ಮತ್ತು ಮಾರಂಡಹಳ್ಳಿಯ ನಾಯಕರುಗಳು ಈ ಮಠಕ್ಕೆ ಹಿಂದೆ ಸಾಕಷ್ಟು ದಾನಧರ್ಮಗಳನ್ನು ನೀಡಿದ್ದರು. ತತ್ಫಲವಾಗಿ ಮಠದ ಹೆಸರಿಗೆ ವಿಭೂತಿಪುರ ಜೋಡಿಗ್ರಾಮದ 500 ಎಕರೆಗಳಷ್ಟು ಜಮೀನುಗಳು ಇನಾಮಾಗಿ ಬಂದಿತ್ತು. ಹಾಗೂ ಈ ಮಾತುಗಳಿಗೆ ಪೂರಕವಾಗಿ 1932ರ ಮಠದ ದಾಖಲೆಯೊಂದರಲ್ಲಿ ನಮೂದಾಗಿರುವಂತೆ, ಸದರಿ ಮಠಕ್ಕೆ ಹಿಂದೆ ಬಾಗಲೂರು, ಸೂಳಿಗಿರಿ, ಆನೇಕಲ್ಲು, ಮಾರಂಡಹಳ್ಳಿ ಇವರೇ ಮುಂತಾದ ಪಾಳೆಯಗಾರರು ಉದಾರ ಭೂದಾನ ನೀಡಿದ್ದ ಎಂಟು ಸನ್ನದ್ದುಗಳಿದ್ದವು."[39] ಎಂಬ ವಿಚಾರ ತಿಳಿದು ಬರುತ್ತದೆ.

ವಿಜಯನಗರದ ಅರಸರು ಹಾಗೂ ಅವರ ಸಾಮಂತರಾದ ಯಲಹಂಕ ನಾಡಪ್ರಭುಗಳು ಮತ್ತು ಮೈಸೂರಿನ ಒಡೆಯರು ವೀರಶೈವ ಧರ್ಮವನ್ನು ಪೋಷಿಸಿಕೊಂಡು ಬಂದರು. ಇವರ ಆಳ್ವಿಕೆಗೆ ಬೆಂಗಳೂರು ಒಳಪಟ್ಟಿದ್ದರಿಂದ ವೀರಶೈವಧರ್ಮ ನಗರ ಜಿಲ್ಲೆಯಲ್ಲಿ ನೆಲೆನಿಂತಿತು. ಇಮ್ಮಡಿ ಕೆಂಪೇಗೌಡನು ಸ್ವತಃ ತಾನೇ ಶೂನ್ಯಪರಂಪರೆಯ 22ನೆಯ ಗುರುಗಳಾಗಿದ್ದ ಗಗನದಾರ್ಯರಿಂದ ಶಿವದೀಕ್ಷೆಯನ್ನು ಪಡೆದಿದ್ದನು.[40] ಹಾಗೂ ಅಂದಿನ ವೀರಶೈವ ಗುರುಗಳಾಗಿದ್ದ ನಂಜೇದೇವಪ್ಪ ಅಯ್ಯನವರು ಮತ್ತು ಶಿವಲಿಂಗಾರ್ಯರ ಪುತ್ರ ವೀರಣಾರ್ಯ ಇವರೇ ಮೊದಲಾದ ವೀರಶೈವ ಗುರು ಶ್ರೇಷ್ಠರಿಗೆ ಮಠ–ಮಾನ್ಯಗಳನ್ನು ಕಟ್ಟಿಸಿಕೊಟ್ಟು ಭೂದಾನ ಮಾಡಿದ್ದನು.[41] ಕ್ರಿ.ಶ.1633 ರಲ್ಲಿ

ಇಮ್ಮಡಿ ಕೆಂಪೇಗೌಡನ ಅಯ್ಯನವರಿಗೆ(ಗುರುಗಳಿಗೆ) ಗುಜ್ಜರಿ ವಿಶ್ವನಾಥ ಎಂಬುವನು ಧರ್ಮಾರ್ಥವಾಗಿ ಧರ್ಮಾಶಾಲಾ ಮಠವನ್ನು ಕಟ್ಟಿಸಿ ಕೊಟ್ಟುದಾಗಿ ತಿಳಿಸುತ್ತದೆ.[42] ಧರ್ಮಶಾಲಾ ಮಠವು ಬೆಂಗಳೂರಿನಲ್ಲಿ ಕಾಣಸಿಗುವ ವೀರಶೈವ ಮಠಗಳಲ್ಲೇ ಅತೀ ಪ್ರಾಚೀನ ಮಠವಾಗಿದೆ. ಪ್ರಸ್ತುತ ಈ ಮಠ ಅಸ್ತಿತ್ವದಲ್ಲಿಲ್ಲ. ಈ ಮಠದ ಉಲ್ಲೇಖವಿರುವ ಶಾಸನ ಚಿಕ್ಕಪೇಟೆಯಲ್ಲಿ ದೊರೆತಿರುವುದರಿಂದ ಮಠವು ಅಲ್ಲೇ ಇದ್ದಿರಬಹುದೆಂದು ಹೇಳಬಹುದು.

ಕೆಂಪೇಗೌಡರ ಕಾಲದ ಶಾಸನದಲ್ಲಿ ಚೆನ್ನವೀರದೇವರು ಕಂಬಾಳಮಠದಿಂದ ಕೆಂಪೊಹಳಿಯ ಕೆಂಪೊಡೆಯರಿಗೆ 'ಉರಸುತ್ತ' ಎಂಬ ಬಿರುದನ್ನು ನೀಡಿರುವ ಉಲ್ಲೇಖವಿದೆ. ಇವರ ಕಾಲದ ಶಾಸನವು ಶಿವಗಂಗೆ ಬೆಟ್ಟದ ಮೇಲ್ಗವಿ ಮಠದ ಮೇಲೆ ವೀರಭದ್ರದೇವರಿಗೆ ಹಂಚ್ಚೀಪುರ ಕೆಂಪುನೂಲು ಸಾಂತಪ್ಪನವರ ಕುಮಾರ ವೀರಪ್ಪ ಮಲೆಯಪ್ಪನ ಭಕ್ತಿಗೆ ದೊಡ್ಡಘಂಟೆ ವಂದಕೆ 51 ಸೇರು ಎಂಬ ಉಲ್ಲೇಖವಿದೆ.

ಕ್ರಿ.ಶ.1700ರ ಕಾನಕಾನಹಳ್ಳಿಯ ತಾಮ್ರ ಶಾಸನದಲ್ಲಿ ಮಡಿವಾಳ ಮಾಚಿದೇವ ಮತ್ತು ಬಸವಣ್ಣನ ಉಲ್ಲೇಖವಿದೆ. ತೆಲುಗು ಶಾಸನವಾಗಿದ್ದು ಅಗಸರಿಗೆ ಮಡಿವಾಳ ಮಾಚಿದೇವನು ನಿಯಮಿಸಿಕೊಟ್ಟ ಹಕ್ಕುಗಳನ್ನು ಉಲ್ಲೇಖಿಸುತ್ತದೆ. ಶಾಸನದ ಕೊನೆಗೆ "ಕಲ್ಯಾಣಪಟ್ಣ ಮಂದು ಬಸವೇಶ್ವರ ಸ್ವ(ಸ್ವಾ) ಮುಲುವಾರು ನಿರ್ನಯಂ ಚೇಶಿಂದಿ"[43] ಎಂಬ ಒಕ್ಕಣೆಯಿದೆ. ಇದೇ ಕಾಲಘಟ್ಟದ ಕಾನಕಾನಹಳ್ಳಿಯ ಮತ್ತೊಂದು ತಾಮ್ರ ಶಾಸನದಲ್ಲಿ ಬಸವಣ್ಣನ ಉಲ್ಲೇಖವಿದೆ.[44] ಮಲ್ಲಿಗೆ ಹೂಗಳನ್ನು ನಾವಿದರು ಉಪಯೋಗಿಸಬಾರದು ಎಂಬ ವಿಷಯವಾಗಿ ಹೇಳುತ್ತ "...ಯಿದನ್ನು ಕಲ್ಯಾಣದ ಬ್ಸ(ಬಸ)ವಪ್ಪಾನವರು ಮಾಡಿದ ಶ್ಯಾಸನವೆಂದು ಹೇಳವರು...." ಎಂ.ಎಂ.ಕಲುಬುರ್ಗಿರವರು ಹೇಳುವಂತೆ ಈ ಎರಡು ಶಾಸನಗಳಲ್ಲಿ ಹೇಳಲಾದ ನಿರ್ಣಯಗಳನ್ನು ಬಸವಣ್ಣನವರು ಕೊಟ್ಟಿರಲಿ ಬಿಡಲಿ, ಅಗಸರು ಸಮಾಜದಿಂದ ಆಯವನ್ನು ಸಾಧಿಸುವಲ್ಲಿ, ಸಮಾಜವು ನಾವಿದರ ಹಕ್ಕುಗಳನ್ನು ಸೀಮಿತಗೊಳಿಸುವಲ್ಲಿ ಬಸವಣ್ಣನವರ ಹೆಸರನ್ನು ಬಳಸಿದರೆ ತಮ್ಮ ಮಾತಿಗೆ ಬೆಲೆ ಬರುವುದೆಂದು ಭಾವಿಸಿದುದು ಇದರಿಂದ ವ್ಯಕ್ತವಾಗುತ್ತದೆ ಎಂದು ಅಭಿಪ್ರಾಯಿಸಿದ್ದಾರೆ.[45] ಈ ಎರಡು ಶಾಸನಗಳನ್ನು ಗಮನಿಸಿದರೆ 12ನೇ ಶತಮಾನದಲ್ಲಿ ಪ್ರಾರಂಭವಾದ ಬಸವ ಯುಗದ ಪ್ರಭಾವವು ಮೈಸೂರು ಒಡೆಯರ ಕಾಲದಲ್ಲೂ ಮುಂದುವರಿದಿತ್ತು.

ಕ್ರಿ.ಶ.1851ರ ಮೈಸೂರು ಸಂಸ್ಥಾನದ ಕೃಷ್ಣರಾಜ ಒಡೆಯರ ಕಾಲದ ಶಾಸನವು ಕೆಂಗೇರಿಯ ಬಂಡೇಮಠದ ಏಕಟಿಲ್ಯ ಗವಿಯ ಗೋಡೆ ಮೇಲೆ ಇದೆ.[46] ಮರಿ ವೃಷಭೇಂದ್ರ ಸ್ವಾಮಿಗಳು ಬಂಡೇ

ಮಠದ ಏಕದಳ ಬಿಲ್ವ ಮರವನ್ನು ಬೆಳಸಿರಲು, ಕೃಷ್ಣರಾಜ ಒಡೆಯರವರು ತಮ್ಮ ಸೇವೆಯನ್ನು ಮಠಕ್ಕೆ ಒಪ್ಪಿಸಿದ್ದಾರೆ ಎಂಬ ಒಕ್ಕಣೆ ಇದೆ. ಮಠ ನಡೆಸಲು ಸ್ವಾಮೀಜಿಗಳ ನೇಮಕವು ನಡೆದಿತ್ತು.

ಮಹಾನಗರದಲ್ಲಿ ಈಗಿನ ಚಿಕ್ಕಪೇಟೆಯೊಳಗೆ ಹಾದು ಹೋಗುವ ಓ.ಟಿ.ಸಿ. ರಸ್ತೆ ಹಾಗೂ ಆರ್ಕಾಟ್ ಶ್ರೀನಿವಾಸಾಚಾರ್ ರಸ್ತೆ ಇವೆರಡೂ ಕೂಡುವ ಚೌಕದಲ್ಲಿ ಪಶ್ಚಿಮ ಬದಿಗೆ ಇಂದಿನ ಮಹಾಂತರ ಮಠವಿದೆ. ಈ ಮಠವು ಬಹಳ ಪುರಾತನವಾದುದು. ಇದು ಕೆಂಪೇಗೌಡರ ಕಾಲದಲ್ಲೇ ಅಸ್ತಿತ್ವಕ್ಕೆ ಬಂದಿತ್ತು. ಇದರ ಮೂಲಗುರುಗಳೇ ವಿರೂಪಾಕ್ಷ ಸ್ವಾಮಿಗಳು ಎಂಬುದಾಗಿ ಭಕ್ತರು ಹೇಳುವುದುಂಟು. ಆದರೆ ಮುಂದೆ ಕೆಲವು ಅಧಿಕೃತವಾದ ಮಾಹಿತಿಗಳ ಪ್ರಕಾರ ಮಹಾಂತರ ಮಠದ ಕಾರಣಕರ್ತರು ಕೆಂಪನಂಜೆಸ್ವಾಮಿಯವರು ಎಂಬ ಸೂಚನೆಗಳಿವೆ. ಚೆನ್ನಬಸವ ಪುರಾಣದ ಹಸ್ತಪ್ರತಿಯೊಂದರಲ್ಲಿ ಶಾಲಿವಾಹನ ಶಕ 1736 ನೆಯ ಭಾವನಾಮ ಸಂವತ್ಸರದ ಮಾಘ ಶುದ್ಧ 5 ರಂದು ಬೆಂಗಳೂರು ಮಹಾ ಮಹಾಂತರ ಸಿಂಹಾಸನಕ್ಕೆ ಕಾರಣಕರ್ತರಾದ ಕೆಂಪನಂಜೆ ಸ್ವಾಮಿಯವರು ಕೃತಿ ಬರಹವನ್ನು ಪೂರ್ಣಮಾಡಿದ ವಿಚಾರಗಳಿವೆ. ಕೃತಿ ಬರಹವು ಕ್ರಿ.ಶ. 1814ರಲ್ಲಿ ನಡೆದಿರುವುದರಿಂದ ಅದಕ್ಕೂ ಮೊದಲೇ ಈ ಮಠವು ಸ್ಥಾಪನೆಯಾಗಿರುವುದು ಸ್ಪಷ್ಟವಾಗಿದೆ. ಜೊತೆಗೆ ಪಟ್ಟದ ಮಠಗಳ ಪರಂಪರೆಯಲ್ಲಿ ಎರಡನೆಯ ವರ್ಗದ ಈ ಮಹಾ ಮಹಾಂತರ ಸಿಂಹಾಸನಕ್ಕೆ ಕೇವಲ ಕಾರಣಕರ್ತರಾಗಿದ್ದವರು ಕೆಂಪನಂಜೆದೇವರೇ ಹೊರತು, ಅವರೇ ಈ ಮಠದ ಸ್ಥಾಪನಕರ್ತರಾಗಿರಲಾರರು. ಏಕೆಂದರೆ ಕಾರಣಕರ್ತ ಹಾಗೂ ಸ್ಥಾಪನಕರ್ತ ಎಂಬ ಇವೆರಡು ಪದಗಳಿಗೆ ವ್ಯತ್ಯಾಸವಿರುವುದನ್ನು ನಾವು ಗಮನಿಸಬಹುದಾಗಿದೆ. ಆದ್ದರಿಂದ ಈ ಮಠವು ಕ್ರಿ.ಶ.1800ಕ್ಕೂ ಮೊದಲೆ ಪ್ರಾರಂಭವಾಗಿದ್ದಿರಬೇಕು ಎನ್ನುವುದಂತೂ ವಾಸ್ತವ ಸಂಗತಿ.[47] ಬೆಂಗಳೂರು ಪಟ್ಟಣದಲ್ಲಿ 20ನೆಯ ಶತಮಾನದ ಆರಂಭದ ವೇಳೆಗೆ ಒಟ್ಟು 74 ವೀರಶೈವ ಮಠಗಳಿದ್ದವು ಎಂದು ಬಿ.ಸಿ.ವೀರಪ್ಪನವರ ಸಂಶೋಧನೆಯಿಂದ ತಿಳಿದುಬಂದಿದೆ. ಅಧಿಕ ಸಂಖ್ಯೆಯಲ್ಲಿರುವ ಈ ಎಲ್ಲಾ ಮಠಗಳನ್ನು ಗುರುವರ್ಗದ ಮಠಗಳು, ವಿರಕ್ತಮರ್ಗದ ಮಠಗಳು ಎಂದು ಎರಡು ವರ್ಗಗಳನ್ನಾಗಿ ವಿಂಗಡಿಸಿಕೊಳ್ಳಲಾಗಿದೆ. ಹೀಗೆ ವೀರಶೈವ ಮತವು ಪುರಾತನವು ಹೌದು, ಆಧುನಿಕವೂ ಹೌದು.

## ಸೌರಮತ

ಕರ್ನಾಟಕದಲ್ಲಿ ಸೂರ್ಯರಾಧನೆಯು ಪ್ರಾಚೀನ ಕಾಲದಿಂದಲೂ ಇದೆ. ರಾಜರು ತಮ್ಮ ವಿಜಯೋತ್ಸವಕ್ಕಾಗಿ, ಜನರು ತಮ್ಮಲ್ಲಿರುವ ರೋಗ ರುಜಿನಗಳ ನಿವಾರಣೆಗಾಗಿ, ಸೂರ್ಯನನ್ನು ಆರಾಧಿಸಿಕೊಂಡು ಬಂದಿದ್ದಾರೆ. ಈತನನ್ನು ಅದಿದೈವೆಂಬಂತೆ ಪರಿಗಣಿಸಲಾಗಿದೆ. ಬೆಂಗಳೂರಿನ ಧಾರ್ಮಿಕ ಚರಿತ್ರೆಯನ್ನು ಅವಲೋಕಿಸಿದಾಗ ಸೂರ್ಯನ ಉಪಾಸನೆ ಮಾಡುತ್ತಿದ್ದದ್ದು

ಕಂಡುಬರುತ್ತದೆ. ಶೈವ ಅಥವಾ ವೈಷ್ಣವ ದೇವಾಲಯವಾಗಿರಲಿ ಅಲ್ಲಿಯೂ ಸೂರ್ಯನ ವಿಗ್ರಹವಿರುತ್ತದೆ. ಪ್ರಾಚೀನ ಕಾಲದಿಂದಲೂ ಸೂರ್ಯನ ಆರಾಧನೆ ಅಸ್ತಿತ್ವದಲ್ಲಿದ್ದರೂ ವಿಗ್ರಹಗಳನ್ನು ನಿರ್ಮಿಸಿ ಪೂಜಿಸುತ್ತಿದ್ದ ಪದ್ಧತಿ ಆನಂತರದಲ್ಲಿ ರೂಢಿಗೆ ಬಂದಿದೆ.

ಬೇಗೂರಿನ ನಗರೇಶ್ವರ ದೇವಾಲಯದಲ್ಲಿ ಸೂರ್ಯನ ವಿಗ್ರಹವಿದೆ. ಈ ವಿಗ್ರಹ ಗಂಗರ ಶೈಲಿಯಲ್ಲಿದ್ದು ಕ್ರಿ.ಶ.890ರ ಕಾಲಕ್ಕೆ ಸೇರುತ್ತದೆ. ಸುಮಾರು ಮೂರು ಅಡಿ ಎತ್ತರವಿರುವ ಸೂರ್ಯನು ಸಮಭಂಗಿಯಲ್ಲಿ ನಿಂತಿದ್ದಾನೆ. ದ್ವಿಬಾಹುಗಳನ್ನು ಹೊಂದಿದ್ದಾನೆ. ಭುಜದ ಎತ್ತರಕ್ಕೆ ಎತ್ತಿದ ಎರಡು ಕೈಗಳಲ್ಲಿ ಕಮಲದ ಮೊಗ್ಗುಗಳನ್ನು ಹಿಡಿದಿದ್ದಾನೆ. ಕಿರೀಟ, ಕಂಠಹಾರ, ಕರ್ಣಕುಂಡಲ, ಯಜ್ಞೋಪವೀತ, ತೋಳ್ಬಂಧಿ, ಕೈಪಟ್ಟಿ, ನಡುಬಂಧ ಹಾಗೂ ಕೊರಳಲ್ಲಿ ಹಾರಗಳಿಂದ ಸೂರ್ಯನು ಅಲಂಕೃತನಾಗಿದ್ದಾನೆ.

ತೋಟಗೆರೆಯ ಶ್ರೀ ಅರ್ಜುನ ದೇವಾಲಯದಲ್ಲಿರುವ ಸೂರ್ಯನ ವಿಗ್ರಹವು ಗಂಗರ ಕಾಲಕ್ಕೆ ಸೇರಿದೆ. ಸುಮಾರು ಎರಡು ಅಡಿ ಎತ್ತರವಿರುವ ಈ ವಿಗ್ರಹದಲ್ಲಿ ಸೂರ್ಯನು ದ್ವಿಬಾಹು ಹೊಂದಿದ್ದು, ಕೈಯಲ್ಲಿ ಇನ್ನೂ ಅರಳದ ಕಮಲದ ಮೊಗ್ಗನ್ನು ಹಿಡಿದು ನಿಂತಿದ್ದಾನೆ.

ಅವಿಭಜಿತ ಬೆಂಗಳೂರಿನ ಗ್ರಾಮಾಂತರ ಪ್ರದೇಶಗಳಾದ ನೆಲಮಂಗಲದ ಮಣ್ಣೆ, ಹೊಸಕೋಟೆ, ದೇವನಹಳ್ಳಿ ಮೊದಲಾದ ಪ್ರದೇಶದಲ್ಲಿ ಸೂರ್ಯನ ವಿಗ್ರಹಗಳು ದೊರೆತಿದೆ. ಈ ಎಲ್ಲಾ ಅಂಶವನ್ನು ಗಮನಿಸಿದಾಗ ಬೆಂಗಳೂರಿನಲ್ಲಿ ಗಂಗರ ಕಾಲಕ್ಕಾಗಲೆ ಸೌರಮತದ ಆಚರಣೆ ಅಸ್ತಿತ್ವದಲ್ಲಿತ್ತು.

**ಗಾಣಪತ್ಯ**

ಗಣೇಶನನ್ನು ಆರಾಧಿಸುವ ಹಿಂದೂಧರ್ಮದ ಒಂದು ಗುಂಪು ಗಾಣಪತ್ಯ. ಶಿವನ ಮಗನಾದ ಗಣೇಶನು ಶೈವಧರ್ಮಕ್ಕೆ ಸೇರಿದ್ದರೂ ವೈಷ್ಣವರೂ, ವೀರಶೈವರೂ ಗಣಪತಿಯ ಆರಾಧಕರಾಗಿದ್ದಾರೆ. ಪ್ರಸ್ತುತ ಗಣಪತಿಯನ್ನು ಪೂಜೆಮಾಡುವ ಜನರಲ್ಲಿ ಎಲ್ಲಾ ಜಾತಿಯವರೂ ಇದ್ದಾರೆ. ಗಣೇಶನನ್ನು ಏಕದಂತ, ವಿಘ್ನೇಶ್ವರ, ಮೂಷಿಕವಾಹನ ಮೊದಲಾದ ಹೆಸರುಗಳಿಂದ ಕರೆಯುವುದು ರೂಢಿಯಲ್ಲಿದೆ. ಇಂತಹ ಗಣೇಶನು ವಿಘ್ನನಿವಾರಕ ಎಂಬ ದೃಷ್ಟಿಯಿಂದ ದೇವತಾ ಪೂಜೆಯಲ್ಲಿ ಪ್ರಥಮ ಸ್ಥಾನವನ್ನು ಕೊಡಲಾಗಿದೆ. ಕರ್ನಾಟಕದಲ್ಲಿ ಗಣೇಶನ ವಿಗ್ರಹಗಳು ಗಂಗರ ಕಾಲದಿಂದಲೂ ದೇವಾಲಯಗಳಲ್ಲಿ ಕಾಣಸಿಗುತ್ತದೆ. ಹಾಗೆಂದ ಮಾತ್ರಕ್ಕೆ ಗಣೇಶನ ವಿಗ್ರಹಗಳು ದೊರೆತ ಸ್ಥಳಗಳೆಲ್ಲವೂ ಗಾಣಪತ್ಯ ಕೇಂದ್ರವಾಗಿರುವುದಿಲ್ಲ. ಕರ್ನಾಟಕದಲ್ಲಿ ಗಾಣಪತ್ಯ ಮತವನ್ನು ಹೆಚ್ಚಾಗಿ ಆಚರಿಸಿಕೊಂಡು ಬಂದಿರುವ ಕ್ಷೇತ್ರಗಳೆಂದರೆ ಇಡುಗುಂಜಿ, ಆನೆಗುಡ್ಡೆ, ಸೌತಡ್ಕ,

ಗೋಕರ್ಣ. ಈ ಪ್ರದೇಶಗಳು ಪ್ರಾಚೀನ ಕಾಲದಿಂದ ಇಂದಿಗೂ ಗಾಣಪತ್ಯ ಆರಾಧನೆಯ ಕೇಂದ್ರಗಳಾಗಿವೆ.

ಬೆಂಗಳೂರಿನಲ್ಲಿ ಗಣಪತಿ ಆರಾಧನೆ ಯಾವಾಗಿನಿಂದ ಪ್ರಾರಂಭವಾಯಿತು ಎಂಬ ಖಚಿತವಾದ ಅಂಶ ತಿಳಿದುಬರುವುದಿಲ್ಲ. ಕೆಲವು ಶಾಸನಗಳು "ಶ್ರೀ ಗಣೇಶಾಯ ನಮಃ" ಎಂದು ಪ್ರಾರಂಭವಾಗುತ್ತವೆ. ಹಾಗೂ ಗಣೇಶನ ವಿಗ್ರಹಗಳು ಈ ಪ್ರದೇಶದಲ್ಲಿ ಗಂಗರ ಕಾಲದಿಂದಲೂ ದೊರೆಯುತ್ತವೆ.

ಬೇಗೂರು ನಾಗೇಶ್ವರ ದೇವಾಲಯದಲ್ಲಿ ಗಂಗರ ಕಾಲದ ಗಣೇಶನ ವಿಗ್ರಹವಿದೆ. ಗಂಗರ ಶೈಲಿಯ ಈ ವಿಗ್ರಹವು ಕ್ರಿ.ಶ.9ನೇ ಶತಮಾನಕ್ಕೆ ಸೇರಿದೆ. ವಿಗ್ರಹವು ಸುಮಾರು ಮೂರು ಅಡಿ ಎತ್ತರವಿದೆ. ಗಣೇಶನ ಎರಡು ಕಾಲುಗಳು ಮಡಚಿ ಪಾದಗಳನ್ನು ಜೋಡಿಸಿ ಕುಳಿತಿರುವಂತೆ ಚಿತ್ರಿಸಲಾಗಿದೆ. ದ್ವಿಬಾಹು, ಸೊಂಡಿಲು, ಅಗಲವಾದ ಕಿವಿಗಳನ್ನು ಹೊಂದಿದ್ದು ಎಡಗೈನಲ್ಲಿ ಮೋದಕವನ್ನು ಹಿಡಿದಿದೆ. ಬಲಗೈನಲ್ಲಿ ಅಭಯವನ್ನು ನೀಡುತ್ತಿರುವಂತೆ ಬಿಡಿಸಲಾಗಿದೆ. ಗಂಗರ ಕಾಲದ ಗಣೇಶನ ವಿಗ್ರಹಕ್ಕೆ ಹೆಚ್ಚು ಅಲಂಕಾರವಿರುವುದಿಲ್ಲ.

ಬಸವನಗುಡಿಯ ದೊಡ್ಡಗಣಪತಿ ದೇವಾಲಯವನ್ನು ವಿಜಯನಗರ ಕಾಲದಲ್ಲಿ ಯಲಹಂಕ ನಾಡಪ್ರಭುಗಳು ಪ್ರತಿಷ್ಠಾಪಿಸಿದರು. ಬೆಂಗಳೂರಿನಲ್ಲಿರುವ ಅತ್ಯಂತ ಎತ್ತರವಾದ ಗಣೇಶನ ವಿಗ್ರಹವಿದು. ಚತುರ್ಭುಜವನನ್ನು ಹೊಂದಿದೆ. ಹಿಂದಿನ ಎರಡು ಕೈಗಳಲ್ಲಿ ಅಸ್ತ್ರವನ್ನೂ, ಮುಂದೆ ಇರುವ ಎಡಗೈನಲ್ಲಿ ಮೋದಕವನ್ನು, ಬಲಗೈನಲ್ಲಿ ಅಭಯವನ್ನು ತೋರುತ್ತಿದೆ. ಸುಖಾಸೀನ ಭಂಗಿಯಲ್ಲಿ ಕುಳಿತಿರುವಂತೆ ಬಿಡಿಸಲಾಗಿದೆ. ಅಂದರೆ ಎಡಗಾಲನ್ನು ಮಡಚಿ ಬಲಗಾಲನ್ನು ನೆಲಕ್ಕೆ ಊರಿ ಕುಳಿತಿರುವಂತೆ ಬಿಡಿಸಲಾಗಿದೆ. ಪ್ರತಿವರ್ಷ ಈ ಪ್ರದೇಶದಲ್ಲಿ ಕಾರ್ತಿಕ ಮಾಸದ ಕಡೆಯ ಸೋಮವಾರ ಕಡಲೇಕಾಯಿ ಪರಿಷೆ ನಡೆಯುತ್ತದೆ.

ಗವಿಪುರದಲ್ಲಿರುವ ಪ್ರಳಯ ಕಾಲದ ವೀರಭದ್ರ ಸ್ವಾಮಿ ದೇವಾಲಯದಲ್ಲಿರುವ ಗಣೇಶನ ವಿಗ್ರಹವು ಯಲಹಂಕ ನಾಡಪ್ರಭುಗಳ ಕಾಲಕ್ಕೆ ಸೇರಿದೆ. ಕ್ರಿ.ಶ.16ನೇ ಶತಮಾನದ ಈ ಗಣೇಶನ ವಿಗ್ರಹವು ಸುಮಾರು ಎರಡು ಅಡಿ ಎತ್ತರದಲ್ಲಿದೆ. ಸುಖಾಸೀನ ಭಂಗಿಯಲ್ಲಿ ಕುಳಿತಿದೆ. ನಾಲ್ಕು ಕೈಗಳನ್ನು ಹೊಂದಿದ್ದು, ಹಿಂದಿನ ಎರಡು ಕೈಗಳಲ್ಲಿ ಆಯುಧವನ್ನು ಹಿಡಿದಿದೆ. ಮುಂದಿನ ಎಡಗೈನಲ್ಲಿ ಮೋದಕವಿದೆ. ಸೊಂಡಿಲಿನಿಂದ ಈ ಮೋದಕವನ್ನು ತಿನ್ನುವಂತೆ ಚಿತ್ರಿಸಲಾಗಿದೆ. ಅಗಲವಾದ ಕಿವಿಗಳು, ಕೀರಿಟವಿದೆ. ಹೊಟ್ಟೆಯನ್ನು ಸರ್ಪಬಂಧವಿರುವಂತೆ ಕೆತ್ತಲಾಗಿದೆ.

ಹದಿನೇಳು–ಹದಿನೆಂಟನೇ ಶತಮಾನದ ನಂತರ ಹಲವು ರೀತಿಯ ಗಣೇಶನ ವಿಗ್ರಹಗಳು ದೇವಾಲಯದಲ್ಲಿ ಸಿಗುತ್ತವೆ. ಇಂದು ಗಣಪತಿಯ ಆರಾಧನೆ ವ್ಯಾಪಕ ಮಟ್ಟದಲ್ಲಿ ಹರಡಿದೆ. ಪ್ರತಿಯೊಂದು ಬೀದಿ, ಹಳ್ಳಿ, ಗ್ರಾಮ, ನಗರದಲ್ಲಿ ಗಣಪತಿಯ ಗುಡಿಗಳು ಸ್ಥಾಪನೆಯಾಗುತ್ತಿವೆ. ಯಾವುದೇ ಉತ್ತಮ ಕೆಲಸ ಮಾಡುವ ಮೊದಲು ಗಣಪತಿಯ ಆರಾಧನೆ ಮಾಡುವುದು ರೂಢಿಯಾಗಿ ಹೋಗಿದೆ. ಪ್ರತಿವರ್ಷ ಭಾದ್ರಪದ ಮಾಸದ ಮೊದಲ ಚೌತಿಯಂದು ಪ್ರತಿಯೊಂದು ಪ್ರದೇಶದಲ್ಲೂ ಗಣೇಶನ ಉತ್ಸವ ನಡೆಯುತ್ತಿದೆ. ಹೀಗೆ ಗಣಪತಿಯು ಎಲ್ಲರ ಅಚ್ಚುಮೆಚ್ಚಿನ ದೈವವಾಗಿ ಎಲ್ಲಾ ಧರ್ಮದ ಜನರಿಂದಲೂ ಪೂಜೆಗೆ ಒಳಗಾಗುತ್ತಿದ್ದಾನೆ.

## ವೀರಭದ್ರ ಪರಂಪರೆ

ವೀರಭದ್ರ ಪರಂಪರೆಯು ವಿಜಯನಗರ ಕಾಲದಲ್ಲಿ ಹೆಚ್ಚು ಪ್ರಚಲಿತಕ್ಕೆ ಬಂದಿತು. ಇವರ ಅಧೀನ ಪಾಳೇಗಾರರಾಗಿದ್ದ ಯಲಹಂಕ ನಾಡಪ್ರಭುಗಳ ಕಾಲದಲ್ಲಿ ಬೆಂಗಳೂರಿನ ಪ್ರದೇಶಗಳಲ್ಲಿ ವೀರಭದ್ರನ ಆರಾಧನೆ ಹೆಚ್ಚಾಯಿತು ಎಂದರೆ ಅತಿಶಯೋಕ್ತಿಯಲ್ಲ. ಗವಿಪುರ, ಕೆಂಗೇರಿ, ಆನೆಕಲ್ಲು ತಾಲೂಕಿನ ಮುಗಳೂರು ಮೊದಲಾದ ಪ್ರದೇಶದಲ್ಲಿ ವೀರಭದ್ರನ ದೇವಾಲಯಗಳಿವೆ.

ಗವಿಪುರ ಗುಟ್ಟಹಳ್ಳಿಯ ಬಳಿ ವೀರಭದ್ರನ ಶಿಲ್ಪವೊಂದು ದೊರೆತಿದೆ. ಈ ವೀರಭದ್ರನು 32 ಕೈಗಳನ್ನು ಹೊಂದಿದ್ದಾನೆ. ಪ್ರತಿಯೊಂದು ಕೈಯಲ್ಲೂ ಆಯುಧವಿದೆ. ಕೊರಳಲ್ಲಿ ರುಂಡಮಾಲೆಯ ಹಾರವಿದೆ. ಈ ವೀರಭದ್ರನನ್ನು ಪ್ರಳಯಕಾಲದ ವೀರಭದ್ರನೆಂದೇ ಕರೆಯಲಾಗುತ್ತದೆ. ಭಯಂಕರನಾದ ವೀರಭದ್ರನ ಮೂರ್ತಿಯನ್ನು ಬಹಳ ಸುಂದರವಾಗಿ ಕೆತ್ತಲಾಗಿದೆ. ಈ ವಿಗ್ರಹವು ಯಲಹಂಕ ನಾಡಪ್ರಭುಗಳ ಕಾಲದಲ್ಲಿ ನಿರ್ಮಾಣವಾಗಿದೆ.

ಓ.ಟಿ.ಸಿ.ರಸ್ತೆಯಲ್ಲಿರುವ ವೀರಭದ್ರನ ದೇವಾಲಯದ ವಿಗ್ರಹ, ಮುಗಳೂರು, ಕೆಂಗೇರಿ, ಸಾರಕ್ಕಿ, ಈ ಪ್ರದೇಶದಲ್ಲಿ ದೊರೆಯುವ ವೀರಭದ್ರನ ಶಿಲ್ಪಗಳು ಸಾಮಾನ್ಯವಾಗಿ ಒಂದೇ ರೀತಿಯ ಲಕ್ಷಣದಿಂದ ಕೂಡಿವೆ. ದ್ವಿಭುಜ, ಕೈಯಲ್ಲಿ ಖಡ್ಗ ಹಿಡಿದಿದ್ದಾನೆ. ಹುರಿಮೀಸೆ, ಕೋರೆಹಲ್ಲು, ರುಂಡಮಾಲೆ, ಉದರಬಂಧ, ಕಟಿಬಂಧ, ಇಳಿವಸ್ತ್ರ, ಕೊರಳಲ್ಲಿ ಕಿರೀಟ, ಕಾಲಲ್ಲಿ ಕುಡುಗದಿಂದ ಹೀಗೆ ಅಲಂಕೃತನಾಗಿರುತ್ತಾನೆ. ಹಾಗೂ ತ್ರಿಭಂಗಿಯಲ್ಲಿ ನಿಂತಿರುವಂತೆ ಕೆತ್ತಲಾಗಿದೆ.

ಹೀಗೆ ಯಲಹಂಕನಾಡಪ್ರಭುಗಳ ಕಾಲದಲ್ಲಿ ಹೆಚ್ಚು ಪ್ರಚಾರಕ್ಕೆ ಬಂದ ವೀರಭದ್ರನ ಆರಾಧನೆ ಇಂದಿಗೂ ಯಾವುದೇ ಜಾತ್ರೆ, ಸಮಾರಂಭ ನಡೆದರು ವೀರಭದ್ರನ ಕುಣಿತವು ಇದ್ದೇ ಇರುತ್ತದೆ. ಪ್ರಸ್ತುತ ಸಂದರ್ಭದಲ್ಲಿಯೂ ವೀರಭದ್ರನ ಆರಾಧನೆ ಈ ಪ್ರದೇಶದಲ್ಲಿ ಹೆಚ್ಚಾಗಿಯೇ ಇದೆ.

## ಇಸ್ಲಾಂ ಧರ್ಮ

ದಕ್ಷಿಣ ಭಾರತದ ಮೇಲೆ ಕ್ರಿ.ಶ.1294ರಲ್ಲಿ ದೆಹಲಿಸುಲ್ತಾನ ಅಲ್ಲಾ ಉದ್–ದ್ದೀನ್ ಖಿಲ್ಜಿ ದೇವಗಿರಿಯ ಮೇಲೆ ದಾಳಿ ನಡೆಸುತ್ತಾನೆ. ತದನಂತರ ಈತನ ಸೈನ್ಯಾಧಿಕಾರಿ ಮಲ್ಲಿಖಾಫರ್ ಹೊಯ್ಸಳರ ದೋರಸಮುದ್ರದ ಮೇಲೆ ಆಕ್ರಮಣ ಮಾಡುತ್ತಾನೆ.[48] ಹೀಗೆ ಬಂದ ಮುಸಲ್ಮಾನರು ಬಿಜಾಪುರ, ಗುಲ್ಬರ್ಗಾ ಪ್ರದೇಶಗಳನ್ನು ತಮ್ಮ ಕೈವಶಮಾಡಿಕೊಂಡರು. ಹೊಯ್ಸಳರ ಆಳ್ವಿಕೆಯ ಪ್ರಾಂತ್ಯಗಳ ಮೇಲೆ ಮುಸಲ್ಮಾನ ದಾಳಿ ನಡೆಯಿತು. ಹೀಗೆ ಕರ್ನಾಟಕ ಪ್ರದೇಶದಲ್ಲಿ ಮುಸ್ಲಿಂ ಧರ್ಮ ಪ್ರವೇಶಿಸಿತು. ಹೀಗೆ ಬೆಂಗಳೂರಿಗೂ ವ್ಯಾಪಿಸಿರಬಹುದು ಎಂದು ಹೇಳಬಹುದು. ಬೆಂಗಳೂರು ವಿಜಾಪುರದ ಸುಲ್ತಾನರ ಆಳ್ವಿಕೆಗೆ ನೇರವಾಗಿ ಒಳಪಟ್ಟಿತ್ತು. ಹಾಗೂ ‘ಮರಾಠ ದೊರೆ ಏಕೋಜಿಯ ಸೇವೆಯಲ್ಲಿದ್ದ ಪಠಾಣನೊಬ್ಬು ಚನ್ನಿಗರಾಯ ದೇವಸ್ಥಾನವನ್ನು ನಾಶಮಾಡಿ ಆ ಜಾಗದಲ್ಲಿ ಒಂದು ಮಸೀದಿಯನ್ನು ಕಟ್ಟಿಸಿ ಅದರ ನಿರ್ವಹಣೆಗಾಗಿ ಏಕೋಜಿಯಿಂದ ಹಳ್ಳಿಯೊಂದನ್ನು ಜಹಗೀರಾಗಿ ಪಡೆದುಕೊಂಡನು’[49] ಎಂಬ ವಿಷಯವು ಬೆಂಗಳೂರಿನ ಬಖೈರಿನಿಂದ ತಿಳಿಯುತ್ತದೆ. ಆದರೆ ಆ ಮಸೀದಿ ಯಾವುದು, ಏಕೋಜಿಯಿಂದ ಜಾಗೀರಾಗಿ ಪಡೆದ ಹಳ್ಳಿಯಾವುದು ಎಂಬುದರ ಬಗ್ಗೆ ಉಲ್ಲೇಖವಿಲ್ಲ.

ಬೆಂಗಳೂರಿನಲ್ಲಿ ಮುಸಲ್ಮಾನರನ್ನು ಉಲ್ಲೇಖಿಸುವ ಕೆಲವು ಶಾಸನಗಳು ದೊರಕಿವೆ. ಕ್ರಿ.ಶ.1650ರ ಶಾಸನವು ಮಹಾ ಪರ್ಶಿಯನ್ ಮಹಮದ್ ಖಾನ್ ಸಾಹೇಬನು ಎಂದಿದೆ. ಹಾಗೂ ಕಾಸೀಮ್‌ಗೆ ನೀಡಿದ ಮಾನ್ಯ ಹೊಲ ಎಂದಿದೆ.[50] ಕ್ರಿ.ಶ.1652 ರ ಶಾಸನವು ಮೊಹಮದ್ ಅಬ್ದುಲ್ ಬಿನ್ ಮಗಳು ಆಶ್ರು ಬಿ ಮೊಗದುಂ ಸಾಹೇಬನ ಹೆಂಡತಿಗೆ ಹಜರತ್ ಖಾನ್ ಸಾಹೇಬರು ಕೊಟ್ಟ ಮಾನ್ಯದ ಹೊಲ[51] ಎಂದಿದೆ. ಇದೇ ಕಾಲದ ಮತ್ತೊಂದು ಶಾಸನ ಅಬ್ದುಲ ಪುಕನ ಮಗಳು ಅಕುಬಬಿ ಮೊಗದುಂ ಸಾಹೇಬನ ಹೆಂಡತಿಗೆ ಕೊಟ್ಟ ಮಾನ್ಯ ಎಂದಿದೆ. ಈ ಶಾಸನಗಳನ್ನು ಗಮನಿಸಿದರೆ ಮುಸ್ಲಿಂರು ಈ ಪ್ರಾಂತ್ಯದಲ್ಲಿ ನೆಲೆನಿಂತು ಭೂಮಿಯನ್ನು ಕೊಡುಗೆಯಾಗಿ ಪಡೆದಿದ್ದರು ಎಂದು ತಿಳಿಯುತ್ತದೆ.

ಕ್ರಿ.ಶ.1760ರ ಮೈಸೂರಿನ ಕೃಷ್ಣರಾಜ ಒಡೆಯರ ಕಾಲದ ಶಾಸನವು ಆನೇಕಲ್ಲು ತಾಲ್ಲೂಕಿನಲ್ಲಿ ದೊರೆಯುತ್ತದೆ. ‘ಪಕೀರರು ಯಿಾ ಧರ್ಮವನ್ನು ಶಾಶ್ವತವಾಗಿ ನಡೆಸಿಕೊಂಡು ಹೋಗ ಬೇಕು’ ಎಂದಿದೆ. ಪಕೀರ ಧರ್ಮ ಎಂದರೆ ಇಸ್ಲಾಂ ಧರ್ಮ. ಹಾಗಾಗಿ ಮೈಸೂರು ಒಡೆಯರ ಆಳ್ವಿಕೆಯಲ್ಲಿ ಈ ಧರ್ಮ ಅಸ್ತಿತ್ವದಲ್ಲಿತ್ತು ಎಂಬುದು ಸ್ಪಷ್ಟವಾಗಿದೆ. ಮುಸ್ಲಿಂರನ್ನು ಕುರಿತ ಶಾಪಾಶಯವಿದೆ. ಈ ಪಕೀರ ಧರ್ಮಕ್ಕೆ ಬಿಟ್ಟುಕೊಟ್ಟ ಬಿಂಗೀಪುರದ ಗ್ರಾಮದಲ್ಲಿ ಹಿಂದೂಗಳು ಅಡ್ಡಿಪಡಿಸಿದರೆ ಕಾಸಿಯಲ್ಲಿ ಗೋಹತ್ಯೆ ಮಾಡಿದ ಪಾತಕಕ್ಕೆ ಹೋಗುತ್ತಾರೆ. ಮುಸಲ್ಮಾನರಲ್ಲಿ

ಯಾರಾದರು ಈ ಧರ್ಮಕ್ಕೆ ಅಡ್ಡಿ ಮಾಡಿದರೆ ಮಕ್ಕಾದಲ್ಲಿ ಹಂದಿ ಭಕ್ಷಣೆ ಮಾಡಿದ ದೋಷಕ್ಕೆ ಹೋಗುತ್ತಾರೆ ಎಂದಿದೆ. ಮುಸ್ಲಿಂರಿಗೆ ಮೆಕ್ಕಾ ಪವಿತ್ರವಾದ ಯಾತ್ರ ಸ್ಥಳ. ಜೀವಮಾನದಲ್ಲಿ ಒಮ್ಮೆಯಾದರು ಮೆಕ್ಕಾಗೆ ಭೇಟಿ ನೀಡಬೇಕು ಎಂದು ನಂಬಿದ್ದಾರೆ. ಹಾಗೂ ಹಂದಿ ಅವರಿಗೆ ಕೀಳಾದದ್ದು ಹಾಗಾಗಿ ಅದರ ಭಕ್ಷಣೆ ಮಾಡಿದರೆ ದೋಷ ಸಂಭವಿಸುತ್ತದೆ ಎಂಬ ನಂಬಿಕೆ ಇದೆ. ಇಂದಿನ ಗಾಣಿಗರ ಪೇಟೆಯಲ್ಲಿರುವ ಜುಮ್ಮಾಮಸೀದಿಯು ನಗರದಲ್ಲಿರುವ ಹಳೆಯ ಮಸೀದಿಗಳಲ್ಲಿ ಒಂದಾಗಿದೆ. ಕ್ರಿ.ಶ. 1687ರಲ್ಲಿ ಮೊಗಲರು ಈ ಮಸೀದಿಯನ್ನು ನಿರ್ಮಿಸಿದರೆಂದು ಹೇಳಲಾಗಿದೆ. ಈ ಮಸೀದಿಯ ಮೂಲರಚನೆ ಬದಲಾಗಿದೆ. ತವಕಲ್‌ದರ್ಗಾ ಮತ್ತು ಜೋಲಿಮಸೀದಿಗಳು ಪೇಟೆಯ ಆವರಣದಲ್ಲೇ ಇವೆ. ಇವು ಹತ್ತೊಂಬತ್ತು ಮತ್ತು ಇಪ್ಪತ್ತನೇ ಶತಮಾನದಲ್ಲಿ ರಚನೆಯಾಗಿರುವಂತದ್ದು.

## ಕ್ರೈಸ್ತಧರ್ಮ

ಪ್ರಪಂಚದಲ್ಲಿಯೇ ಅತೀ ದೊಡ್ಡ ಧರ್ಮಗಳಲ್ಲಿ ಒಂದಾದದ್ದು ಕ್ರೈಸ್ತಧರ್ಮ. ಈ ಧರ್ಮಕ್ಕೆ ನಿರ್ದಿಷ್ಟ ಮೂಲ ಹಾಗೂ ನಿರ್ದಿಷ್ಟ ಸ್ಥಾಪಕನಿದ್ದಾನೆ. ಇದು ಎರಡು ಸಾವಿರ ವರ್ಷಗಳ ಹಿಂದೆಯೇ ಯೇಸು ಕ್ರಿಸ್ತನ ಮೂಲಕ ಸ್ಥಾಪಿಸಲ್ಪಟ್ಟ ಧರ್ಮ. ಕ್ರೈಸ್ತಧರ್ಮದ ಅನುಯಾಯಿಗಳು ಜಗತ್ತಿನ ಎಲ್ಲಾ ದೇಶಗಳಲ್ಲೂ ಕಾಣಸಿಗುತ್ತಾರೆ.

ಈ ಧರ್ಮ ಹಿಂದೂಸ್ತಾನದಲ್ಲಿ ಸುಮಾರು 1800 ವರ್ಷಗಳ ಹಿಂದೆ ಕಾಲಿಟ್ಟಿತೆಂದೂ ಸುಮಾರು ಕ್ರಿ.ಶ.200ರಲ್ಲಿದ್ದ ಅಲೆಕ್ಸಾಂಡ್ರಾ ಪಟ್ಟಣದವನಾದ ಪಾಂಟೆನೋಸ(pantaenus) ಎಂಬವನು ಕೊಚಿನದ ದಂಡೆಗುಂಟ ವಾಸಿಸುತ್ತಿದ್ದ ಕ್ರೈಸ್ತರ ಬಳಿಯಲ್ಲಿ ಸೆಯ್‌ನ್ಟ್(ಸಿದ್ಧ) ಮ್ಯಾಥ್ಯೂ ಹಿಬ್ರೂಭಾಷೆಯಲ್ಲಿ ಬರೆದ ಸುವಾರ್ತೆಯನ್ನು ಕಂಡಿದ್ದನೆಂದೂ, ಅಲ್ಲಿಯ ಜನರಿಗೆ ಸಿದ್ಧ ಬಾರ್ಥೋಲೊಮ್ಯು ಎಂಬವನು ಕ್ರೈಸ್ತ ಮತವನ್ನು ಬೋಧಿಸಿದ್ದನೆಂದೂ ಹೇಳಿಕೆಯಿದೆ. ಈ ದೇಶದಲ್ಲಿ ಆರನೆಯ ಶತಮಾನದಲ್ಲಿ ಕ್ರೈಸ್ತ ಮತದವರಿದ್ದ ನಿಶ್ಚಿತವಾದ ಐತಿಹಾಸಿಕ ಆಧಾರ ದೊರೆಯುತ್ತದೆ. ಅಲೆಕ್‌ಝಾಂಡ್ರಿಯಾ ಪಟ್ಟಣದ ವರ್ತಕನಾದ ಕಾಸ್ಮಾಸ್ ಇಂಡಿಕೋಪ್ಲಾಸ್ಟಸ್ (Cosmos Indicoplustes) ಎಂಬುವನು ಹಿಂದುಸ್ತಾನ, ಸಿಂಹಲ ದ್ವೀಪಗಳಲ್ಲಿ ಸಂಚರಿಸಿ ಇಲ್ಲಿ ಇದ್ದ ಅನೇಕ ಕ್ರೈಸ್ತರ ದೇವಾಲಯಗಳನ್ನು ಕಂಡಿದ್ದನೆಂದೂ, ಇಲ್ಲಿಯ ಕ್ರೈಸ್ತರ ಮೇಲಿನ ಅಧಿಕಾರ ಪರ್ಶಿಯಾ ದೇಶದಲ್ಲಿದ್ದ ಸೆಲ್ಯೂಸಿಯಾ(Celucia) ಎಂಬ ಧರ್ಮಾಧಿಕಾರಿಯ(Arcbbishop) ಕೈಯಲ್ಲಿತ್ತೆಂದು ಅವನು ಕ್ರಿ.ಶ.547 ಮತ್ತು ಕ್ರಿ.ಶ.560ರಲ್ಲಿ ಬರೆದ ಗ್ರಂಥಗಳಲ್ಲಿ ಉಲ್ಲೇಖಿಸಿದ್ದಾರೆ[52] ಎಂಬ ವಿವರ ನಮಗೆ ದೊರೆಯುತ್ತದೆ. ತದನಂತರದಲ್ಲಿ ವಿಜಯನಗರ ಸಾಮ್ರಾಜ್ಯದ ಅರಸರು

ಡಚ್ಚರು ಮತ್ತು ಪೋರ್ಚುಗೀಸರೊಂದಿಗೆ ಕುದುರೆ ವ್ಯಾಪಾರ ವ್ಯವಹಾರದ ಸಂಪರ್ಕವನ್ನು ಹೊಂದಿದ್ದರು. ಅದೇ ಕಾಲಕ್ಕಾಗಲೇ ಕ್ರೈಸ್ತ ಧರ್ಮ ಪ್ರಚಾರಕ್ಕೆ ಬಂದಿರಬಹುದು ಎಂದು ಊಹಿಸಬಹುದು. ಅದೇನೆ ಇದ್ದರು ಕ್ರೈಸ್ತ ಧರ್ಮದ ಸ್ಪಷ್ಟ ಚಿತ್ರಣ ನಮಗೆ ದೊರೆಕುವುದು ಸುಮಾರು 18–19ನೆಯ ಶತಮಾನದಲ್ಲಿ. ಬ್ರಿಟೀಷರು ಭಾರತಕ್ಕೆ ಬಂದಾಗ ಇಂಗ್ಲೆಂಡ್, ಜರ್ಮನಿ, ಅಮೇರಿಕಾ ಮುಂತಾದ ದೇಶಗಳಿಂದ ಕ್ರೈಸ್ತ ಮಿಷನರಿಗಳು ಬಂದು ಮತಪ್ರಚಾರದ ಕಾರ್ಯವನ್ನು ಕೈಗೊಂಡರು. ಕರ್ನಾಟಕದಲ್ಲಿ ಸುಮಾರು ನೂರು ವರ್ಷದ ಹಿಂದೆ ಕ್ರೈಸ್ತಮತ ಕಾಲಿಟ್ಟಿತು. ನಂತರದಲ್ಲಿ ಈ ಮತದ ಅನುಯಾಯಿಗಳ ಸಂಖ್ಯೆ ಹೆಚ್ಚಿತು. ಬೆಂಗಳೂರು ಆ ದಿನಗಳಲ್ಲಿ ಬ್ರಿಟಿಷರ ಆಡಳಿತಕ್ಕೆ ಒಳಪಟ್ಟಿತ್ತು. ಅವರ ಸೇನಾನೆಲೆಯಾಗಿತ್ತು. ಅವರು ಇಲ್ಲಿ ಕ್ರೈಸ್ತಧರ್ಮದ ಸ್ಥಾಪನೆಯಾಗಲು ಎಲ್ಲಾ ರೀತಿಯ ಸಹಾಯವನ್ನು ನೀಡಿದ್ದರು. ವಿದ್ಯಾಸಂಸ್ಥೆ, ಚರ್ಚುಗಳ ಸ್ಥಾಪನೆಯಾದವು. ಇಂದು ತಮಿಳುನಾಡಿಗೆ ಸೇರಿರುವ ಕೊಯಿಮತ್ತೂರು, ಸೇಲಂ, ಧರ್ಮಪುರಿ ಜಿಲ್ಲೆಗಳ ಮೂಲಕ ಕ್ರೈಸ್ತ ಧರ್ಮವು ಮೈಸೂರನ್ನು ತಲುಪುವ ಮುಂಚೆಯೇ ಬೆಂಗಳೂರನ್ನು ತಲುಪಿತ್ತು. ಹೀಗಾಗಿ ಬೆಂಗಳೂರಿನ ಆನೇಕಲ್ಲು, ಬೇಗೂರು, ಬನ್ನೇರುಘಟ್ಟದ ಬಳಿಯಿರುವ ಕಾಮನಹಳ್ಳಿ, ಕನಕಪುರ ರಸ್ತೆಯಲ್ಲಿರುವ ಸೋಮನಹಳ್ಳಿ ಮುಂತಾದೆಡೆಗಳಲ್ಲಿ ಮಿಷನರಿ ಕೇಂದ್ರಗಳಿದ್ದವು. ಕುತೂಹಲದ ಸಂಗತಿಯೆಂದರೆ 14ನೇ ಶತಮಾನದಲ್ಲಿ ಆನೇಕಲ್ಲು ಮಾರ್ಗವಾಗಿ ಸಂಚರಿಸುತ್ತಿದ್ದ ಡೊಮಿನಿಕನ್ನರು ಆನೇಕಲ್ಲಿನಲ್ಲಿ ಮಿಷನ್ ಕೇಂದ್ರ ಹೊಂದಿದ್ದರು.

ಬೆಂಗಳೂರಿನ ಚರ್ಚುಗಳನ್ನು ಚಾರಿತ್ರಿಕ ಕಾಲಘಟ್ಟಗಳನ್ವಯ ವಿಂಗಡಿಸುವುದಾದರೆ ಕಲಾಸಿಪಾಳ್ಯದ ಚರ್ಚನ್ನು ಮೊದಲ ಚರ್ಚು ಎಂದು ಪರಿಗಣಿಸಬಹುದಾಗಿದೆ. ಕ್ರಿ.ಶ.1648ರಲ್ಲಿ ಅಂದಿನ ಮೈಸೂರು ದೇಶದ ರಾಜಧಾನಿಯಾದ ಶ್ರೀರಂಗಪಟ್ಟಣಕ್ಕೆ ಕ್ರೈಸ್ತಧರ್ಮ ಕಾಲಿರಿಸಿದಾಗ ಬೆಂಗಳೂರು ಹೇಳಿಕೊಳ್ಳುವಂಥ ದೊಡ್ಡ ಪಟ್ಟಣವೇನೂ ಆಗಿರಲಿಲ್ಲ. ಸುಮಾರು ಕ್ರಿ.ಶ.1724ರಲ್ಲಿ ಕಲಾಸಿಪಾಳ್ಯದಲ್ಲಿ ಬೆಂಗಳೂರಿನ ಮೊತ್ತಮೊದಲ ಚರ್ಚ್‌ನ್ನು ಕಟ್ಟಲಾಗಿತ್ತು. ದುರಾದೃಷ್ಟವೆಂದರೆ ಇಂದು ಆ ಚರ್ಚು ಅಸ್ತಿತ್ವದಲ್ಲಿಲ್ಲ. ಅದರಂತೆಯೇ ಅನ್ನಮ್ಮ ಬೆಟ್ಟದ ಬುಡದಲ್ಲಿನ ಉತ್ತರಹಳ್ಳಿ ಚರ್ಚು, ಹಲಸೂರಿನ ಕೆರೆ ಕೋಡಿ ಬಳಿಯ ಗುರುದ್ವಾರದ ಬಳಿಯಿದ್ದ ಚರ್ಚು ಮುಂತಾದವುಗಳು ಒಂದಿಷ್ಟೂ ಕುರುಹು ಇಲ್ಲದಂತೆ ಮಾಯವಾಗಿವೆ.[53] ಬಿಳೇಕಹಳ್ಳಿ(ಬಿಳಿ ಅಕ್ಕಿ ಹಳ್ಳಿ) ಎಂಬ ಪುಟ್ಟ ಊರಿನಲ್ಲಿ ಸಂತ ಮೇರಿ ಬೆಸಿಲಿಕಾ ಚರ್ಚ್ ಸ್ಥಾಪನೆಯಾಯಿತು. ಇಂದು ಶಿವಾಜಿನಗರದ ಚರ್ಚ್ ಎಂದೇ ಪ್ರಸಿದ್ಧಿಯನ್ನು ಪಡೆದಿದೆ. ಟಿಪ್ಪುಸುಲ್ತಾನನ ಮರಣಾನಂತರ ಫ್ರೆಂಚ್ ಪಾದ್ರಿ ಅಬ್ಬೆದುಬುವಾರನಿಂದ ಸ್ಥಾಪಿತಗೊಂಡಿತು. ಈ ಚರ್ಚಿನ ಕಲಾತ್ಮಕತೆಯು ಫ್ರೆಂಚ್ ವಾಸ್ತುವಿನ ಶೈಲಿಯಲ್ಲಿದೆ.

## ಶಾಸನೋಕ್ತ ದೇವಾಲಯಗಳು

## ಬೇಗೂರು ನಾಗೇಶ್ವರ ದೇವಾಲಯ

ಬೆಂಗಳೂರು ನಗರ ಜಿಲ್ಲೆಯಲ್ಲಿ ದೊರೆಯುವ ಅತೀ ಪ್ರಾಚೀನ ದೇವಾಲಯವೆಂದರೆ ಬೇಗೂರಿನ ನಾಗೇಶ್ವರ ದೇವಾಲಯ. ಈ ದೇವಾಲಯ ಗಂಗರ ಕಾಲದ್ದು. ದೇವಾಲಯದ ಹೊರಭಾಗದಲ್ಲಿ ಹಾಗೂ ಗೋಡೆಯ ಮೇಲೆ ಗಂಗರ ಕಾಲದ ಹಲವು ಶಾಸನಗಳು ಮತ್ತು ವೀರಗಲ್ಲುಗಳು ಕಾಣಸಿಗುತ್ತವೆ. ಗಂಗ ದೊರೆ ಎರೆಯಪ್ಪನ ಸಾಮಂತಾಧಿಪತಿ ನಾಗತ್ತರನು ಈ ದೇವಾಲಯವನ್ನು ನಿರ್ಮಿಸಿದ್ದಾನೆಂದು ಶಾಸನಗಳಿಂದ ತಿಳಿಯುತ್ತದೆ.[54] ಗಂಗ ಅರಸರು ಜೈನ ಧರ್ಮವನ್ನು ಪ್ರೋತ್ಸಾಹಿಸಿದ್ದರು. ಈ ವಿಷಯವು ತೊಂಡಬ್ಬೆಯು ಸನ್ಯಸನದಿಂದ ಸಾವನ್ನಪ್ಪಿದ ವಿಷಯ ಶಾಸನದಿಂದ ತಿಳಿಯುತ್ತದೆ.[55] ಈ ದೇವಾಲಯದಲ್ಲಿ ಪ್ರಮುಖವಾಗಿ ನಾಗೇಶ್ವರ, ಚೋಳೇಶ್ವರ, ನಗರೇಶ್ವರ, ಕಮಠೇಶ್ವರ, ಕರ್ಣೇಶ್ವರ ದೇವಾಲಯಗಳಿವೆ. ಸ್ಥಳೀಯರು ಪಂಚಲಿಂಗೇಶ್ವರ ದೇವಾಲಯವೆಂದೂ ಕರೆಯುತ್ತಾರೆ.

ನಾಗೇಶ್ವರ ಮತ್ತು ನಗರೇಶ್ವರ ದೇವಾಲಯಗಳು ಗಂಗರ ಕಾಲದಲ್ಲೇ ನಿರ್ಮಿಸಲ್ಪಟ್ಟಿದ್ದು ಅತಿ ಪ್ರಾಚೀನ ದೇವಾಲಯಗಳಾಗಿವೆ. ಉಳಿದ ಮೂರು ದೇವಾಲಯಗಳು ಚೋಳರ ಕಾಲದಲ್ಲಿ ನಿರ್ಮಾಣವಾದವು ಎಂಬುದು ಸ್ಥಳೀಯರ ಹೇಳಿಕೆ. ನಾಗೇಶ್ವರ ದೇವಾಲಯದಲ್ಲಿ ಎತ್ತರವಾದ ಪೀಠದ ಮೇಲೆ ಶಿವಲಿಂಗವಿದೆ. ದೇವಾಲಯದ ಒಳಭಾವಣಿಯಲ್ಲಿ ಅಷ್ಟದಿಕ್ಪಾಲಕರ ಶಿಲ್ಪಗಳಿವೆ. ಮಧ್ಯಭಾಗದಲ್ಲಿ ಉಮಾ ಮಹೇಶ್ವರರ ಶಿಲ್ಪವಿದೆ. ಈ ದೇವಾಲಯದ ನವರಂಗದಲ್ಲಿ ಒಳಗೋಡೆಗೆ ಹೊಂದಿಕೊಂಡಂತೆ ಕಾಲಭೈರವ, ವಿಷ್ಣು, ಮಹಿಷಾಸುರ ಮರ್ಧಿನಿ, ಚಂದ್ರ, ಪಾರ್ವತಿ, ಸಪ್ತಮಾತೃಕೆಯರ ಶಿಲ್ಪಗಳನ್ನು ಕಾಣಬಹುದು. ಸೂರ್ಯನ ಚಿಕ್ಕ ಗುಡಿಯಿದೆ. ಈ ದೇವಾಲಯದ ಭಾವಣಿಯಲ್ಲಿ ಅಷ್ಟದಿಕ್ಪಾಲಕರ ಮೂರ್ತಿಗಳಿವೆ. ಚೆನ್ನಕೇಶವನ ದೇವಾಲಯದ ಬಳಿ ದುರ್ಗಾ, ಗರುಡ ಮತ್ತು ತೀರ್ಥಂಕರನ ಶಿಲ್ಪಗಳು ಗಂಗರ ಕಲಾಶೈಲಿಯಲ್ಲಿರುವುದನ್ನು ಕಾಣಬಹುದು. ಹೊಯ್ಸಳರು ಈ ದೇವಾಲಯಕ್ಕೆ ದಾನ ನೀಡಿರುವ ವಿಷಯ ಶಾಸನಗಳಿಂದ ತಿಳಿಯುತ್ತದೆ. ವಿಷ್ಣುವರ್ಧನನು ಬೇಗೂರಿನ ನಾಗೇಶ್ವರ ದೇವಾಲಯದ ಆವರಣಗೋಡೆಯ ನಿರ್ಮಾಣಕ್ಕಾಗಿ ದಾನ ನೀಡಿದ್ದಾನೆ.[56] ಹಾಗೂ ಮುಮ್ಮಡಿ ಬಲ್ಲಾಳನು ಬೇಗೂರಿನ ತಿರುನಾಗೇಶ್ವರನ ಮೆರವಣಿಗೆ ಮತ್ತು ಉತ್ಸವಕ್ಕಾಗಿ ದಾನ ನೀಡಿರುವ ಉಲ್ಲೇಖವಿದೆ. ಹೀಗೆ ದೇವಾಲಯವನ್ನು ಅರಸರು ಪೋಷಿಸಿಕೊಂಡು ಬಂದಿದ್ದಾರೆ.

ನಾಗೇಶ್ವರ ದೇವಾಲಯದ ಪಕ್ಕದಲ್ಲೇ ನಗರೇಶ್ವರ ದೇವಾಲಯವಿದೆ. ಈ ದೇವಾಲಯವನ್ನು ಪೂರ್ವಾಭಿಮುಖವಾಗಿ ನಿರ್ಮಿಸಲಾಗಿದೆ. ಗರ್ಭಗುಡಿ, ಅಂತರಾಳ, ನವರಂಗ ಮತ್ತು ಮುಖಮಂಟಪಗಳಿವೆ. ಗರ್ಭಗುಡಿಯಲ್ಲಿ ಶಿವಲಿಂಗವಿದೆ. ಒಳಛಾವಣಿಯಲ್ಲಿ ಅಷ್ಟದಿಕ್ಪಾಲಕರ ಶಿಲ್ಪಗಳಿವೆ. ಹಾಗೂ ಚೋಳೇಶ್ವರ, ಕರ್ಣೇಶ್ವರ, ಕಮಠೇಶ್ವರ ದೇವಾಲಯವನ್ನು ಕಾಣಬಹುದು. ಈ ದೇವಾಲಯಗಳ ನವರಂಗದ ಒಳಗೋಡೆಗೆ ಹೊಂದಿಕೊಂಡಂತೆ ಕಾಲಭೈರವ, ವಿಷ್ಣು, ಮಹಿಷಾಸುರ ಮರ್ಧಿನಿ, ಚಂದ್ರ, ಪಾರ್ವತಿ, ಸಪ್ತಮಾತೃಕೆಯರ ಶಿಲ್ಪಗಳನ್ನು ಕಾಣಬಹುದು. ಸೂರ್ಯನ ಚಿಕ್ಕ ಗುಡಿಯಿದೆ. ಈ ದೇವಾಲಯದ ಛಾವಣಿಯಲ್ಲಿ ಅಷ್ಟದಿಕ್ಪಾಲಕರ ಮೂರ್ತಿಗಳಿವೆ. ಚೆನ್ನಕೇಶವನ ದೇವಾಲಯದ ಬಳಿ ದುರ್ಗಾ, ಗರುಡ ಮತ್ತು ತೀರ್ಥಂಕರನ ಶಿಲ್ಪಗಳು ಗಂಗರ ಕಲಾಶೈಲಿಯಲ್ಲಿರುವುದು ಕಾಣಬಹುದು.

## ಬನ್ನೇರುಘಟ್ಟ ಚಂಪಕಧಾಮ ದೇವಾಲಯ

ಬನ್ನೇರುಘಟ್ಟದ ದೇವಾಲಯವನ್ನು ಒಂದು ಸಣ್ಣ ಗುಡ್ಡದ ಮೇಲೆ ನಿರ್ಮಿಸಲಾಗಿದೆ. ಈ ಸ್ಥಳ ದಟ್ಟವಾದ ಕಾಡಿನಿಂದ ಆವೃತವಾಗಿದೆ. ಪಕ್ಕದಲ್ಲೇ ಸುವರ್ಣಮುಖಿ ಹೊಳೆ ಹರಿಯುತ್ತದೆ. ಈ ದೇವಾಲಯ ಆನೇಕಲ್ಲು ತಾಲ್ಲೂಕಿನಲ್ಲಿದೆ. ಹಾಗೂ ಅತೀ ಪ್ರಾಚೀನ ದೇವಾಲಯಗಳಲ್ಲಿ ಒಂದಾಗಿದೆ. ಈ ಪ್ರದೇಶವನ್ನು ಆಳಿದ ಅರಸು ಮನೆತನಗಳಿಂದ ಪೋಷಿಸಿಕೊಂಡು ಬಂದಿದೆ. ಈ ದೇವಾಲಯದ ಆವರಣದಲ್ಲಿ ಹೊಯ್ಸಳ ಮತ್ತು ವಿಜಯನಗರದ ಕಾಲದ ಶಾಸನಗಳು ದೊರೆಯುತ್ತವೆ. ಕೆಲವು ಶಾಸನಗಳು ತಮಿಳು ಭಾಷೆಯಲ್ಲಿವೆ. ಕ್ರಿ.ಶ.1356ರ ಶಾಸನದಲ್ಲಿ ದಾಮೋದರ ದೇವರಿಗೆ ಪಾತ್ರೆಯನ್ನು ಕೊಡುಗೆಯಾಗಿ ನೀಡಿದ ವಿಷಯವಿದೆ. ವಿಜಯನಗರದ ಅರಸ ಬುಕ್ಕಣ್ಣ ಮಲ್ಲಪ್ಪ ಒಡೆಯರಿಗೆ ಧರ್ಮವಾಗಲಿ ಎಂದು ನೀಡಿದ ದಾನ.[57] ಕ್ರಿ.ಶ.1363ರಲ್ಲಿ ಬುಕಣ್ಣನ ಮಗ ಮಲ್ಲಪ್ಪ ಒಡೆಯರ್ ರಾಜ್ಯವಾಳುತ್ತಿದ್ದಾಗ ಮಾಯಿನಾಯ್ಕನ ಕುಮಾರ ಮಲ್ಲಪ್ಪ ದಾಮೋದರ ದೇವರಿಗೆ ನಂದಾದೀವಿಗೆ, ವನಮಾಲಿಗೆ, ಹೊಮಳಿಗನಾಡು, ಕರ್ಪೂರ, ರಾಗಿ ಕೊಟ್ಟಿದ್ದಾರೆ.[58] ದೇವಾಲಯದ ಮಹಾದ್ವಾರದ ದಕ್ಷಿಣದ ಕಡೆ ಪೂರ್ವ ಭಾಗದ ಕಡೆಯಲ್ಲಿ ಕ್ರಿ.ಶ.1415ರ ಶಾಸನದಲ್ಲಿ ವಿಜಯನಗರದ ಅರಸ ದೇವರಾಯನ ಮಹಾಪ್ರಧಾನ ಈರಣ್ಣನಾಯಕನು ದಾಮೋದರ ದೇವರಿಗೆ ಎರಡು ನಂದಾದೀಪ, ವನಮಾಲಿಗೆಯನ್ನು ದಾನ ನೀಡಿರುವ ಉಲ್ಲೇಖವಿದೆ.[59] ಅದೇ ಮಹಾದ್ವಾರದಲ್ಲಿ ದಕ್ಷಿಣದ ಕಡೆ ಗೋಡೆಯ ಮೇಲೆ ಇರುವ ಮೊದಲನೆ ಶಾಸನ ಕ್ರಿ.ಶ.1421ರ ಕಾಲದ್ದು ಮಲ್ಲಪ್ಪ ಒಡೆಯರಿಗೆ ಸಕಲ ಸೌಖ್ಯವಾಗಬೇಕೆಂದು ಮಹಾಪ್ರಧಾನಿ ಈ ದೇವಾಲಯದ ದೇವರಿಗೆ ನಂದಾದೀವಿಗೆ, ವನಮಾಲೆ ಹಾಗೂ ಇಂಡಲವಾಡಿಯನ್ನು ಕೊಡುಗೆ ನೀಡಿದ್ದಾನೆ.[60]

ಮಹಾದ್ವಾರದ ದಕ್ಷಿಣದ ಕಡೆ ಇರುವ ಶಾಸನವು ತಿಮ್ಮರಸನು ದಾಮೋದರ ದೇವರ ಪಾದಗಳಿಗೆ ಧನ್ಯವಾದ ಹೇಳುತ್ತಿರುವ ವಿಷಯವಿದೆ. ಇದೇ ದ್ವಾರದ ಉತ್ತರದ ಕಡೆ ಇರುವ ಶಾಸನ ಪ್ರಧಾನಿ ಸೋಮಪ್ಪ ಒಡೆಯರು ದಾಮೋದರ ದೇವರಿಗೆ ಎಂದಿದೆ. ಈ ದೇವಾಲಯದ ಮಹಾದ್ವಾರದ ಒಳಬಾಗಿಲ ಬಲಗಡೆ ಬಿದ್ದಿರುವ ಪಾಪವಿಮೋಚನೆಯನ್ನು ಹೇಳುವ ಶಾಸನವೊಂದಿದೆ. 'ಶ್ರೀ ಚಂಪಕಧಾಮ ಸ್ವಾಮಿ ಸನ್ನಿಧಿಯಲ್ಲಿ ವಿಮೋಚನೆಯಾಗುವುದು ಉಭಯ ವಂಶದಲ್ಲಿ ಏಳೇಳು ಜನ್ಮದಲ್ಲಿ ಪಂಚಮಹಾ ಪಾತಕಗಳಾದ ಬ್ರಹ್ಮಹತ್ಯೆ, ಗೋವಧೆ, ಸ್ತ್ರೀವಧೆ, ಶಿಶುವಧೆ, ಬ್ರೂಣಹತ್ಯೆ ಇತ್ಯಾದಿ ಪಾತಕಗಳಾದ ಮೃಗವಧೆ, ಮಾರ್ಜಾಲವಧೆಗಳಿಗೆ ಪರಿಹಾರಾವಾಗಬೇಕು. ದೇವ, ಬ್ರಾಹ್ಮಣ, ಗುರು, ಹಿರಿಯರು ಶಾಪಗ್ರಸ್ತ ಇದಾಗ್ಯೂ ವಿಮೋಚನೆ ಸಾಧ್ಯ ಎಂದಿದೆ.[61]

ದೇವಾಲಯವು ಗರ್ಭಗೃಹ, ಅಂತರಾಳ, ಅರ್ಧಮಂಟಪ, ಮಹಾಮಂಟಪ, ಕೈಸಾಲೆಯನ್ನು ಹೊಂದಿದೆ. ಗರ್ಭಗೃಹದಲ್ಲಿ ಚಂಪಕಧಾಮ ಸ್ವಾಮಿ, ಶ್ರೀದೇವಿ ಮತ್ತು ಭೂದೇವಿಯ ವಿಗ್ರಹಗಳಿವೆ. ಚಂಪಕಧಾಮಸ್ವಾಮಿಯ ವಿಗ್ರಹವು ಒಂದು ಅಡಿ ಪೀಠದ ಮೇಲೆ ಸುಮಾರು ಮೂರುವರೆ ಅಡಿ ಎತ್ತರವಿದ್ದು, ಮೇಲಿನ ಎರಡೂ ಕೈಗಳಲ್ಲಿ ಶಂಖಚಕ್ರವನ್ನೂ ಕೆಳಗಿನ ಎರಡೂ ಕೈಗಳಲ್ಲಿ ಅಭಯ ಮುದ್ರಿಕೆಯನ್ನು ಹೊಂದಿದೆ.

## ಚೊಕ್ಕನಾಥ ದೇವಾಲಯ

ದೊಮ್ಮಲೂರಿನಲ್ಲಿರುವ ಚೊಕ್ಕನಾಥ ದೇವಾಲಯವನ್ನು ಚೋಳದೊರೆ ರಾಜಮಹೇಂದ್ರನು ನಿರ್ಮಿಸಿದನು ಎಂಬುದು ಇಲ್ಲಿನ ಜನರ ನಂಬಿಕೆ. ಈ ದೇವಾಲಯದಲ್ಲಿರುವ ಚೊಕ್ಕನಾಥ(ವಿಷ್ಣು)ನ ವಿಗ್ರಹವು ಹದಿಮೂರನೇ ಶತಮಾನದ ಚೋಳರ ಶೈಲಿಯಲ್ಲಿದೆ. ಈ ದೇವಾಲಯದ ತಳಪಾದಿ ಕಲ್ಲಿನಲ್ಲಿರುವ ಕ್ರಿ.ಶ.1200ರ ಕಾಲದ ಹೊಯ್ಸಳ ದೊರೆ ಇಮ್ಮಡಿ ಬಲ್ಲಾಳನು ದೊಮ್ಮಲೂರಿನ ತ್ರಿಪುರಾಂತಕ ಪೆರುಮಾಳ್ ದೇವಾಲಯದ ದೀಪಾರಾಧನೆಗಾಗಿ ದಾನ ನೀಡಿರುವ ವಿಷಯವಿದೆ.[62] ಕ್ರಿ.ಶ.1440ರ ಕಾಲದ ಶಾಸನದಲ್ಲಿ ಚೊಕ್ಕನಾಥ ದೇವರ ಉಲ್ಲೇಖವಿದೆ. ವಿಜಯನಗರದ ಅರಸು ದೇವರಾಯನ ಕಾಲದಲ್ಲಿ ಚೊಕ್ಕನಾಥ ದೇವರಿಗೆ ಕೊಟ್ಟ ದಾನದ ಒಕ್ಕಣೆಯಿದೆ. ದೊಮ್ಮಲೂರಿನ ಚತುಸ್ಸೀಮೆಗೆ ಸೇರುವ ಗ್ರಾಮಗಳಿಂದ ಬರುವ ಹೆಜ್ಜುಂಕದ (ದೊಡ್ಡ ಮೊತ್ತದ ತೆರಿಗೆ) ತೆರಿಗೆಯನ್ನು ಉಡುಗೊರೆಯಾಗಿ ನೀಡಲಾಗಿದೆ.[63] ವೀರಪ್ರತಾಪದೇವರಾಯನ ಕಾಲದ ಮತ್ತೊಂದು ಶಾಸನದಲ್ಲಿ ಪ್ರತಾಪ ನಾಗಪ್ಪ ದಂಡನಾಯಕರು ಯಲಹಂಕನಾಡೊಳಗೆ ಇರುವಂತಹ ಚೊಕ್ಕನಾಥ ದೇವರಿಗೆ ತೆರಿಗೆ ವಿನಾಯಿತಿ ಹಾಗೂ ದೇವರಿಗೆ ನಂದಾದೀವಿಗೆಯನ್ನು ಧಾರಪೂರ್ವಕವಾಗಿ ನೀಡಲಾಗಿದೆ. ದೊಮ್ಮಲೂರು ಗ್ರಾಮದ ಊರ

ಬಾಗಿಲಲ್ಲಿರುವ ಮತ್ತೊಂದು ಶಾಸನದಲ್ಲಿ ಚೊಕ್ಕನಾಥ ದೇವರ ಸ್ಥಾನಿಕರಾದ ಅಪ್ಪನಂಬಿಯಕನ ಮಕ್ಕಳು ತಿಮ್ಮಣ್ಣ, ಅಪ್ಪಯ, ಚೆನ್ನಣ್ಣ ಹಾಗೂ ಚೊಕ್ಕಣ್ಣನ ಮಕ್ಕಳು ಇವರಿಗೆ ದಾನವನ್ನು ನೀಡಿರುವ ವಿಷಯವಿದೆ.[64] ಹೀಗೆ ಹೊಯ್ಸಳ ಮತ್ತು ವಿಜಯನಗರ ಅರಸರಿಂದ ಈ ದೇವಾಲಯವು ಪೋಷಿಸಿಕೊಂಡು ಬಂದಿದ್ದಾರೆ.

## ಯಲಹಂಕದ ಕೋಟೆ ವೇಣುಗೋಪಾಲ ಸ್ವಾಮಿ ದೇವಸ್ಥಾನ

ನಾಡಪ್ರಭುಗಳ ಹೆಸರಿನ ಜೊತೆ ಸೇರಿಹೋಗಿರುವ ಯಲಹಂಕ ಪ್ರದೇಶವು ಇಂದಿನ ಬೃಹತ್ ಬೆಂಗಳೂರಿನ ಒಂದು ಮುಖ್ಯ ಉಪನಗರವಾಗಿದೆ. ಬೆಂಗಳೂರಿನಿಂದ ಉತ್ತರಕ್ಕೆ ಸುಮಾರು 12.ಕಿ.ಮೀ. ದೂರದಲ್ಲಿರುವ ಯಲಹಂಕ ಇಂದು ದೊಡ್ಡ ವಾಣಿಜ್ಯ ಕೇಂದ್ರವಾಗಿದೆ. ಪ್ರಾಚೀನ ಕಾಲದಿಂದಲೂ ಯಲಹಂಕ ಪ್ರದೇಶವು ಅಸ್ತಿತ್ವದಲ್ಲಿದ್ದು ಇಳೈಪಕ್ಕನಾಡು, ಎಲಹಂಕನಾಡು ಎಂದು ಕರೆಯಲಾಗುತ್ತಿತ್ತು. ಈ ಪ್ರದೇಶವನ್ನು ನಾಡಪ್ರಭುಗಳು ತಮ್ಮ ಆಡಳಿತ ಕೇಂದ್ರವನ್ನಾಗಿಸಿಕೊಂಡಿದ್ದರು. ಇಂತಹ ಯಲಹಂಕನಾಡು ಸಾಂಸ್ಕೃತಿಕ ಚರಿತ್ರೆಯನ್ನು ತೆರೆದಿಡುವಲ್ಲಿ ಮುಂದಿದೆ. ಇಲ್ಲಿ ಪ್ರಾಚೀನ ನೆಲೆಗಳು, ಅವಶೇಷಗಳು ಹಾಗೂ ಪ್ರಾಚೀನ ದೇವಾಲಯಗಳನ್ನು ಕಾಣಬಹುದು. ಅಂತಹ ದೇವಾಲಯಗಳಲ್ಲಿ ಕೋಟೆ ವೇಣುಗೋಪಾಲ ದೇವಸ್ಥಾನವು ಒಂದು.

ವಿಜಯನಗರ ಕಾಲದ ಅರಸ ಹರಿಹರದೇವನು ಯಲಹಂಕ ಕೋಟೆ ವೇಣುಗೋಪಾಲ ದೇವಸ್ಥಾನದ ಮುಂಭಾಗದ ದೀಪಸ್ತಂಭದ ಕಟ್ಟೆಯಲ್ಲಿ ಶಾಸನವೊಂದನ್ನು ಹಾಕಿಸಿದ್ದಾನೆ. ಈ ಶಾಸನವು ಕ್ರಿ.ಶ.1414ರ ಕಾಲಕ್ಕೆ ಸೇರಿದ್ದು ಈ ದೀಪಸ್ತಂಭವನ್ನು ಕಟ್ಟಿಸಿದ ವಿಷಯವನ್ನು ತಿಳಿಸುತ್ತದೆ.[65] ಇಂದು ಈ ದೇವಾಲಯದ ಮೂಲ ಸ್ವರೂಪ ಕಣ್ಮರೆಯಾಗಿದ್ದು, ದೇವಾಲಯವನ್ನು ನವೀಕರಿಸಲಾಗಿದೆ. ಗರ್ಭಗುಡಿಯ ಪಕ್ಕದಲ್ಲಿ ಗಣೇಶ ಮತ್ತು ಪಾರ್ವತಿಯರ ಗರ್ಭಗುಡಿಗಳನ್ನು ಕಾಣಬಹುದು. ನವರಂಗಕ್ಕೆ ಹೊಂದಿಕೊಂಡಂತೆ ಹನ್ನೆರಡು ಕಂಬಗಳು ಹಾಗೂ ನಾಲ್ಕು ಅರ್ಧಕಂಬಗಳಿವೆ. ಕಂಬಗಳ ಮೇಲೆ ಬಾಲಕೃಷ್ಣ ಕೂರ್ಮಾವತಾರದ ಶಿಲ್ಪಗಳಿವೆ. ದ್ವಾರದ ಎರಡು ಭಾಗದ ಗೋಡೆಯು ಅಲಂಕಾರಿಕ ಶಿಲ್ಪಗಳಿಂದ ಕೂಡಿದೆ. ದೇವಾಲಯದ ಮುಂಭಾಗದಲ್ಲಿ ಬಲಿಪೀಠ, ಧ್ವಜಸ್ತಂಭ, ನವಗ್ರಹಗಳಿವೆ. ಇವು ಇತ್ತೀಚಿನ ನಿರ್ಮಾಣಗಳು. ದೇವಾಲಯದ ಗೋಪುರದ ಎದುರಿಗೆ ಪ್ರಾಚೀನ ಕಾಲದ ದೀಪ ಸ್ತಂಭವಿದೆ. ಈ ದೇವಾಲಯದ ವಿಶೇಷತೆ ಎಂದರೆ ಈ ಪ್ರಕಾರದಲ್ಲಿ ವೈಷ್ಣವಧರ್ಮಕ್ಕೆ ಸೇರುವ ಗೋಪಾಲಸ್ವಾಮಿ ಹಾಗೂ ಶೈವಧರ್ಮದ ವಿಶ್ವನಾಥ ದೇವಾಲಯಗಳಿವೆ. ಶೈವ ಮತ್ತು ವೈಷ್ಣವ ಧರ್ಮದ ಸಮಾಗಮವನ್ನು ನೋಡಬಹುದು.

### ಶಿವನಸಮುದ್ರದ ಸೋಮೇದೇವರು

ಶಿವನಸಮುದ್ರ ಎಂದರೆ ಇಂದಿನ ಹೆಸರಘಟ್ಟ ಗ್ರಾಮದ ಸೋಮೇಶ್ವರ ದೇವಾಲಯ. ಕ್ರಿ.ಶ.1431ರ ಶಾಸನವು ಪ್ರೌಢದೇವರಾಯನ ಕಾಲದ್ದು. ಅರಸನ ಅನುಮತಿಯ ಮೇರೆಗೆ ಸೋಮೇದೇವರ ನೈವೇದ್ಯಕ್ಕೆ, ಅಂಗಭೋಗ ರಂಗ ಭೋಗಕ್ಕೆ ಧರ್ಮವಾಗಲಿ ಎಂದು ಮಂಗಪ್ಪ ದಂಡನಾಯಕರ ಮಕ್ಕಳು ಪ್ರತಾಪರಾಯರು ನೀಡಿದ ಧರ್ಮಶಾಸನ[66] ಎಂಬ ಉಲ್ಲೇಖ ಈ ಶಾಸನದಲ್ಲಿ ದೊರೆಯುತ್ತದೆ. ಈ ಹಿನ್ನೆಲೆಯಲ್ಲಿ ಈ ದೇವಸ್ಥಾನವು ಕ್ರಿ.ಶ. ಸುಮಾರು1431 ಕ್ಕಿಂತಲೂ ಪೂರ್ವದಲ್ಲಿಯೇ ನಿರ್ಮಾಣವಾಗಿದೆಯೆಂದು ಹೇಳಬಹುದು.

### ತಿರುವೆಂಗಳನಾಥ

ಕ್ರಿ.ಶ.1530ರ ಶಾಸನ ಅಚ್ಚುತರಾಯನ ಕಾಲದಲ್ಲಿ ಸಿವನಸಮುದ್ರಕ್ಕೆ ಸಲುವ ಹಾರೋಹಳ್ಳಿ ಗ್ರಾಮವವನ್ನು ಸಿಂಗಾಪುರದ ತಿರುವೆಂಗಳನಾತನ ಅಂಗ–ರಂಗ ವೈಭೋಗ, ಅಮೃತಪಡಿ ನೈವೇದ್ಯಕ್ಕೆ, ರಾಮಾನುಜ ಕೂಟಕ್ಕೆ ನೀಡಲಾಗಿದೆ.[67] ಸಿಂಗಾಪುರ ಗ್ರಾಮದಲ್ಲಿರುವ ವೆಂಕಟೇಶ್ವರ ದೇವಾಲಯವನ್ನು ಶಾಸನಗಳಲ್ಲಿ ತಿರುವೆಂಗಳನಾಥ ಎಂದು ಕರೆಯಲಾಗಿದೆ.

### ಜಕ್ಕೂರು ಅಲ್ಲಾಳನಾಥ ದೇವರು

ಜಕ್ಕೂರು ಗ್ರಾಮದಲ್ಲಿರುವ ವರದರಾಜ ಸ್ವಾಮಿಯನ್ನು ಅಲ್ಲಾಳನಾಥ ಎಂದು ಕರೆಯಲಾಗಿದೆ. ಈ ದೇವಾಲಯವು ವಿಜಯನಗರ ಅರಸರ ಕಾಲದಲ್ಲಿ ಅಂದರೆ ಕ್ರಿ.ಶ. ಸುಮಾರು 1550ರಲ್ಲಿ ನಿರ್ಮಿಸಲಾಗಿದೆ. ಕ್ರಿ.ಶ.1544ರ ಸದಾಶಿವನ ಕಾಲದ ಶಾಸನ.[68] ವಿಜಯನಗರದ ಅರಸರು ಮರಾಠೆಯ ವಿಠಲೇಶ್ವರ ದೇವ ಮಹಾ ಅರಸುಗಳಿಗೆ ಪುಣ್ಯವಾಗಲಿ ಎಂದು ಜಕ್ಕೂರು ಅಲ್ಲಾಳನಾಥ ದೇವರ ಅಮೃತಪಡಿ ನೈವೇದ್ಯಕ್ಕೆ ಯಲಹಂಕನಾಡಿನ ಸಿವನಸಮುದ್ರದ ಸೀಮೆಗೆ ಸೇರುವ ಅಲ್ಲಾಳಸಂದ್ರ ಗ್ರಾಮಕ್ಕೆ ಬರುವ ಸಕಲ ಆದಾಯವನ್ನು, ಅಷ್ಟಭೋಗ ತೇಜ ಸ್ವಾಮ್ಯವನ್ನು ಸಮರ್ಪಿಸಲಾಗಿದೆ.

### ದೊಮ್ಮಲೂರಿನ ಸೋಮೇಶ್ವರ ದೇವಾಲಯ

ದೊಮ್ಮಲ್ಲೂರಿಗೆ ಸೇರಿರುವ ಸೋಮೇಶ್ವರ ದೇವರ ತಳಪಾದಿ ಕಲ್ಲಿನಲ್ಲಿರುವ ಶಾಸನವು ಹೊಯ್ಸಳ ವೀರಬಲ್ಲಾಳನ ಕಾಲಕ್ಕೆ ಸೇರಿರುವುದು. ಎಲಹಂಕನಾಡಿನ ಮಯಿಲಗೌಡರು, ಸೇನಬೋವ ಮೊದಲಾದವರು ಗದ್ದೆಬೆದ್ದಲು, ಹಲಸೂರ ಚತುಸ್ಸೀಮೆಯನ್ನು ದಾನ ನೀಡಿದ್ದಾರೆ. ಹಾಗೂ ಕಾಮೆಯ ದಂಡನಾಯಕನ ಮಗ ಹಿರಿಯ ಬಲಪ್ಪ ದಂಡನಾಯಕ ಸೋಮನಾಥ

ದೇವರಿಗೆ ಕೊಂಡೆಯನಹಳ್ಳಿಯನ್ನು ಹಾಗೂ ಸುಂಕಮಾನ್ಯ ಮತ್ತು ಅಂಗಭೋಗ, ಅಮೃತಪಡಿ, ಪಂಚಕರ್ಪೂರ, ನಂದಾದೀವಿಗೆಯನ್ನು ನೀಡಿರುವ ಉಲ್ಲೇಖವಿದೆ.[69]

## ಜಕ್ಕಸಂದ್ರದ ಗೋಪಾಲಸ್ವಾಮಿ ದೇವಾಲಯ

ಕ್ರಿ.ಶ.1495ರ ಶಾಸನದಲ್ಲಿ ಲಿಂಗಣ್ಣನವರು ಜಕ್ಕಸಂದ್ರದ ಪುರವೊಂದನ್ನು ಬೇಲೂರ ನಾಗನಾಥ ದೇವರಿಗೆ ಎರಡು ಭಾಗ ಮತ್ತು ಚನ್ನಕೇಶವದೇವರಿಗೆ ಒಂದು ಭಾಗ ನೀಡಿರುವ ಉಲ್ಲೇಖವಿದೆ.[70]

## ಕಾಡುಮಲ್ಲಿಕಾರ್ಜುನ ದೇವಾಲಯ

ಬೆಂಗಳೂರಿನ ಮಲ್ಲೇಶ್ವರದ ಬಡಾವಣೆಯಲ್ಲಿರುವ ಕಾಡುಮಲ್ಲೇಶ್ವರಸ್ವಾಮಿ ದೇವಾಲಯವು ಅತ್ಯಂತ ಪುರಾತನವೂ ಹಾಗೂ ಚಾರಿತ್ರಿಕ ಘಟನೆಗಳನ್ನು ಹೊಂದಿದೆ. ಅತಿ ಪುರಾತನ ದೇವಾಲಯಗಳ ಸಾಲಿಗೆ ಸೇರುವ ಈ ದೇವಾಲಯಕ್ಕೆ ಸಂಬಂಧ ಪಟ್ಟ ಮರಾಠರ ಕಾಲದ ಶಾಸನವೊಂದು ದೊರೆತಿದೆ. "ಮಲ್ಲಾಪುರದ ಮಲ್ಲಿಕಾರ್ಜುನ ದೇವಮಾನ್ಯಕ್ಕೆ ಏಕೋಜಿರಾಯನು ಬೆಂಗಳೂರು ಮಹಾನಾಡಿಗೆ ಸಲುವ ಮೇದರನಿಂಗನಹಳ್ಳಿಯನ್ನು ಧರ್ಮಕ್ಕೆ ಕೊಟ್ಟನು"[71] ಎಂಬ ಉಲ್ಲೇಖವಿದೆ. ಮರಾಠರ ಕಾಲಕ್ಕೂ ಮೊದಲೇ ಈ ಸ್ಥಳದಲ್ಲಿ ಶಿವಲಿಂಗವಿದ್ದು ದೇವಾಲಯ ನಿರ್ಮಾಣವಾಗಿತ್ತು. ತದನಂತರದಲ್ಲಿ ಇದಕ್ಕೆ ದೇವಾಲಯವನ್ನು ನೂತನವಾಗಿ ನಿರ್ಮಾಣಮಾಡಿದ್ದಾರೆ. ಈ ದೇವಾಲಯ ಪೂರ್ವಾಭಿಮುಖವಾಗಿದೆ. ಗರ್ಭಗುಡಿಯೊಳಗೆ ಅರ್ಧ ಅಡಿ ಎತ್ತರವಾದ ಶಿವಲಿಂಗವಿದೆ. ಮಲ್ಲಿಕಾರ್ಜುನಸ್ವಾಮಿಯ ಬಲಭಾಗದಲ್ಲಿ ಕಾಶಿವಿಶ್ವನಾಥ ಮತ್ತು ಗಣೇಶನ ಎರಡು ಗರ್ಭಗುಡಿ ಇದೆ. ಮೂಲದೇವರ ಎಡಭಾಗದಲ್ಲಿ ವಿಷ್ಣು ಮತ್ತು ಭ್ರಮರಾಂಭ ಅಮ್ಮನ ಗರ್ಭಗುಡಿ ಇವೆ. ಈಗಿನ ಮಲ್ಲೇಶ್ವರ ಬಡಾವಣೆಯು ಹಿಂದೆ ಅತ್ಯಂತ ದಟ್ಟವಾದ ಅರಣ್ಯ ಪ್ರದೇಶವಾಗಿತ್ತು. ಹಾಗಾಗಿ ಈ ಸ್ಥಳವನ್ನು ಅಂದಿನಿಂದಲೂ ಕಾಡುಮಲ್ಲೇಶ್ವರ ಎಂದೇ ಕರೆಯುತ್ತಾರೆ.

## ಗವಿಗಂಗಾಧರೇಶ್ವರಸ್ವಾಮಿ ದೇವಾಲಯ

ಬೆಂಗಳೂರಿನ ಗವಿಪುರಂ ಬಡಾವಣೆಯಲ್ಲಿರುವ ಅತ್ಯಂತ ಪ್ರಾಚೀನ ದೇವಾಲಯವೇ ಗವಿಗಂಗಾಧರೇಶ್ವರಸ್ವಾಮಿ ದೇವಾಲಯ. ನೈಸರ್ಗಿಕ ಗುಹೆಯಲ್ಲಿರುವ ದೇವಾಲಯದಲ್ಲಿ ಲಿಂಗವಿದೆ. ಇಲ್ಲಿನ ಐತಿಹ್ಯಗಳ ಪ್ರಕಾರ ಇಲ್ಲಿ ಗೌತಮ ಮುನಿಯು ತಪಸ್ಸನ್ನಾಚರಿಸಿ, ಈ ಲಿಂಗವನ್ನು ಪೂಜಿಸಿದ್ದರೆಂದು ತಿಳಿದುಬರುತ್ತದೆ. ದೇವಾಲಯದ ಮುಂದೆ ಇರುವ ಕುಂಭಾಕಾರದ ಬಲಿಕಂಬವೂ ಚೋಳರಕಾಲದ ರಚನೆಯಾಗಿದ್ದು, ಆ ಕಾಲದಲ್ಲಿಯೇ ಇಲ್ಲಿ ಪೂಜೆ ಹಾಗೂ ಇತರ

ಧಾರ್ಮಿಕ ಕಾರ್ಯಗಳು ನೆರವೇರುತ್ತಿದ್ದವೆಂದು ತಿಳಿಯಲಾಗಿದೆ. ಕೆಂಪೇಗೌಡರ ಕಾಲದಲ್ಲಿ ಗವಿಗಂಗಾಧರನ ಗುಹೆಯನ್ನು ಎರಡು ಗುಡಿಗಳಾಗಿ ಪ್ರತ್ಯೇಕಿಸಿ ಶಿವ ಮತ್ತು ಪಾರ್ವತಿಯರ ಗುಡಿಗಳನ್ನು ಪ್ರತ್ಯೇಕಗೊಳಿಸಲಾಯಿತು. ಎರಡೂ ಗುಡಿಗಳಿಗೆ ಪ್ರತ್ಯೇಕವಾದ ಪ್ರದಕ್ಷಿಣಾ ಪಥವಿದೆ. ಅಲ್ಲದೆ ಎರಡು ಗುಡಿಗಳನ್ನು ಒಟ್ಟಿಗೆ ಪ್ರದಕ್ಷಿಣೆ ಮಾಡುವಂತಹ ಪ್ರದಕ್ಷಿಣಾ ಪಥ ಸಹ ಇದೆ. ಶಿವದೇವಾಲಯದ ಪ್ರಾಕಾರದಲ್ಲಿ ಭಾರದ್ವಾಜ, ಷಣ್ಮುಖ, ಚಂಡಿಕೇಶ್ವರ, ದಕ್ಷಿಣಾಮೂರ್ತಿ ಮತ್ತು ಸುಬ್ರಮಣ್ಯನ ಮೂರ್ತಿಗಳಿವೆ. ಶಿವ ಮತ್ತು ಪಾರ್ವತಿಯರ ಗುಡಿಗಳನ್ನು ಒಟ್ಟಿಗೆ ಪ್ರದಕ್ಷಿಣೆ ಮಾಡುವ ಪ್ರಾಕಾರದಲ್ಲಿ ಯಜ್ಞೇಶ್ವರ, ಸಪ್ತಮಾತೃಕೆಯರು, ಕಾಲಭೈರವ, ವೀರಭದ್ರ, ಹೊನ್ನಾದೇವಿ ಮತ್ತು ಸುಬ್ರಮಣ್ಯನ ವಿಗ್ರಹಗಳಿವೆ. ದೇವಾಲಯದ ಮುಖಮಂಟಪವು ಕಲ್ಲಿನ ಕಂಬಗಳಿಂದ ಆಧರಿಸಿದ ಕಲ್ಲಿನ ಛಾವಣಿಯನ್ನು ಹೊಂದಿದೆ. ದೇವಾಲಯದ ಮುಂಭಾಗದಲ್ಲಿ ಸೂರ್ಯ ಚಂದ್ರಮಂಡಲಗಳು, ತ್ರಿಶೂಲ, ಡಮರುಗ ಮತ್ತು ಏಕಶಿಲಾ ಛತ್ರಿಯು ಕಂಡುಬರುತ್ತದೆ. ಇವುಗಳೆಲ್ಲವೂ ಕೆಂಪೇಗೌಡರ ಕಾಲದಲ್ಲಿ ರಚಿತವಾದವು. ಈ ದೇವಾಲಯ ರಾಜ್ಯಪುರಾತತ್ವ ಇಲಾಖೆಯ ಸಂರಕ್ಷಿತ ಸ್ಮಾರಕವಾಗಿದೆ.[72]

ಈ ದೇವಾಲಯದ ಆವರಣದಲ್ಲಿ ಕ್ರಿ.ಶ. ಸುಮಾರು 18ನೇ ಶತಮಾನಕ್ಕೆ ಸೇರುವ ಶಾಸನವೊಂದು ದೊರೆಕಿದೆ.(ಅಪ್ರಕಟಿತ) ಈ ಶಾಸನದ ಭಾಷೆ ಕನ್ನಡ. ಲಿಪಿ ಮೈಸೂರು ಒಡೆಯರ ಕಾಲಕ್ಕೆ ಸೇರಿದ್ದಾಗಿದೆ. ಈ ಶಾಸನದಲ್ಲಿ “ಮೈಸೂರು ಗ್ರಾಮವನ್ನು ಗಂಗಾಧರೇಶ್ವರನಿಗೆ ಧರ್ಮ” ಎಂದಿದೆ. ಮೈಸೂರು ಗ್ರಾಮವನ್ನು ಗಂಗಾಧರೇಶ್ವರನಿಗೆ ದಾನ ಕೊಡಲಾಗಿರುವ ಅಂಶ ಈ ಶಾಸನದಿಂದ ತಿಳಿಯುತ್ತದೆ. ಆದರೆ ದಾನ ಕೊಟ್ಟವರಾರು ಎಂಬುದರ ಉಲ್ಲೇಖವಿಲ್ಲ. ಗಂಗರ ಕಾಲಕ್ಕಾಗಲೆ ನಿರ್ಮ್ಮಾಣವಾಗಿದ್ದ ಸಣ್ಣ ಗುಹೆಯೊಂದು ನಂತರದ ಅರಸರ ಕಾಲದಲ್ಲಿ ಮನ್ನಣೆಯನ್ನು ಪಡೆದು ಚೋಳ, ಯಲಹಂಕನಾಡ ಪ್ರಭುಗಳ ಕಾಲದಲ್ಲಿ ದೊಡ್ಡ ದೇವಾಲಯವಾಗಿ ರೂಪುಗೊಂಡು ಇಂದಿಗೂ ನಿತ್ಯ ಪೂಜೆಗೆ ಒಳಗಾಗುತ್ತಿದೆ.

## ಸುಂಕೇನಹಳ್ಳಿ ದೊಡ್ಡಬಸವಣ್ಣನ ದೇವಾಲಯ

ದೊಡ್ಡಗಣಪತಿ, ದೊಡ್ಡಬಸವಣ್ಣನ ಶಿಲ್ಪಗಳು ಇಂದು ಬಸವನಗುಡಿ ಎಂದು ಕರೆಸಿಕೊಳ್ಳುತ್ತಿರುವ ಅಂದಿನ ಸುಂಕೇನಹಳ್ಳಿಯಲ್ಲಿ ಕಾಣಬಹುದು. ಈ ಎರಡೂ ದೇವಾಲಯಗಳನ್ನು ಬೆಂಗಳೂರಿನ ಸಂಸ್ಥಾಪಕನಾದ ಯಲಹಂಕನಾಡಪ್ರಭು ಕೆಂಪೇಗೌಡನು ನಿರ್ಮ್ಮಿಸಿದ್ದಾನೆ. ಬೃಹದಾಕಾರದ ನಂದಿ, ಆಂಜನೇಯ, ಗಣೇಶನ ಶಿಲ್ಪಗಳ ರಚನೆಯ ಸಂಪ್ರದಾಯ ವಿಜಯನಗರ ಅರಸರ ಕಾಲದಲ್ಲಿ ಕಂಡು ಬಂದಿರುವುದರಿಂದ ಈ ಬೃಹತ್ ಗಾತ್ರದ ವಿಗ್ರಹಗಳ ರಚನೆಯ ಕಾಲಘಟ್ಟವನ್ನು ಗುರುತಿಸಬಹುದು. ವಿಜಯನಗರೋತ್ತರ ಪೂರ್ವದಲ್ಲಿ ಇವುಗಳ ನಿರ್ಮಾಣ

ಕಾರ್ಯ ಹೆಚ್ಚಾಯಿತು. ಇತ್ತೀಚೆಗೆ ಈ ದೊಡ್ಡಗಣಪತಿಗೂ, ನಂದಿಗೂ ಹೊರಗೋಡೆಯನ್ನು ನಿರ್ಮಿಸಿದ್ದಾರೆ. ಈ ಏಕಶಿಲಾ ವಿಗ್ರಹಗಳನ್ನು ನಿರ್ಮಾಣ ಮಾಡಿರುವುದು ಕಹಳೆ ಬಂಡೆಯ ಮೇಲೆ. ಈ ಸ್ಥಳವು ಐತಿಹಾಸಿಕವಾದ ಮಹತ್ವವನ್ನು ಪಡೆದಿದೆ. ಈ ಪ್ರದೇಶವು ದೊಡ್ಡ ಗಾತ್ರದ ಬಂಡೆಗಳಿಂದ ಆವೃತ್ತವಾಗಿದೆ. ಸ್ಥಳೀಯರು ಹೇಳುವಂತೆ, ಈ ಬಂಡೆಯ ಮೇಲೆ ಯಲಹಂಕ ನಾಡಪ್ರಭುಗಳ ಕಾಲದಲ್ಲಿ ಶತ್ರುಗಳ ಆಕ್ರಮಣ ಸಂದರ್ಭ ಬಂದಾಗ ಎಚ್ಚರಿಕೆ ನೀಡುವುದಕ್ಕಾಗಿ ಕಹಳೆಯನ್ನು ಊದುತ್ತಿದ್ದರು. ಹಾಗಾಗಿ ಕಹಳೆ ಬಂಡೆ ಎಂದೇ ಪ್ರಸಿದ್ಧಿ ಪಡೆದಿದೆ. ಜನರ ಬಾಯಲ್ಲಿ ಆಂಗ್ಲೀಕರಣಗೊಂಡು ಇಂದು ಬ್ಯೂಗಲ್ ರಾಕ್ ಆಗಿದೆ.

ನಂದಿಯ ಬಲಗಾಲು ತಂಬೂರಿಯ ಮೇಲಿದೆ. ತಂಬೂರಿ ಕಮಲದ ಮೇಲಿದೆ. ಕಮಲದ ಕೆಳಗೆ ವೃಷಭಾವತಿ ನದಿಯ ಉಗಮದ ಬಗ್ಗೆ ತಿಳಿಸುವ ಶಾಸನವು ನಂದಿಯ ಪೀಠದ ಮೇಲಿದೆ. ಕುಳಿತಿರುವ ನಂದಿಯ ವಿಗ್ರಹವು 10 ಅಡಿ ಎತ್ತರ, 15 ಅಡಿ ಉದ್ದವಾಗಿದೆ. ವೃಷಭಾವತಿ ನದಿ ಉಗಮವಾಗುವುದು ಇದೇ ಸ್ಥಳದಲ್ಲಿ ಎಂಬ ವಿಷಯವನ್ನು ನಂದಿ ಪೀಠದಲ್ಲಿರುವ ಶಾಸನ ತಿಳಿಸುತ್ತದೆ.[73] ನಂದಿಯ ಮುಂದೆ ಧ್ವಜಸ್ತಂಭವಿದೆ. ಸುಮಾರು 25ಸೆಂ.ಮೀ ಎತ್ತರದ ಈ ಸ್ತಂಭದ ಸುತ್ತಲು ಉಬ್ಬು ಶಿಲ್ಪಗಳಿವೆ. ಕೈಯಲ್ಲಿ ಜಪಮಾಲೆ ಹಿಡಿದು ನಿಂತಿರುವ ಯತಿ, ಮತ್ತೊಂದೆಡೆ ಕೈಯಲ್ಲಿ ತಂಬೂರಿಯನ್ನು ನುಡಿಸುತ್ತಿರುವ ಯತಿ ಮತ್ತು ಕೈಯಲ್ಲಿ ಆತ್ಮಲಿಂಗವನ್ನು ಹಿಡಿದು ನಿಂತಿರುವ ಯತಿಯ ಶಿಲ್ಪಗಳಿವೆ. ಇನ್ನೊಂದೆಡೆ ಸ್ಥಾನಿಕ ಶಿವನಶಿಲ್ಪವಿದೆ. ಏಕಶಿಲೆಯಿಂದ ನಿರ್ಮಾಣವಾಗಿರುವ ವಿಗ್ರಹಗಳು ಇಂದಿಗೂ ಪೂಜೆಗೊಳಪಟ್ಟಿದೆ. ನಂದಿ ವಿಗ್ರಹದಿಂದ ಮುಂದಕ್ಕೆ ಸಾಗುತ್ತಿದ್ದಂತೆ ದೊಡ್ಡ ಗಣಪತಿಯ ವಿಗ್ರಹವಿದೆ. ಗಾತ್ರದಲ್ಲಿ ದೊಡ್ಡದಾಗಿರುವುದರಿಂದ ಇಂದಿಗೂ ಇದು ದೊಡ್ಡ ಗಣಪತಿ ದೇವಸ್ಥಾನವೇ ಆಗಿದೆ. ಈ ದೊಡ್ಡ ಗಣೇಶ ಕುಳಿತಿರುವ ಶೈಲಿಯಲ್ಲಿದೆ. ಬಂಡೆಯ ಮೇಲೆ ಕೆತ್ತಲಾಗಿರುವ ಬೃಹತ್ ಗಾತ್ರದ ಗಣಪತಿಯ ಉಬ್ಬುಶಿಲ್ಪವಿದಾಗಿದೆ. ನಾಲ್ಕು ಭುಜಗಳನ್ನು ಹೊಂದಿದೆ. ನಾಲ್ಕು ಕೈಗಳಲ್ಲಿ ಪಾಶ, ಅಂಕುಶ, ಮೋದಕ, ಅಭಯ ಹಿಡಿದಿರುವಂತೆ ರಚಿಸಲಾಗಿದೆ. ಹೀಗೆ ದೊಡ್ಡ ಗಾತ್ರದ ದೇಹ, ಉದ್ದನೆಯ ಸೊಂಡಿಲು, ಅಗಲವಾದ ಕಿವಿಗಳು ವಿವಿಧ ಆಭರಣ, ತಲೆಯ ಮೇಲೆ ಕಿರುಗಾತ್ರದ ಕಿರೀಟ ಇತ್ಯಾದಿ ಲಕ್ಷಣಗಳಿಂದ ಕೂಡಿದೆ. ಇಂದಿಗೂ ದೊಡ್ಡ ಬಸವಣ್ಣನ ಗುಡಿಯಲ್ಲಿ ಕಾರ್ತಿಕ ಮಾಸದ ಕಡೆಯ ಮಂಗಳವಾರ ಜಾತ್ರೆ ನಡೆಯುತ್ತದೆ. ಕಡಲೆಕಾಯಿ ಪರಿಷೆ ಎಂದೇ ಖ್ಯಾತಿ ಹೊಂದಿರುವ ಬೆಂಗಳೂರಿಗೆ ಸುತ್ತಮುತ್ತಲ ಪ್ರದೇಶದಿಂದ ಕಡಲೆಕಾಯಿಯನ್ನು ತಂದು ಬಸವಣ್ಣನಿಗೆ ನೈವೇದ್ಯ ಮಾಡಿ ಮಾರುತ್ತಾರೆ.

## ಹಲಸೂರು ಸೋಮೇಶ್ವರ ದೇವಾಲಯ

ಹಲಸೂರು ಸೋಮೇಶ್ವರ ದೇವಾಲಯವನ್ನು ಚೋಳರು ನಿರ್ಮಾಣ ಮಾಡಿದ್ದಿರಬಹುದೆಂಬ ಪ್ರತೀತಿ ಇದೆ. ಇದೊಂದು ಶೈವ ಕೇಂದ್ರ. ಚೋಳ ಅರಸರಿಂದ ನಿರ್ಮಿಸಿದ ದೇವಾಲಯವನ್ನು ವಿಜಯನಗರ ಅರಸರ ಕಾಲದಲ್ಲಿ ಪುನರ್ ನಿರ್ಮಿಸಲಾಯಿತು ಎಂದು ಕೆಲವು ವಿದ್ವಾಂಸರ ಅಭಿಪ್ರಾಯ. ವಿಜಯನಗರ ಅರಸರ ಕಾಲದ ದೇವಸ್ಥಾನವೆಂದು ವಿಜಯನಗರ ಚರಿತ್ರಾಕಾರರ ಅಭಿಪ್ರಾಯವಾಗಿದೆ. ಸ್ಥಳೀಯ ಚರಿತ್ರೆಯ ವಿದ್ವಾಂಸರ ಪ್ರಕಾರ ಸೋಮೇಶ್ವರ ದೇವಸ್ಥಾನವು ನಾಡಪ್ರಭು ಕೆಂಪೇಗೌಡ ಸೋಮೇಶ್ವರನ ಭಕ್ತನಾಗಿದ್ದು ಅಲಸೂರಿನಲ್ಲಿ ಸೋಮೇಶ್ವರ ದೇವಸ್ಥಾನವನ್ನು ನಿರ್ಮಿಸಿದ್ದಾನೆಂದು ಅಭಿಪ್ರಾಯಪಟ್ಟಿದ್ದಾರೆ.[74] ಬೆಂಗಳೂರಿನ ಬಖೈರಿನ ಪ್ರಕಾರ, "ಇಮ್ಮಡಿ ಕೆಂಪೇಗೌಡನು ಹಲಸೂರು ಸೋಮೇಶ್ವರ ದೇವಸ್ಥಾನವನ್ನು ಕಟ್ಟಿಸಿ ಹಲವು ದತ್ತಿಗಳನ್ನು ನೀಡಿದನು" ಎಂಬ ವಿಷಯವನ್ನು ತಿಳಿಸುತ್ತದೆ. ಹಾಗಾದಲ್ಲಿ ಈ ದೇವಾಲಯವು ಕೆಂಪೇಗೌಡನು ನಿರ್ಮಿಸಿದನು ಎಂಬುದುರಲ್ಲಿ ಯಾವ ಸಂದೇಹವು ಇಲ್ಲ.

ದೇವಾಲಯದ ರಚನೆಯನ್ನು ಗಮನಿಸುವುದಾದರೆ ಸಾಂಧಾರ ಶೈಲಿಯಲ್ಲಿರುವ ದೇವಾಲಯ. ಗರ್ಭಗುಡಿ, ಅಂತರಾಳ, ಅರ್ಧಮಂಟಪ ಮತ್ತು ನವರಂಗಗಳಿಂದ ಕೂಡಿದೆ. ಅಧಿಷ್ಠಾನಗಳು ಹೆಚ್ಚು ಅಲಂಕಾರಿಕವಾಗಿದೆ. ಸಂಯುಕ್ತ ಕಂಬಗಳನ್ನು ಮುಖಮಂಟಪಗಳಲ್ಲಿ ಕಾಣುತ್ತೇವೆ. ಬಲಿಪೀಠದಲ್ಲಿ ಗಜಶಿಲ್ಪಗಳಿವೆ. ಈ ದೇವಾಲಯದಲ್ಲಿಯೇ ಇರುವ ಅಮ್ಮನವರ ಗುಡಿಯ ಭಿತ್ತಿಯ ಮೇಲೆ ಗಿರಿಜಾಕಲ್ಯಾಣ ಕತೆಯ ಶಿಲ್ಪಗಳಿವೆ. ಋಷಿಗಳು, ಯಕ್ಷರ ಶಿಲ್ಪಗಳು ಹಾಗೂ ಚೆಂಚು ಲಕ್ಷ್ಮಿ ಮತ್ತು ನರಸಿಂಹನ ಶಿಲ್ಪಗಳು ಮುಖಮಂಟಪದ ಕಂಬಗಳ ಮೇಲೆ ಕಾಣಬಹುದು. "ಆಂಧ್ರ ಮತ್ತು ಕರ್ನಾಟಕ ರಾಜ್ಯಗಳ ಗಡಿಭಾಗದಲ್ಲಿ ಪ್ರಚಲಿತದಲ್ಲಿರುವ ಜಾನಪದ ಕಥೆಯಾದ ಚೆಂಚು ಬುಡಕಟ್ಟಿನ ಕನ್ಯೆಯ ಸೌಂದರ್ಯಕ್ಕೆ ಮಾರುಹೋಗಿ ನರಸಿಂಹ ಮದುವೆಯಾಗುವುದು. ಮದುವೆಯಾದ ಚೆಂಚು ಸಮುದಾಯದ ಕನ್ಯೆ 'ಚಂಚುಲಕ್ಷ್ಮಿ' ಎಂದು ಕರೆಯಲ್ಪಡುತ್ತಾಳೆ. ಬೇಟೆಗಾರಿಕೆ ವೃತ್ತಿಯಾಗಿಸಿಕೊಂಡಿರುವ ಚೆಂಚು ಸಮುದಾಯದವರು ಕಾಡು ವಾಸಿಗಳು. ಇವರಲ್ಲಿ ಸೌಂದರ್ಯವತಿಯಾಗಿ ಜನಿಸಿದ ಕನ್ಯೆಯನ್ನು ನರಸಿಂಹ ಮದುವೆಯಾಗುವುದರೊಂದಿಗೆ ಸಮುದಾಯದ ಜನರು ಲಕ್ಷ್ಮಿಯೆಂದು ಹಾಗೂ ತಮ್ಮ ದೇವತೆಯೆಂದು ಗುರುತಿಸುತ್ತಾರೆ. ಆಂದ್ರ-ಕರ್ನಾಟಕದಲ್ಲಿ ಅಹೋಬಲ-ನರಸಿಂಹ ಸಂಪ್ರದಾಯವಿರುವ ಪದೇಶಗಳಲ್ಲಿ ಹೆಚ್ಚು ಪ್ರಚಲಿತದಲ್ಲಿ ಚೆಂಚುಲಕ್ಷ್ಮಿ ಜಾನಪದ ಕಥೆ ಇರುವುದು. ಇದೇ ಹಿನ್ನೆಲೆಯಲ್ಲಿ ಇಲ್ಲಿಯ ಹಲವಾರು ದೇವಾಲಯಗಳಲ್ಲಿ ಚೆಂಚುಲಕ್ಷ್ಮಿ ಶಿಲ್ಪಗಳು ದೊರೆಯುತ್ತವೆ. ವಿಜಯನಗರ ಕಾಲದ ಹಂಪಿಯ ಕೆಲವು ದೇವಾಲಯಗಳಲ್ಲಿ ಕಾಣುತ್ತೇವೆ.

ಹಾಗೂ ಈ ಸಂಪ್ರದಾಯದ ಶಿಲ್ಪಗಳನ್ನು ಪರಿಚಯಿಸಿದ ಕಾಲವೆಂದು ಗುರುತಿಸಬಹುದು. ನಾಡಪ್ರಭುಗಳ ಆಡಳಿತ ಪ್ರದೇಶವು ಈ ಜಾನಪದ ಕಥೆಯ ಪರಿಧಿಯಲ್ಲಿ ಬರುವುದರಿಂದ ಚೆಂಚುಲಕ್ಷ್ಮಿ ಹಾಗೂ ನರಸಿಂಹರ ಶಿಲ್ಪಗಳು ಸಾಕಷ್ಟು ಕಡೆಗಳಲ್ಲಿ ಕಂಡುಬರುತ್ತವೆ."[75] ಬೆಂಗಳೂರಿನಲ್ಲಿ ಅಲಸೂರು ಸೋಮೇಶ್ವರ ದೇವಸ್ಥಾನವು ಸೇರಿದಂತೆ ರಂಗನಾಥ ದೇವಾಲಯದಲ್ಲಿಯೂ ಈ ಕತೆಯ ಶಿಲ್ಪವನ್ನು ಕಾಣಬಹುದು.

ಈ ದೇವಾಲಯದ ಮತ್ತೊಂದು ವಿಶೇಷತೆಯೆಂದರೆ ದೇವಾಲಯದ ಕಂಬಗಳಲ್ಲಿ ಬೇಡರಕಣ್ಣಪ್ಪ, ಸಿರಿಯಾಳ, ಭಕ್ತಕುಂಬಾರ ಮೊದಲಾದ ಶೈವ ಮತ್ತು ವೈಷ್ಣವ ಭಕ್ತರ ಶಿಲ್ಪಗಳನ್ನು ಕಾಣಬಹುದು. ಧಾರ್ಮಿಕ ಸಮನ್ವಯತೆಯನ್ನು ಗುರುತಿಸಬಹುದು.

## ಬೆಂಗಳೂರು ರಂಗನಾಥಸ್ವಾಮಿ ದೇವಾಲಯ

ಮಧ್ಯಕಾಲೀನ ಸಂದರ್ಭದಲ್ಲಿ ನಿರ್ಮಾಣವಾಗಿರಬಹುದಾದ ದೇವಾಲಯ ರಂಗನಾಥ ದೇವಾಲಯವು ಬಳ್ಳಾಪುರ ಪೇಟೆಯ ಅವೆನ್ಯೂ ರಸ್ತೆಯ ಪಶ್ಚಿಮಕ್ಕಿದೆ. ನಾಡಪ್ರಭುಗಳ ಶಿಲಾ ಶಾಸನವು ಈ ದೇವಾಲಯದ ತೆರೆದ ಮುಖಮಂಟಪದ ಗೋಡೆಯಲ್ಲಿದೆ.[76] ಈ ಶಾಸನವು ತೆಲುಗು ಭಾಷೆಯಲ್ಲಿದೆ. ಕ್ರಿ.ಶ.1628ರ ವಿಜಯನಗರ ಅರಸ ಶ್ರೀ ವೀರರಾಮದೇವ ಮಹಾರಾಯನ ಕಾಲದಲ್ಲಿ ಯಲಹಂಕ ನಾಡಪ್ರಭು ಕೆಂಪನಂಜೇಗೌಡನ ಮೊಮ್ಮಗ ಕೆಂಪೇಗೌಡನ ಮಗ ಇಮ್ಮಡಿ ಕೆಂಪೇಗೌಡನು ಯಲಹಂಕನಾಡನ್ನು ಆಳುತ್ತಿದ್ದಾಗ ಅಯ್ಯಾವೊಳೆ ಐನೂರ್ವರ ವರ್ತಕ ಸಂಘದ ಪ್ರಮುಖರು ಪೆನುಗೊಂಡೆ, ಬೆಂಗಳೂರು, ಗೂಳೂರು, ಚಿಕ್ಕನಾಯಕನಹಳ್ಳಿ, ಚಿಕ್ಕಬಳ್ಳಾಪುರ, ತಾಡಪತ್ರಿ, ಆವನಿ, ಚಂದ್ರಗಿರಿ, ಕೋಲಾರ, ಕೊತ್ತಕೋಟೆ, ಕಾವೇರಿಪಟ್ಟಣ, ರಾಯಕೋಟೆ, ಶ್ರೀರಂಗಪಟ್ಟಣ, ನರಸೀಪುರ, ಬೇಲೂರು, ಹೆಬ್ಬೂರು, ನಾಗಮಂಗಲ, ಇಕ್ಕೇರಿ, ಬಸ್ತಿಹಳ್ಳಿ ಮುಂತಾದ ಸ್ಥಳಗಳ ವರ್ತಕರು ಬೆಂಗಳೂರಿನ ಮುತ್ಯಾಲಪೇಟೆಯ ರಂಗನಾಥಸ್ವಾಮಿ ದೇವಾಲಯದ ಪಡಿತರ, ನೈವೇದ್ಯ, ಮುಂತಾದ ಕಾರ್ಯಗಳಿಗೋಸ್ಕರ ಇಮ್ಮಡಿ ಕೆಂಪೇಗೌಡರಿಂದ ಅನುಮತಿ ಪಡೆದು ದಿನಂಪ್ರತಿ ಪಡಿಯಾಗಿ ಒಂದು ವರಹ ಮತ್ತು ಒಂದು ಅರವೀಸದ ದಾನವನ್ನು ವಂತಿಗೆಯಾಗಿ ಸೂರ್ಯಚಂದ್ರರು ಇರುವವರೆಗೂ ಚಿರಸ್ಥಾಯಿಯಾಗಿ ದಾನವಾಗಿ ಕೊಡುತ್ತೇವೆ ಎಂದು ಹೇಳಿ ಧಾರಾಪೂರ್ವಕವಾಗಿ ದಾನ ನೀಡಿದ ವಿವರಗಳಿವೆ.

ಈ ದೇವಾಲಯ 'ಸಾಂಧಾರ' ದೇವಾಲಯಗಳಿಗೆ ಉದಾಹರಣೆಗಳಾಗಿವೆ. (ಸಾಂಧಾರ– ದೇವಾಲಯದ ಗರ್ಭಗುಡಿಯೊಳಗೆ ಪ್ರದಕ್ಷಿಣಾ ಪಥ ಇದ್ದರೆ ಸಾಂಧಾರ ಶೈಲಿ. ನಿರಾಂಧಾರ– ದೇವಾಲಯದ ಗರ್ಭಗುಡಿಯ ಹೊರಗಡೆ ಪ್ರದಕ್ಷಿಣಾ ಪಥ ಇದ್ದರೆ ನಿರಾಂಧಾರ ಶೈಲಿ.)

ರಂಗನಾಥ ದೇವಾಲಯದ ತೆರೆದ ಮುಖಮಂಟಪದ ಮುಂದಿನ ಸಾಲಿನಲ್ಲಿ ಕುದುರೆ ಶಿಲ್ಪದ ಕಂಬಗಳನ್ನು ಕಾಣುತ್ತೇವೆ. ಕುದುರೆಗಳು ತಮ್ಮ ಹಿಂದಿನ ಪಾದಗಳ ಮೇಲೆ ಎದ್ದು ನಿಂತಿವೆ. ಈ ಕುದುರೆಗಳ ಮೇಲೆ ಸವಾರರು ಈಟಿಯಿಂದ ಕುದುರೆಯ ಕೆಳಗಿನ ಹುಲಿಯನ್ನು ಕೊಲ್ಲುತ್ತಿರುವಂತೆ ಕುದುರೆ ಕಂಬಗಳಲ್ಲಿ ತೋರಿಸಲಾಗಿದೆ. ಇನ್ನೊಂದು ವಿಶೇಷವೆಂದರೆ, ಈ ಕುದುರೆ ಮೇಲಿನ ಸವಾರರು ದೇಶಿಯ ಮತ್ತು ಪರ್ಷಿಯಾ ಉಡುಪು ಧರಿಸಿರುವ ಸವಾರರ ಶಿಲ್ಪಗಳಾಗಿವೆ. ಎಸ್.ಕೆ.ಅರಣಿಯವರ ಅಭಿಪ್ರಾಯದಂತೆ, "ನಾಡಪ್ರಭುಗಳ ಕಾಲದ ಶಾಸನವಿರುವ ರಂಗನಾಥ ದೇವಾಲಯದಲ್ಲಿ ಕುದುರೆ ಶಿಲ್ಪಗಳಿರುವ ಕಂಬಗಳು ಕರ್ನಾಟಕದಲ್ಲಿ ಇದುವರೆಗೂ ದೊರೆತ ಎರಡನೆಯ ಉದಾಹರಣೆಯಾಗಿದೆ. ಕುದುರೆ ಶಿಲ್ಪಗಳಿರುವ ಕಂಬಗಳು ತಮಿಳುನಾಡಿನ ಪಾಂಡ್ಯರ ಕಾಲದ ದೇವಾಲಯಗಳಲ್ಲಿ ಹೆಚ್ಚು ಜನಪ್ರಿಯವಾಗಿದ್ದವು. ಆದರೆ ಕರ್ನಾಟಕದ ನೆಲದಲ್ಲಿ ಈ ಶೈಲಿಯು ವಿರಳವಾಗಿ ಕಂಡು ಬರುತ್ತದೆ. ದೇವಾಲಯದ ಮುಖಮಂಟಪದಲ್ಲಿ ಕುದುರೆ ಶಿಲ್ಪಗಳ ಕಂಬಗಳಿರುವ ಏಕೈಕ ಉದಾಹರಣೆ ಇದು. ಆ ಕಾರಣದಿಂದ ನಾಡಿನ ವಾಸ್ತುಶಿಲ್ಪಕ್ಕೆ ಪರಿಚಯಿಸಿ ಪ್ರೋತ್ಸಾಹಿಸಿದ ಕೀರ್ತಿ ನಾಡಪ್ರಭುಗಳಿಗೆ ಸಲ್ಲುತ್ತದೆ"[77] ಎನ್ನುತ್ತಾರೆ. ದೇವಸ್ಥಾನಗಳ ತೆರೆದ ಮುಖಮಂಟಪದಲ್ಲಿನ ಯಾಳಿ ಶಿಲ್ಪ ರಚನೆ ವಿಜಯನಗರ ಕಾಲದ ಶೈಲಿಯಾಗಿದೆ. ನಾಡಪ್ರಭುಗಳು ಇದನ್ನೇ ಅನುಕರಿಸಿಕೊಂಡಿದ್ದಾರೆ. ಆದರೆ ರಂಗನಾಥ ಸ್ವಾಮಿ ದೇವಾಲಯದಲ್ಲಿ ಯಾಳಿಶಿಲ್ಪಗಳ ಬದಲಾಗಿ ಕುದುರೆ ಶಿಲ್ಪಗಳನ್ನು ರಚಿಸಿರುವುದು ವಿಶೇಷ.

ಕಂಬಗಳ ಮೇಲೆ ಚೆಂಚುಲಕ್ಷ್ಮಿ ಮತ್ತು ನರಸಿಂಹನ ವಿಗ್ರಹಗಳಿವೆ. ದೇವಸ್ಥಾನದಲ್ಲಿ ಮುಖವನ್ನು ಸಾಲಾಗಿ ಒಂದರ ಪಕ್ಕದಲ್ಲಿ ಒಂದು ಶಿಲ್ಪಗಳಾಗಿ ರಚಿಸಲಾಗಿದೆ. ಹೀಗೆ ಐತಿಹಾಸಿಕ ಮಹತ್ವವನ್ನು ಹೊಂದಿರುವ ರಂಗನಾಥ ದೇವಾಲಯವು ಬೆಂಗಳೂರು ಚರಿತ್ರೆಯ ಅಧ್ಯಯನದಲ್ಲಿ ವಾಸ್ತುಶಿಲ್ಪ ಶೈಲಿಗೆ ಉಲ್ಲೇಖಾರ್ಹವಾದದ್ದಾಗಿದೆ.

## ಕೋಟೆ ವೆಂಕಟೇಶ್ವರ ದೇವಾಲಯ

ಕೃಷ್ಣರಾಜ ಮಾರುಕಟ್ಟೆಗೆ ಹೋಗುವ ಮಾರ್ಗದಲ್ಲಿ ನಿರ್ಮಾಣಗೊಂಡಿರುವ ಈ ದೇವಾಲಯ ಪುರಾತನ ದೇವಾಲಯಗಳಲ್ಲಿ ಒಂದಾಗಿದೆ. ಈ ದೇವಾಲಯವು ಸುಮಾರು 500 ವರ್ಷಗಳಷ್ಟು ಹಿಂದಿನ ಇತಿಹಾಸವನ್ನು ಹೊಂದಿದೆ. ಇದು ಮೂಲತಃ ಶೈವದೇವಾಲಯವಾಗಿತ್ತು. ಕೆಂಪೇಗೌಡ ಇದರ ನಿರ್ಮಾತೃ. ಆನಂತರ ಮೈಸೂರಿನ ಒಡೆಯರಿಂದ ಪುನರ್ ನಿರ್ಮಾಣಗೊಂಡಿರುವ ದೇವಾಲಯ ಇದಾಗಿದೆ. ಕೋಟೆಯ ಒಳಾಂಗಣದಲ್ಲಿ ನಿರ್ಮಾಣವಾಗಿದ್ದ ದೇವಾಲಯವಾಗಿದ್ದರಿಂದ ಇಂದಿಗೂ ಈ ದೇವಾಲಯವನ್ನು ಕೋಟೆ ವೆಂಕಟರಮಣ ದೇವಸ್ಥಾನವೆಂದೇ ಕರೆಯಲಾಗಿದೆ. ಹಳೆಯ ನಕ್ಷೆಗಳ ಆಧಾರದ ಮೇಲೆ ಹೇಳುವುದಾದರೆ ಈ

ಭಾಗವೆಲ್ಲವೂ ಕೋಟೆಯ ಒಳಗೆ ಇತ್ತು. ಈ ದೇವಾಲಯದ ಪಕ್ಕಕ್ಕೆ ಟಿಪ್ಪು ಅರಮನೆ ಇರುವುದು ಕಾಣಬಹುದು. ಯಲಹಂಕ ನಾಡಪ್ರಭುಗಳ ಕಾಲಕ್ಕೆ ಈ ಕೋಟೆ ನಿರ್ಮಾಣವಾಗಿತ್ತು. ಈ ದೇವಾಲಯ ಅರಮನೆ ಪರಿವಾರದವರಿಗಾಗಿ ನಿರ್ಮಾಣವಾಗಿದ್ದ ದೇವಾಲಯವಾಗಿತ್ತು ಎಂಬುದು ವಿಶೇಷ.

ಶಾಸನವೊಂದರ ಪ್ರಕಾರ ಮೈಸೂರಿನ ಚಿಕ್ಕದೇವರಾಜ ಒಡೆಯರು 1687ರಲ್ಲಿ ಈ ದೇವಸ್ಥಾನವನ್ನು ಕಟ್ಟಿಸಿರುತ್ತಾರೆ. "ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರ್ಷಗಳು 1705ನೇ ವರ್ತಮಾನಕ್ಕೆ ಸಲ್ಲುವ ಪಾರ್ಥಿವ ನಾಮ ಸಂವತ್ಸರದ ಶ್ರಾವಣ ಬುಧ ಅಂಗಾರಕವಾರ ಶುಭ ಮುಹೂರ್ತದಲ್ಲಿ ಶ್ರೀ ಮಹಾರಾಜಾಧಿರಾಜ ಪರಮೇಶ್ವರ ಪ್ರೌಢ ಪ್ರತಾಪ ಪತಿಯ ನರಪತಿ ಆತ್ರೇಯ ಗೋತ್ರದ್ಭವರಾದ ಮಹಿಶಾರ ನಗರದ ಶ್ರೀದೇವರಾಜ ವಡ್ಯೆರವರ ಪುತ್ರರಾದ ಶ್ರೀ ವೀರಚಿಕ್ಕ ದೇವರಾಜ ಒಡೆಯರವರ ಪುತ್ರರಾದ ಶ್ರೀ ಕಂಠೀರವ ನರಸರಾಜ ವಡೇಯ್ಯನವರು ಶ್ರೀರಂಗ ಪಟ್ಟಣದ ಸಿಂಹಾಸನಾರೂಢರಾಗಿ ಪೃಥುವೀ ಸಾಮ್ರಾಜ್ಯವಾಳುತ್ತಿದ್ದು ತಮ್ಮ ಆಳ್ವಿಕೆಗೆ ಸಲ್ಲುವ ಬೆಂಗಳೂರು ಕೋಟೆ ಒಳಗೆ ತಮ್ಮ ಅಪ್ಪಾಜಿಯವರು ನೂತನವಾಗಿ ಪ್ರತಿಷ್ಠೆ ಮಾಡಿಸಿದಂತಾ ಶ್ರೀ ವೆಂಕಟೇಶ್ವರ ಸ್ವಾಮಿಯವರ ಪಂಡಿತರ ದೀಪರಾಧನೆಗೆ ವೇಡದಹಳ್ಳಿ ಗ್ರಾಮ ಮತ್ತು ಬಿಲ್ಲಪ್ಪನ ಹಳ್ಳಿಗ್ರಾಮವನ್ನು ಧರ್ಮಕ್ಕೆ ಬಿಡಲಾಗಿದೆ ಎಂದು ತಿಳಿಸಲಾಗಿದೆ."[78] ಚಿಕ್ಕದೇವರಾಜ ಒಡೆಯರ ತರುವಾಯ ಪಟ್ಟಕ್ಕೆ ಬಂದ ಇವರ ಮಗ ಕಂಠೀರವ ನರಸರಾಜ ಒಡೆಯರು ಈ ವೆಂಕಟೇಶ್ವರ ಗುಡಿಯಲ್ಲಿ ನಡೆಯಬೇಕಾದ ನಿತ್ಯಪೂಜೆ, ಉತ್ಸವ ಮೊದಲಾದುವುಗಳ ಖರ್ಚಿಗಾಗಿ ಬೆಂಗಳೂರಿಗೆ ಸೇರುವ ಕೆಲವು ಗ್ರಾಮವನ್ನು ದಾನವಾಗಿ ಬಿಟ್ಟುಕೊಟ್ಟರು. ಅವರು ಬರೆಸಿದ ಶಿಲಾಶಾಸನವೇ ಈ ಹೇಳಿಕೆಗೆ ಸಾಕ್ಷ್ಯಾಧಾರವಾಗಿದೆ.

ಈ ದೇವಾಲಯವು ಗರ್ಭಗುಡಿ, ಅಂತರಾಳ, ಅರ್ಧಮಂಟಪ ಮತ್ತು ತೆರದ ಮಹಾಮುಖಮಂಟಪಗಳಿಂದ ಕೂಡಿದೆ. ಮುಖ್ಯ ದೇವಾಲಯದ ಪಕ್ಕದಲ್ಲಿ ಅಮ್ಮನವರ ದೇವಸ್ಥಾನವಿದೆ. ಗರ್ಭಗುಡಿಯಲ್ಲಿ ವೆಂಕಟೇಶ್ವರನ ವಿಗ್ರಹ ಪಕ್ಕದಲ್ಲಿ ಶ್ರೀದೇವಿ ಮತ್ತು ಭೂದೇವಿ ಶಿಲ್ಪಗಳಿವೆ. ಬಾಗಿಲುವಾಡದಲ್ಲಿ ದ್ವಾರಪಾಲಕರ ಶಿಲ್ಪಗಳಿವೆ. ಮುಖಮಂಟಪದಲ್ಲಿ ಒಟ್ಟು 14 ಕಂಬಗಳಿವೆ. ಮಂಟಪದ ಮಧ್ಯದಲ್ಲಿ ನಾಲ್ಕು ಮುಖ್ಯ ಕಂಬಗಳಿವೆ. ಈ ಕಂಬಗಳು ಯಾಳಿಶಿಲ್ಪಗಳಿಂದ ಕೂಡಿವೆ. ದೇವಾಲಯದ ಹೊರಬಿತ್ತಿಯ ಮೇಲೆ ಗಿರಿಜಾಕಲ್ಯಾಣದ ಕಥನ ಶಿಲ್ಪಗಳು ಸುಂದರವಾಗಿವೆ. ಹಾಗೂ ಬಹುಸಂಖ್ಯೆಯಲ್ಲಿ ದೇವದೇವತೆಗಳ ಶಿಲ್ಪಗಳಿವೆ.

## ಮಂಚಿ ಸೋಮೇಶ್ವರ ದೇವಾಲಯ

ಚಿಕ್ಕಪೇಟೆ ವೃತ್ತದಿಂದ ನಡೆದು ಬಂದರೆ ಸಿಗುವುದು ಹಳೆ ತಾಲೂಕು ಕಛೇರಿ ರಸ್ತೆ(ಓಟಿಸಿ ರಸ್ತೆ) ಇದೇ ರಸ್ತೆಯಲ್ಲಿ ಮಂಚಿಸೋಮೇಶ್ವರ ದೇವಾಲಯವಿದೆ. ಈ ದೇವಾಲಯವನ್ನು ಕ್ರಿ.ಶ.1855ರಲ್ಲಿ ಕೊಡಗಿನ ದಿವಾನ ಮಂಜಯ್ಯನವರು ನಿರ್ಮಿಸಿದರು. ಈ ದೇವಾಲಯವು ಯಲಹಂಕ ನಾಡಪ್ರಭುಗಳ ನಂತರದ ಕಾಲದಲ್ಲಿ ನಿರ್ಮಾಣವಾಗಿದೆ. ಬೆಂಗಳೂರು ಚಿಕ್ಕಪೇಟೆಯಲ್ಲಿರುವ ಮಂಚಿ ಸೋಮೇಶ್ವರ ದೇವಸ್ಥಾನಕ್ಕೆ ಕಿ.ಶ.1855ರಲ್ಲಿ ದಾನ ನೀಡಿರುವ ಶಾಸನವಿದೆ.[79] ಸೋಮವಾರಪೇಟೆಯ ಸಿದ್ಧಗಿರಿ ಗೋಸಾವಿ, ವಿಜಯಗಿರಿ ಗೋಸಾವಿ, ಭಗವಂತಗಿರಿ ಗೋಸಾವಿ ಎಂಬುವರು ಬೆಂಗಳೂರಿಗೆ ಸೇರುವ ಬೇಗೂರು ತಾಲೂಕಿನ ತಾವರೆಕೆರೆ ಗ್ರಾಮಕ್ಕೆ ಪೂರ್ವದಿಕ್ಕಿನಲ್ಲಿರುವ ಧರ್ಮಾದೀಕ್ಷಿತರ ಮಾನ್ಯ ಹೊಲ ಖಂಡುಗ 180 ಗದ್ದೆ, ಖಂಡುಗ 180 ವಠಾರ, ಕಣ ತಿಪ್ಪೆಯನ್ನು ಧರ್ಮದೀಕ್ಷಿತರ ಮೊಮ್ಮಗ ಶಾಂಭಟ್ಟರಿಂದ ರೂ 400ಕ್ಕೆ ಕೊಂಡು ಬೆಂಗಳೂರು ಅರಳೇ ಪೇಟೆಗೆ ಸೇರುವ ಮಂಚಿ ಸೋಮೇಶ್ವರ ಸ್ವಾಮಿಯ ಪಡಿತರ ದೀಪಾರಾಧನೆ ಅರ್ಚಕ ಪರಿಚಾರಿಕೆಗೆ ಚೆನ್ನಾಗಿ ನಡೆಯುವುದಕ್ಕೆ ನೀಡಿದ ದಾನ ಶಾಸನ ಇದಾಗಿದೆ.

ಈ ದೇವಾಲಯದ ಗುಡಿಯ ಮುಂದೆ ಮತ್ತೂ ಎರಡು ಶಾಸನಗಳು ದೊರೆತಿವೆ. ಈ ಶಾಸನವು 17 ಸಾಲುಗಳಿಂದ ಕೂಡಿರುವ ದಾನಶಾಸನ.[80] ಕೊಡಗು ಸಂಸ್ಥಾನದ ಅಂದಿನ ಅರಸನ ದಿವಾನನಾದ ಮಂಜಯ್ಯನು ಚಿಕ್ಕ ಪೇಟೆಯಲ್ಲಿನ ಸ್ವಗೃಹ ವಠಾರದಲ್ಲಿ ಮನೆದೇವರಾದ ಮಂಜೇಶ್ವರ ಮತ್ತು ಮಂಜಿ ಸೋಮೇಶ್ವರ ದೇಗುಲವನ್ನು ಸ್ವಂತಕ್ಕಾಗಿ ಕಟ್ಟಿಸಿದ ವಿಷಯ ತಿಳಿಯುತ್ತದೆ. ಹಾಗೂ ಕ್ರಿ.ಶ.1797ರ ನಳಸಂವತ್ಸರದಲ್ಲಿ ಚೈತ್ರದಲ್ಲಿ ಗುರುಬೃಂದಾವನವನ್ನು ಪ್ರತಿಷ್ಠಾಪಿಸಿದ ವಿಷಯ ತಿಳಿಯುತ್ತದೆ. ಈ ದಿವಾನನು ಕೊಡಗು ಸಂಸ್ಥಾನದ ಮಹಾರಾಜ ದೊಡ್ಡ ವೀರರಾಜೇಂದ್ರ ಒಡೆಯನ ದಿವಾನನಾಗಿದ್ದ. ರಾಜನ ಪರವಾಗಿ ಈ ಉಭಯ ದೇಗುಲಗಳಿಗೆ ಧೂಪ ದೀಪಾರಾಧನೆಯ ಉದ್ದೇಶಕ್ಕಾಗಿ ಕೊಡಗಿನ ಅಪ್ಪಂಗಳ ಜಹಗೀರನ ನೂರ ಭಟ್ಟಿ(ಸು.3 ಎಕರೆ) ಭೂಮಿಯನ್ನು ದಾನ ನೀಡಿ ಸನ್ನದು ಮಾಡಿ ದಿವಾನನ ಸ್ವಹಸ್ತ ಹಾಕಿಸಿ ಕೊಟ್ಟಿದ್ದಾನೆ. ಇದಲ್ಲದೆ ಈ ದಾನಕ್ಕೆ ದೊಡ್ಡ ವೀರರಾಜೇಂದ್ರ ಒಡೆಯರು, ಮಹಾರಾಣಿ ಮಹದೇವರಾಜಮ್ಮಾಜಿ ಹಾಗೂ ಮಂಜಯ್ಯ ದಿವಾನನ ಹೆಸರುಗಳು ಸ್ವಹಸ್ತವೆಂಬಂತೆ ನಮೂದು ಆಗಿದೆ. ಹೀಗೆ ಮೈಸೂರು ಒಡೆಯರು ಮತ್ತು ಕೊಡಗಿನ ಅರಸು ಮನೆತನದವರು ಮಂಚಿ ಸೋಮೇಶ್ವರ ದೇವಾಲಯಕ್ಕೆ ದಾನವನ್ನು ನೀಡಿದ್ದಾರೆ.

ಈ ದೇವಾಲಯವು ಪೂರ್ವಾಭಿಮುಖವಾಗಿದ್ದು ಗರ್ಭಗುಡಿ, ಅಂತರಾಳ ಮತ್ತು ನವರಂಗದಿಂದ ಕೂಡಿದೆ. ಹೆಚ್ಚು ಅಲಂಕಾರಗಳಿಲ್ಲ. ನವರಂಗದ ಮಂಟಪದ ಕಂಬಗಳಲ್ಲಿ

ಶಿವಲಿಂಗ, ನಂದಿ, ನರ್ತನ ಸ್ತ್ರೀಯರು, ಕುಳಿತಿರುವ ಸಿಂಹಗಳ ಉಬ್ಬುಶಿಲ್ಪಗಳಿವೆ. ಅಮ್ಮನವರ ಗುಡಿಯೊಂದಿದೆ. ಇದು ಇತ್ತೀಚೆಗೆ ನಿರ್ಮಿಸಿರುವುದಾಗಿದೆ.

## ಅಗರ ಗ್ರಾಮದ ವೆಂಕಟೇಶ್ವರ ದೇವಾಲಯ

ಬೆಂಗಳೂರು ನಗರದ ಅಗರ ಪ್ರದೇಶದಲ್ಲಿರುವ ವೆಂಕಟೇಶ್ವರ ದೇವಾಲಯದಲ್ಲಿ 18ನೇ ಶತಮಾನದ ಎರಡು ಶಾಸನಗಳು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಪತ್ತೆಯಾದವು. ಇತ್ತೀಚೆಗೆ ಜೀರ್ಣೋದ್ಧಾರದ ಸಂದರ್ಭದಲ್ಲಿ ದೇವಾಲಯದ ಭಿತ್ತಿಯಲ್ಲಿದ್ದ ಈ ಶಿಲಾಶಾಸನಗಳನ್ನು ರಾಯಗೋಪುರದ ಬಾಗಿಲಿನ ಇಕ್ಕೆಲದ ಹೊರಭಿತ್ತಿಯ ಕೆಳಭಾಗದಲ್ಲಿ ಜೋಡಿಸಿದ್ದಾರೆ. ಇಲ್ಲಿನ ಮೊದಲನೇ ಶಾಸನವು ಸುಮಾರು ಒಂದುವರೆ ಅಡಿ ಎತ್ತರ ಹಾಗೂ 5 ಅಡಿ ಅಗಲವಾದ ಕಣಶಿಲೆಯ ಮೇಲೆ ಕೊರೆಯಲಾಗಿದೆ. ಈ ಶಾಸನವು ಕನ್ನಡಲಿಪಿ ಮತ್ತು ಸಂಸ್ಕೃತ ಭಾಷೆಯಲ್ಲಿ ರಚನೆಯಾಗಿದೆ. ಲಿಪಿಯ ದೃಷ್ಟಿಯಿಂದ ಈ ಶಾಸನವನ್ನು ಕ್ರಿ.ಶ.18ನೇ ಶತಮಾನದೆಂದು ಗುರುತಿಸಬಹುದು.

ಈ ಶಾಸನವು ನಂಜರೆಡ್ಡಿ ಮತ್ತು ನಂದ್ಯಾಂಭರ ಪುತ್ರನಾದ ರಾಮರೆಡ್ಡಿ ಎಂಬುವನು ಅಗರದಲ್ಲಿ ನೂತನವಾಗಿ ಶ್ರೀನಿವಾಸ ದೇವಾಲಯವನ್ನು ನಿರ್ಮಿಸಿರುವ ವಿಷಯವನ್ನು ದಾಖಲಿಸಿದೆ. ಇದೇ ದೇವಾಲಯದಲ್ಲಿ ದೊರೆತ ಮತ್ತೊಂದು ಶಾಸನವು ದೇವಾಲಯದ ವಾಸ್ತುರಚನೆಗೆ ಸಂಬಂಧಿಸಿದಂತೆ ರಚನೆಯಾದ ಅಪರೂಪದ ಶಾಸನವಾಗಿದೆ.[81] ಶಾಸನಗಳಲ್ಲಿ ಸಾಮಾನ್ಯವಾಗಿ ದೇವಾಲಯ ನಿರ್ಮಾಣ, ದಾನದತ್ತಿ ಸಂಬಂಧಿಸಿದ ವಿಷಯಗಳು ಇರುತ್ತವೆ. ಆದರೆ ಈ ಶಾಸನದಲ್ಲಿ ದೇವಾಲಯದ ವಾಸ್ತುರಚನೆಯ ಭಾಗಗಳಾದ ಗರ್ಭಗುಡಿ, ಸುಖನಾಸಿ, ಅಂತರಾಳ, ನವರಂಗ, ಮುಖಮಂಟಪ, ಮಹಾದ್ವಾರಗಳನ್ನು ದೇವಾಲಯ ರಚನೆಗೊಂಡಿರುವಂತೆ ಚೌಕಾಕಾರದ ಪಟ್ಟಿ(Box)ಗಳಲ್ಲಿ ಗುರುತಿಸಿರುವುದನ್ನು ಕಾಣಬಹುದು. ಈ ದೇವಾಲಯ ಹೊಂದಿರಬಹುದಾದ ವಿಸ್ತೀರ್ಣದ ಅಳತೆಯನ್ನು ಪೂರ್ವಪಶ್ಚಿಮ 35(ಅಡಿ?), ಗೂಡ(ಗರ್ಭಗೃಹ?), ಉತ್ತರ 35 ಎಂದು ಸೂಚಿಸುತ್ತದೆ. ದೇವಾಲಯ ಕಟ್ಟಲು ಖರ್ಚಾದ ವೆಚ್ಚದ ಬಗ್ಗೆಯೂ ವಿವರಣೆ ಇದೆ.

ಈ ಶಾಸನದ ಕೊನೆಯಲ್ಲಿ ಶ್ರೀಮಹಾದಾನ ಎಂಬ ಪದ ಪ್ರಯೋಗ ಬರುವುದರಿಂದ ದೇವಾಲಯಕ್ಕೆ ಹಣವನ್ನು ದಾನವಾಗಿ ನೀಡಿರುವುದು ಸ್ಪಷ್ಟವಾಗುತ್ತದೆ. ಈ ಶಾಸನದಲ್ಲಿ ದೇವಾಲಯ ನಿರ್ಮಿಸಿದವರ ಹಾಗೂ ದಾನನೀಡಿದವರ ವಿವರಗಳಿಲ್ಲ. ಆದ್ದರಿಂದ ಈ ಎರಡು ಶಾಸನಗಳನ್ನು ಒಂದೇ ಕಾಲದಲ್ಲಿ ಹಾಕಿಸಿರುವ ಸಾಧ್ಯತೆಗಳಿವೆ. ಏಕೆಂದರೆ ಒಂದನೇ ಶಾಸನದಲ್ಲಿ

ದೇವಾಲಯ ನಿರ್ಮಾಣದ ವಿಷಯವನ್ನು ತಿಳಿಸಿ, ಎರಡನೇ ಶಾಸನದಲ್ಲಿ ದೇವಾಲಯ ನಿರ್ಮಾಣ ಮಾಡಿರುವ ವಾಸ್ತು ರಚನೆಯನ್ನು ಹಾಗೂ ಖರ್ಚಿನ ವಿಚಾರವನ್ನು ತಿಳಿಸಲಾಗಿದೆ.

ಪ್ರಸ್ತುತ ಈ ದೇವಾಲಯವು ಮೈಸೂರು ಒಡೆಯರ ಕಾಲದಲ್ಲಿ ನಿರ್ಮಾಣವಾಗಿದ್ದು, ಗರ್ಭಗೃಹ, ಅಂತರಾಳ, ನವರಂಗ, ಮುಖಮಂಟಪ ಮತ್ತು ರಾಯಗೋಪುರಗಳನ್ನು ಹೊಂದಿದೆ. ಈ ದೇವಾಲಯದ ಗರ್ಭಗುಡಿಯಲ್ಲಿ ವೆಂಕಟೇಶ್ವರನ ವಿಗ್ರಹವಿದೆ. ನವರಂಗದಲ್ಲಿ ಚನ್ನಕೇಶವ, ವಿಶ್ವಕ್ಸೇನ, ಆಳ್ವಾರರ ವಿಗ್ರಹವಿದೆ. ಬಾಗಿಲುವಾಡದ ಲಲಾಟದಲ್ಲಿ ಗಜಲಕ್ಷ್ಮೀ ಶಿಲ್ಪವಿದೆ. ಬಾಗಿಲಿನ ಇಕ್ಕೆಲದಲ್ಲಿ ಜಯ ವಿಜಯರ ಶಿಲ್ಪಗಳಿವೆ. ಬಾಗಿಲನ್ನು ಲತಾಬಳ್ಳಿಗಳಿಂದ ಅಲಂಕರಿಸಲಾಗಿದೆ. ದೇವಾಲಯದ ಆವರಣದಲ್ಲಿ 4 ಅಡಿ ಎತ್ತರದ ಬಲಿಪೀಠವಿದೆ. ಈ ಬಲಿಪೀಠದ ಕೆಳಭಾಗದಲ್ಲಿ ಎಂಟು ದಿಕ್ಕುಗಳಲ್ಲಿಯೂ ಆನೆ ಶಿಲ್ಪವಿದ್ದು, ಪೀಠವನ್ನು ಹೊತ್ತಿರುವಂತೆ ಕೆತ್ತಲಾಗಿದೆ. ಮೇಲ್ಭಾಗದಲ್ಲಿ ವಿಷ್ಣುವಿನ ಶಿಲ್ಪಗಳಿಂದ ವಿಶೇಷವಾಗಿ ರಚನೆಯಾಗಿದೆ.

## ನಗರೇಶ್ವರ ದೇವಾಲಯ

ನಗರ್ತ ಪೇಟೆಯ ಮುಖ್ಯರಸ್ತೆಯಲ್ಲಿ ನಗರೇಶ್ವರಸ್ವಾಮಿ ದೇವಸ್ಥಾನವಿದೆ. ಈ ದೇವಾಲಯದ ಮುಖಮಂಟಪದ ಶಿರೋಭಾಗದಲ್ಲಿ ಕ್ರಿ.ಶ.1884ರ ಶಾಸನವೊಂದು ದೊರೆತಿದೆ. ಈ ಶಾಸನದಲ್ಲಿ ನಗರ್ತರಯ ತನ್ನ ಇಷ್ಟದೈವವಾಗಿ ಸ್ವೀಕರಿಸಿರುವ ಶ್ರೀ ನಗರೇಶ್ವರನನ್ನು ಆದಿಯಲ್ಲಿ ಉಲ್ಲೇಖಿಸಲಾಗಿದೆ. ನಮ್ಮನ್ನು ಆಳಿದ ಧರ್ಮಪ್ರಭು ಮುಮ್ಮಡಿ ಕೃಷ್ಣರಾಜ ಒಡೆಯರವರ ದತ್ತುಪುತ್ರ ಶ್ರೀ ಚಾಮರಾಜೇಂದ್ರ ಒಡೆಯರವರ ಆಳ್ವಿಕೆಯಲ್ಲಿ ಸಹಸ್ರ ಋಷಿಗಳದ್ಗೋತ್ರದಲ್ಲಿ ಉತ್ಪನ್ನರಾಗಿ ಸತ್ಯವಾದಿಳಾದ ಗರುಡನ ಉಪಾಸನೆಯಿಂದ ಪಡೆದ ಗುತ್ಮಾನ್ ಎಂಬ ಉಜ್ವಲ ಬಿರುದಿನಿಂದ ಕೂಡಿದ ಅಯೋಧ್ಯಾನಗರದಿಂದ ಬಂದ ಪಂಚ ದ್ರಾವಿಡ ವರ್ಗಕ್ಕೆ ಸೇರಿದ ಧರ್ಮವಾರಿಧಿಯಿಂದ ಹೇಮಪಾಲ, ಶೆರಿಯಾ ಮುಂತಾದ ಪೂರ್ವಿಕರಿಂದ ಕೂಡಿದ ದಶರಥನು ಆದಿಯಾಗಿ ಉಳ್ಳ ರಾಜರುಗಳಿಂದ ಸನ್ಮಾನಿತರಾದ, ಕಲ್ಯಾಣನಗರದಲ್ಲಿ ವಾಸ ಮಾಡುತ್ತಿರುವ ನಗರಸ್ತ ಮಹಾಜನಗಳಿಂದ ಶ್ರೀಯುಕ್ತ ಕುಲದೇವನಾದ ನಗರೇಶ್ವರ ಶಾಶ್ವತವಾದ ದೇವಾಲಯವು ನಕ್ಷತ್ರ ಸಹಿತವಾದ ಚಂದ್ರ ಇರುವವರೆಗೆ ಇರಲೆಂದು ಪ್ರತಿಷ್ಠಾಪಿಸಲ್ಪಟ್ಟಿತು[82] ಎಂದಿದೆ. ಇತ್ತೀಚೆಗೆ ಈ ದೇವಾಲಯವನ್ನು ಜೀರ್ಣೋದ್ಧಾರ ಮಾಡಲಾಗಿದೆ. ದೇವಾಲಯದ ಗರ್ಭಗುಡಿ ಪೂರ್ವಾಭಿಮುಖವಾಗಿದೆ. ಗರ್ಭಗುಡಿಯಲ್ಲಿ ಸುಮಾರು ಎರಡು ಅಡಿ ಎತ್ತರದ ನಗರೇಶ್ವರನ ಲಿಂಗವಿದೆ. ಕೆಂಪೇಗೌಡನ ಕಾಲದಲ್ಲಿ ವ್ಯಾಪಾರಿಗಳಿಗೆ ಹಾಗೂ ಹಲವು ಧರ್ಮೀಯರಿಗೆ ಮತ್ತು ಜನಾಂಗದವರಿಗಾಗಿ ಪೇಟೆಗಳನ್ನು ಹಾಗೂ ಅವರ ಇಷ್ಟದೈವಗಳ ದೇವಾಲಯವನ್ನು ನಿರ್ಮಾಣ

ಮಾಡಲಾಗುತ್ತಿತ್ತು. ಅಂತಹ ದೇವಾಲಯಗಳಲ್ಲಿ ನಗರ್ತ ಜನಾಂಗದವರಿಗಾಗಿ ನಿರ್ಮಿಸಲಾದ ದೇವಾಲಯ ಇದಾಗಿದೆ.

ಕರ್ನಾಟಕದಲ್ಲಿ ಎಲ್ಲಾ ಧರ್ಮಗಳು ದೇವಾಲಯಗಳ ನಿರ್ಮಾಣ ಮತ್ತು ನಿರ್ವಹಣೆಗೆ ಅಪಾರವಾಗಿ ಶ್ರಮಿಸಿವೆ. ಇದಕ್ಕೆ ಬೆಂಗಳೂರೇನು ಹೊರತಾಗಿಲ್ಲ. ಸುಮಾರು 16ನೇ ಶತಮಾನದ ಹೊತ್ತಿಗೆ ಬೆಂಗಳೂರಿನ ನಗರ್ತಪೇಟೆ, ದೊಡ್ಡಪೇಟೆ, ಅರಳೇಪೇಟೆ, ಮಾಮುಲ್‌ಪೇಟೆಯಲ್ಲಿ ನಲವತ್ತನಾಲ್ಕು ದೇವಾಲಯಗಳನ್ನು ವಿವಿಧ ಜನಾಂಗದವರು ನಿರ್ಮಿಸಿದ್ದಾರೆ. ಉದಾಹರಣೆಗೆ ನೋಡುವುದಾದರೆ, ನಗರ್ತಪೇಟೆಯಲ್ಲಿರುವ ಪ್ರಸನ್ನ ಗಂಗಾಧರೇಶ್ವರ ದೇವಾಲಯ ಹಾಗೂ ರಾಮೇಶ್ವರ ದೇವಾಲಯಗಳನ್ನು ಬ್ರಾಹ್ಮಣ ಮುಖ್ಯಸ್ಥರು ಕಟ್ಟಿಸಿದ್ದು. ಧರ್ಮರಾಜನ ದೇವಾಲಯವನ್ನು ತೋಟಗಾರರು, ಗೋಪಾಲಕೃಷ್ಣನ ದೇವಾಲಯವನ್ನು ದಾಸರು ಕಟ್ಟಿಸಿದ್ದಾರೆ. ದೊಡ್ಡಪೇಟೆಯಲ್ಲಿರುವ ನಾಗಪ್ಪನ ಗುಡಿಯನ್ನು ಗಾಜಿನ ಬಳೆ ಮಾರುವವರು, ನರಸಿಂಹಸ್ವಾಮಿ ದೇವಾಲಯವನ್ನು ನಾಲ್ವರು ವರ್ತಕರು, ವಾಲಿ ಮತ್ತು ಸುಗ್ರೀವ ದೇವಾಲಯವನ್ನು ಕೆರೆ ಅಗೆಯುವವರು, ಕಾಶಿ ಈಶ್ವರ ದೇವಾಲಯವನ್ನು ಗುಜರಾತಿ ಬ್ರಾಹ್ಮಣರು ಕಟ್ಟಿಸಿದ್ದಾರೆ. ಅರಳೇಪೇಟೆಯಲ್ಲಿರುವ ಈಶ್ವರ ದೇವಾಲಯವನ್ನು ಬಲಿಜ ವರ್ತಕರು, ಆದಿ ನಾರಾಯಣ ಸ್ವಾಮಿ ದೇವಾಲಯವನ್ನು ಹತ್ತಿ ವ್ಯಾಪಾರಿಗಳು, ಬೀರೆದೇವರ ದೇವಾಲಯವನ್ನು ನೇಕಾರರು, ವಿಶ್ವನಾಥ ರಾಮನಾಥ ದೇವಾಲಯವನ್ನು ಬನಿಯಾಗಳು (ಮಾರವಾಡಿ ವರ್ತಕರು) ಕಟ್ಟಿಸಿದ್ದಾರೆ.[83] ಹೀಗೆ ಬೆಂಗಳೂರಿನಲ್ಲಿರುವ ದೇವಾಲಯವನ್ನು ಹಲವು ಜಾತಿ, ಜನಾಂಗದವರು ನಿರ್ಮಿಸಿದ್ದಾರೆ.

ಹೀಗೆ ಪ್ರಾಚೀನ ಕಾಲದಲ್ಲಿ ದೇವಸ್ಥಾನಗಳು ಸಾಮಾಜಿಕ, ಸಾಂಸ್ಕೃತಿಕ ಕೇಂದ್ರಗಳ ನೆಲೆವೀಡಾಗಿ ವ್ಯವಸ್ಥಿತವಾದ ಸಂಸ್ಥೆಗಳಾಗಿದ್ದು ಜನತೆಯ ಮೇಲೆ ಪ್ರಭಾವವನ್ನು ಬೀರಿದ್ದವು. ದೇವಾಲಯವು ಊರಿನ ಕೇಂದ್ರ ಬಿಂದುವಾಗಿ ಆಯಾ ಊರಿನ ಸಾಂಸ್ಕೃತಿಕ ಜೀವನದ ವೃದ್ಧಿಗೆ ಕಾರಣೀಭೂತವಾಗಿದ್ದವು. ಬೆಂಗಳೂರಿನಲ್ಲಿ ಎಲ್ಲಾ ದಿಕ್ಕುಗಳಲ್ಲಿಯೂ ಒಂದಿಲ್ಲೊಂದು ಪ್ರಾಚೀನ ದೇವಾಲಯಗಳನ್ನು ಕಾಣಬಹುದು. ಇಂತಹ ಪ್ರಾಚೀನ ದೇವಾಲಯವನ್ನು ಉಲ್ಲೇಖಿಸುವ ಶಾಸನಗಳು ದೊರಕಿರುವುದು ಇನ್ನೂ ವಿಶೇಷ. ಬೆಂಗಳೂರು ನಗರವನ್ನು ಲೇಕ್‌ಸಿಟಿ, ಸಿಲಿಕಾನ್‌ಸಿಟಿ, ಉದ್ಯಾನನಗರಿ ಎಂದೆಲ್ಲಾ ಕರೆಯುವುದರ ಜೊತೆಗೆ ದೇವಾಲಯಗಳ ನಗರಿ ಎಂತಲೂ ಕರೆಯುತ್ತಾರೆ.

## ಕೊನೆ ಟಿಪ್ಪಣಿಗಳು

1. ಕನ್ನಡ ಸಂಕ್ಷಿಪ್ತ ನಿಘಂಟು, ಕನ್ನಡ ಸಾಹಿತ್ಯ ಪರಿಷತ್ತು, ಪು.922
2. ಯಳನಾಡು ಅಂಜನಪ್ಪ–ಧರ್ಮ ಮತ್ತು ಮುಕ್ತ ವಿಚಾರ, ಪು.16,18
3. ಪೂರ್ವೋಕ್ತ, ಧರ್ಮ ಮತ್ತು ಮುಕ್ತ ವಿಚಾರ, ಪು.14
4. ಹಾ.ಮಾ.ನಾಯಕ(ಸಂ)–ಕನ್ನಡ ವಿಷಯ ವಿಶ್ವಕೋಶ, ಪು.518
5. ಸಾಸಲು ಜೆ.ವಿಶ್ವನಾಥ– ರಾಜಘಟ್ಟದ ಐತಿಹಾಸಿಕ ವಿವೇಚನೆ ಹಾಗೂ ದೇಗುಲವೊಂದರ ಶೋಧ, ಎಂ.ಜಿ.ನಾಗರಾಜ್, ಪಿ.ವಿ.ಕೃಷ್ಣಮೂರ್ತಿ(ಸಂ)–ಇತಿಹಾಸ ದರ್ಶನ, ಸಂಪುಟ–19, ಪು.6,7
6. ಬಿ.ಎಲ್.ರೈಸ್(ಸಂ)–EC XII ತುಮಕೂರು–12, ಗೂಳೂರು, ಪು.214
7. ಪೂರ್ವೋಕ್ತ, ತಿಪಟೂರು–01, ತುರುವೇಕೆರೆ, ಪು.114
8. ಬೌದ್ಧ ಕೇಂದ್ರ 'ಕಲಾವತಿ' ನಗರದ ಅಭಿಜ್ಞೆ – ಸಾಧನೆ(ತ್ರೈಮಾಸಿಕ), ಸಂಪುಟ–15, ಸಂಚಿಕೆ.3–4, ಜುಲೈ–ಡಿಸೆಂಬರ್ 1986, ಪು.12
9. ಸೂರ್ಯನಾಥ ಯು ಕಾಮತ್, ಪ್ರೊ.ಎಂ.ಎಚ್.ಕೃಷ್ಣಯ್ಯ(ಸಂ)–ಬೆಂಗಳೂರು ದರ್ಶನ, ಪು.52
10. ಬಿ.ಎಲ್.ರೈಸ್(ಸಂ)–EC-IX ನೆಲಮಂಗಲ–60, ಪು.79
11. ಪೂರ್ವೋಕ್ತ, ನೆಲಮಂಗಲ–61, ಮಣ್ಣೆ, ಪು.82
12. ಪೂರ್ವೋಕ್ತ, ಬೆಂಗಳೂರು–93, ಬೇಗೂರು, ಪು.32
13. ಪೂರ್ವೋಕ್ತ, ಬೇಗೂರು–94, ಪು.32
14. ಪೂರ್ವೋಕ್ತ, ಬೆಂಗಳೂರು–95, ಪು.32
15. ಚಿದಾನಂದ ಮೂರ್ತಿ–ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.92
16. ಬಿ.ಎಲ್.ರೈಸ್(ಸಂ)–EC-IX ಬೆಂಗಳೂರು–35, ದೊಡ್ಡಬಿದರಕಲ್ಲು, ಪು.18
17. ಪೂರ್ವೋಕ್ತ, ಮಾಗಡಿ–18, ಕಲ್ಯ, ಪು.106
18. ಡಾ.ಚಿದಾನಂದಮೂರ್ತಿ–ಕನ್ನಡ ಶಾಸನಗಳ ಸಾಂಸ್ಕೃತಿಕ ಸಾಂಸ್ಕೃತಿಕ ಅಧ್ಯಯನ, ಪು.114
19. ಪೂರ್ವೋಕ್ತ–154
20. ಪೂರ್ವೋಕ್ತ, ಬೆಂಗಳೂರು–42, ನಾಗೊಂಡಳ್ಳಿ, ಪು.20

21. ದೇವರಕೊಂಡಾರೆಡ್ಡಿ–ದೊಡ್ಡಬೇಗೂರಿನ ನಾಗತ್ತರನ ಶಾಸನ, ಇತಿಹಾಸ ದರ್ಶನ, ಸಂಪುಟ–2 ಪು.158

22. ಬಿ.ಎಲ್.ರೈಸ್(ಸಂ)–EC-IX ಹೊಸಕೋಟೆ–86, ಪು.87

23. ಪೂರ್ವೋಕ್ತ, ಹೊಸಕೋಟೆ–12 ಸಿದ್ದನಹಳ್ಳಿ, ಪು.198

24. ಪೂರ್ವೋಕ್ತ, ನೆಲಮಂಗಲ–37ಎ, ಪು.67

25. ಡಾ.ಕೆ.ರಾಜೇಶ್ವರಿ ಗೌಡ–ಆದಿಚುಂಚನಗಿರಿ ಒಂದು ಸಾಂಸ್ಕೃತಿಕ ಅಧ್ಯಯನ, ಪು.173,176

26. ಬಿ.ಎಲ್.ರೈಸ್(ಸಂ)–EC-IX ನೆಲಮಂಗಲ–1, ಸೋಲದೇವನಹಳ್ಳಿ, ಪು.55

27. ಯಲಹಂಕ ನಾಡ ಪ್ರಭುಗಳ ವಾಸ್ತುಶಿಲ್ಪ ಮತ್ತು ಶಿಲ್ಪಕಲೆ–ಎಸ್.ಕೆ.ಅರುಣಿ, ಪು.165

28. ಚಿ.ನ.ಮಂಗಳ–ಮಾತೃಪೂಜೆ, ಪು.5,6

29. ಎಸ್.ಸಿ. ನಂದಿಮಠ–ಕನ್ನಡ ನಾಡಿನ ಚರಿತ್ರೆ, ಭಾಗ–2, ಪು.111

30. ಚಿ.ನ.ಮಂಗಳ–ಮಾತೃಪೂಜೆ, ಪು.6

31. ದೇವರಕೊಂಡಾರೆಡ್ಡಿ–ತಲಕಾಡಿನ ಗಂಗರ ದೇವಾಲಯಗಳು, ಪು.102

32. ಡಾ.ಸಿ.ಯು.ಮಂಜುನಾಥ–ಶಾಸನಗಳು ಮತ್ತು ಕರ್ಣಾಟಕ ಸಂಸ್ಕೃತಿ, ಪು.98

33. ಡಾ.ಬಾ.ರಾ.ಗೋಪಾಲ್–ಕರ್ನಾಟಕದಲ್ಲಿ ಶ್ರೀರಾಮಾನುಜಾಚಾರ್ಯರು, ಪು.55

34. ಬಿ.ಎಲ್.ರೈಸ್(ಸಂ)–EC-IX ಬೆಂಗಳೂರು–28, ಪು.15

35. ಪೂರ್ವೋಕ್ತ, ಬೆಂಗಳುರು–19, ಚಿಕ್ಕಬೆಟ್ಟಹಳ್ಳಿ, ಪು.12

36.ಲಕ್ಷ್ಮಣ ತೆಲಗಾವಿ–ವಿಜಯನಗರ ಕಾಲದ ರಾಮಾನುಜಕೂಟಗಳು, ಪು.3

37. ಬಿ.ಎಲ್.ರೈಸ್(ಸಂ)–EC-IX ಬೆಂಗಳೂರು–104, ಬಿಳಕನಹಳ್ಳಿ ಪು.37

38. ಪೂರ್ವೋಕ್ತ, ಚಿಕ್ಕ ಹೆಜ್ಜಾಜಿ–46, ಪು.150

39. ಬಿ.ಸಿ. ವೀರಪ್ಪ–ಬೆಂಗಳೂರು ನಗರದ ವೀರಶೈವ ಮಠಗಳು, ಪು.74

40. ಕರ್ಲಮಂಗಲಂ ಶ್ರೀಕಂಠಯ್ಯ–ಕೆಂಪೇಗೌಡನ ಜಯಪ್ರಶಸ್ತಿ, ಮುನ್ನುಡಿ, ಪು.40

41. ಪಿ.ವಿ.ಕೃಷ್ಣಮೂರ್ತಿ–ಕೆಂಪೇಗೌಡನ ಜಯಪ್ರಶಸ್ತಿ ಒಂದು ಚಾರಿತ್ರಿಕ ಪರಿಶೀಲನೆ, ಇತಿಹಾಸ ದರ್ಶನ, ಸಂಪುಟ–4, ಪು.118

42. ಬಿ.ಎಲ್.ರೈಸ್(ಸಂ)–EC-IX ಬೆಂಗಳೂರು–2, ಚಿಕ್ಕಪೇಟೆ, ಪು.2

43. ಪೂರ್ವೋಕ್ತ, ಕಾನಕಾನಹಳ್ಳಿ–89, ಪು.287

44. ಪೂರ್ವೋಕ್ತ, ಕಾನಕಾನಹಳ್ಳಿ–90, ಪು.288

45. ಎಂ.ಎಂ.ಕಲಬುರ್ಗಿ–ಶಾಸನಗಳಲ್ಲಿ ಶಿವಶರಣರು, ಪು.68

46. ಬಿ.ಎಲ್.ರೈಸ್(ಸಂ)–EC-IX ಬೆಂಗಳೂರು–106 ಕೆಂಗೇರಿ, ಪು.38

47. ಬಿ.ಸಿ.ವೀರಪ್ಪ–ಬೆಂಗಳೂರು ನಗರದ ವೀರಶೈವ ಮಠಗಳು ಒಂದು ಸಾಂಸ್ಕೃತಿಕ ಅಧ್ಯಯನ, ಪು.69

48. Rice.B.L : Mysore A Gazetteer Compiled for Government, Vol-I -479

49. ಡಾ.ಎಂ.ಜಿ.ಮಂಜುನಾಥ–ಬೆಂಗಳೂರಿನ ಬಖೈರುಗಳು, ಪು.47

50. ಬಿ.ಎಲ್.ರೈಸ್(ಸಂ)–EC-IX ಆನೇಕಲ್ಲು–3, ಸರ್ಜಾಪುರ, ಪು.235

51. ಪೂರ್ವೋಕ್ತ, ಆನೇಕಲ್ಲು–2, ಪು.194

52. ಬಿ.ಎಂ.ಶ್ರೀ(ಸಂ)–ಕನ್ನಡ ನಾಡಿನ ಚರಿತ್ರೆ, ಕರ್ನಾಟಕದ ಧರ್ಮಗಳು, ಸಂಪುಟ–2, ಪು.340

53.ಡಾ.ಆರ್.ಗೋಪಾಲ್(ಸಂ)–ಬೆಂಗಳೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪು.310

54. ದೇವರಕೊಂಡಾರೆಡ್ಡಿ–ದೊಡ್ಡಬೇಗೂರಿನ ನಾಗತ್ತರನ ಶಾಸನ, ಇತಿಹಾಸ ದರ್ಶನ, ಸಂಪುಟ–2, ಪು.158

55. ಬಿ.ಎಲ್.ರೈಸ್(ಸಂ)–EC-IX ಬೆಂಗಳೂರು–93, ಬೇಗೂರು, ಪು.32

56. ಬಿ.ಎಲ್.ರೈಸ್(ಸಂ)–EC-IX ಬೆಂಗಳೂರು–85, ಬೇಗೂರು, ಪು.31

57. ಬಿ.ಎಲ್.ರೈಸ್(ಸಂ)–EC-IX ಬನ್ನೇರುಘಟ್ಟ–87, ಪು.265

58. ಪೂರ್ವೋಕ್ತ, ಆನೇಕಲ್ಲು–82, ಪು.254

59. ಪೂರ್ವೋಕ್ತ, ಆನೇಕಲ್ಲು–85, ಪು.255

60. ಪೂರ್ವೋಕ್ತ, ಆನೇಕಲ್ಲು–86, ಪು.255

61. ಅನುಬಂಧ ಸಂಪುಟ, EC IX ಬೆಂಗಳೂರು–111, ಪು.10

62. ಬಿ.ಎಲ್.ರೈಸ್(ಸಂ)–EC IX ಬೆಂಗಳೂರು–13, ದೊಮ್ಮಲೂರು, ಪು.11

63. ಪೂರ್ವೋಕ್ತ, ಬೆಂಗಳೂರು–8, ದೊಮ್ಮಲೂರು, ಪು.10

64.EC IX ಅನುಬಂಧ ಸಂಪುಟ, ಬೆಂಗಳೂರು–164, ಪು.34

65.ಬಿ.ಎಲ್.ರೈಸ್(ಸಂ)–EC IX ಬೆಂಗಳೂರು–16, ಯಲಹಂಕ, ಪು.11

66.ಪೂರ್ವೋಕ್ತ, ಬೆಂಗಳೂರು, ಯಶವಂತಪುರ–127, ಪು.47

67. ಪೂರ್ವೋಕ್ತ, ಬೆಂಗಳೂರು, ಹಾರೋಹಳ್ಳಿ–28, ಪು.15

68. ಪೂರ್ವೋಕ್ತ, ಬೆಂಗಳೂರು, ಅಲ್ಲಾಳಸಂದ್ರ–30, ಪು.16

69. EC IX ಅನುಬಂಧ ಸಂಪುಟ, ಬೆಂಗಳೂರು–165, ಪು.35

70.ಬಿ.ಎಲ್.ರೈಸ್(ಸಂ)–EC-IX ಬೆಂಗಳೂರು–78, ಪು.28

71. EC IX ಅನುಬಂಧ ಸಂಪುಟ, ಬೆಂಗಳೂರು–159, ಪು.33

72. ಡಾ.ಆರ್.ಗೋಪಾಲ್–ನಾಡಪ್ರಭು ಕೆಂಪೇಗೌಡರ ಜೀವನ ಮತ್ತು ಸಾಧನೆಗಳು, ಪು.229

73. ಬಿ.ಎಲ್.ರೈಸ್(ಸಂ)–EC-IX ಬೆಂಗಳೂರು–70, ಸುಂಕೇನಹಳ್ಳಿ, ಪು.27

74. ಎಸ್.ಕೆ.ಅರುಣಿ–ಯಲಹಂಕ ನಾಡಪ್ರಭುಗಳ ವಾಸ್ತುಶಿಲ್ಪ ಮತ್ತು ಶಿಲ್ಪಕಲೆ, ಪು.168

75. ಪೂರ್ವೋಕ್ತ, ಪು.169

76. ಪೂರ್ವೋಕ್ತ, ಬೆಂಗಳೂರು–1, ಬಳ್ಳಾಪುರ, ಪು.1

77. ಎಸ್.ಕೆ.ಅರುಣಿ–ಯಲಹಂಕ ನಾಡಪ್ರಭುಗಳ ವಾಸ್ತುಶಿಲ್ಪ ಮತ್ತು ಶಿಲ್ಪಕಲೆ, ಪು.20

78. ಬ.ನ.ಸುಂದರಂ–ಬೆಂಗಳೂರು ಇತಿಹಾಸ, ಪು.125

79. ಬಿ.ಎಲ್.ರೈಸ್(ಸಂ)–EC-IX ಬೆಂಗಳೂರು–3, ಚಿಕ್ಕಪೇಟೆ ಪು.3

80. ಎಂ.ಜಿ.ನಾಗರಾಜ್, ಎಚ್.ಎಂ.ಸಿದ್ಧನಗೌಡ–ಬೆಂಗಳೂರು ಮತ್ತು ಕೊಡಗು ಜಿಲ್ಲೆಗಳ ಕೆಲವು ಅಪ್ರಕಟಿತ ಶಾಸನಗಳು, ಇತಿಹಾಸ ದರ್ಶನ, ಸಂಪುಟ–14, ಪು.28

81. ಡಾ.ಅಬ್ದುಲ್ ಬಷೀರ್(ಸಂ)–ಕರ್ನಾಟಕ ಲೋಚನ, ಪು.132,133

82. ಇತಿಹಾಸದರ್ಶನ(ಸಂ)–ದೇವರಕೊಂಡಾರೆಡ್ಡಿ, ದೇವರಾಜಸ್ವಾಮಿ, ಪು.67

83. ಡಾ.ಎಂ.ಜಿ.ಮಂಜುನಾಥ–ಬೆಂಗಳೂರಿನ ಬಖೈರುಗಳು, ಪು.62

---

# ಅಧ್ಯಾಯ–ನಾಲ್ಕು
# ಸಾಮಾಜಿಕ ಮತ್ತು ಆರ್ಥಿಕ ಅಧ್ಯಯನ

ಬೆಂಗಳೂರನ್ನು ಆಳಿದ ಎಲ್ಲ ಅರಸುಮನೆತನಗಳು ತಮ್ಮ ಆಡಳಿತಾವಧಿಯಲ್ಲಿ ಕೇವಲ ಆಡಳಿತ, ಧಾರ್ಮಿಕ ಕ್ಷೇತ್ರಗಳಿಗೆ ಮಾತ್ರ ಪ್ರಾಮುಖ್ಯತೆಯನ್ನು ನೀಡದೆ ಕೆಲವು ಸಾಮಾಜಿಕ ಕಾರ್ಯಗಳನ್ನು ಕೈಗೊಂಡಿದ್ದಾರೆ. ಜನರಿಗೆ ಅಗತ್ಯವಾಗಿರುವ ಉತ್ತಮ ಸಾಮಾಜಿಕ ಜೀವನವನ್ನು ಕಲ್ಪಿಸಿಕೊಡುವಲ್ಲಿ ರಾಜರು ಪ್ರಯತ್ನಿಸಿದ್ದಾರೆ. ಪ್ರಸ್ತುತ ಅಧ್ಯಾಯದಲ್ಲಿ ಬೆಂಗಳೂರು ನಗರ ಜಿಲ್ಲೆಯಲ್ಲಿನ ಪ್ರಾಚೀನ ಕಾಲದ ಸಾಮಾಜಿಕ ಹಾಗೂ ಆರ್ಥಿಕ ವ್ಯವಸ್ಥೆಯನ್ನು ಕುರಿತು ವಿಶ್ಲೇಷಿಸಲಾಗಿದೆ. ವರ್ಣವ್ಯವಸ್ಥೆ, ಅಗ್ರಹಾರಗಳು, ವಿದ್ಯಾಭ್ಯಾಸ, ಸ್ತ್ರೀ–ಸಮಾಜ, ವ್ಯವಸಾಯ, ನ್ಯಾಯಪದ್ಧತಿ, ಕೃಷಿ, ನೀರಾವರಿವ್ಯವಸ್ಥೆ, ತೆರಿಗೆಪದ್ಧತಿ, ನಾಣ್ಯಪದ್ಧತಿ, ವರ್ತಕರು ಹೀಗೆ ಮೊದಲಾದ ವಿಷಯಗಳನ್ನು ಶಾಸನಗಳ ಆಧಾರಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸಲಾಗಿದೆ.

## ವರ್ಣವ್ಯವಸ್ಥೆ

ಭಾರತ ಜಾತಿ ಪ್ರಧಾನವಾದ ದೇಶವಾಗಿದ್ದು ಇಲ್ಲಿ ವೃತ್ತಿ ಜಾತಿಯಾಗಿ ಮಾರ್ಪಟ್ಟಿದೆ. ಹಾಗೂ ಜಾತಿಯೇ ವೃತ್ತಿಯನ್ನು ನಿರ್ಧರಿಸುವಂತಹ ಸ್ಥಿತಿ ನಿರ್ಮಾಣವಾಗಿದೆ. ವೇದಗಳ ಕಾಲಕ್ಕಾಗಲೇ ವರ್ಣ ವ್ಯವಸ್ಥೆ ಅಸ್ತಿತ್ವದಲ್ಲಿದ್ದುದರಿಂದ ಇದೇ ಮುಂದೆ ಜಾತಿಗಳಿಗೆ ಎಡೆಮಾಡಿಕೊಟ್ಟಿತು ಎಂಬುದು ವಿದ್ವಾಂಸರ ಅಭಿಪ್ರಾಯ. ಭಾರತೀಯ ಸಮಾಜದಲ್ಲಿ ಅಸ್ತಿತ್ವದಲ್ಲಿದ್ದ ವರ್ಣ ವ್ಯವಸ್ಥೆಗಳೆಂದರೆ ಬ್ರಾಹ್ಮಣ(ಕವಿ, ಪುರೋಹಿತ, ವಿದ್ವಾಂಸ), ಕ್ಷತ್ರಿಯ(ಆಳುವ ವರ್ಗ), ವೈಶ್ಯ(ವ್ಯಾಪಾರ, ಇತರೆ ವೃತ್ತಿ ಮಾಡುವವರು), ಶೂದ್ರ(ಸೇವಾಕಾರ್ಯ ಮಾಡುವವರು) ಹೀಗೆ ವೃತ್ತಿ ಆಧಾರದ ಮೇಲೆ ವರ್ಣವ್ಯವಸ್ಥೆ ನಿರ್ಮಾಣವಾಯಿತು. ಪ್ರಾಚೀನ ಕಾಲದಲ್ಲಿ ಶಾಸನಗಳು ನಿರ್ಮಾಣವಾಗುತ್ತಿದ್ದ ಕಾಲಕ್ಕೆ ಈ ವರ್ಣವ್ಯವಸ್ಥೆಯೇ ಅಸ್ತಿತ್ವದಲ್ಲಿತ್ತು. ಚತುವರ್ಣಗಳು ನಿರ್ಧಾರವಾಗುತ್ತಿದ್ದದ್ದು ಶ್ರಮದ ನೆಲೆಯಲ್ಲಿ. ಆ ವರ್ಣಗಳಿಗೆ ನೀಡಿರುವ ಸ್ಥಾನವನ್ನು ಶ್ರಮವು ನಿರ್ಧರಿಸಿದೆ ಎಂದರೆ ತಪ್ಪಾಗಲಾರದು.

**ಬ್ರಾಹ್ಮಣ:** ವರ್ಣವ್ಯವಸ್ಥೆಯಲ್ಲಿ ಬ್ರಾಹ್ಮಣರಿಗೆ ಅಗ್ರಸ್ಥಾನವಿತ್ತು. ಬ್ರಾಹ್ಮಣರೆಂದರೆ ಆತ್ಮಸಂಯಮ, ಮಾನಸಿಕ ಪ್ರಸನ್ನತೆ, ವಿರಕ್ತತೆ, ಪವಿತ್ರತೆ, ತಾಳ್ಮೆ, ಋಜುತ್ವ, ಕ್ಷಮಾಗುಣ, ಸತ್ಯಸಂಧತೆ ಮತ್ತು ಸುಶೀಲತೆ ಹೀಗೆ ಮೊದಲಾದ ಗುಣಗಳನ್ನು ಬೆಳೆಸಿಕೊಳ್ಳಬೇಕೆಂಬ ನಿರೀಕ್ಷೆಯಿತ್ತು. ಹಾಗೆಯೇ ಅಧ್ಯಯನ–ಅಧ್ಯಾಪನ, ತಪಸ್ಸು, ಧ್ಯಾನ, ಚಿಂತನೆ, ಪೌರೋಹಿತ್ಯ, ಆಧ್ಯಾತ್ಮಿಕ ಜ್ಞಾನ ಇತರರಿಗೆ ನ್ಯಾಯ ಹೇಳುವುದು

ಬ್ರಾಹ್ಮಣರ ಮುಖ್ಯ ಕಾರ್ಯಗಳಾಗಿದ್ದವು. ಇವರು ಸಮಾಜದಲ್ಲಿ ಗೌರವಾನ್ವಿತ ಸ್ಥಾನವನ್ನು ಹೊಂದಿದ್ದರು. ಧಾರ್ಮಿಕವಾಗಿ, ಆರ್ಥಿಕವಾಗಿ ಸಮಾಜದಲ್ಲಿ ಉತ್ತಮಸ್ಥಾನವಿತ್ತು. ಇವರು ಅಗ್ರಹಾರಗಳಲ್ಲಿ ವಾಸವಾಗಿರುತ್ತಿದ್ದರು. ಇವರಿಗಾಗಿ ರಾಜರು ಹಳ್ಳಿ ಅಥವಾ ಗ್ರಾಮವನ್ನು ತೆರಿಗೆಗಳಿಂದ ಮಾನ್ಯಮಾಡಿ ಅಗ್ರಹಾರವಾಗಿಸಿ ದಾನವನ್ನು ನೀಡಿರುವ ಉಲ್ಲೇಖಗಳು ಶಾಸನಗಳಲ್ಲಿ ದೊರೆಯುತ್ತವೆ. ಇಂತಹ ಅಗ್ರಹಾರಗಳು ವಿದ್ಯಾಕೇಂದ್ರಗಳಾಗಿ, ನ್ಯಾಯಕೇಂದ್ರಗಳಾಗಿ ಕಾರ್ಯನಿರ್ವಹಿಸಿದರೆ, ಬ್ರಾಹ್ಮಣರು ಉಪಾಧ್ಯಾಯರಾಗಿ, ನ್ಯಾಯ ಹೇಳುವವರಾಗಿರುತ್ತಿದ್ದರು.

ಬೆಂಗಳೂರಿನ ಶಾಸನಗಳನ್ನು ಬ್ರಾಹ್ಮಣರಿಗೆ ಸಂಬಂಧಿಸಿದಂತೆ ಅವಲೋಕಿಸಿದಾಗ ಅವರಿಗೆ ಉತ್ತಮ ಸ್ಥಾನವಿತ್ತು ಎಂಬುದು ಸ್ಪಷ್ಟವಾಗುತ್ತದೆ. ಕೆಲವು ಶಾಸನಗಳಲ್ಲಿ ಇವರನ್ನು 'ಮಹಾಜನರು' ಎಂದು ಕರೆಯಲಾಗಿದೆ. ಕ್ರಿ.ಶ.820ರ ಗಂಗರ ಕಾಲದ ಶಾಸನದಲ್ಲಿ ನಿಜಪನ ಮಗ ಅಣ್ಣಿಗ ಎಂಬ ಅರಸನು ದೇವಭೋಗಕ್ಕೆ ದಾನವನ್ನು ಎರೆಯಪ್ಪ ಮಂಗಲದ ಮಹಾಜನರ ಸಾಕ್ಷಿಯಾಗಿ ನೀಡುತ್ತಾನೆ.[1] ಈ ಮಹಾಜನರೆಂದರೆ, "ಶ್ರೇಷ್ಠರು, ಪೂಜ್ಯರು, ಗ್ರಾಮಗಳಲ್ಲಿಯ ಸಭೆಗಳ ಪ್ರತಿನಿಧಿಗಳು. ಒಂದೊಂದು ಗ್ರಾಮದಲ್ಲಿ, ವಿಶೇಷವಾಗಿ ಅಗ್ರಹಾರಗಳಲ್ಲಿ, ಅಲ್ಲಿಯ ವಿದ್ವಾಂಸರು ಪ್ರತಿನಿಧಿಗಳಾಗಿ ಆಯಾ ಗ್ರಾಮಗಳ ಅಥವಾ ಅಗ್ರಹಾರಗಳ ಆಡಳಿತವನ್ನು ನೋಡಿಕೊಳ್ಳುತ್ತಿದ್ದರು. ಇವರು ಗ್ರಾಮಕ್ಕೆ ಮಹಾಜನರು. ಗ್ರಾಮಕ್ಕೆ ಸಂಬಂಧಿಸಿದ ಆಡಳಿತ, ವ್ಯವಹಾರ, ನ್ಯಾಯದಾನ, ಸಾಮಾಜಿಕ, ಧಾರ್ಮಿಕ ಆಚರಣೆ ಮುಂತಾದ ಎಲ್ಲ ಅಂಗಗಳಲ್ಲಿಯೂ ಈ ಮಹಾಜನರು ಮಹತ್ವದ ಪಾತ್ರವಹಿಸುತ್ತಿದ್ದರು".[2] ಕ್ರಿ.ಶ.1551ರ ಮತ್ತೊಂದು ಶಾಸನದಲ್ಲಿ 'ದೇವಬ್ರಾಹ್ಮಣ ವೃತ್ತಿ'ಯವರೂ[3] ಹಾಗೂ ಬ್ರಾಹ್ಮಣರಲ್ಲಿ ನಾನಾಗೋತ್ರದ, ನಾನಾಸೂತ್ರದ, ನಾನಾ ಶಾಖೆಯ, ನಾಮಧೇಯರಾದ ಅನೇಕ ವಿದ್ವನ್ಮಹಾಜನಗಳು ಎಂದು ಸಂಭೋದಿಸಲಾಗಿದೆ.[4] ಹೀಗೆ ಬ್ರಾಹ್ಮಣರಲ್ಲಿ ಹಲವಾರು ವೃತ್ತಿ ಮತ್ತು ಗೋತ್ರದವರಿದ್ದರು ಎಂಬುದು ತಿಳಿಯುತ್ತದೆ.

ದೇವಾಲಯಗಳಿಗೆ ನೀಡುತ್ತಿದ್ದ ದಾನವನ್ನು ಸಾಮಾನ್ಯವಾಗಿ ಬ್ರಾಹ್ಮಣರೇ ಸ್ವೀಕರಿಸುತ್ತಿದ್ದರು. ಕ್ರಿ.ಶ.1364ರ ಕಾಲದ ಬನ್ನೇರುಘಟ್ಟದ ದಾಮೋದರನಿಗೆ ಅಮೃತಪಡಿ ನೈವೇದ್ಯಕ್ಕೆ, ಉಪಾರತಿ, ನಂದಾದೀವಿಗೆ, ಮನಮಾಲೆಗೆ ರಾಮರಹಳ್ಳಿಯ ಸ್ಥಳ ಕನ್ನಮಂಗಲವನ್ನು ದಾನ ನೀಡಿದ ಉಲ್ಲೇಖವಿದೆ.[5] ಇಂತಹ ಸಂದರ್ಭಗಳಲ್ಲಿ ಬ್ರಾಹ್ಮಣರು ದಾನ ಸ್ವೀಕರಿಸುತ್ತಿದ್ದರು.

ಶಾಸನದ ಕೊನೆಯ ಭಾಗ ಶಾಪವನ್ನು ಗಮನಿಸುವುದಾದರೆ 'ವಾರಣಾಸಿಯಲಿ ಬ್ರಾಹ್ಮಣರನ್ನು ಕೊಂದ ಪಾಪಕೆ ಹೋಹರು'[6] ಎಂದಿದ್ದರೆ, ಇನ್ನೂ ಕೆಲವು ಶಾಸನಗಳಲ್ಲಿ 'ಈ ಧರ್ಮಕ್ಕೆ ತಪ್ಪಿನಡೆದರೆ ಹನ್ನೆರಡು ಸಾವಿರ ಬ್ರಾಹ್ಮಣರನ್ನು ಕೊಂದಹಾಗೆ'[7] ಎಂಬ ಶಾಪವಿರುತ್ತದೆ. ಶಾಸನವನ್ನು ಹಾಳುಮಾಡದೆ

ಕಾಪಾಡಲಿ ಎಂಬ ಉದ್ದೇಶಕ್ಕೆ ಶಾಪಗಳು ಸೃಷ್ಟಿಯಾಗಿರುವುದು. ಹಿಂದುಗಳಿಗೆ ಬ್ರಾಹ್ಮಣರೆಂದರೆ ಪೂಜ್ಯಭಾವವಿದ್ದುದರಿಂದ ಇವರನ್ನು ಕೊಲ್ಲುವುದು ಮಹಾಪಾಪ ಎಂಬ ನಂಬಿಕೆ ಇತ್ತು. ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ಪ್ರಾಚೀನ ಮತ್ತು ಮಧ್ಯಕಾಲೀನ ಸಂದರ್ಭದಲ್ಲಿ ಬ್ರಾಹ್ಮಣರಿಗೆ ಉತ್ತಮ ಸ್ಥಾನವಿತ್ತು ಎಂಬುದು ಸ್ಪಷ್ಟ.

ಬುಕನಾನ್ ತನ್ನ ಪ್ರವಾಸ ಸಾಹಿತ್ಯದಲ್ಲಿ ಬ್ರಾಹ್ಮಣರ ಬಗ್ಗೆ ಈ ರೀತಿ ಹೇಳುತ್ತಾನೆ. “ವಿಜಯನಗರದ ಕೃಷ್ಣದೇವರಾಯನ ಕಾಲದಲ್ಲಿ ಕೃಷಿಕರು ತಮ್ಮ ವ್ಯವಸಾಯದ ಉತ್ಪನ್ನದಲ್ಲಿ 1/10 ಭಾಗವನ್ನು ಬ್ರಾಹ್ಮಣರಿಗೆ ಕೊಡಲಾಗುತ್ತಿತ್ತು. ಹಾಗೂ ಇನ್ನೂ ಕೆಲವು ಕಡೆ ರೈತರು ಬಿತ್ತಲು ಬಳಸಿದ ಧಾನ್ಯಗಳ ಪ್ರಮಾಣದ ಮೇಲೆ ಬ್ರಾಹ್ಮಣರಿಗೆ ಕೊಡಬೇಕಾಗಿದ್ದ ಭಾಗ ತೀರ್ಮಾನವಾಗುತ್ತಿತ್ತು ಎನ್ನುತ್ತಾನೆ. ಬ್ರಾಹ್ಮಣರು ಮಾತ್ರ ಪಂಚಾಂಗವನ್ನು ಬಳಕೆ ಮಾಡುತ್ತಿದ್ದರು. ಹಾಗೂ ಪುರೋಹಿತರಾಗಿದ್ದು ಮದುವೆ, ಜನನ, ತಿಥಿ, ಗುದ್ದಲಿ ಪೂಜೆ ಮುಂತಾದ ಸಂದರ್ಭಗಳಲ್ಲಿ ಮಂತ್ರ ಪಠನ ಮಾಡುತ್ತಿದ್ದರು. ಮಂತ್ರಶಕ್ತಿಯಿಂದ ಸಾಮಾನ್ಯರ ಕೈಯಲ್ಲಿ ಆಗದ ಕಾರ್ಯಗಳನ್ನು ಇವರು ಮಾಡುವರೆಂದು ಜನರು ನಂಬಿದ್ದರು.”[8] ಎಂದು ದಾಖಲಿಸುತ್ತಾನೆ.

**ಕ್ಷತ್ರಿಯರು:** ಚಾತುವರ್ಣ್ಯದಲ್ಲಿ ಎರಡನೇ ಸ್ಥಾನ ಕ್ಷತ್ರಿಯರದ್ದು. ರಾಜ್ಯಾಡಳಿತ, ದೇಶ ಹಾಗೂ ಪ್ರಜಾ ಸಂರಕ್ಷಣೆ, ಸುವ್ಯವಸ್ಥೆಯನ್ನು ಕಾಯ್ದುಕೊಳ್ಳುವುದು, ವಿವಾದಗಳನ್ನು ಬಗೆಹರಿಸಿ ತಪ್ಪಿತಸ್ಥರನ್ನು ದಂಡಿಸುವುದು, ದೀನ–ದುರ್ಬಲರನ್ನು, ಗೋ–ಬ್ರಾಹ್ಮಣರನ್ನು ಮತ್ತು ಧರ್ಮಬೀರುಗಳನ್ನು ರಕ್ಷಿಸುವುದು, ಯುದ್ಧದಲ್ಲಿ ಹೋರಾಡುವುದು, ಅರಾಜಕತೆ ಮತ್ತು ಅಸ್ಥಿರತೆಯನ್ನು ಹೋಗಲಾಡಿಸುವುದು. ನಾಡಿನ ಸುಭಿಕ್ಷತೆಯನ್ನು ಕಾಯ್ದುಕೊಳ್ಳಲು ದಾನ–ಧರ್ಮಾದಿಗಳನ್ನು ಮಾಡುವುದು ಕ್ಷತ್ರಿಯರ ಕರ್ತವ್ಯವಾಗಿತ್ತು. ಹಾಗಾಗಿ ‘ರಾಜಾ ಪ್ರತ್ಯಕ್ಷ ದೇವತಾಃ’ ಎಂಬ ನಂಬಿಕೆ ಇತ್ತು. ಎಂದರೆ ದೇಶ ಹಾಗೂ ಜನರ ರಕ್ಷಣೆಯ ಹೊಣೆ ಹೊತ್ತ ರಾಜ ಭೂಮಿಯ ಮೇಲಿರುವ ಪ್ರತ್ಯಕ್ಷ ದೇವರು ಎಂದು ನಂಬಿದ್ದರು. ರಾಜರು, ವೀರಯೋಧರು, ಸಾಮಂತರು, ಅಧಿಕಾರಿಗಳು, ಸಂಧಿವಿಗ್ರಹಿಗಳು ಮೊದಲಾದ ರಾಜಪರಿವಾರದವರು ಈ ವರ್ಗಕ್ಕೆ ಸೇರುತ್ತಾರೆ. ಯುದ್ಧದಲ್ಲಿ ಹೋರಾಡಿ ಜಯಗಳಿಸುವುದು ಹಾಗೂ ಸೋತಾಗ ವೀರಮರಣ ಹೊಂದುವುದು ಇವರ ಕ್ಷತ್ರಿಯ ಧರ್ಮವಾಗಿರುತ್ತಿತ್ತು. ರಾಜರು ಮತ್ತು ಅವರ ಆಳ್ವಿಕೆಯ ಬಗ್ಗೆ ಈಗಾಗಲೇ ರಾಜಕೀಯ ಚರಿತ್ರೆ ಮತ್ತು ಆಡಳಿತ ಪದ್ಧತಿ ಎಂಬ ಅಧ್ಯಾಯದಲ್ಲಿ ವಿವರವಾಗಿ ವಿಶ್ಲೇಷಿಸಲಾಗಿದೆ.

**ವೈಶ್ಯರು:** ವರ್ಣವ್ಯವಸ್ಥೆಯಲ್ಲಿ ಮೂರನೇ ಸ್ಥಾನ ವೈಶ್ಯರದ್ದು. ಇವರು ವ್ಯಾಪಾರ ವೃತ್ತಿಯನ್ನು ಅನುಸರಿಸುತ್ತಿದ್ದರು. ಹಾಗಾಗಿ ಇವರನ್ನು ಶಾಸನಗಳಲ್ಲಿ ವರ್ತಕರು, ಸೆಟ್ಟಿ, ಸೆಟ್ಟಿಗುತ್ತ, ವಡ್ಡವ್ಯವಹಾರಿ, ಪಟ್ಟಣಸ್ವಾಮಿ, ಹಲರು, ನಕರು ಎಂದೆಲ್ಲಾ ಕರೆಯಲಾಗಿದೆ. ಬೇಗೂರಿನ ಶಾಸನವೊಂದು ಇವರನ್ನು 'ಮೂರನೇ ಜಾತಿಯವರು'[9] ಎಂದು ಉಲ್ಲೇಖಿಸುತ್ತದೆ. ಬೇಗೂರು ನಾಗೇಶ್ವರ ದೇವಸ್ಥಾನಕ್ಕೆ ನಂದಾದೀಪಾರಾಧನೆ, ನಿತ್ಯೋತ್ಸವಕ್ಕೆ ವರ್ತಕರು ದಾನ ನೀಡಿರುವ ವಿಷಯ ತಿಳಿಸುತ್ತದೆ. ವರ್ತಕರು ಕೆರೆಯನ್ನು ಕಟ್ಟಿಸಿದರು ಎಂಬ ವಿಷಯ ಶಿಡಿಹೊಸಕೋಟೆಯಲ್ಲಿ ದೊರೆತ ಮತ್ತೊಂದು ಶಾಸನದಿಂದ ತಿಳಿಯುತ್ತದೆ.[10] ಆದರೆ ಯಾವ ಕೆರೆ ಎಂಬುದರ ಮಾಹಿತಿಯಿಲ್ಲ. ಇಂತಹ ವರ್ತಕರು ವ್ಯಾಪಾರ ವೃತ್ತಿಯನ್ನು ಮಾಡುವುದರ ಜೊತೆಗೆ ದೇವಾಲಯಗಳಿಗೆ ದಾನ ಹಾಗೂ ಕೆರೆ ಕಟ್ಟಿಸುವಂತಹ ಜನೋಪಯೋಗಿ(ಸಾಮಾಜಿಕ) ಕಾರ್ಯಗಳನ್ನು ಮಾಡುತ್ತಿದ್ದರು.

**ಶೂದ್ರರು:** ವರ್ಣವ್ಯವಸ್ಥೆಯ ಕೊನೆಯ ಸ್ಥಾನದಲ್ಲಿ ಶೂದ್ರರು ಬರುತ್ತಾರೆ. ಮೇಲುವರ್ಗಕ್ಕೆ ಸೇರಿದ ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯ ವರ್ಣದವರಿಗೆ ಅವರವರ ನಿಗದಿತ ಕಾರ್ಯಗಳನ್ನು ಸಮರ್ಥವಾಗಿ ಮಾಡಲು ಅಂದರೆ ಸಹಾಯಕರಾಗಿ/ಸೇವಕರಾಗಿ ಶೂದ್ರರು ಕಾರ್ಯನಿರ್ವಹಿಸುತ್ತಿದ್ದರು. ಜೊತೆಗೆ ಇವರು ವ್ಯವಸಾಯ, ಪಶುಸಂಗೋಪನೆ ಮೊದಲಾದ ವೃತ್ತಿಯನ್ನು ಮಾಡುತ್ತಿದ್ದರು. ಈ ವರ್ಣದಲ್ಲಿ ಒಕ್ಕಲಿಗರು, ಅಕ್ಕಸಾಲಿಗರು, ಕುಂಬಾರರು, ಕಮ್ಮಾರರು, ಬಡಗಿಗಳು, ಮಣೆಗಾರರು, ಕಲ್ಲುಕುಟಿಗರು, ಅಗಸರು, ನಾವಿದರು, ಹಜಾಮರು ಹೀಗೆ ಮೊದಲಾದ ಜಾತಿಯವರು ಬರುತ್ತಿದ್ದರು. ಇವರಲ್ಲಿ ಕೆಲವರು ರಾಜರಿಂದ ಉತ್ತಮ ಅಧಿಕಾರವನ್ನು ಪಡೆದು ಸಮಾಜದಲ್ಲಿ ಉನ್ನತ ಸ್ಥಾನದಲ್ಲೂ ಇದ್ದರು. ಇವರು ದಾನಪಡೆಯುವುದಷ್ಟೇ ಅಲ್ಲದೆ ದಾನ ನೀಡುವ, ಕೆರೆಗಳ ನಿರ್ಮಾಣ, ದೇವಾಲಯಗಳ ನಿರ್ಮಾಣ, ಊರಿನ ರಕ್ಷಣೆಗಾಗಿ ಹೋರಾಡಿ ಮರಣ ಹೊಂದಿರುವ ವಿವರಗಳು ಶಾಸನಗಳಲ್ಲಿ ಉಕ್ತವಾಗಿವೆ.

ಒಕ್ಕಲಿಗರ ಮುಖ್ಯ ಕಸುಬು ಕೃಷಿಯಾಗಿದ್ದರೂ ಈ ವರ್ಗದ ಕೆಲವರು ರಾಜರಿಂದ ಮನ್ನಣೆ ಪಡೆದು ಹಳ್ಳಿಯ ಮುಖಂಡತ್ವವನ್ನು ಪಡೆದಿದ್ದರು. ಬೆಂಗಳೂರು ನಿರ್ಮಾತೃ ಎಂದೇ ಖ್ಯಾತಿ ಪಡೆದ ಕೆಂಪೇಗೌಡನ ವಂಶಸ್ಥರನ್ನು ಈ ಸಂದರ್ಭದಲ್ಲಿ ಸ್ಮರಿಸಬಹುದು. ಕ್ರಿ.ಶ.1342ರ ಕಾಲದ ಶಾಸನದ ಪ್ರಕಾರ ಬೈರೇಗೌಡ, ಕನ್ನೆಗೌಡ, ತಾಮಿಯಪ್ಪ, ಮಾಚಿದೇವರು ಮೊದಲಾದ ಸಮಸ್ತ ಗೌಡರು ಒಳಗೊಂಡು ನಾಗವಾರದ ಮಾರಗೌಡನ ಮಗ ಮಾರಪ್ಪನಿಗೆ ಹಳ್ಳಿಯನ್ನು ದಾನನೀಡಿರುವ ಉಲ್ಲೇಖವಿದೆ.[11] ಕೆಂಗೇರಿ ಕೋಟೆ ಬೀದಿಯಲ್ಲಿ ದೊರೆತ ಶಾಸನದ ಪ್ರಕಾರ ಮಾರೇಗೌಡ ಎಂಬುವನು

ಅಂಕನಾಥದೇವರಿಗೆ ದಾನ ನೀಡಿರುವ ಉಲ್ಲೇಖವಿದೆ.[12] ಈ ಸಮುದಾಯವು ಹೀಗೆ ಒಂದು ಪ್ರದೇಶದ ಪ್ರಭುಗಳಾಗಿ ಆಳ್ವಿಕೆ ನಡೆಸುತ್ತಿದ್ದುದರ ಜೊತೆಗೆ ದಾನ ನೀಡುವ ಹಕ್ಕನ್ನೂ ಪಡೆದಿದ್ದರು.

ಕ್ರಿ.ಶ.1586ರ ಕಾಲದಲ್ಲಿ ಆವತಿ ನಾಡಪ್ರಭು ಬಯಪ್ಪ ಗೌಡ, ತಿಪ್ಪೂರಿನ ಕೆಂಪಿಸೆಟ್ಟಿ ಕಟ್ಟಿಸಿದ ಕಲ್ಲುಮಠಕ್ಕೆ ಭೂಮಿ ದಾನ ನೀಡಿದ್ದಾನೆ. ತಿಪ್ಪೂರ ಸೀಮೆಗೆ ಕೊಟ್ಟಿರುವ ಭೂಮಿಯ ಪಾರುಪತ್ತೇಗಾರನಾಗಲಿ, ಸುಂಕದ ಮಣೇಗಾರನಾಗಲಿ ಈ ಶಾಸನ ಧರ್ಮಕ್ಕೆ ಅಡ್ಡಿಪಡಿಸಬಾರದು ಎಂದಿದೆ.[13] ಇಂದು ಜಾತಿಯಾಗಿರುವ ಮಣೇಗಾರ ಎಂಬ ಪದದಿಂದ ಅಂದು ಸುಂಕದ ಅಧಿಕಾರಿಗಳನ್ನು ಸಂಭೋದಿಸಲಾಗುತ್ತಿತ್ತು ಎಂಬ ಅಂಶವು ತಿಳಿದುಬರುತ್ತದೆ.

ಕ್ರಿ.ಶ.1728ರ ಮೈಸೂರು ಅರಸರ ಶಾಸನವೊಂದರಲ್ಲಿ 'ಕೃಷ್ಣರಾಯ ಮಹಾರಾಯನ ಮನೆಯ ಕುದುರೆ ಚಾಕಲಬೋವನ ಮಗ ಚನ್ನಣನು....ಗಂಗಾ[ಧ]ರ ದೇವರ ಬಿಠೆ ಉ......' ಎಂದಿದೆ.[14] ಈ ಶಾಸನದ ಪ್ರಕಾರ ಕುದುರೆ ಚಾಕಲ ಬೋವನ ಮಗ ಚನ್ನಣ್ಣನು ಗಂಗಾಧರ ದೇವರಿಗೆ ದಾನನೀಡಿದ್ದಾನೆ. ಆದರೆ ಈ ಶಾಸನದ ಉಳಿದ ಭಾಗ ತ್ರುಟಿತವಾಗಿದೆ. ಬೋವ ಎಂದರೆ ಮೇಲ್ವಿಚಾರಕ. ಕುದುರೆ ಚಾಕಲ ಬೋವ ಎಂದು ಶಾಸನ ಹೆಸರಿಸುತ್ತದೆ. ಹಾಗಾಗಿ ಚನ್ನಣ್ಣನು ಮೈಸೂರು ಅರಸರ ಕಾಲದಲ್ಲಿ ಅಶ್ವದಳದ ಮೇಲ್ವಿಚಾರಕನಾಗಿ ಅಧಿಕಾರವನ್ನು ಹೊಂದಿದ್ದನು. ಬೋವ ಮತ್ತು ಮಣೆಗಾರ ಈ ಎರಡು ರಾಜ್ಯದ ಆಡಳಿತದ ವಿವಿಧ ವಿಭಾಗಗಳ ಮುಖ್ಯಸ್ಥರಾಗಿದ್ದರು.

ಕ್ರಿ.ಶ.1431ರ ಪ್ರೌಢದೇವರಾಯನ ಕಾಲದಲ್ಲಿ ದೇವರ ನೇವೈದ್ಯಕ್ಕೆ, ಅಂಗಭೋಗ ರಂಗಭೋಗಕ್ಕೆ ಪಾತ್ರರಾಗುವ ಸಿತಾರ ಜನ, ನಟ್ಟವನ ಜನ(ನಟವಾಂಗದವರು), ಕಂಸಾಳೆಜನ, ಮದ್ದಳೆಕಾರ ಜನರು ಎರಡು ಹೊತ್ತಿನ ದೇವರ ಅಂಗ–ರಂಗಭೋಗದ ನೇವೇದ್ಯವನ್ನು ನಡೆಸಿಕೊಂಡು ಹೋಗಬೇಕೆಂಬ ನಿಯಮವಿತ್ತು.[15] ಭುಜಂಗದಾಸರೆಂಬ ಜನಾಂಗದವರು ಮಾದಿಗೆರೆ ಎಂಬ ಕೆರೆಯನ್ನು ಕಟ್ಟಿಸಿರುವ ಉಲ್ಲೇಖವು ಆನೇಕಲ್ಲಿನ ಶಾಸನದಲ್ಲಿದೆ.[16] ಹೀಗೆ ಇತರೆ ಜನಾಂಗದವರ ಉಲ್ಲೇಖಗಳೂ ನಮಗೆ ಶಾಸನಗಳಲ್ಲಿ ದೊರೆಯುತ್ತವೆ.

ಮಡಿವಾಳರನ್ನು ಅಗಸರೆಂದೂ ಕರೆಯಲಾಗುತ್ತದೆ. ಇವರು ಬಟ್ಟೆಯನ್ನು ಒಗೆದು ಮಡಿಮಾಡಿ ಕೊಡುವವರಾದ್ದರಿಂದಲೇ ಇವರನ್ನು ಮಡಿವಾಳರೆಂದು ಕರೆಯುತ್ತಾರೆ. ಅಗಸರು ದೇವರ ಉತ್ಸವ, ಹಿರಿಯರ ಪೂಜೆ, ಮದುವೆ ಮುಂತಾದ ಸಮಾರಂಭದಲ್ಲಿ ಪಂಜು, ಹಿಲಾಲು, ದೀವಟಿಗೆಗಳನ್ನು ಹಿಡಿಯುವ, ಮಡಿಬಟ್ಟೆ ಹಾಸುವ ಕೆಲಸ ಮಾಡುತ್ತಿದ್ದರು. ಕಾನಕಾನಹಳ್ಳಿಯ ಶಾಸನವೊಂದರಲ್ಲಿ ಮಲ್ಲಿಗೆ ಹೂಗಳನ್ನು ನಾವಿದರು ಉಪಯೋಗಿಸಬಾರದು ಎಂಬ ವಿಷಯವಾಗಿ ಹೇಳುತ್ತ "...ಯಿದನ್ನು

ಕಲ್ಯಾಣದ ಬಸವಪ್ಪಾನವರು ಮಾಡಿದ ಶ್ಯಾಸನವೆಂದು ಹೇಳುವರು...." ಈ ಎರಡು ಶಾಸನಗಳಲ್ಲಿ ಹೇಳಲಾದ ನಿರ್ಣಯಗಳನ್ನು ಬಸವಣ್ಣನವರು ಕೊಟ್ಟಿರಲಿ ಬಿಡಲಿ, ಅಗಸರು ಸಮಾಜದಿಂದ ಆಯವನ್ನು ಸಾಧಿಸುವಲ್ಲಿ, ಸಮಾಜವು ನಾವಿದರ ಹಕ್ಕುಗಳನ್ನು ಸೀಮಿತಗೊಳಿಸುವಲ್ಲಿ ಬಸವಣ್ಣನವರ ಹೆಸರನ್ನು ಬಳಸಿದರೆ ತಮ್ಮ ಮಾತಿಗೆ ಬೆಲೆ ಬರುವದೆಂದು ಭಾವಿಸಿರುವುದು ಇದರಿಂದ ವ್ಯಕ್ತವಾಗುತ್ತದೆ ಎಂದು ಡಾ.ಎಂ.ಎಂ.ಕಲಬುರ್ಗಿಯವರು ಅಭಿಪ್ರಾಯಿಸಿದ್ದಾರೆ.[17] ಕ್ರಿ.ಶ.1700ರ ಶಾಸನದಲ್ಲಿ ಹಜಾಮರು ಮತ್ತು ಮಡಿವಾಳರ ಮಧ್ಯೆ ನಡೆದ ವ್ಯಾಜ್ಯವನ್ನು ತಿಳಿಸುತ್ತದೆ. ಹಜಾಮರು ವಾಲಗಕ್ಕೆ ಮಲ್ಲಿಗೆ ಹೂವು ಮುಡಿಸಿದ್ದಕ್ಕೆ ಮಡಿವಾಳ ಚನ್ನಸೆಟ್ಟಿಯು ತಗಾದೆ ಮಾಡುವನು. (ಜಾತಿಪದ್ಧತಿಯ ಕಠಿಣ ಆಚರಣೆ ಇಲ್ಲಿ ಕಾಣಬಹುದು) ಹಜಾಮರಿಗೆ ಗಣಗಲೆ ಹೂವು, ಮಲ್ಲಿಗೆ ಹೂವು ಅವರು ಮುಡಿಯುವಂತೆ ಇಲ್ಲ ಎಂಬ ವಿಷಯಕ್ಕೆ ಜಗಳವಾಗುವ ವಿಷಯವನ್ನು ಈ ಶಾಸನ ದಾಖಲಿಸುತ್ತದೆ.[18]

## ದಲಿತರ ಸ್ಥಾನಮಾನ

ವರ್ಣವ್ಯವಸ್ಥೆಯಲ್ಲಿ ಪಂಚಮರು ಅಥವಾ ಅಂತ್ಯಜರು ಎಂಬ ಇನ್ನೊಂದು ವರ್ಗವನ್ನು ಗುರುತಿಸಲಾಗುತ್ತಿತ್ತು. ಶಾಸನ ಸಾಹಿತ್ಯದಲ್ಲಿ ದಲಿತರ ಕುರಿತು, ದಲಿತ ಸಂವೇದನೆಯನ್ನು ಹುಡುಕುತ್ತ ಹೋದಂತೆ ನೇರವಾದ ಉಲ್ಲೇಖ ದೊರೆಯುವುದಿಲ್ಲ. ಸಮಾಜದ ಅಂಚಿನಲ್ಲಿದ್ದ ದಲಿತರು ಸಂವೇದನೆಯನ್ನು ಹಂಚಿಕೊಳ್ಳಲು ಪ್ರಾರಂಭಿಸಿದ್ದೆ ಶಿಕ್ಷಣದಿಂದ. ಶಾಸನದಲ್ಲಿ ದಲಿತರ ಅಂದರೆ ಶ್ರಮಜೀವಿಗಳ ಉಲ್ಲೇಖ ದೊರಕುವುದು ರಾಜರು ನೀಡಿದ ದಾನಶಾಸನಗಳಲ್ಲಿ, ಕೆರೆ, ಕಟ್ಟೆಯ ನಿರ್ಮಾಣದ ಸಂದರ್ಭದಲ್ಲಿ, ಸುಂಕಮಾನ್ಯ, ಶಾಪವಾಕ್ಯಗಳಲ್ಲಿ ಮಾತ್ರ.

ಕ್ರಿ.ಶ.1698ರ ಕಾಲದ ಹೊಸಕೋಟೆಯಲ್ಲಿ ದೊರೆತ ಶಾಸನವೊಂದರಲ್ಲಿ ಹೊಲೆಯ ಎಂಬ ಉಲ್ಲೇಖವಿದೆ. "ಬಹುದಾನ್ಯನಾಮ ಸಂವತ್ಸರದಲ್ಲಿ ರಾಉತರಾಯನು ಕೊರಟಿಹಳ್ಳಿ ಹೊಲೆಯರಿಗೆ ಬರೆಸಿಕೊಟ್ಟ ಕೆರೆ ಕೊಡು ಶಾಸನದ ಕ್ರಮವೆಂತೆಂದರೆ ದೊಡಗಾವನಹಳ್ಳಿ ಕೆರೆ ಕೆಳಗೆ ಮಾನ್ಯವಾಗಿ" ಎಂದಿದೆ.[19] 'ರಾವುತರಾಯ ಎನ್ನುವವನು ಕೊರಟಿಹಳ್ಳಿಯಲ್ಲಿರುವ ಹೊಲೆಯರಿಗೆ ಕೆರೆಯ ಕೆಳಗೆ ಇರುವ ಭೂಮಿಯನ್ನು ಕೊಡುಗೆಯಾಗಿ ನೀಡಿದ' ಉಲ್ಲೇಖವನ್ನು ಈ ಶಾಸನದಲ್ಲಿ ಕಾಣಬಹುದು. ಅಂದರೆ ದಲಿತರಿಗೂ ದಾನ ನೀಡುವ ಪದ್ಧತಿ ಕಂಡುಬರುತ್ತದೆ. ಸಾರ್ವಜನಿಕವಾಗಿ ಪ್ರತ್ಯೇಕವಾದ ಸವಲತ್ತುಗಳನ್ನು ನೀಡುತ್ತಿದ್ದದು ಕಾಣಬಹುದು.

ಮಲ್ಲೇಶ್ವರದಲ್ಲಿ ದೊರೆತಿರುವ ಮರಾಠರ ಕಾಲದ ಶಾಸನದಲ್ಲಿರುವ ಶಾಪಾಶಯವನ್ನು ಗಮನಿಸುವುದಾದರೆ, ಈ ಶಾಸನದ ದಾನವನ್ನು ಹಾಳು ಮಾಡಿದರೆ ಕತ್ತೆ, ಕಾಗೆ, ಚಾಂಡಾಲರ ಜನ್ಮದಲ್ಲಿ

ಹುಟ್ಟುವರು ಎಂದೂ ಹಾಗೂ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರನಾದವನು ಈ ಧರ್ಮವನ್ನು ಹಾಳು ಮಾಡಿದರೆ ಕಾಶಿಯಲ್ಲಿ ಗೋವನ್ನು ಕೊಂದ ಪಾಪಕ್ಕೆ ಹೋಗುತ್ತಾರೆ ಎಂದಿದೆ. ಹೀಗೆ ಶಾಸನದ ಕೊನೆಯ ಹಂತದಲ್ಲಿ(ವರ್ಣವ್ಯವಸ್ಥೆ) ಚತುವರ್ಣದ ಉಲ್ಲೇಖವಿದೆ. ಚಾಂಡಾಲ ಕುಲದಲ್ಲಿ ಹುಟ್ಟುವುದು ಘೋರ, ಪಾಪಕರ್ಮದ ತುತ್ತುದಿಯ ಫಲ, ಹೀನಸ್ಥಿತಿ ಎಂಬ ಅರ್ಥದಲ್ಲಿ ಬಳಸಲಾಗಿದೆ.

ಕ್ರಿ.ಶ.1368ರ ಮಾಗಡಿಯಲ್ಲಿ ದೊರೆತ ಶಾಸನವು ತಿರುಕುಲ, ಜಾಂಬವ ಕುಲ ಎಂಬ ಎರಡು ಕುಲವನ್ನು ಹೆಸರಿಸುತ್ತದೆ.[20] ಶಾಸನದ ಭಾಗ ಈ ರೀತಿ ಇದೆ,

**'ಕೋವಿಲ್ ತಿರುಮಲೆ ಪೆರುಮಾಳ್ ಕೋವಿಲ್ ತಿರುನಾ**
**ರಾಯಣಪುರ ಮುಖ್ಯವಾದ ಸಕಳಾಚಾರ್ಯರೂ ಸಕಳ ಸಮಯಿಗಳೂ ಸಕಳ ಸಾ**
**ತ್ವಿಕರೂ ಮೋಷ್ಟಿಕರು ತಿರುಪಣಿ ತಿರುವಿಡಿ ತಂಣ್ನೀರವರು ನಾಲ್ವತೆಂಟು**
**ಜನಂಗಳು ಸಾವಂತಬೋವಕ್ಕಳು ತಿರಿಕುಲಜಾಂಬುವಕುಲವೊಳಗಾದ**
**ಹದಿನೆಂಟು ನಾಡ ಶ್ರೀ ವೈಷ್ಣವರ ಕೈಯ್ಯಲು ಮಹಾರಾಯನು**
**ವೈಷ್ಣವ ದರ್ಶನಕ್ಕೆಊ ಜೈನದರ್ಶನಕ್ಕೆಊ ಭೇದವಿಲ್ಲವೆಂದು.....'**

ಈ ಶಾಸನ ವಿಜಯನಗರ ಅರಸರ ಧಾರ್ಮಿಕ ಸಮನ್ವಯವನ್ನು, ವೈಷ್ಣವರಿಗೂ ಮತ್ತು ಜೈನರಿಗೂ ನಡೆದ ಧಾರ್ಮಿಕ ಸಂಘರ್ಷವನ್ನು ಹೇಳುತ್ತದೆ. ಕರ್ನಾಟಕದ ಸಾಂಸ್ಕೃತಿಕ ಚರಿತ್ರೆಯಲ್ಲಿಯೇ ಇದೊಂದು ಅಪೂರ್ವ ಘಟನೆ. ಈ ಶಾಸನದಲ್ಲಿರುವ ಮೋಷ್ಟಿಕರು, ತಿರುಕುಲ ಜಾಂಬವ ಕುಲ ಮುಂತಾದ ಜಾತಿಗಳ ಕುರಿತಂತೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ದೇವಚಂದ್ರನ ಕೃತಿಯಲ್ಲಿ ಈ ಶಾಸನವು ಅಲ್ಪಸ್ವಲ್ಪ ಬದಲಾವಣೆಯೊಂದಿಗೆ ಕಾಣಸಿಗುವುದು ವಿಶೇಷ. ದೇವಚಂದ್ರನ 'ರಾಜಾವಳಿ ಕಥಾಸಾರ' ಪೊಲೆಯರ್ಗೆ ತಿರುಕುಲವೆಂದು ದಾಸರಂ ಪ್ರಕಟಂ ಮಾಡೆ ಎಂದು ತಿಳಿಸಿರುವುದರಿಂದ ತಿರುಕುಲವನ್ನು ಹೊಲೆಯ ಜಾತಿಯೆಂದು ಪರಿಗಣಿಸಬಹುದಾಗಿದೆ. ಜಾಂಬವಕುಲ ಮಾದಿಗ ಜಾತಿ ಇರಬಹುದು. ವ್ಯವಹಾರಿಕವಾಗಿ ಈ ಜಾತಿಗಳನ್ನು ಎಡಗೈ ಮತ್ತು ಬಲಗೈ ಎಂದು ಕರೆಯುವ ರೂಢಿಯಿದೆ. ಆದರೆ ಉಚ್ಚ ನೀಚತೆಯನ್ನು ಸೂಚಿಸುವ ಎಡಗೈ ಮತ್ತು ಬಲಗೈ ಭೇದಗಳು ಬಹಳ ಹಿಂದಿನಿಂದಲೇ ನಡೆದು ಬಂದಿದೆ. ಇದರ ಹುಟ್ಟು ಯಾವಾಗ ಹೇಗಾಯಿತು ಎಂಬುದು ತಿಳಿಯದು.[21]

ಸೋಲೂರು ಹೋಬಳಿ ತಟ್ಟೆಕೆರೆ ರಂಗನಾಥ ದೇವಸ್ಥಾನದ ಪೂರ್ವ ಬಂಡೆಯ ಮೇಲಿರುವ ಶಾಸನದಲ್ಲಿ[22] 'ಎಡಗೈ ಜಾತಿ'ಯ ಉಲ್ಲೇಖವಿದೆ. ಆನೇಕಲ್ಲಿನ ಶಾಸನವೊಂದರ ಶಾಪವೊಂದು 'ಯಿದಕ್ಕೆ ತಪ್ಪಿದರೆ ಬಲಗೆಯಡಗೆ(ಗೈ)ಯವನ ಯಂಜಲಿಗೆ ಆಶೆ ಮಾಡಿದಾಗೆ' ಎಂದಿದೆ. ಬಲಗೈಜಾತಿ ಮತ್ತು

ಎಡಗೈ ಎಂಬುದು ಎರಡು ಉಪಪಂಗಡಗಳು ಇವರ ಎಂಜಲಿಗೆ ಆಶೆ ಪಡುವುದೆಂದರೆ ಪಾಪಕರ್ಮದ ತುತ್ತತುದಿಯ ಫಲ. ಹೀನಸ್ಥಿತಿ ಎಂಬ ಅರ್ಥದಲ್ಲಿ ಬಳಸಿರುವುದನ್ನು ಗುರುತಿಸಬಹುದು.

**ತೊತ್ತು:** ತೊತ್ತುಗೆಲಸ ಎಂದರೆ ಗುಲಾಮಗಿರಿ, ಊಳಿಗ, ಸೇವೆ ಎಂಬ ಅರ್ಥವಿದೆ. ಹಾಗೂ ದೇವಾಲಯದಲ್ಲಿ ನರ್ತನ ಮಾಡುವ ಕೆಲಸ(ನರ್ತಕಿಯರು), ದಾಸಿಯರು ಎಂದು ಕರೆಯಲಾಗುತ್ತದೆ ಎಂದು ಡಾ.ಶ್ರೀನಿವಾಸರಿತ್ತಿ ಅಭಿಪ್ರಾಯ ಪಟ್ಟಿದ್ದಾರೆ.[23] ದೇವರಿಗೆ(ಒಡೆಯ) ಮಾಡುವ ಸೇವೆ ದಾಸ/ದಾಸಿ ಎಂದಾದರೆ, ನಾಯಕನಿಗೆ/ದೊರೆಗೆ ಮಾಡಿಕೊಡುವ ಸೇವೆ ತೊತ್ತಿನ ಕೆಲಸವಾಗಿತ್ತು. ಗಂಗಾಧರೇಶ್ವರ ದೇವಾಲಯದ ಕಲ್ಯಾಣಮಂಟಪದಲ್ಲಿರುವ ಶಾಸನದ ಪ್ರಕಾರ, "ಹೊಯ್ಸಳ ಬಲ್ಲಾಳ ದೇವನು ರಾಜ್ಯವಾಳುತ್ತಿದ್ದಾಗ ತಮ್ಮ ತೊತ್ತಿನ ಮಕ್ಕಳು ತಿಪ್ಪರ್ಸಭೈರವದೇವ ಬೊಂಮರ್ಸನವರು ಆ ನಾಡಿನ ಸಿವಗಂಗೆನಾಥಂಗೆ ಅಮೃತಪಡಿ ನೇವೈದ್ಯಕ್ಕೆ ಸರ್ವಮಾನ್ಯ ಕೊಡುಗೆ ನೀಡಿದ್ದಾರೆ.[24] ಕ್ರಿ.ಶ.1401ರ ಕಾಲದ ದೊಡ್ಡಬಳ್ಳಾಪುರ ಶಾಸನವೊಂದರಲ್ಲಿ 'ತೊತ್ತುಗೆಲಸ' ಎಂಬ ಉಲ್ಲೇಖವಿದೆ.[25] ಈ ಶಾಸನವು ಗರುಡ ಕಂಬದ ನಿರ್ಮಾಣ ಮಾಡಿದ ವಿವರವನ್ನು ಹೇಳುತ್ತದೆ. ಇಲ್ಲಿ ತೊತ್ತುಗೆಲಸವಾಗಿ ಕಲ್ಲಿನ ಕಂಬ ಮಾಡಿದ ವಿವರಗಳಿವೆ. ಈ ಗರುಡಕಂಬವನ್ನು ಮಾಡಿಸಿದವನು ಪೆರುಮಾಳ ಸೆಟಿಯ ಮಗ 'ಮಾರಪ್ಪ' ಎಂಬುವವನು. ಈ ಗರುಡಕಂಬವನ್ನು ಮಾಡಿದವನು ಆಚಾರಿ ಅಕನಾಯಕನ ಮಗ ಪತಿಓಜನೆಂಬ ಶಿಲ್ಪಿ. ಹಾಗಾದಲ್ಲಿ ಈ ಓಜರನ್ನು ಇಲ್ಲಿ ತೊತ್ತುಗೆಲಸಕ್ಕೆ ನೇಮಿಸಲಾಗಿದೆ.

ಈ ಶ್ರಮಿಕ ವರ್ಗದವರು ರಾಜರಾದವರಲ್ಲ, ಅಧಿಕಾರಿಗಳಲ್ಲ, ಇವರು ಸಮಾಜದಲ್ಲಿ ಸಹಜ ಜೀವನ ಮಾಡುತ್ತಿದ್ದ ಶ್ರೀಸಾಮಾನ್ಯರು. ಇವರ ಅಸ್ತಿತ್ವ ಸಮಾಜದಲ್ಲಿ ಇತ್ತು ಹಾಗೂ ಇವರು ಸಮಾಜದ ಅವಿಭಾಜ್ಯ ಅಂಗವಾಗಿದ್ದರು ಎಂಬುದು ಶಾಸನಗಳ ಮೂಲಕ ತಿಳಿಯುತ್ತದೆ.

## ಸ್ತ್ರೀಯರ ಸ್ಥಾನಮಾನ

ಸ್ತ್ರೀ ಮತ್ತು ಪುರುಷ ಸಮಾಜದ ಎರಡು ಮುಖಗಳು. 'ನ ಸ್ತ್ರೀ ಸ್ವಾತಂತ್ರ್ಯಮಹರ್ತಿ' ಎಂದು ಮನು ಹೇಳಿರುವ ತತ್ವವನ್ನೇ ಅನಾದಿ ಕಾಲದಿಂದಲೂ ಪುರುಷ ಪ್ರಧಾನ ಸಮಾಜ ಅನುಸರಿಸಿಕೊಂಡು ಬಂದಿದೆ. ಮಹಿಳೆಯರ ಸ್ಥಿತಿಗತಿಯನ್ನು ತಿಳಿಯಲು ಪುರಾಣಗಳು, ಐತಿಹ್ಯಗಳು, ಕಥೆ, ಕಾದಂಬರಿಗಳು ಸಹಾಯಕವಾಗಿವೆ. ಆದರೆ ಶಾಸನಗಳು ಮಹಿಳೆಯ ಸ್ಥಿತಿ ಹೇಗಿತ್ತು ಎಂಬುದನ್ನು ತೆರೆದಿಡುವುದರಲ್ಲಿ ಒಂದು ಹೆಜ್ಜೆ ಮುಂದಿದೆ. ಇಲ್ಲಿ ಯಾವುದೇ ಊಹೆಗಳಿಗೆ ಆಸ್ಪದವಿಲ್ಲ. ಒಂದು ಕಡೆ ಮಹಿಳೆಯರು ರಾಣಿಯರಾಗಿ ಮೆರೆದರೆ ಮತ್ತೊಂದೆಡೆ ತೊತ್ತಿನ ಕೆಲಸವನ್ನೂ ಮಾಡಿದ್ದಾರೆ. ಇದು ಅವರ ಸಾಮಾಜಿಕ ಅಂತಸ್ಥಿನ ಮೇಲೆ ನಿರ್ಧರಿತವಾಗಿದೆ. ಅನೇಕ ಮಹಿಳೆಯರು ಬಸದಿ–

ದೇವಾಲಯಗಳನ್ನು ಕಟ್ಟಿಸಿದ್ದಾರೆ. ದೇವರ ಅಂಗ–ಭೋಗ, ರಂಗಭೋಗಕ್ಕೆ ಸಹಾಯ ಸೇವೆ ಸಲ್ಲಿಸಿದ್ದಾರೆ. ಸತ್ರ, ಕೆರೆ, ಉದ್ಯಾನವನಕ್ಕಾಗಿ ದಾನ ಮಾಡಿದ್ದಾರೆ. ಸನ್ಯಾಸಿನಿಯರಾಗಿ ಸಮಾಜಕ್ಕೆ ಮಾರ್ಗದರ್ಶನ ಮಾಡಿದ್ದಾರೆ. ಮಹಾಸತಿಯರು ಮಡಿದ ಗಂಡನೊಂದಿಗೆ ಚಿತೆ ಏರುವುದಷ್ಟೇ ಅಲ್ಲದೆ ಯುದ್ಧರಂಗದಲ್ಲಿ ಭಾಗಿಯಾಗಿದ್ದಾರೆ. ಹೀಗೆ ಧಾರ್ಮಿಕ, ರಾಜಕೀಯ, ಸಾಮಾಜಿಕ ಕ್ಷೇತ್ರಗಳಲ್ಲಿ ಪುರುಷರಿಗೆ ಹೆಗಲೆಣೆಯಾಗಿ ನಿಂತು ಸಮಾಜಕ್ಕೆ ಸೇವೆ ಸಲ್ಲಿಸಿದ್ದಾರೆ. ಇಂತಹ ಸಂಗತಿಗಳು ಬೆಂಗಳೂರು ನಗರ ಜಿಲ್ಲೆಯ ಶಾಸನಗಳಲ್ಲಿ ಉಲ್ಲೇಖವಾಗಿವೆ. ಈ ಮಹಿಳೆಯರ ಸ್ಥಿತಿ–ಗತಿಗಳನ್ನು ಇಲ್ಲಿ ಪರಿಚಯಿಸಲಾಗಿದೆ.

ಬೆಂಗಳೂರು ನಾಗೇಶ್ವರ ದೇವಸ್ಥಾನದ ಸ್ಥಳದಲ್ಲಿ ದೊರೆತಿರುವ ವೀರಗಲ್ಲು[26] ಕರ್ನಾಟಕದಲ್ಲಿ ಮಹಿಳೆಯರು ಯುದ್ಧಭೂಮಿಯಲ್ಲಿ ಪಾಲ್ಗೊಳ್ಳುತ್ತಿದ್ದರು ಎಂಬುದನ್ನು ಸ್ಪಷ್ಟಪಡಿಸುತ್ತದೆ. ಸಾಮಾನ್ಯವಾಗಿ ರಾಜಮನೆತನದ ಹೆಣ್ಣುಮಕ್ಕಳು ಯುದ್ದವಿದ್ಯೆಯಲ್ಲಿ ಪಾರಾಂಗತರಾಗಿದ್ದರು. ಹಾಗೂ ಯುದ್ಧದಲ್ಲಿ ಪಾಲ್ಗೊಳ್ಳುವ ಅವಕಾಶ ದೊರೆಯುತ್ತಿತ್ತು. ಬೆಂಗಳೂರಿನಲ್ಲಿ ದೊರೆತಿರುವ ಈ ವೀರಗಲ್ಲು ವಿಶೇಷವಾಗಿದೆ. ಕೊಂಡಬ್ಬೆ ಎಂಬ ಹೆಣ್ಣು ಕರ್ತವ್ಯ ವೇಳೆಯಲ್ಲಿ ವೀರಸ್ವರ್ಗ ಹೊಂದಿದಳು ಎಂದು ತಿಳಿಸುವ ವೀರಗಲ್ಲು. ಈಕೆ ಗಂಗ ದೊರೆಯ ಸಾಮಂತ ಅಧಿಕಾರಿಯಾಗಿದ್ದ ನಾಗತ್ತರ ಎಂಬುವನ ಮಗಳು. ಸಾಮಾನ್ಯ ವರ್ಗದ ಹೆಣ್ಣುಮಕ್ಕಳು ಯುದ್ಧಕಲೆಯಲ್ಲಿ ನಿಪುಣರಾಗುವುದಷ್ಟೇ ಅಲ್ಲದೆ, ಭಾಗಿಯಾಗುವ ಅವಕಾಶವೂ ಇತ್ತು ಎಂಬುದು ಇದರಿಂದ ತಿಳಿಯುತ್ತದೆ.

**"ನಾಗತ್ತರನ ಮಗಳ್ರೊಣ್ಣಬ್ಬೆ ಸನ್ಯಸನಂಗೈದು ಮುಡಿಪಿದಳ್"**[27] ಕ್ರಿ.ಶ.900ರ ಈ ಶಾಸನದಲ್ಲಿ ನಾಗತ್ತರನ ಮಗಳು ರೊಣ್ಣಬ್ಬೆಯ ಉಲ್ಲೇಖವಿದೆ. ಈಕೆ ಜೈನಮತದ ಶ್ರಾವಕಿಯಾಗಿದ್ದು, ಸಮಾಧಿಮರಣ ಹೊಂದಿರುವುದನ್ನು ಈ ಶಾಸನದ ಮೂಲಕ ತಿಳಿಯಬಹುದು. ಸಾಮಾನ್ಯ ವರ್ಗಕ್ಕೆ ಸೇರಿದ ಈಕೆ ಪ್ರಾಚೀನ ಜನರು ಮೌಲ್ಯವೆಂದು ನಂಬಿದ್ದ ಧಾರ್ಮಿಕ ಆತ್ಮಬಲಿದಾನ ನೀಡಿದ್ದಾಳೆ. ನಾಗತ್ತರನ ಇಬ್ಬರು ಹೆಣ್ಣುಮಕ್ಕಳಲ್ಲಿ ರೊಣ್ಣಬ್ಬೆ ಧಾರ್ಮಿಕ ಆತ್ಮಬಲಿದಾನವನ್ನು ಮಾಡಿದರೆ ಮತ್ತೊಬ್ಬ ಮಗಳಾದ ಕೊಂಡಬ್ಬೆ ವೀರಮರಣ ಹೊಂದಿದ್ದಾಳೆ. ಈ ಮೂಲಕ ಪ್ರಾಚೀನ ಸಂದರ್ಭದಲ್ಲಿ ಮಹಿಳೆಯರು ಧಾರ್ಮಿಕವಾಗಿ ಮತ್ತು ರಾಜಕೀಯವಾಗಿ ಭಾಗಿಯಾಗುತ್ತಿದ್ದರು ಎಂಬುದು ಸ್ಪಷ್ಟವಾಗಿ ತಿಳಿಯುತ್ತದೆ. ಇವರ ಸಂಖ್ಯೆ ಹೆಚ್ಚಿನ ಪ್ರಮಾಣದಲ್ಲಿಲ್ಲದಿದ್ದರೂ ಅಲ್ಪಸಂಖ್ಯೆಯ ಮಹಿಳೆಯರ ಉಲ್ಲೇಖವಿರುವ ಶಾಸನಗಳು ನಮಗೆ ದೊರೆಯುತ್ತವೆ.

"ಜೈನ ಸಮಾಜದಲ್ಲಿ ಸಂಸಾರದಲ್ಲಿದ್ದು, ಧರ್ಮಶ್ರದ್ಧೆಯ ದೀಕ್ಷೆ ತೊಟ್ಟ ಶ್ರಾವಕಿಯರು. ಸನ್ಯಾಸ ಸ್ವೀಕರಿಸಿ ಧರ್ಮ ಪ್ರಸಾರದ ಹೊಣೆ ಹೊತ್ತ ಸನ್ಯಾಸಿನಿಯರೆಂದು ಎರಡು ಭಾಗವಿದೆ. ಇವರನ್ನು ಅಜ್ಜಿಯರು, ಕಂತಿಯರು ಎಂದು ಕೆರೆದಿರುವರು. ಭದ್ರಬಾಹುವಿನ ಪ್ರವೇಶದೊಂದಿಗೆ ಕರ್ನಾಟಕದಲ್ಲಿ ಕಂತಿಯರು ಅಥವಾ ಆಚಾರ್ಯಾಣಿಯರು ತಲೆಯೆತ್ತಿರಬೇಕು. ಜೈನ ಸಂಸ್ಕೃತಿಯ ಉದ್ಧೀಪನಕ್ಕಾಗಿ ಇವರು ನಿರ್ವಹಿಸಿದ ಪಾತ್ರ ಬಹು ಅಮೂಲ್ಯವಾದುದು."[28] ಇಂತಹ ಕಂತಿಯ ಉಲ್ಲೇಖ ಸಿಗುವ ಶಾಸನ ಬೇಗೂರು ಗ್ರಾಮದ ಕೋಟೆಯಲ್ಲಿ ಎರಡನೇ ಬಾಗಿಲ ಬಲ ಭಾಗದ ಜಗಲಿಯ ಕಲ್ಲಿನಲ್ಲಿದೆ. 'ರವಿಕಾನ್ತಿ ಸಿನ್ಧಾನ್ತಿಯರಪ್ಪ ಮಂಕಬ್ಬೆ ಕಂತಿ.'[29] ಮಂಕಬ್ಬೆ ಜೈನಮುನಿ ಪೆರ್ಮಾಣನ್ದಿ ಭಟ್ಟಾರಕರ ಶಿಷ್ಯೆ. ಇವರಿಂದ ಜೈನದೀಕ್ಷೆಯನ್ನು ಹೊಂದಿದ್ದಾಳೆ. ಹೀಗೆ ಜೈನದೀಕ್ಷೆಯನ್ನು ಪಡೆದ ಕಂತಿಯರು ತಮ್ಮ ಹೆಸರನ್ನು ಬದಲಾಯಿಸಿ ಕೊಳ್ಳುತ್ತಿದ್ದರು. ಈ ಕಂತಿಯರು ಜ್ಞಾನ, ಕ್ರಿಯೆ, ವಿದ್ವತ್ತು ಹೊಂದಿರುತ್ತಿದ್ದರು. ಮಹಿಳೆಯರು ಕಂತಿಯರಾಗುವಲ್ಲಿ ಅವರ ಸ್ಥಾನ, ಗೌರವಗಳು ಮೇಲ್ಮಟ್ಟಕ್ಕೇರುತ್ತಿದ್ದವು. ಹಾಗೂ ಸಾಮಾಜಿಕ ಪರಿಸರ ವಿಶಿಷ್ಟ ಬದಲಾವಣೆ ಪಡೆಯುತ್ತಿದ್ದವು. ಮಂಕಬ್ಬೆ ಕಂತಿಯಾದರೆ, ರೊಣ್ಣಬ್ಬೆ ಶ್ರಾವಕಿಯಾಗಿದ್ದಳು. ಮಹಿಳೆಯರಿಗೆ ಜೈನಧರ್ಮದಲ್ಲಿ ಧಾರ್ಮಿಕ ಸ್ವಾತಂತ್ರ್ಯವಿತ್ತು.

ಒಂದು ಕಡೆ ಮಹಿಳೆಯರು ಕಂತಿ, ಶ್ರಾವಕಿಯರಾಗಿ ಧರ್ಮ ಪ್ರಚಾರವನ್ನು ಕೈಗೊಂಡರೆ, ಮತ್ತೊಂದೆಡೆ ದೇವಾಲಯಗಳಲ್ಲಿ ಅಂಗಭೋಗ–ರಂಗಭೋಗಕ್ಕೆ ಸೇವೆ ಸಲ್ಲಿಸುವುದರ ಮೂಲಕ ದೇವಸೂಳೆಯರ ಪದ್ಧತಿಯು ಬೆಳೆಯಿತು. ವ್ಯಕ್ತಿಯ ಭೋಗವಸ್ತು, ವ್ಯಕ್ತಿ ಸೂಳೆಯಾದರೆ, ದೇವನ ಭೋಗಕ್ಕೆ ಒಪ್ಪಿಸಿದ್ದವಳು ದೇವಸೂಳೆ. ಇವರು ಆಜನ್ಮ ಪರ್ಯಂತ ದೇವರ ಸೇವೆ ಮಾಡುತ್ತ ಇರಬೇಕಿತ್ತು. ಇವರಲ್ಲಿ ದೇವಸ್ಥಾನದ ಅಂಗಭೋಗ, ರಂಗಭೋಗ, ಕಂಬದ ಸೂಳೆ, ಮಾಡದ ಸೂಳೆ, ಪಾತ್ರದ ಸೂಳೆ, ಓಲಗದ ಸೂಳೆ, ಬಸವಿ ಈ ರೀತಿಯ ಗುಂಪುಗಳು ಇರುತ್ತಿದ್ದವು. ಪಾತ್ರದ ಸೂಳೆಯ ಬಗ್ಗೆ ಮಣ್ಣೆ ಶಾಸನದಲ್ಲಿ[30] ಉಲ್ಲೇಖವಿದೆ. ಈ ವ್ಯವಸ್ಥೆಯಲ್ಲಿ ಪಾತ್ರದ ಸೂಳೆಯು ಮುಖ್ಯಳಾಗುತ್ತಾಳೆ. 'ವಾರವಿಲಾಸಿನೀ ವಿರಚಿತ ನೃತ್ಯಗೀತ ವಾದ್ಯ'ವನ್ನು ಉಲ್ಲೇಖಿಸುವ ಮಣ್ಣೆ ತಾಮ್ರಪಟ ಶಾಸನವಿದಾಗಿದೆ.

ಹೆಣ್ಣುಮಕ್ಕಳನ್ನು ನಮ್ಮಲ್ಲಿ ದೇವರಿಗೆ ಬಿಡುವ ಪದ್ಧತಿ ಬಹಳ ಹಿಂದಿನ ಕಾಲದಿಂದಲೂ ರೂಢಿಸಿಕೊಂಡು ಬಂದಿದ್ದಾರೆ. ಆದರೆ ಇದು ಯಾವ ಕಾಲಘಟ್ಟದಿಂದ ಪ್ರಾರಂಭವಾಯಿತು ಎಂದು ನಿರ್ಧಿಷ್ಟವಾಗಿ ಹೇಳಲು ಸಾಧ್ಯವಾಗುವುದಿಲ್ಲ. ಆದರೆ ಇದರ ಉಲ್ಲೇಖ ನಮಗೆ ಶಾಸನಗಳಲ್ಲಿ ದೊರೆಯುತ್ತದೆ. "ಭರತಖಂಡದಲ್ಲಿ ಒಂದು ಕಾಲಕ್ಕೆ ಎಲ್ಲ ಕಡೆಗೂ ವ್ಯಾಪಿಸಿದ್ದ ಪದ್ಧತಿ ಇದು.

ಮಹಾರಾಷ್ಟ್ರದಲ್ಲಿ 'ಭಾಮಿನೀ', ಉತ್ತರ ಭಾರತದಲ್ಲಿ 'ಮಂಗಳ ಮುಖಿ', 'ದಕ್ಷಿಣ ಕನ್ನಡ ಜಿಲ್ಲೆಯಲ್ಲಿ 'ಕೂತಾಡುವ ಬಾಕನಂಗೆ'ಯರೆಂದು ಇವರನ್ನು ಕರೆಯುತ್ತಿದ್ದರು" ಎಂದು ಚನ್ನಕ್ಕ ಪಾವಟೆ ಅಭಿಪ್ರಾಯಪಡುತ್ತಾರೆ.[31]

ಅನಾದಿ ಕಾಲದಿಂದಲೂ ನಡೆದು ಬಂದ ದೇವದಾಸಿ ಪದ್ಧತಿಯ ಬಗ್ಗೆ ಬುಕನಾನ್ ಒಂದು ಕಡೆ ಹೀಗೆ ಹೇಳಿದ್ದಾನೆ "ದೇವದಾಸಿ ಪದ್ಧತಿ ವಿಜಯನಗರ ಸಮ್ರಾಜ್ಯದಲ್ಲಿದ್ದಂತೆ ಯಲಹಂಕ ಪ್ರಭುಗಳ ಆಳ್ವಿಕೆಗೆ ಸೇರಿದ ಪ್ರದೇಶಗಳಲ್ಲಿದ್ದುದು ಕಂಡುಬರುತ್ತದೆ. ದೇವದಾಸಿಯರು ದೇವಸ್ಥಾನದ ಸೇವೆಗೆ ಸಂಬಂಧಿಸಿದಂತೆ ಜನ ಸಾಮಾನ್ಯರು ತಮ್ಮ ಮನೆತನಕ್ಕೆ ನಡೆದು ಬಂದ ಆಚಾರದಂತೆ ಶಿವನನ್ನು ಪೂಜಿಸುತ್ತಿದ್ದರು. ಕೆಲವರು ವಿಷ್ಣುವನ್ನು ಮತ್ತೆ ಕೆಲವರು ಶಿವ, ವಿಷ್ಣು ಅಲ್ಲದೆ ಶಕ್ತಿಯನ್ನು ಪೂಜಿಸುತ್ತಿದ್ದ ದಾಖಲೆಗಳನ್ನು ಫ್ರಾನ್ಸಿಸ್ ಬುಕಾನನ್ ತಮ್ಮ ಪ್ರವಾಸದಲ್ಲಿ ಕಂಡಿರುವುದನ್ನು ದಾಖಲಿಸಿದ್ದಾನೆ."[32] ಹೀಗೆ ಮಹಿಳೆಯರು ನಗರದಲ್ಲಿ ದೇವದಾಸಿ ಪದ್ಧತಿಯನ್ನು ದೇವಸ್ಥಾನದ ಹೆಸರಿನಲ್ಲಿ ಅನುಸರಿಸುತ್ತಿದ್ದರು ಎಂದು ತಿಳಿದುಬರುತ್ತದೆ.

ಪ್ರಾಚೀನ ಕರ್ನಾಟಕದಲ್ಲಿ ತುರುಗಳ ಕಾಳಗ ಪ್ರಸಿದ್ಧವಾದ ಯುದ್ಧವಾಗಿತ್ತು. ಒಂದು ಗ್ರಾಮದ, ಒಬ್ಬ ವ್ಯಕ್ತಿಯ ತುರುಗಳನ್ನು ಅಪಹರಿಸಲು ಬಂದ ಕಳ್ಳರೊಂದಿಗೆ ಹೋರಾಡಿ ತಮ್ಮ ತುರು ಸಂಪತ್ತನ್ನು ಕಾಪಿಟ್ಟು ಕೊಳ್ಳಲು ತಮ್ಮ ಪ್ರಾಣವನ್ನೇ ಬಲಿಕೊಟ್ಟ ವೀರರಿದ್ದಾರೆ. ಇವರ ಹೆಸರಿನಲ್ಲಿ ಶಾಸನ ಹಾಕಿಸುವುದರ ಜೊತೆಗೆ ಸ್ಮಾರಕ ಶಿಲ್ಪದ ಕೆತ್ತನೆಯೂ ವಿಶಿಷ್ಟವಾಗಿರುತ್ತದೆ. ಇಂತಹ ತುರುಗೋಳ್ ಕದನವನ್ನು ಹೇಳುವ ಹಲವು ಶಾಸನಗಳು ನಮಗೆ ಬೆಂಗಳೂರು ಜಿಲ್ಲೆಯಲ್ಲಿ ದೊರೆಯುತ್ತವೆ. ಆದರೆ ಸಿದ್ಧನಹಳ್ಳಿ[33]ಯಲ್ಲಿ ದೊರೆತ ತುರು ಕಾಳಗದ ಶಾಸನವು ವಿಶೇಷವಾಗಿದೆ. ಕಾರಣ ಈ ಯುದ್ಧದಲ್ಲಿ ಕಾದು ವೀರಸ್ವರ್ಗ ಹೊಂದಿದವರು ಪುರುಷನಲ್ಲ ಒರ್ವಮಹಿಳೆ. ಮಾಚಗಾವುಂಡನ ಮಗಳು ಲಕ್ಷ್ಮಮ್ಮ ಗಾವುಂಡಿ ಎಂಬ ಹೆಣ್ಣುಮಗಳು ತುರುಗೋಳದಲ್ಲಿ ಎಮ್ಮೆ ತುರುಗಳನ್ನು ಪರದಟ್ಟಿ ಹುಯ್ಯಲ ಹರಿದು ಕಾದಿ ತುರುವನ್ನು ಮರಳಿಸಿ ವೀರಸ್ವರ್ಗ ಪಡೆದವಳು ಮಹಿಳೆಯೋರ್ವಳು ತುರುಗೋಳ ಕದನದಲ್ಲಿ ನೇರವಾಗಿ ಭಾಗವಹಿಸಿ ಸಾವನಪ್ಪಿದ್ದನ್ನು ತಿಳಿಸುವ ವಿಶೇಷ ಶಾಸನವಿದಾಗಿದೆ.

ಬೆಂಗಳೂರು ಮ್ಯೂಸಿಯಮ್‌ನಲ್ಲಿರುವ ತಾಮ್ರಶಾಸನವು "ಹೊಯ್ಸಳ ವೀರಸೋಮೇಶ್ವರದೇವ ತನ್ನ ಪಟ್ಟದರಸಿ ಸೋಮಲದೇವಿಯ ಶ್ರೇಯಾರ್ಥವಾಗಿ ಮತ್ತಿಕಟ್ಟವನ್ನು ಸೋಮಲಾಪುರವೆಂದು ಹೆಸರಿಟ್ಟು ಅಲ್ಲಿಯ ಬ್ರಾಹ್ಮಣರಿಗೆ ದತ್ತಿ ಬಿಟ್ಟುದು ಕಂಡು ಬರುತ್ತದೆ."[34] ಮೇಲುವರ್ಗದ ರಾಣಿಯರ ಹೆಸರಿನಲ್ಲಿ ದಾನಧರ್ಮಮಾಡುವ ಪದ್ಧತಿ ಪ್ರಚಲಿತದಲ್ಲಿತ್ತು. ಪ್ರಭುವರ್ಗದವರು ತಮ್ಮ ಮಹಿಳೆಯರ

ಜ್ಞಾಪಕಾರ್ಥವಾಗಿ ಗ್ರಾಮ ನಿರ್ಮಾಣ ಮಾಡುತ್ತಿದ್ದರು. ಇರುವ ಹಳೆಯ ಗ್ರಾಮದ ಹೆಸರನ್ನು ಬದಲಾಯಿಸಿ ತಮ್ಮ ಪ್ರೀತಿ ಪಾತ್ರ ಹೆಂಡತಿ ಅಥವಾ ತಾಯಿ ಹೀಗೆ ಅವರ ಹೆಸರುಗಳಿಂದ ಹೊಸ ಗ್ರಾಮದ ಸ್ಥಾಪನೆಯ ಕಾರ್ಯ ಜರುಗುತ್ತಿತ್ತು. ಇಂತಹ ರಾಜರಲ್ಲಿ ಹೊಯ್ಸಳ ದೊರೆ ವೀರಸೋಮೇಶ್ವರ ದೇವನು ಒಬ್ಬನು. ತನ್ನ ಪತ್ನಿ ಸೋಮಲದೇವಿಯ ಹೆಸರಿನಲ್ಲಿ ಮತ್ತಿಕಟ್ಟವನ್ನು ಸೋಮಲಾಪುರವೆಂದು ಪುನರ್‌ನಿರ್ಮಾಣ ಮಾಡಿದ್ದಾನೆ. ಕರ್ನಾಟಕದಲ್ಲಿ ಈ ರೀತಿ ಮಹಿಳೆಯರ ಹೆಸರಿನಿಂದ ಕರೆಯುವ ಊರುಗಳಷ್ಟೆ ಅಲ್ಲದೆ, ಕೆರೆಗಳಿಗೂ ಅವರ ಹೆಸರನ್ನು ಇಡುತ್ತಿದ್ದದ್ದು ವಿಶೇಷವಾಗಿದೆ.

ಅಗರದ ಮಡಿವಾಳಪಾಳ್ಯದ ಛತ್ರದ ಬಾಗಿಲ ಬಳಿ ದೊರೆತ ಶಾಸನವು ಹೆಣ್ಣೊಬ್ಬಳ ಹೆಸರಿನಲ್ಲಿರುವ ಧರ್ಮಛತ್ರದ ನಿರ್ಮಾಣದ ಬಗ್ಗೆ ತಿಳಿಸುತ್ತದೆ. "ಮುದಲೆಯಾರ್ರವರ ಧರ್ಮಪತ್ನಿ ವೆಂಕಟಂಮನವರ ಧರ್ಮಛತ್ರ. ಇವರ ಜೇಷ್ಟಾತ್ಮಾರಾಯ ಬಹದ್ದೂರ್ ರತ್ನ ಸಭಾಪತಿ ಮುದಲಿಯಾರ್ರವರಿಂದ ಜೇಷ್ಠ ಪಿತೃ ವೆಂಕಟಾಚಲ ಮುದಲಿಯಾರ್ರವರಧರ್ಮ ಪತ್ನಿ ಮಂಗತಾಯಿ ಅಮ್ಮನವರ ಜ್ಞಾಪಕಾರ್ಥ ವೃದ್ಧಿ ಮಾಡಲ್ಪಟ್ಟ"[35] ವಿಷಯನ್ನು ಹೇಳುತ್ತದೆ.

ರಾಜರು ತಮ್ಮ ರಾಣಿಯರು ಹಾಗೂ ತಾಯಿಯ ಹೆಸರಿನಲ್ಲಿ ದಾನಮಾಡಿದ್ದಷ್ಟೇ ಅಲ್ಲದೆ. ಉನ್ನತ ವರ್ಗದ ಸ್ತ್ರೀಯರು ಸ್ವತಃ ದಾನ ನೀಡಿದ ವಿವರಗಳು ಶಾಸನದಲ್ಲಿ ದೊರೆಯುತ್ತವೆ. ಲೋಕ ಕಲ್ಯಾಣಕ್ಕೆ, ಜನರ ಉದ್ಧಾರಕ್ಕೆ ದಾನ, ದತ್ತಿ, ಧಾರ್ಮಿಕ ಕಾರ್ಯಗಳಲ್ಲಿ ನೇರವಾಗಿ ಸ್ತ್ರೀಯರು ಪಾಲ್ಗೊಂಡಿದ್ದಾರೆ. ಕುಣಿಗಲ್ಲು ಹೋಬಳಿ ಕೃಷ್ಣಸಾಗರ ಗ್ರಾಮದಲ್ಲಿರುವ ಶಾಸನದಲ್ಲಿ[36] ಯಲಹಂಕ ನಾಡಪ್ರಭುಗಳಾದ ಇಮ್ಮಡಿ ಹಿರಿಯ ಕೆಂಪೇಗೌಡನ ಪತ್ನಿ ವೆಂಕಟಕೃಷ್ಣಾಜಮ್ಮ ದಾನ ನೀಡಿದ ವಿವರವಿದೆ. ತನ್ನ ಮಾವ ಇಮ್ಮಡಿ ಕೆಂಪೇಗೌಡರಯ್ಯನವರಿಗೂ ಅತ್ತೆ ಲಿಂಗಾಜಮ್ಮನವರಿಗೂ ಪುಣ್ಯವಾಗಲಿ ಎಂದು ದಾನ ನೀಡಿದ್ದಾಳೆ. ಯಲಹಂಕ ನಾಡಪ್ರಭಗಳಿಗೆ ಸಂಬಂಧಪಟ್ಟಂತೆ ನಮಗೆ ಶಾಸನಗಳು ದೊರಕುತ್ತವೆ ಹೊರತು ನಾಡಪ್ರಭುಗಳ ಮಹಿಳೆಯರ ಬಗ್ಗೆ ಉಲ್ಲೇಖ ಸಿಗುವುದು ಕಡಿಮೆ.

ಕ್ರಿ.ಶ.1599ರ ಶಾಸನವು[37] ಇಮ್ಮಡಿ ಹಿರಿಯ ಕೆಂಪೇಗೌಡರ ಉಪಪತ್ನಿ ಪಟ್ಟದ ನಾಟಕ ಶಾಲೆಯ ಶೃಂಗಾರಮ್ಮ ಎಂಬುವಳು ಶೃಂಗಾರ ಸಾಗರ ಎಂಬ ಅಗ್ರಹಾರವನ್ನು ನಿರ್ಮಿಸಿರುವ ವಿವರವಿದೆ. ಯಲಹಂಕ ನಾಡಪ್ರಭುಗಳ ಕಾಲದಲ್ಲಿ ಸ್ತ್ರೀಯರು ಅಗ್ರಹಾರ ನಿರ್ಮಾಣದ ಕಾರ್ಯವನ್ನು ಕೈಗೊಳ್ಳುತ್ತಿದ್ದರು ಎಂಬುದು ಸ್ಪಷ್ಟವಾಗುತ್ತದೆ. ಶೃಂಗಾರಿಕಟ್ಟೆಯ ಕೆಳಗೆ ಬಿದ್ದಿರುವ ಶಿಲಾಶಾಸನ ಇದೇ ಶೃಂಗಾರಮ್ಮ ಎಂಬುವಳು ಕಟ್ಟಿಸಿದ ಕೆರೆ ಎಂಬ ವಿವರವನ್ನು ನೀಡುತ್ತದೆ.[38] ಅಂದರೆ ಈಕೆ ಕೆರೆಯನ್ನು

ಕೂಡ ನಿರ್ಮಾಣಮಾಡಿದ್ದಳು. ಈ ಶಾಸನಗಳಲ್ಲಿ ಶೃಂಗಾರಮ್ಮನನ್ನು ಉಪಪತ್ನಿ ಎಂದು ಹೇಳಲಾಗಿದೆ. ಅಂದರೆ ನಾಡಪ್ರಭುಗಳಲ್ಲಿ ಬಹುಪತ್ನಿತ್ವ ಜಾರಿಯಲ್ಲಿತ್ತು. ಡಾ.ಎಂ.ವಿ.ಕೃಷ್ಣರಾವ್‌ರವರು ಹೇಳುವಂತೆ, ಇಮ್ಮಡಿ ಕೆಂಪಭೂಪನಿಗೆ ಕೆಂಪಮ್ಮ ಮತ್ತು ಲಿಂಗಮ್ಮನೆಂಬ ಇಬ್ಬರು ಪತ್ನಿಯರಿದ್ದರೆಂದು ಹಾಗೂ ಮುಮ್ಮಡಿ ಕೆಂಪೇಗೌಡನಿಗೆ ಬಸವಮ್ಮ, ತೋಟದಮ್ಮ, ಬೈಯಮ್ಮ ಎಂಬ ಮೂವರು ಪತ್ನಿಯರು, ಜಪಾಮುದ್ದಿಯೆಂಬ ಉಪಪತ್ನಿ ಇದ್ದಳು ಎಂದು ಅಭಿಪ್ರಾಯಿಸಿದ್ದಾರೆ. ಹೀಗೆ ನಾಡಪ್ರಭುಗಳ ಕಾಲದಲ್ಲಿ ಬಹುಪತ್ನಿತ್ವ ಅಸ್ತಿತ್ವದಲ್ಲಿತ್ತು.

ಕ್ರಿ.ಶ. ಸುಮಾರು 16ನೇ ಶತಮಾನದ ಶಿವಗಂಗೆ ಬೆಟ್ಟದ ಮೇಲಿನ ನಂದಿಮಂಟಪದ ಪಕ್ಕದಲ್ಲಿರುವ ಭಕ್ತ ವಿಗ್ರಹದ ಪಕ್ಕದಲ್ಲಿರುವ[39] ಶಾಸನವು ಅರಸಿ ನಾಗಮ್ಮ ಎಂಬ ವಿವರವನ್ನು ಹೊಂದಿದೆ. ಆದರೆ ಯಾವ ರಾಜನ ಅರಸಿ ಎಂಬ ಉಲ್ಲೇಖವಿಲ್ಲ. ಬಹುಶ: ಈಕೆ ಯಲಹಂಕ ನಾಡಪ್ರಭುಗಳ ವಂಶಕ್ಕೆ ಸೇರಿದ ರಾಜನೊಬ್ಬನ ಪತ್ನಿಯಾಗಿದ್ದಿರಬಹುದೆಂದು ತೋರುತ್ತದೆ.

ಅಗಜಮ್ಮ ಎಂಬ ಸಾಮಾನ್ಯ ಹೆಣ್ಣುಮಗಳು ದಾನ ನೀಡಿದನ್ನು ಕ್ರಿ.ಶ.1597ರ ಶಿವಗಂಗೆ[40] ಶಾಸನವು ಹೇಳುತ್ತದೆ. ಈಕೆ ಶಿವಗಂಗೆಯ ಗಂಗಾಧರೇಶ್ವರನಿಗೆ ಗಂಟೆಯನ್ನು ದಾನ ನೀಡಿದ್ದಾಳೆ. ಇವಳು ಜುಟ್ಟನಹಳ್ಳಿಯ ಗಿರಿಯಪ್ಪ ಗೌಡರ ಮಗ ಚಿಕ್ಕ ಹೊನ್ನೇಗೌಡನ ಪತ್ನಿ. ಪ್ರಭುವರ್ಗದ ಮಹಿಳೆಯರು ದಾನ ಮಾಡುವ ಮನೋಭಾವನೆಯನ್ನು ಅಳವಡಿಸಿಕೊಂಡಿದ್ದರು. ಇವರ ಪ್ರಭಾವ ಸಾಮಂತ ದಂಡನಾಯಕರಂತಹ ಉನ್ನತ ವರ್ಗದ ಮಹಿಳೆಯರ ಮೇಲೆ ಪ್ರಭಾವ ಬೀರಿ, ಅಧಿಕ ಪ್ರಮಾಣದಲ್ಲಿ ಅವರು ದಾನ ಕಾರ್ಯ ಕೈಗೊಳ್ಳಲು ಪ್ರೇರಣೆ ನೀಡಿವೆ.

ಜನಪದ ಐತಿಹ್ಯಗಳ ಪ್ರಕಾರ ಕೊರಮಂಗಲದ ಸೊಣ್ಣೇಗೌಡರ ಮೊಮ್ಮಗಳು, ಕೆಂಪೇಗೌಡನ ಸೊಸೆ, ತನ್ನ ಮಾವನ ಲೋಕ ಕಲ್ಯಾಣರ್ಥವಾಗಿ ಬೆಂಗಳೂರಿನ ಕೋಟೆ ಬಾಗಿಲು ನಿಲ್ಲಲು ಗರ್ಭಿಣಿ ಆದ ಆಕೆ ತನ್ನ ಪ್ರಾಣವನ್ನು ಸ್ವತ: ಬಲಿ ಕೊಟ್ಟಿದ್ದಾಳೆ ಎಂಬ ನಂಬಿಕೆ. ಆಕೆಯ ತವರೂರಾದ ಕೋರಮಂಗಲದಲ್ಲಿ ಆಕೆಯನ್ನು ಸಮಾಧಿ ಮಾಡಲಾಗಿದೆ. ಆಕೆಯ ಹೆಸರಿನಲ್ಲಿ ಲಕ್ಷ್ಮೀ ದೇವಸ್ಥಾನವನ್ನು ಕಟ್ಟಿಸಿದ್ದಾರೆ. ಅಲ್ಲಿಂದ ನಿತ್ಯ ಪೂಜೆಯು ಸಲ್ಲುವಂತೆ ಏರ್ಪಡಿಸಿ ದಾನ, ದತ್ತಿಗಳನ್ನು ನೀಡಿದ್ದಾರೆ. ಆಕೆಯ ಸಮಾಧಿ ಇಂದಿಗೂ ಇದೆ. ಲಕ್ಷ್ಮೀ ದೇವಸ್ಥಾನದಲ್ಲಿ ಇಂದಿಗೂ ದಿನನಿತ್ಯ ಪೂಜೆ ನಡೆಯುತ್ತಿದೆ.

ಕೆಂಪೇಗೌಡರ ಸೊಸೆ ಲಕ್ಷ್ಮಮ್ಮನ ಸ್ಮಾರಕ[41] ಶಾಸನವನ್ನು ಗಮನಿಸಿದರೆ ಯಲಹಂಕ ನಾಡಪ್ರಭು ಕೆಂಪೇಗೌಡರ ಪುತ್ರ ಇಮ್ಮಡಿ ಕೆಂಪೇಗೌಡರ ಧರ್ಮಪತ್ನಿ ಶ್ರೀಮತಿ ಲಕ್ಷ್ಮಮ್ಮನವರು ಬೆಂಗಳೂರಿನ

ಕೋಟೆಯ ಭದ್ರತೆಗಾಗಿ ಆತ್ಮಾಹುತಿ ಮಾಡಿಕೊಂಡರು ಎಂಬ ವಿವರಗಳಿವೆ. ಇದು ಆಧುನಿಕ ಶಾಸನವಾಗಿದೆ. ಈ ಶಾಸನ ಬರೆದವರು ಕ್ರಿ.ಶ.1537 ಎಂದು ಬರೆಯುವ ಬದಲು ಶಾಲಿವಾಹನ ಶಕ 1537 ಎಂದು ತಪ್ಪಾಗಿ ಬರೆದಿದ್ದಾರೆಂದು ತೋರುತ್ತದೆ. ಇಂದಿಗೂ ಲಕ್ಷ್ಮೀದೇವಿ ಎಂದು ಪೂಜೆಗೆ ಒಳಗಾಗುತ್ತಿರುವುದು ಹಂದಿಬೇಟೆಯ ಕಲ್ಲು. ಕೋಟೆಯ ಭದ್ರತೆಗಾಗಿ ಕೆಂಪೇಗೌಡರ ಸೊಸೆ ಲಕ್ಷ್ಮಮ್ಮ ಆತ್ಮಾಹುತಿ ಮಾಡಿಕೊಂಡಿದ್ದಕ್ಕಾಗಲೀ ಆಕೆಯ ಸಮಾಧಿಯನ್ನು ಕೋರಮಂಗಲದಲ್ಲಿ ನಿರ್ಮಿಸಿದಕ್ಕಾಗಲೀ ಆಕೆಯ ಸ್ಮಾರಕವಾಗಿ ಲಕ್ಷ್ಮಿಯ ದೇವಸ್ಥಾನವನ್ನು ಕೆಂಪೇಗೌಡರು ನಿರ್ಮಿಸಿದರು ಎಂಬುದಕ್ಕಾಗಲಿ ಯಾವ ಆಧಾರಗಳೂ ಇಲ್ಲ.

ನಾಡಪ್ರಭುಗಳು ಸ್ತ್ರೀಯರನ್ನು ಗೌರವಿಸುತ್ತಿದ್ದರು. ಪ್ರಾಮುಖ್ಯತೆ ನೀಡುತಿದ್ದರು ಎಂಬುದಕ್ಕೆ ಅವರು ನಿರ್ಮಿಸಿರುವ ಕೆರೆ – ಕಟ್ಟೆಗಳು ಸಾಕ್ಷಿಯಾಗಿವೆ. ಇಲ್ಲಿ ಗಮನಿಸ ಬೇಕಾದ ಅಂಶವೆಂದರೆ ಈ ಕೆರೆಗಳಿಗೆ ಅವರ ವಂಶದ ಮಹಿಳೆಯರ ಹೆಸರನ್ನು ಇಟ್ಟಿರುವುದು. ಕೆಂಪೇಗೌಡನ ಸೋದರ ಮಾವನ ಮಗಳಾದ ಚೆನ್ನಮ್ಮಳ ಹೆಸರಿನಲ್ಲಿ 'ಚೆನ್ನಮ್ಮನ ಕೆರೆ'ಯನ್ನು, ತಮ್ಮ ಅರಮನೆಯ ಕುಟುಂಬದ ರಾಣಿಯರಲ್ಲೇ ಒಬ್ಬರಾದ ಸಿದ್ಧಮ್ಮನ ಹೆಸರಿನಲ್ಲಿ ಈಗಿನ ಸಿಟಿ ಮಾರ್ಕೆಟಿನ 'ಸಿದ್ದಿಕಟ್ಟೆ'ಯನ್ನು, ತನ್ನ ಕುಲದೇವತೆ ಕೆಂಪಮ್ಮಳ ಹೆಸರಿನಲ್ಲಿ ಇಂದಿನ ಮೆಜೆಸ್ಟಿಕ್ ಬಸ್ ನಿಲ್ದಾಣದಲ್ಲಿ 'ಧರ್ಮಾಂಬುದಿ ಕೆರೆ'ಯನ್ನು ಹಾಗೂ ನಂಜಂಬ ಅಗ್ರಹಾರ ಇಂದಿನ ಜಿಂಕೆಪಾರ್ಕ್ ಬಳಿ ಕೆಂಪಾಂಬುದಿ ಕೆರೆಯನ್ನು ನಿರ್ಮಿಸಿದ್ದನು. ವಾಸ್ತವದಲ್ಲಿ ಈ ಕೆರೆಗಳು ಕಣ್ಮರೆಯಾಗಿ ಆಧುನಿಕತೆಯ ಸ್ಥಿತ್ಯಂತರಕ್ಕೆ ಸಿಲುಕಿ ಬದಲಾಗಿ ಹೋಗಿವೆ. ಹೀಗೆ ನಾಡಪ್ರಭುಗಳು ಮಹಿಳೆಯರಿಗೆ ಪ್ರಾಮುಖ್ಯತೆಯನ್ನು, ಗೌರವನ್ನು ನೀಡುತ್ತಿದ್ದರು ಎಂಬುದು ವೇದ್ಯವಾಗುತ್ತದೆ.

ನಗರ ಜಿಲ್ಲೆಯಲ್ಲಿ ದೊರೆಯುವ ಕೆಲವೇ ಕೆಲವು ಶಾಸನಗಳು ಮಹಿಳೆಯರ ಬಗ್ಗೆ ಪರಿಚಯಿಸುತ್ತದೆ. ಆ ಕಾಲಘಟ್ಟದಲ್ಲಿ ಸ್ತ್ರೀಯು ಹೇಗೆ ಜೀವಿಸುತ್ತಿದ್ದಳು. ಅವಳ ಸ್ವಾತಂತ್ರ್ಯವು ಎಷ್ಟರ ಮಟ್ಟಿಗೆ ಪುರುಷ ಪ್ರಧಾನ ಸಮಾಜದಲ್ಲಿ ಇತ್ತು ಎಂಬುದನ್ನು ದೊರೆತ ಶಾಸನವು ಸ್ಪಷ್ಟಪಡಿಸುತ್ತದೆ. ಸ್ತ್ರೀ ಸಮಾಜಕ್ಕೆ ನೀಡಿದ ಸೇವೆ, ಅವರು ಕೈಗೊಂಡ ಮಹತ್ವದ ಕಾರ್ಯಗಳು, ಅವಳ ಸ್ಥಾನಮಾನ ತಿಳಿಯಬಹುದು. ಆಕೆಯು ಸಾಹಸ, ಧರ್ಮ, ತ್ಯಾಗ, ಬಲಿದಾನ, ಸಜ್ಜನಿಕೆ, ಸೌಂದರ್ಯ, ದಾನ, ದೈವ ಮೊದಲಾದ ರೂಪದ ಸಂಸ್ಕೃತಿಯ ಸಾಕಾರ ಮೂರ್ತಿಯಾಗಿ ನಿಂತಿದ್ದಾಳೆ.

## ವಿದ್ಯಾಭ್ಯಾಸ

ಭಾರತೀಯ ಸಮಾಜದಲ್ಲಿ ಜ್ಞಾನಾರ್ಜನೆ ಎಂಬುದು ಒಂದು ನಾಡಿನ ಸಂಸ್ಕೃತಿಯ ಕುರುಹಾಗಿತ್ತು. ವ್ಯಕ್ತಿಯೊಬ್ಬ ವಿದ್ಯೆ ಕಲಿತರೆ ಆತನ ಆತ್ಮಜ್ಞಾನದ ವಿಕಾಸ ಸಾಧ್ಯ. ಪ್ರಾಚೀನ ಸಂದರ್ಭದಲ್ಲಿ ಭಾರತೀಯರ ಜೀವನ ಕ್ರಮವನ್ನು ನಿಯಂತ್ರಿಸುತ್ತಿದ್ದ ಧರ್ಮ ವಿದ್ಯಾಭ್ಯಾಸ ಪದ್ಧತಿಯನ್ನೂ ತನ್ನ ಹಿಡಿತದಲ್ಲಿರಿಸಿಕೊಂಡಿತ್ತು ಎಂದರೆ ತಪ್ಪಾಗಲಾರದು ಹಾಗಾಗಿ ಆ ಸಂದರ್ಭದಲ್ಲಿ ಜಾರಿಯಲ್ಲಿದ್ದ ಶಿಕ್ಷಣ ಸಂಸ್ಥೆಗಳೆಂದರೆ ಬೌದ್ಧವಿಹಾರಗಳು, ಜೈನಬಸದಿಗಳು, ವೈದಿಕ ಅಗ್ರಹಾರಗಳು, ಬ್ರಹ್ಮಪುರಿಗಳು, ಘಟಿಕಾ ಸ್ಥಾನಗಳು, ದೇವಾಲಯಗಳು ಮತ್ತು ಮಠಗಳು ವಿದ್ಯಾಪ್ರಸರಣದ ಕಾರ್ಯವನ್ನು ಮಾಡುತ್ತಿದ್ದವು. ಹಾಗೂ ಗುರುಕುಲಪದ್ಧತಿ ಜಾರಿಯಲ್ಲಿತ್ತು. ವಿದ್ಯಾರ್ಥಿ ಗುರುವಿನೊಟ್ಟಿಗೆ ಇದ್ದು ವಿದ್ಯೆ ಕಲಿಯುವ ಪದ್ಧತಿ ಪ್ರಚಲಿತದಲ್ಲಿತ್ತು.

ನಳಂದ, ತಕ್ಷಶಿಲಾ ಮೊದಲಾದ ವಿಶ್ವವಿದ್ಯಾಲಯಗಳು, ಪ್ರಾಚೀನ ಭಾರತದಲ್ಲಿ ಶಿಕ್ಷಣ ಕೇಂದ್ರಗಳಾಗಿದ್ದವು. ಕರ್ಣಾಟಕದಲ್ಲಿ ಇದ್ದ ಬಹು ಪ್ರಸಿದ್ಧವಾದ ವಿದ್ಯಾಕೇಂದ್ರವೆಂದರೆ ಬಳ್ಳಿಗಾವೆ ಅಥವಾ ಇಂದಿನ ಬೆಳಗಾವಿ. ಇದು ಪ್ರಾಚೀನ ಕರ್ನಾಟಕದಲ್ಲಿದ್ದ ಬಹು ಮುಖ್ಯವಾದ ವಿದ್ಯಾಕೇಂದ್ರವಾಗಿತ್ತು. ಮೂರು ಪುರಗಳೂ, ಐದು ಮಠಗಳೂ ಏಳು ಬ್ರಹ್ಮಪುರಿಗಳೂ ಮತ್ತು ಅನೇಕ ಅಗ್ರಹಾರಗಳನ್ನು ಒಳಗೊಂಡಿತ್ತು. ಕರ್ನಾಟಕದಲ್ಲೇ ಇದ್ದ ಮತ್ತೊಂದು ಪ್ರಸಿದ್ಧ ವಿದ್ಯಾಕೇಂದ್ರವೆಂದರೆ ತಾಳಗುಂದ. ಇದು ಕದಂಬರ ಕಾಲದ ಅಗ್ರಹಾರ ಮತ್ತು ವಿದ್ಯಾಕೇಂದ್ರವಾಗಿತ್ತು. ಇಂದಿನ ಗುಲ್ಬರ್ಗ ಜಿಲ್ಲೆಯಲ್ಲಿರುವ ನಾಗಾವಿ ಒಂದು ಮಹಾ ಅಗ್ರಹಾರವಾಗಿತ್ತೆಂಬುದು ಕ್ರಿ.ಶ.1058ರ ನಾಗಾವಿ ಶಾಸನದಿಂದ ತಿಳಿದುಬರುತ್ತದೆ. ಹೀಗೆ ಘಟಿಕಾ, ಅಗ್ರಹಾರ ಮತ್ತು ಬ್ರಹ್ಮಪುರಿಗಳೆಂಬ ವಿಭಾಗಗಳು ವಿದ್ಯಾಸಂಸ್ಥೆಗಳಾಗಿದ್ದವು. ಹೀಗೆ ಕರ್ನಾಟಕವನ್ನು ಆಳಿದ ಅರಸುಮನೆತನಗಳು ವಿದ್ಯೆಗೆ ಪ್ರಾಮುಖ್ಯತೆಯನ್ನು ನೀಡಿದ್ದರು ಎಂಬುದು ತಿಳಿಯುತ್ತದೆ.[42]

'ಘಟಿಕಾ' ಎನ್ನುವುದು ಧಾರ್ಮಿಕ ಶಿಕ್ಷಣದ ಕೇಂದ್ರ, ಅದರ ವ್ಯಾಪ್ತಿ ಕಿರಿದು. ಅಗ್ರಹಾರ ಮತ್ತು ಬ್ರಹ್ಮಪುರಿಗಳು ಪಠ್ಯವಿಷಯಗಳ ದೃಷ್ಟಿಯಿಂದಲೂ ವಿದ್ಯಾರ್ಥಿಗಳ ಸಂಖ್ಯೆಯ ದೃಷಿಯಿಂದಲೂ ಹೆಚ್ಚು ವ್ಯಾಪಕವಾದುವುಗಳು. ಅಗ್ರಹಾರವು ವಿದ್ಯಾವಂತ ಬ್ರಾಹ್ಮಣರಿಗೆ ಮಾತ್ರ ಮೀಸಲಾಗಿ ವಿದ್ಯಾಭ್ಯಾಸದ ಕೇಂದ್ರವಾಗಿರುತ್ತಿತ್ತು. ಇಂತಹ ನೂರಾರು ಅಗ್ರಹಾರಗಳ ಉಲ್ಲೇಖ ಶಾಸನಗಳಲ್ಲಿ ದೊರೆಯುತ್ತವೆ. ಇದಕ್ಕೆ ಬೆಂಗಳೂರಿನಲ್ಲಿ ದೊರೆತ ಶಾಸನಗಳೇನು ಹೊರತಲ್ಲ. ಬೆಂಗಳೂರಿನಲ್ಲಿ ಅಸ್ತಿತ್ವದಲ್ಲಿದ್ದ ಅಗ್ರಹಾರಗಳೆಂದರೆ, ಎರೆಯಪ್ಪ ಮಂಗಲ, ಕಾಡಮಂಗಲಂ, ಕಲಿಯೂರ ಅಗ್ರಹಾರ, ತಾವರೆಕೆರೆ,

ಕೋನಪ್ಪನ ಅಗ್ರಹಾರ, ಬೊಮ್ಮನಹಳ್ಳಿ, ತುರಹಳ್ಳಿ ಅಗ್ರಹಾರ, ತಿಮ್ಮಣರಾಜಪುರ ಅಗ್ರಹಾರ, ತಿಪ್ಪಸಮುದ್ರ ಅಗ್ರಹಾರ, ಸಿವನಸಮುದ್ರ ಅಗ್ರಹಾರಗಳನ್ನು ಶಾಸನಗಳು ಉಲ್ಲೇಖಿಸುತ್ತವೆ. (ಅಗ್ರಹಾರಗಳ ಹೆಚ್ಚಿನ ಮಾಹಿತಿ 'ಅಗ್ರಹಾರ' ಎಂಬ ವಿಭಾಗದಲ್ಲಿ ವಿವರಿಸಲಾಗಿದೆ) ಇವುಗಳು ಬೆಂಗಳೂರಿನಲ್ಲಿದ್ದ ಪ್ರಾಚೀನ ವಿದ್ಯಾಕೇಂದ್ರಗಳಾಗಿತ್ತು. ಮುಂದೆ ವೀರಶೈವರಲ್ಲಿ ಮಠಗಳು ವಿದ್ಯಾಕೇಂದ್ರಗಳಾಗಿದ್ದವು. ಧರ್ಮಶಾಲಮಠ(ಚಿಕ್ಕಪೇಟೆ)[43] ವಿಭೂತಿಪುರಮಠ ಮೊದಲಾದ ಮಠಗಳು ಇದ್ದವು. ಪ್ರಸ್ತುತ ಬೆಂಗಳೂರು ನಗರವೊಂದರಲ್ಲೇ ಸುಮಾರು 75 ವೀರಶೈವ ಮಠಗಳಿರುವುದನ್ನು ಗುರುತಿಸಬಹುದು.

ವಿದ್ಯೆ ಕಲಿಸುವುದೇ ಬ್ರಾಹ್ಮಣರ ಕಸುಬಾಗಿತ್ತು. ಅವರು ಯಾವುದೇ ನಿರೀಕ್ಷೆಗಳಿಲ್ಲದೆ ಶಿಕ್ಷಣ ನೀಡಬೇಕಾಗಿತ್ತು. ಹಾಗಾಗಿ ರಾಜರು ಇಡೀ ಹಳ್ಳಿಯನ್ನು ತೆರಿಗೆ ಮುಕ್ತಗೊಳಿಸಿ ಅದರಿಂದ ಬರುವ ಎಲ್ಲಾ ಆದಾಯಗಳು ಆ ಅಗ್ರಹಾರಕ್ಕೆ ಸೇರುವಂತೆ ದಾನ ನೀಡುತ್ತಿದ್ದರು. ಬಹುಶಃ ಇದೇ ಸಂಭಾವನೆಯ ರೂಪವಾಗಿರುತ್ತಿತ್ತು. ಈ ಉಪಧ್ಯಾಯರನ್ನು ಭಟ್ಟ, ಭಟ್ಟಾಚಾರ್ಯ, ಭಟ್ಟವೃತ್ತಿ ಎಂದೆಲ್ಲಾ ಕರೆಯಲಾಗುತ್ತಿತ್ತು. ವೇದಾಧ್ಯಾಯನವನ್ನು ಹೇಳಿಕೊಡಲಾಗುತ್ತಿತ್ತು.

ವಿದ್ಯಾಭ್ಯಾಸವು ಅಂದಿನ ಸಮಾಜದಲ್ಲಿ ಎಲ್ಲರಿಗೂ ಅವಶ್ಯಕ ಎಂಬ ಭಾವನೆ ಇರಲಿಲ್ಲ. ಬ್ರಾಹ್ಮಣ, ಕ್ಷತ್ರಿಯ, ಮೇಲುವರ್ಗದವರು ಮೊದಲಾದವರು ಮಾತ್ರ ವಿದ್ಯಾಭ್ಯಾಸವನ್ನು ಪಡೆಯಬಹುದಿತ್ತು. ಹಾಗೂ ಸ್ತ್ರೀಯರು ವಿದ್ಯಾಭ್ಯಾಸವನ್ನು ಹೊಂದುವುದು ಬೆರಳೆಣಿಕೆಯಷ್ಟಿತ್ತು. ರಾಜಮನೆತನದ ಸ್ತ್ರೀಯರು ಹಾಗೂ ನರ್ತಕಿಯರು ಅಗತ್ಯಕ್ಕೆ ಬೇಕಾದಷ್ಟು ಮಾತ್ರ ವಿದ್ಯೆ ಪಡೆದಿರುತ್ತಿದ್ದರು. ಸಾಮಾನ್ಯ ವರ್ಗದ ಹೆಣ್ಣುಮಕ್ಕಳು ವಿದ್ಯಾಭ್ಯಾಸದ ವಿಷಯದಲ್ಲಿ ದೂರವೇ ಉಳಿಯುತ್ತಿದ್ದರು. ಹಾಗಾಗಿ ಬೆಂಗಳೂರು ನಗರ ಜಿಲ್ಲೆಯ ಶಾಸನದಲ್ಲಿ ಸ್ತ್ರೀಯರ ವಿದ್ಯಾಭ್ಯಾಸದ ಬಗ್ಗೆ ಯಾವುದೇ ಉಲ್ಲೇಖಗಳಿಲ್ಲ.

## ಅಗ್ರಹಾರಗಳು

ರಾಜರು ತಮ್ಮ ರಾಜ್ಯದಲ್ಲಿದ್ದ ಬ್ರಾಹ್ಮಣರಿಗೆ ಚಾತುರ್ವೇದ ಅಧ್ಯಯನಕ್ಕೆ ಮತ್ತು ಅವರ ಅನುಕೂಲಕ್ಕಾಗಿ ಒಂದಷ್ಟು ಸ್ಥಳವನ್ನು ತೆರಿಗೆರಹಿತ ಮಾಡಿ ಸರ್ವಮಾನ್ಯವಾಗಿ ನೀಡುತ್ತಿದ್ದರು. ಈ ಸ್ಥಳಗಳೇ ಅಗ್ರಹಾರಗಳಾಗಿದ್ದವು. ಅಗ್ರಹಾರವನ್ನು 'ಬ್ರಹ್ಮದೇಯ' ಎಂತಲೂ ಕರೆಯಲಾಗುತ್ತಿತ್ತು.(ಬ್ರಹ್ಮದೇಯ ಎಂದರೆ ಒಬ್ಬ ಬ್ರಾಹ್ಮಣನಿಗೆ ಕೊಟ್ಟ ಕೊಡುಗೆಯಾಗಿತ್ತು.) ಅಗ್ರಹಾರ ಎಂಬ ಪದವನ್ನು ಬಿಡಿಸಿ ನೋಡಿದರೆ, 'ಅಗ್ರ' ಶ್ರೇಷ್ಠ ಎಂದೂ 'ಆಹಾರ' ಎಂದರೆ ದೇಶ, ಸ್ಥಳ ಎಂಬ ಅರ್ಥವಿದೆ. ಶ್ರೇಷ್ಠರು ಎಂದು ಕರೆಸಿಕೊಳ್ಳುತ್ತಿದ್ದ ಬ್ರಾಹ್ಮಣರು ವಾಸಿಸುವ ಸ್ಥಳ ಎಂಬ ಅರ್ಥವನ್ನು

ಕೊಡುತ್ತದೆ. ಈ ಸ್ಥಳಗಳು ಪ್ರಾಚೀನ ಸಂದರ್ಭದಲ್ಲಿ ವಿದ್ಯಾಕೇಂದ್ರಗಳಾಗಿದ್ದವು, ಇಲ್ಲಿ ವೇದಪಠಣಗಳನ್ನು ಮಾಡಲಾಗುತ್ತಿತ್ತು. ಬ್ರಾಹ್ಮಣರು ವಾಸಮಾಡುತ್ತಿದ್ದ ಸ್ಥಳವಾಗಿತ್ತು. ಅನೇಕ ವಿದ್ವಾಂಸರು ಅಗ್ರಹಾರದ ವ್ಯಾಖ್ಯಾನವನ್ನು ನೀಡಿರುವುದನ್ನು ಈ ಮುಂದಿನಂತೆ ಗಮನಿಸಬಹುದು, "ಒಂದು ಗ್ರಾಮವನ್ನು ಅಗ್ರಹಾರವಾಗಿ ಪರಿವರ್ತಿಸಿ ಬ್ರಾಹ್ಮಣರಿಗೆ ದಾನವಾಗಿ ಕೊಡುತ್ತಿದ್ದರು. ಹೀಗೆ ದಾನ ಪಡೆದ ಬ್ರಾಹ್ಮಣರೇ ಆ ಅಗ್ರಹಾರದ ಮಹಾಜನರು, ಅಲ್ಲಿ ಬೇರೆ ಜಾತಿಯವರೂ ಇರಬಹುದು, ಆದರೆ ಊರಿನ ಸುಂಕ ರೂಪದ ಉತ್ಪನ್ನ ಹೋಗುವುದು ಅರಸು ಭಂಡಾರಕ್ಕಲ್ಲ, ಈ ಮಹಾಜನರಿಗೆ" ಎಂದು ಡಾ.ಎಂ.ಚಿದಾನಂದಮೂರ್ತಿಯವರು ಹೇಳಿದ್ದಾರೆ.[44]

ಡಾ.ಶ್ರೀನಿವಾಸರಿತ್ತಿರವರು ಹೇಳುವಂತೆ, "ಅಗ್ರಹಾರಗಳು ವಿದ್ವಾಂಸರಾದ ಬ್ರಾಹ್ಮಣರಿಗೆ ಗ್ರಾಮಗಳನ್ನು ಅವರು ಶೈಕ್ಷಣಿಕ ಮತ್ತು ಧಾರ್ಮಿಕ ಚಟುವಟಿಕೆಗಳನ್ನು ನಡೆಸಿಕೊಂಡು ಹೋಗಲು ಉಂಬಳಿಯಾಗಿ ಹಾಕಿಕೊಟ್ಟ ಗ್ರಾಮಗಳು. ಒಮ್ಮೊಮ್ಮೆ ಬೇರೆ ಪ್ರದೇಶಗಳಿಂದ ವಿದ್ವಾಂಸರನ್ನು ಕರೆಸಿ ಇಂಥ ಗ್ರಾಮಗಳಲ್ಲಿ ಅವರು ನೆಲೆಸುವಂತೆ ಮಾಡುತ್ತಿದ್ದರು. ಹಲವು ವೇಳೆ ಎರಡು–ಮೂರು ಗ್ರಾಮಗಳನ್ನು ಕೂಡಿಸಿ ಒಂದು ಅಗ್ರಹಾರವಾಗಿ ಮಾಡಿಕೊಟ್ಟದ್ದೂ ಉಂಟು. ಇಂಥ ಗ್ರಾಮಗಳಲ್ಲಿಯ ಒಕ್ಕಲುತನದ ಭೂಮಿಯನ್ನು ವೃತ್ತಿಗಳಾಗಿ ವಿಂಗಡಿಸಿ ಒಬ್ಬೊಬ್ಬ ವಿದ್ವಾಂಸರಿಗೆ ಕೊಡುತ್ತಿದ್ದರು. ಸಾಮಾನ್ಯವಾಗಿ ಇಂಥ ಭೂಮಿಗಳು ಕರದಿಂದ ವಿಮುಕ್ತವಾಗಿರುತ್ತಿದ್ದವು. ಇವುಗಳಿಂದ ಬರುತ್ತಿದ್ದ ಆದಾಯವನ್ನು ವಿದ್ವಾಂಸರ ಉಪಜೀವನಕ್ಕಾಗಿಯೂ ವಿದ್ಯಾರ್ಥಿಗಳ ಊಟ, ಬಟ್ಟೆ, ಔಷಧೋಪಚಾರ ಮುಂತಾದವುಗಳಿಗೆ ಉಪಯೋಗಿಸಬೇಕಾಗುತ್ತಿತ್ತು. ಇಂಥ ವಿದ್ವಾಂಸರು ಮಹಾಜನರೆಂದು ಕರೆಯಲ್ಪಡುತ್ತಿದ್ದರು. ಅವರ ವಿದ್ವತ್ತು ಮತ್ತು ಸಚ್ಚಾರಿತ್ರ್ಯದ ಅನೇಕ ವರ್ಣನೆಗಳು ಶಾಸನಗಳಲ್ಲಿ ದೊರೆಯುತ್ತವೆ. ಒಂದೊಂದು ಅಗ್ರಹಾರದಲ್ಲಿ ಅವುಗಳ ವ್ಯಾಪ್ತಿಗನುಗುಣವಾಗಿ ನಿರ್ದಿಷ್ಟ ಸಂಖ್ಯೆಯ ಮಹಾಜನರಿರುತ್ತಿದ್ದರು."[45]

"ಅಗ್ರಹಾರ ಅಗ್ರ ಮತ್ತು ಆಹಾರ ಎಂಬ ಎರಡು ಪದಗಳಿಂದ ಕೂಡಿದೆ. ಅಗ್ರ ಎಂದರೆ ಶ್ರೇಷ್ಠ, ಆಹಾರ ಎಂದರೆ ನೆಲೆ. ಆದುದರಿಂದ ಶ್ರೇಷ್ಠರಾದ ಬ್ರಾಹ್ಮಣರು ನೆಲೆಗೊಂಡ ಗ್ರಾಮವೇ ಅಗ್ರಹಾರ ಎಂದು ಪ್ರೊ.ಡಿ.ಎಲ್.ನರಸಿಂಹಾಚಾರ್ಯರು ಅರ್ಥೈಸುತ್ತಾರೆ."

ಡಾ.ಸರ್ಕಾರರ ಪ್ರಕಾರ ಶಿಕ್ಷಣ ಮುಗಿಸಿ ಗುರುಕುಲದಿಂದ ಹಿಂದಿರುಗಿದ ಬ್ರಾಹ್ಮಣರು ಗೃಹಸ್ಥ ಜೀವನ ಪ್ರಾರಂಭಿಸಲು ಗ್ರಾಮಗಳನ್ನು ವೃತ್ತಿಗಳಾಗಿ ವಿಂಗಡಿಸಿ ಅಗ್ರಹಾರಗಳನ್ನು ನಿರ್ಮಿಸಿ ದಾನವಾಗಿ ಬ್ರಾಹ್ಮಣರಿಗೆ ನೀಡಲಾಯಿತು. ಹೀಗಾಗಿ ವಾಸಕ್ಕಾಗಿ, ಯಜನ–ಯಾಜನ, ಅಧ್ಯಯನ–ಅಧ್ಯಾಪನ,

ದಾನ-ಪ್ರತಿಗ್ರಹ ಎಂಬ ಷಟ್ಕರ್ಮ ಆಚರಣೆಗಾಗಿ ಹವನ, ಹೋಮ, ಚರು-ತರ್ಪಣ, ಬಲಿ ಅತಿಥಿಸತ್ಕಾರಗಳಿಂದ ಬ್ರಹ್ಮಯಜ್ಞ, ದೇವಯಜ್ಞ, ಪಿತೃಯಜ್ಞ, ನರಯಜ್ಞ, ಭೂತಯಜ್ಞಗಳೆಂಬ ಪಂಚಯಜ್ಞಗಳನ್ನು ನಡೆಸುವ ಸಲುವಾಗಿ, ವೇದ, ವೇದಾಂಗ, ಸ್ಮೃತಿ, ಶಾಸ್ತ್ರಗಳ ಅಧ್ಯಯನದ ಕೇಂದ್ರಗಳಾಗಿ ವಿದ್ಯಾಪ್ರಸಾರಕ್ಕಾಗಿ ಕರ ವಿನಾಯಿತಿ ಅಥವಾ ಕರವಿನಿಯೋಗಾಧಿಕಾರ ಸಹಿತವಾಗಿ ಬ್ರಾಹ್ಮಣರಿಗೆ ದಾನವಾಗಿ ನೀಡಲಾಗುತ್ತಿದ್ದ ಬ್ರಹ್ಮದೇಯ ಗ್ರಾಮಗಳೇ ಅಗ್ರಹಾರಗಳು ಎನ್ನುತ್ತಾರೆ.[46]

ಲೀಲಾ ಶಾಂತಕುಮಾರಿಯವರು ತಮ್ಮ `History of the Agraharas' ಎಂಬ ಕೃತಿಯಲ್ಲಿ Agrahara was formed mainly for providing food, shelter to the learned scholars to facilitate them to pursue their educational and religious activities[47] ಎಂದು ಅಗ್ರಹಾರವನ್ನು ವ್ಯಾಖ್ಯಾನಿಸಿದ್ದಾರೆ.

ಬೆಂಗಳೂರಿನ ಶಾಸನಗಳಲ್ಲಿ ಅಗ್ರಹಾರಗಳ ಉಲ್ಲೇಖ ಕ್ರಿ.ಶ.820ರ ಗಂಗರ ಕಾಲದಿಂದ ಕ್ರಿ.ಶ.1670ರ ವರೆಗೂ ದೊರೆಯುತ್ತವೆ. ಬೆಂಗಳೂರು ಪ್ರದೇಶದಲ್ಲಿ ಬಹಳ ಪ್ರಮುಖ ಸ್ಥಳವಾಗಿರುವ ಅಗರವೂ ಗಂಗರ ಕಾಲದಿಂದ ವಿಜಯನಗರದ ಆಳ್ವಿಕೆಯವರೆಗೆ ಅಗ್ರಹಾರವಾಗಿದ್ದಿತು. ಕ್ರಿ.ಶ.820ರ ಶಾಸನವೊಂದರಲ್ಲಿ ಎರೆಯಪ್ಪಮಂಗಲದ ಮಹಾಜನರ ಸಾಕ್ಷಿಯಾಗಿ ದಾನ ನೀಡಿರುವ ಉಲ್ಲೇಖವಿದೆ.[48] ಅಗ್ರಹಾರಗಳ ಎಲ್ಲಾ ಚಟುವಟಿಕೆಗಳು ಸಾಮಾನ್ಯವಾಗಿ ಮಹಾಜನರ ಸನ್ನಿಧಾನದಲ್ಲಿ ನಡೆಯುತ್ತಿತ್ತು. ಅಗ್ರಹಾರಗಳಲ್ಲಿ ದಾನ ನೀಡುವಾಗ ಮಹಾಜನರನ್ನು ಸಾಕ್ಷಿಯನ್ನಾಗಿಸಿಕೊಳ್ಳಲಾಗುತ್ತಿತ್ತು. ಗಂಗರ ನಂತರ ಅಧಿಕಾರಕ್ಕೆ ಬಂದ ಚೋಳರು ಚತುರ್ವೇದಿ ಮಂಗಲಂಗಳನ್ನು ನಿರ್ಮಿಸಿದರು. ಇವರ ಕಾಲದ ಅಗ್ರಹಾರಗಳೆಂದರೆ ಕಾಡಮಂಗಲಂ ಚತುರ್ವೇದಿಮಂಗಲ, ಸನ್ನೈನಾಡಿನ ಗಾವುಂಡ ರಾಜರಾಜ ವೇಲನ್ ಪಟ್ಟಂದೂರಿನಲ್ಲಿ ಅಗ್ರಹಾರವನ್ನೂ[49] ಕೆರೆಯನ್ನೂ ನಿರ್ಮಿಸಿದನು. ಹೀಗೆ ಚೋಳರು ಅಗ್ರಹಾರಗಳನ್ನು ಸ್ಥಾಪಿಸಿ ವೈದಿಕ ಬ್ರಾಹ್ಮಣ ಧರ್ಮವನ್ನೂ, ಶೈವ ಮತ್ತು ವೈಷ್ಣವ ಧರ್ಮಗಳನ್ನು ದೇವಾಲಯಗಳ ನಿರ್ಮಾಣ ಮತ್ತು ದೇವದಾನಗಳ ಮೂಲಕ ಪೋಷಿಸಿ ಬೆಳೆಸಿದರು.

ಹೊಯ್ಸಳರ ಕಾಲದಲ್ಲಿ ಬೆಂಗಳೂರಿನಲ್ಲಿದ್ದ ಅಗ್ರಹಾರ ಅಥವಾ ಚತುರ್ವೇದಿ ಮಂಗಲಗಳೆಂದರೆ ಹೋಸಕೋಟೆಯ ವರದರಾಜ(ಇಂದಿನ ವಾಗಟ), ಬೆಂಗಳೂರಿನ ವೀರಬಲ್ಲಾಳ ಮಂಗಲಂ(ಇಬ್ಬಲೂರು-ಗಂಗರ ಕಾಲದ ಇರ್ವ್ವಾಲಿಯೂರು), ರಾಮಮಂಗಲಂ(ಕಾಚರಕನಹಳ್ಳಿ ಹಾಗೂ ಸೇವಿಡೈನಾರಾಯಣಮಂಗಲಂ-ಅರೇಹಳ್ಳಿ),[50] ಚಿಕ್ಕಜಾಲ[51] ಹೊಯ್ಸಳರು ಬೆಂಗಳೂರು ಮತ್ತು ಅದರ ಸುತ್ತಮುತ್ತ ಇದ್ದ ಬ್ರಾಹ್ಮಣರ ದೇವಾಲಯಗಳಿಗೆ ತೆರಿಗೆ ವಿನಾಯಿತಿ ಕೊಡುಗೆಗಳನ್ನು

ನೀಡಿದ್ದಾರೆ. ವಿಜಯನಗರ ಕಾಲದಲ್ಲಿ ಅಚ್ಚುತದೇವರಾಯನು ಹೆಸರುಘಟ್ಟದ ಚಂದ್ರಮೌಳೀಶ್ವರನಿಗೆ ಅಗ್ರಹಾರ ದಾನ ನೀಡಿದ್ದಾನೆ. ಈ ರೀತಿಯಾಗಿ ಬೆಂಗಳೂರು ಜಿಲ್ಲೆಯಲ್ಲಿ ರಾಜಮನೆತನದ ಕಾಲದುದ್ದಕ್ಕೂ ಅಗ್ರಹಾರಗಳನ್ನು ಹಲವು ಸಂದರ್ಭಗಳನುಸಾರ ನಿರ್ಮಿಸಿ, ದಾನ ನೀಡಿ 'ಅಗ್ರಹಾರ ಸಂಸ್ಕೃತಿ'ಯನ್ನು ಪೋಷಿಸಿ ಬೆಳಸಿಕೊಂಡು ಬಂದಿರುವುದನ್ನು ಕಾಣಬಹುದಾಗಿದೆ. ಇಂತಹ ಅಗ್ರಹಾರಗಳ ವಿವರಣೆ ಈ ಮುಂದಿನಂತಿದೆ, ಕ್ರಿ.ಶ.1247ರ ಮಡಿವಾಳದಲ್ಲಿ ದೊರೆತ ತಮಿಳು ಶಾಸನದಲ್ಲಿ ವೇದಪಠಣ ಅಧ್ಯಯನ ಮಾಡುವುದಕ್ಕಾಗಿ ತಾವರೆಕೆರೆಯ ಭೂಮಿಯನ್ನು ಸರ್ವಮಾನ್ಯ ಕೊಡುಗೆಯಾಗಿ ನೀಡಲಾಗಿದೆ.[52] ಅಂದರೆ ಎಲ್ಲಾ ರೀತಿಯ ಆಡಳಿತಾಧಿಕಾರ, ತೆರಿಗೆ ವಸೂಲಿ, ವಿನಿಯೋಗದ ಅಧಿಕಾರ ಹೊಂದಿದ ಬ್ರಾಹ್ಮಣರ ಗ್ರಾಮ.

ಕೋನಪ್ಪನ ಅಗ್ರಹಾರ ದಲ್ಲಿ ಕ್ರಿ.ಶ.1361ರ ತಮಿಳುಶಾಸನವೊಂದು ದೊರಕಿದೆ. ಈ ಅಗ್ರಹಾರವು ಇಂದಿನ ಹೊಸೂರು ರಸ್ತೆಯಲ್ಲಿದೆ. ಕೆಲವು ಅಗ್ರಹಾರಗಳನ್ನು ಇಂದಿಗೂ ಅದೇ ಹೆಸರಿನಿಂದಲೇ ಗುರುತಿಸಲಾಗುತ್ತಿದೆ. ಹೊಸಕೋಟೆಗೆ ಸೇರಿದ ಈಗಿನ ಕಾಡುಗೋಡಿಯಲ್ಲಿ 'ಕಾಡಮಂಗಲಂ' ಎಂಬ ಚತುರ್ವೇದಿ ಮಂಗಲ ಎಂದರೆ ಅಗ್ರಹಾರವನ್ನು ರಾಜೇಂದ್ರ ಚೋಳನು ಸ್ಥಾಪಿಸಿದನು.[53] ಮಂಗಲಗಳು ಚೋಳರ ಕಾಲದಲ್ಲಿ ಅಸ್ತಿತ್ವಕ್ಕೆ ಬಂದಿವು. ಋಗ್ಯಜುಸ್ಸಾಮಅಥರ್ವಣ ವೇದಗಳಲ್ಲಿ ಪಾರಂಗತರಾದ ಬ್ರಾಹ್ಮಣರಿಗೆ ಮಂಗಳವಾಗಲೆಂದು ನೀಡುವ ದಾನಗ್ರಾಮಗಳೇ ಚತುರ್ವೇದಿಮಂಗಲ ಅಗ್ರಹಾರಗಳು.

ಹೊಯ್ಸಳ ವೀರ ಸೋಮೇಶ್ವರದೇನ ಕಾಲದ ತಾಮ್ರ ಶಾಸನದಲ್ಲಿ ಆತನು ತನ್ನ ಪತ್ನಿ ಸೋಮಲದೇವಿರಯರ ಹೆಸರಿನಲ್ಲಿ ಸೋಮಲಾಪುರವೆಂಬ ಅಗ್ರಹಾರವನ್ನು ನಿರ್ಮಿಸಿ ಬ್ರಾಹ್ಮಣರಿಗೆ ಯಜುರ್ವೇದ ಅಧ್ಯಯನಕ್ಕೆಂದು ಬಿಟ್ಟುಕೊಟ್ಟ ವಿಷಯ ತಿಳಿಯುತ್ತದೆ.[54] ಈ ಬ್ರಾಹ್ಮಣರಿಗಾಗಿ ಎಪ್ಪತ್ತು ವೃತ್ತಿಯನ್ನು ನಿರ್ಮಿಸಿ ಕುಲಮರ್ಯಾದೆಗಳೊಂದಿಗೆ ಅವರಿಗೆ ದಾನವನ್ನು ನೀಡಿದ್ದಾನೆ. ಅರಸರು ದಾನವನ್ನು ತಮ್ಮ ಪ್ರೀತಿ ಪಾತ್ರರ ಹೆಸರಿನಲ್ಲಿ ನೀಡುತ್ತಿದ್ದರೂ ಅದರ ಹಿಂದಿನ ಉದ್ದೇಶ ಸಮಾಜದ ಒಳಿತಾಗಿರುತ್ತಿತ್ತು. ಜನತೆ ವಿದ್ಯಾವಂತರಾಗಬೇಕು, ವೇದಾಧ್ಯಾಯನ ಮಾಡಬೇಕು ಎಂಬ ಆಶಯವನ್ನು ಹೊತ್ತುಕೊಂಡೆ ಅಗ್ರಹಾರಗಳು ನಿರ್ಮಾಣವಾಗುತ್ತಿದ್ದವು.

ಮರಾಠದೊರೆಗಳು ಬ್ರಾಹ್ಮಣರಿಗೆ ಅಗ್ರಹಾರ ದಾನ ನೀಡಿರುವ ಉಲ್ಲೇಖ ಬಖೈರಿನ ಮೂಲಕ ತಿಳಿಯುತ್ತದೆ. ಶಹಜಿರಾಜನ ಆಳ್ವಿಕೆಯ ಕಾಲದಲ್ಲಿ ಕಾಗದದ ಸನ್ನದಿನ ಮೂಲಕ ಈತನು ಸಿಂಗಾಪುರ ಅಗ್ರಹಾರದ ಬ್ರಾಹಣರಿಗೆ ದಾನಕೊಟ್ಟಿದ್ದಾನೆ. ಈತನ ನಂತರ ಏಕೋಜಿಯು ಬ್ರಾಹ್ಮಣ ಶ್ರೇಷ್ಠರಿಗೆ ಚಿನ್ನಸಮುದ್ರ ಎಂಬ ಅಗ್ರಹಾರವನ್ನು ದಾನ ಮಾಡಿದನು. ಅಗ್ರಾರಂ ಎಂಬ ಹಳ್ಳಿಯನ್ನು ಕ್ರಿ.ಶ.1670ರಲ್ಲಿ

ಪಾಣ್ಯಂ(ಆನ್ಯೆಂ) ಭಟ್ಟ ಎಂಬ ಬ್ರಾಹ್ಮಣನಿಗೆ ದಾನವಾಗಿ ಕೊಟ್ಟನು.[55] ಹೀಗೆ ಗಂಗರು, ಚೋಳರು, ಹೊಯ್ಸಳರು, ಮರಾಠರು ಮೊದಲಾದ ರಾಜವಂಶಗಳು ಅಗ್ರಹಾರವನ್ನು ನಿರ್ಮಿಸಿ ಬೆಳಸಿ ಪೋಷಿಸಿದ್ದಾರೆ.

**ಕಲಿಯೂರ ಅಗ್ರಹಾರ:–** ಕ್ರಿ.ಶ.1426ರ ಜೈನಶಾಸನವೊಂದು ಬೇಗೂರಿನಲ್ಲಿ ದೊರೆತಿದೆ. 'ಕಲಿಯೂರ ಅಗ್ರಹಾರಕ್ಕೆ ಪರಿಹಾರವಾಗಿ ಚೊಕ್ಕಿಮಯ್ಯ ಜಿನಾಲಯಂ' ಎಂದಿದೆ. ಶಾಸನದ ಕೆಲವು ಭಾಗ ತ್ರುಟಿತವಾಗಿದೆ.[56] ವಿಜಯನಗರದ ಕಾಲದಲ್ಲಿ ಮೊರಸುನಾಡಿನ ಅಧಿಕಾರಿಯಾಗಿದ್ದ ನಾಗಿಯ ಕರಿಯಪ್ಪನ ಮಗ ಚೊಕ್ಕಿಮಯ್ಯನು ಜಿನಾಲಯ ನಿರ್ಮಿಸಿ ಕಲಿಯೂರು ಅಗ್ರಹಾರವನ್ನು ದಾನ ನೀಡಿರುವ ವಿಷಯ ತಿಳಿಯುತ್ತದೆ.

**ಬೈರಾಪುರ ಅಗ್ರಹಾರ:–** ದೊಡ್ಡಹೆಜ್ಜಾಜಿ ಶಾಸನದಲ್ಲಿ ಬೈಯಣ್ಣ ಗೌಡರ ಮಕ್ಕಳು ಬೈಪಗೌಡರು ನೀಡಿದ ಶಾಸನ ತಿಪ್ಪೂರ ಸ್ಥಳಕ್ಕೆ ಸಲುವ ಹೆಜ್ಜಾಜಿ ಸೀಮೆಯ ಹಳ್ಳಿಗೆ ಸೇರುವ ಬೈರಾಪುರ ಅಗ್ರಹಾರವನ್ನು ಸಿಂಗಪ್ಪೈಯಿಗಳ ಮಕ್ಕಳು ತಿಪ್ಪರಸೈಯಗಳಿಗೆ ಧಾರೆ ಎರೆದು ಕೊಟ್ಟ ವಿಷಯವಿದೆ.[57] ಹಾಗೂ ಕ್ರಿ.ಶ.1430ರ ಎರಡನೇ ದೇವರಾಯನ ಶಾಸನದಲ್ಲಿ ಕುಕ್ಕಲನಾಡಿನ ಬುಕ್ಕನಾಯಕನು ಕುಕ್ಕಲನಾಡಿಗೆ ಒಳಪಡುವ ಬೊಮ್ಮನಹಳ್ಳಿಯ ಸುಂಕವನ್ನು ಸರ್ವಮಾನ್ಯ ಮಾಡಿ ಅಗ್ರಹಾರಕ್ಕೆ ನೀಡಿದ್ದಾನೆ.[58]

**ತಿಮ್ಮರಾಜಪುರ ಅಗ್ರಹಾರ:–** ಕ್ರಿ.ಶ.1495ರ ನರಸಿಂಗರಾಯನು ಆಳ್ವಿಕೆ ಮಾಡುತ್ತಿದ್ದಾಗ ಇಮ್ಮಡಿ ನರಸಿಂಗ ರಾಯರಿಗೆ ಪುಣ್ಯವಾಗಲಿ ಎಂಬ ಉದ್ದೇಶದಿಂದ ಗೊಗಂಡಿಹಳ್ಳಿಗೆ ಪ್ರತಿನಾಮ ತಿಮ್ಮಣರಾಜಪುರ ಎಂಬ ಹೆಸರಿಟ್ಟು ಅಗ್ರಹಾರವನ್ನಾಗಿ ಮಾಡಲಾಗಿದೆ.[59]

**ಪುಟ್ಟೈಯನ ಅಗ್ರಹಾರ:–** ಕ್ರಿ.ಶ.1493ರಲ್ಲಿ ಸಾಳ್ವ ಇಮ್ಮಡಿ ರಾಯನ ಮಗ ಸಾಳುವ ದೇವಪ್ಪ ನಾಯಕನು ತಿಪ್ಪೂರು ಸೀಮೆಯನ್ನು ಆಳುತ್ತಿದ್ದಾಗ ಹುಲಿಕಾಡಿ ನಾಡಪ್ರಭು ಬಯಣಗೌಡರ ಮಕ್ಕಳು ಬಯಪ್ಪಗೌಡರು ಹೆಜ್ಜಾಜಿ ಸೀಮೆ, ವರದಹಳ್ಳಿಯ ಮೂಡಲ ತೆಂಕಲದ ಸೀಮೆಯಲ್ಲಿ ಬಯಿರಾಪುರವೆಂಬ ಊರು. ಆ ಊರಿನ ಸಿಂಗಪಯನ ಮಕ್ಕಳು ತಿಪ್ಪರಸಯನಿಗೆ ಬಯಿರಾಪುರದ ಚತುಸ್ಸೀಮೆಯನ್ನು ದಾನ ನೀಡಿದ್ದಾನೆ.[60]

**ಸಿಂಗಸಮುದ್ರ ಅಗ್ರಹಾರ:–** ಕ್ರಿ.ಶ.1519ರಲ್ಲಿ ಕೃಷ್ಣರಾಯ ರಾಜ್ಯವಾಳುತ್ತಿದ್ದ ಸಂದರ್ಭದಲ್ಲಿ ರಾಮಭಟ್ಟ ಪುರಾಣಿಕ ಪಂಡಿತರಿಗೆ ಕಂಚಿಗನಹಾಳು ಎಂಬ ಹಳ್ಳಿಗೆ ಸಿಂಗಸಮುದ್ರ ಅಗ್ರಹಾರವೆಂದು ಪ್ರತಿನಾಮ ಮಾಡಿ ದಾನ ನೀಡಲಾಗಿದೆ.[61]

**ಶಿವನಸಮುದ್ರ ಅಗ್ರಹಾರ:–** ಕ್ರಿ.ಶ.1533ರ ಕಾಲದಲ್ಲಿ ಅಚ್ಚುತರಾಯನು ರಾಜ್ಯಭಾರ ಮಾಡುತ್ತಿರುವಾಗ ಹೆಸರುಘಟ್ಟಕ್ಕೆ ಪ್ರತಿನಾಮದ ಸಿವನಸಮುದ್ರ ಎಂಬ ಅಗ್ರಹಾರವನ್ನು ಸರ್ವಮಾನ್ಯ ಮಾಡಿ ಚಂದ್ರಮೌಳೇಶ್ವರ ದೇವಸ್ಥಾನವನ್ನು ನಿರ್ಮಿಸಲು ದಾನ ನೀಡಿರವ ವಿಷಯ ತಿಳಿಯುತ್ತದೆ.[62]

**ರಾಮಪುರ ಅಗ್ರಹಾರ:–** ಕ್ರಿ.ಶ.1535ರ ಅಚ್ಚುತರಾಯ ರಾಜ್ಯಭಾರ ಮಾಡುತ್ತಿರಲು ರಾಮಪುರ ಅಗ್ರಹಾರವನ್ನು ಜೀರ್ಣೋದ್ಧಾರ ಮಾಡಿದ ಎಂದಿದೆ.[63]

**ತಿಪ್ಪಸಮುದ್ರ ಅಗ್ರಹಾರ:–** ಕ್ರಿ.ಶ.1549ರಲ್ಲಿ ಸದಾಶಿವನು ಆಳ್ವಿಕೆ ಮಾಡುತ್ತಿದ್ದ ಸಂದರ್ಭ ಭಾರದ್ವಾಜ ಗೋತ್ರದ ಸೂರ್ಯವಂಶ, ಕೊಟಕರ ರಾಮರಾಜ ಒಡೆಯರ ಮಗ ರಾಜ ಒಡೆಯರ ಮಕ್ಕಳು ರಾಮರಾಜನ ತಮ್ಮಂದಿರು, ಅಳಿಯ ಲಿಂಗರಾಜರು ನೀಡಿದ ಪೀತಾಂಮ್ರ ದೇವರ ಮಕ್ಕಳು ರಂಗಪ್ಪ ಮತ್ತು ಇತರ ಬ್ರಾಹ್ಮಣರಿಗೆ ನೀಡಿದ ಭೂದಾನವನ್ನು ಹೇಳುತ್ತದೆ.[64] ಬೇಲೂರ ಚಾವಡಿಗೆ ಸಲುವ ಎರೆಸನಾಡೊಳಗಣ ಇವರ ನಾಯಕತನಕೆ ಸಲುವ ನೆಲವಾಗಿಲ ಸೀಮೆಯ ಓಬಳ ಹಳ್ಳಿಗೆ ಪ್ರತಿನಾಮ ತಿಪ್ಪಸಮುದ್ರವೆಂಬ ಗ್ರಾಮವನ್ನು ಅಗ್ರಹಾರವನ್ನಾಗಿಸಿ, ಈ ಅಗ್ರಹಾರಕ್ಕೆ ಸೇರುವ ನಿಧಿ ನಿಕ್ಷೇಪ ಎಲ್ಲವನ್ನೂ ಬಿಟ್ಟುಕೊಡಲಾಗಿದೆ.

**ತುರಹಳ್ಳಿ ಅಗ್ರಹಾರ :–** ಕ್ರಿ.ಶ.1578ರ ತುರಹಳ್ಳಿಯ ಶಾಸನದಲ್ಲಿ ಅಗ್ರಹಾರವನ್ನು ಭಟ್ಟರಿಗೆ(ಬ್ರಾಹ್ಮಣರಿಗೆ) ದಾನ ಮಾಡಿರುವ ವಿಷಯ ತಿಳಿಯುತ್ತದೆ.[65] ಬಮ್ಮಯ ನಾಯಕ ಎಂಬುವನು ಗುರುಗಳಾದ ಭಟ್ಟರಾಯ್ಯರಿಗೆ ತುರುವಳರಹಳ್ಳಿಯ ಗ್ರಾಮವನ್ನು ಅಗ್ರಹಾರವಾಗಿ ಕಾಣಿಕೆ ನೀಡಿದ್ದಾನೆ.

**ಮುತ್ತುಕೂರು ಅಗ್ರಹಾರ:–** ಕ್ರಿ.ಶ.1600ರಲ್ಲಿ ಶಿವಾಚಾರ್ಯ್ಯ ಅಯ್ಯನಿಗೆ ಸೇರುವ ಹಿಮ್ಮರೆ ನಾಡಿನ ಗೌಡ ಚಿಕ್ಕ ಮುತ್ತಕುರದ ದಕ್ಷಿಣ ಭಾಗದ ಚತುಸೀಮೆಯನ್ನು ಮಾಡಿ ಅಗ್ರಹಾರವನ್ನು ದಾನ ನೀಡಿದರು. ಈ ಅಗ್ರಹಾರದಲ್ಲಿದ್ದ ಚಿಕ್ಕ ಅಮದೆಜಿ ಸುಂಕವನ್ನು ಈ ಅಗ್ರಹಾರದ ಜನರಿಗಾಗಿ ಬಿಟ್ಟುಕೊಡಲಾಗಿದೆ.[66]

**ಕಾಮಾಕ್ಷಿಪುರ ಅಗ್ರಹಾರ:–** ಕ್ರಿ.ಶ.1647ರಲ್ಲಿ ವಿರೂಪಾಕ್ಷ ರಾಯನು ವಿಶ್ವನಾಥ ಮೂಲಿಪುರ ಅಗ್ರಹಾರಕ್ಕೆ ಕಾಮಾಕ್ಷಿಪುರವನ್ನು ದಾನನೀಡಿದ್ದಾನೆ.[67]

**ಕೆಂಪಸಮುದ್ರ ಅಗ್ರಹಾರ:–** ಕೆಂಪೇಗೌಡನು ಕೆಂಪಾಂಬುಧಿ ಎಂಬ ಕೆರೆಯನ್ನು ಕಟ್ಟಿಸಿ, ಕರಿಅಮ್ಮ ಅಗ್ರಹಾರ, ಕೆಂಪಸಮುದ್ರ ಅಗ್ರಹಾರ ಮತ್ತು ಜಡೆಯಹಳ್ಳಿ ಅಗ್ರಹಾರ ಎಂಬ ಮೂರು ಅಗ್ರಹಾರಗಳನ್ನು ತನ್ನ ಅಧಿಕಾರದ ಅವಧಿಯಲ್ಲಿಯೇ ನಿರ್ಮಿಸಿರುತ್ತಾನೆ.[68] ಕೆಂಪೇಗೌಡ ಜಯಪ್ರಶಸ್ತಿಯಲ್ಲೂ ಈ ವಿಷಯ ತಿಳಿಯುತ್ತದೆ. ಹಾಗೂ ಇಮ್ಮಡಿ ಕೆಂಪೇಗೌಡನ ಕೆಂಪಾಪುರ ಅಗ್ರಹಾರದ ದಾನಶಾಸನವು[69]

ಇಮ್ಮಡಿ ಕೆಂಪೇಗೌಡನು ಸಂವತ್ಸರದ ವ್ರತ ಆಚರಿಸಿದ ಅಂಗವಾಗಿ ಬೆಂಗಳೂರಿನ ಕೆಂಪಾಪುರ ಅಗ್ರಹಾರವನ್ನು ನಲವತ್ತೆಂಟು ಮಂದಿ ವಿದ್ವಾಂಸರಿಗೆ ದಾನ ಮಾಡಿರುವ ವಿಷಯ ತಿಳಿಸುತ್ತದೆ.

ಸಾಮಾನ್ಯವಾಗಿ ರಾಜರು, ರಾಣಿಯರು, ದಂಡನಾಯಕರು, ಅಧಿಕಾರಿಗಳು ತಮ್ಮ ಹೆಸರಿನಲ್ಲಿ ಅಥವಾ ದೇವರ ಹೆಸರಿನಲ್ಲಿ ಈಗಾಗಲೇ ಇರುವ ಹಳ್ಳಿಯನ್ನು ಪ್ರತಿನಾಮಗೊಳಿಸಿ ಅಗ್ರಹಾರ ಮಾಡಿ ಬ್ರಾಹ್ಮಣರಿಗೆ ನೀಡಿದ್ದಾರೆ. ಅಗ್ರಹಾರಗಳಿಗೆ ದಾನ ನೀಡಿದ್ದರ ಉದ್ದೇಶ ರಾಜಪ್ರಭುತ್ವಕ್ಕೆ ಒಳ್ಳೆಯದಾಗಲಿ ಎಂಬ ಉದ್ದೇಶ ಒಂದು ಕಡೆಯಾಗಿದ್ದರೆ, ಮತ್ತೊಂದೆಡೆ ಒಂದು ಪ್ರದೇಶ, ತೆರಿಗೆ ಮುಕ್ತದಿಂದ ಯಾವುದೇ ಹಿಂಸೆ, ಯುದ್ಧಗಳಿಂದ ಮುಕ್ತವಾಗಿ ಶಾಂತರೀತಿಯಲ್ಲಿರಲಿ ಎಂಬ ಸದುದ್ದೇಶವು ಆಗಿರುತ್ತಿತ್ತು. ಈ ರೀತಿಯಾಗಿ ಬೆಂಗಳೂರು ಜಿಲ್ಲೆಯನ್ನು ಆಳಿದ ರಾಜಮನೆತನಗಳ ಕಾಲದುದ್ದಕ್ಕೂ ಅಗ್ರಹಾರಗಳನ್ನು ಹಲವು ಸಂದರ್ಭಗಳನುಸಾರ ನಿರ್ಮಿಸಿ, ದಾನ ನೀಡಿ 'ಅಗ್ರಹಾರ ಸಂಸ್ಕೃತಿ'ಯನ್ನು ಪೋಷಿಸಿ ಬೆಳಸಿಕೊಂಡು ಬಂದಿರುವುದನ್ನು ಕಾಣಬಹುದಾಗಿದೆ. ಹೀಗೆ ರಾಜರು ಅಗ್ರಹಾರಗಳನ್ನು ನಿರ್ಮಿಸಿ ದಾನ ನೀಡಿ, ಅವುಗಳ ಜೀರ್ಣೋದ್ಧಾರ ಕಾರ್ಯದ ಕಡೆ ಗಮನ ನೀಡಿದ್ದರು. ಇದಕ್ಕೆ ಮೂಲ ಪ್ರೇರಣೆ ವಿದ್ಯೆಗೆ ಪ್ರೋತ್ಸಾಹ ನೀಡುವುದೇ ಆಗಿತ್ತು ಎಂಬುದು ವಿಶೇಷ.

## ನ್ಯಾಯ ಪದ್ಧತಿ

ಜನರ ಜೀವನ ಸುಭಿಕ್ಷವಾಗಿ ನಡೆದುಕೊಂಡು ಹೋಗಬೇಕೆಂದರೆ ಉತ್ತಮ ಆಡಳಿತ ಪದ್ಧತಿಯ ಜಾರಿಗೊಳಿಸುತ್ತಿದ್ದರು. ಅದರಲ್ಲಿ ನ್ಯಾಯಾಂಗವು ಮುಖ್ಯ ಪಾತ್ರವಹಿಸುತ್ತದೆ. ವ್ಯಕ್ತಿಯೊಬ್ಬ ಮಾಡಿದ ತಪ್ಪಿಗೆ ಶಿಕ್ಷೆ ಕಡ್ಡಾಯವಾದಾಗ ಮಾಡುವ ತಪ್ಪಿನ ಪ್ರಮಾಣ ಕಡಿಮೆಯಾಗುತ್ತದೆ. ಶಿಕ್ಷೆಗೆ ಒಳಗಾಗಬೇಕೆಂಬ ಭಯದಿಂದ ನ್ಯಾಯಮಾರ್ಗದಲ್ಲಿ ಉತ್ತಮ ಜೀವನ ನಡೆಸುತ್ತಾನೆ. ರಾಜ್ಯದ/ದೇಶದ ಒಳಗಿನ ತಾಪತ್ರಯಗಳಿಂದ ಮುಕ್ತಿಹೊಂದಿ ಸುಭಿಕ್ಷವಾಗಿರಬೇಕೆಂದರೆ ಮುಖ್ಯವಾಗಿ ಉತ್ತಮ ನ್ಯಾಯಪದ್ಧತಿ ಜಾರಿಗೆ ತರಬೇಕು. ಅಂದಿನ ಸಂದರ್ಭದಲ್ಲಿ ದೇವಾಲಯಗಳಲ್ಲಿ ನ್ಯಾಯತೀರ್ಮಾನವಾಗುತ್ತಿತ್ತು.

ಬೆಂಗಳೂರು ನಗರ ಜಿಲ್ಲೆಯಲ್ಲಿ ನ್ಯಾಯ ತೀರ್ಮಾನದ ಬಗ್ಗೆ ಹೆಚ್ಚಿನ ಮಾಹಿತಿ ಇಲ್ಲ ಉಲ್ಲೇಖಗೊಂಡಿರುವ ದಂಡ ಉಂಡುಗೆ, ತಪ್ಪು ತವಡಿ[70] ಎಂಬ ತೆರಿಗೆಗಳಿಂದ ಶಿಕ್ಷೆಯು ದಂಡ ರೂಪದಲ್ಲೂ ಇರುತ್ತಿತ್ತು ಎಂದು ತಿಳಿಯುತ್ತದೆ. ವ್ಯಕ್ತಿಯ ತಪ್ಪಿನ ಆಧಾರದ ಮೇಲೆ ದಂಡ ನಿರ್ಣಯವಾಗುತ್ತಿತ್ತು. ಪ್ರಾಚೀನ ಕಾಲದಲ್ಲಿ ನ್ಯಾಯಾಲಯಗಳಿಗಿಂತ ಜನರು ವಿಶೇಷವಾಗಿ ಧರ್ಮದಲ್ಲಿ ನಂಬಿಕೆಯನ್ನು ಹೊಂದಿದ್ದರು. ಹಾಗಾಗಿ ಧರ್ಮದ ನಂಬಿಕೆಯ ಮೇಲೆ ಈ ನ್ಯಾಯ ತೀರ್ಮಾನಗಳು

ನಿಂತಿರುತ್ತಿತ್ತು. ಈ ಹಿನ್ನೆಲೆಯಲ್ಲಿ ಶಾಪಾಶಯಗಳು ಮುಖ್ಯವಾಗುತ್ತವೆ. ರಾಜನು ಹೊರಡಿಸಿದ ಆಜ್ಞೆಯನ್ನು ಪಾಲಿಸುವುದು ನಾಡಿನ ಜನರ ಕರ್ತವ್ಯವಾಗಿರುತ್ತಿತ್ತು. ಇಂತಹ ಆಜ್ಞೆಗಳು ನ್ಯಾಯಸಮ್ಮತವಾಗಿರುತ್ತವೆ ಎಂಬ ನಂಬಿಕೆಯೂ ಇರುತ್ತಿತ್ತು. ಯಾರಾದರು ಇಂತಹ ಆಜ್ಞೆಗಳನ್ನು ಮೀರಿದ್ದೇ ಆದಲ್ಲಿ ಅವರಿಗೆ ಶಿಕ್ಷೆಯನ್ನು ವಿಧಿಸಲಾಗುತ್ತಿತ್ತು. ಈ ಆಜ್ಞೆಯು ಯಾವುದೋ ಒಂದು ಕಾಲಘಟ್ಟಕ್ಕೆ ಸೀಮಿತವಾಗದೆ ಎಲ್ಲಾ ಕಾಲಕ್ಕೂ ಅನ್ವಯವಾಗುವಂತಿರಬೇಕು ಎಂಬ ಉದ್ದೇಶವೇ ಶಾಪ ಮತ್ತು ಆಶಯಗಳು ಜನ್ಮತಾಳಲು ಕಾರಣವಾಗಿತ್ತು. ಬ್ರಾಹ್ಮಣ ಹತ್ಯೆ, ಗೋಹತ್ಯೆ, ಶಿಶುಹತ್ಯೆ, ಗುರುಹತ್ಯೆ ಹಾಗೂ ಮಾತಪಿತೃ ವಧಿಸಿದ ಪಂಚ ಮಹಾ ಪಾತಕಿಗಳಾಗುವರು, ಅರವತ್ತು ವರ್ಷಗಳ ಕಾಲ ಕ್ರಿಮಿಗಳಾಗಿ ಹುಟ್ಟುವರು. ಶಾಪಗಳಲ್ಲಿ ಬರುವ ಅಶ್ಲೀಲ ಪದಗಳು ಅಥವಾ ಬೈಗುಗಳಗಳು ದಂಡನೆಯ ಮತ್ತೊಂದು ರೂಪ. ಹೀಗೆ ಶಾಸನಗಳಲ್ಲಿನ ಶಾಪಗಳು ಅಂದಿನ ಕಾಲದ ಕಟ್ಟಳೆಗಳನ್ನು ಕಡೆಗಣಿಸಿದವರಿಗೆ ಒದಗುವ ಪರಿಸ್ಥಿತಿಯ ಬಗ್ಗೆ ಎಚ್ಚರಿಕೆ ವಹಿಸುತ್ತವೆ.

## ವ್ಯವಸಾಯ ಪದ್ಧತಿ

ಪ್ರಾಚೀನ ಕರ್ನಾಟಕದಲ್ಲಿ ವಾಸಿಸುತ್ತಿದ್ದ ಜನರ ಮುಖ್ಯ ಉತ್ಪಾದನಾಂಗ ಭೂಮಿ. ಇವರು ಫಲವತ್ತಾದ ಭೂಮಿಯಲ್ಲಿ ವ್ಯವಸಾಯವನ್ನು ಮಾಡುತ್ತಿದ್ದರು. ಪ್ರಾಚೀನ ಬೆಂಗಳೂರಿನ ಜನರ ಪ್ರಮುಖ ಉದ್ಯೋಗ ಕೃಷಿ. ಗಂಗರ ಕಾಲದಲ್ಲೇ ಕೆರೆನಿರ್ಮಾಣ ಕಾರ್ಯ ನಡೆದಿತ್ತು. ಕೃಷಿಗೆ ಪ್ರೋತ್ಸಾಹವನ್ನು ನೀಡಲು ನೀರಾವರಿ ಸೌಲಭ್ಯವನ್ನು ಒದಗಿಸಿಕೊಡಲಾಗಿತ್ತು. ಕೃಷಿ ಮತ್ತು ನೀರಾವರಿಗೆ ಬೆಂಗಳೂರು ನಗರವನ್ನು ಆಳಿದ ರಾಜಮನೆತನವು ಹೆಚ್ಚಿನ ಮಹತ್ವ ನೀಡಿರುವ ವಿಷಯ ಶಾಸನಗಳಿಂದ ತಿಳಿಯುತ್ತದೆ. ದೊರೆತಿರುವ ಅನೇಕ ಶಾಸನಗಳು ಕೆರೆ–ಕುಂಟೆ, ಗದ್ದೆ, ಬೆದ್ದಲು, ತೋಟಾ–ತುಡಕೀ, ಕಡಾರಂಭ–ನೀರಾರಂಭ[71] ಹೊಲ, ಬೀಜವರಿಗದ್ದೆ[72] ಮೊದಲಾದ ಕೃಷಿ ಸಂಬಂಧಿ ಪದವನ್ನು ಪ್ರಸ್ತಾಪಿಸುತ್ತವೆ. ಹಾಗೂ ಕ್ರಿ.ಶ.1308ರ ಹೊಯ್ಸಳರ ಕಾಲದಲ್ಲಿ ಹೆಬ್ಬಾಳದ ಕೃಷಿಕರಿಗೆ ಅಲ್ಲಿನ ಸರ್ವಾಧಿಕಾರಿ ಉರಿಯಣ್ಣ ಎಂಬುವನು ಕೃಷಿ ಭೂಮಿಯನ್ನು ದಾನ ನೀಡಿದ್ದಾನೆ.[73] ಇವೆಲ್ಲಾ ಅಂಶವನ್ನು ಪರಿಶೀಲಿಸಿದಾಗ ರಾಜರು ಕೃಷಿಗೆ ಅಗತ್ಯವಾಗಿ ಬೇಕಾದ ವ್ಯವಸ್ಥೆಯನ್ನು ಮಾಡಿದ್ದರು.

**ಬೆಳೆಗಳು/ಆಹಾರ ಪದ್ಧತಿ:–** ಪ್ರಾಚೀನ ಸಂದರ್ಭದಲ್ಲಿ ಕೃಷಿಕರು ಯಾವ ಬೆಳೆಗಳನ್ನು ಬೆಳಯುತ್ತಿದ್ದರು ಎಂಬ ವಿಷಯ ಶಾಸನದಲ್ಲಿ ಎಲ್ಲೂ ನೇರ ಉಲ್ಲೇಖ ದೊರಕದಿದ್ದರೂ, ದಾನ ನೀಡಿರುವ ವಸ್ತುಗಳಲ್ಲಿ ಈ ಅಂಶವನ್ನು ಗುರುತಿಸಬಹುದು. ಕ್ರಿ.ಶ.945ರ ಗಂಗರ ಶಾಸನದಲ್ಲಿ ದೇವಸ್ಥಾನದ ಪ್ರತಿಷ್ಠಾಪನೆಗೆ ಭತ್ತವನ್ನು ಬೆಳೆಯುವ ಜಾಗವನ್ನೇ ದಾನ ನೀಡಿದ್ದಾರೆ.[74] ಬನ್ನೇರುಘಟ್ಟದ ದಾಮೋದರನಿಗೆ

'ರಾಗಿ'ಯನ್ನು ನೀಡಿದ್ದಾರೆ.[75] ಇಂದಿನ ಬೆಂಗಳೂರು ಗ್ರಾಮಾಂತರ ಜಿಲ್ಲೆ ದೊಡ್ಡಬಳ್ಳಾಪುರದ ಕ್ರಿ.ಶ.1267ರ ಶಾಸನವೊಂದರಲ್ಲಿ 'ಹತ್ತಿ, ಅರಿಶಿನ, ಅಡಕೆ, ಏಲಕ್ಕಿ' ಮೊದಲಾದ ಬೆಳೆಗಳ ಉಲ್ಲೇಖವಿದೆ.[76] ಇಂದಿಗೂ ಬೆಂಗಳೂರಿನ ಗ್ರಾಮೀಣ ಪ್ರದೇಶದಲ್ಲಿ ಭತ್ತ, ರಾಗಿ ಮತ್ತು ದ್ವಿದಳ ಧಾನ್ಯಗಳನ್ನು ಬೆಳೆಯುತ್ತಾರೆ. ಹಾಗೂ ಕೃಷಿ ಪ್ರಮುಖ ಉದ್ಯೋಗವಾಗಿದೆ.

## ನೀರಾವರಿ ವ್ಯವಸ್ಥೆ

ಬೆಂಗಳೂರಿನಲ್ಲಿ ದೊರೆಯುವ ಪ್ರಾಗಿತಿಹಾಸದ ನೆಲೆಗಳಲ್ಲಿ ದೊರೆಯುವ ಅವಶೇಷಗಳಿಂದ ಬೆಂಗಳೂರು ಅನಾದಿಕಾಲದಲ್ಲೇ ಕೃಷಿ ಚಟುವಟಿಕೆಗಳಿಗೆ ಒಳಗಾಗಿತ್ತು ಎಂಬುದು ಸ್ಪಷ್ಟ. ರಾಜರು, ಅಧಿಕಾರಿಗಳು, ಸ್ಥಳೀಯರು ತಮ್ಮ ಊರಿನ ಅಭಿವೃದ್ಧಿ ಹಾಗೂ ಜನಸಾಮಾನ್ಯರಿಗೆ ಉಪಯೋಗವಾಗಬೇಕೆಂಬ ಉದ್ದೇಶದಿಂದ ಕೆರೆಯನ್ನು ಕಟ್ಟಿಸುತ್ತಿದ್ದರು. ಇನ್ನೂ ಕೆಲವರು ಆ ಕೆರೆಗಳಿಗೆ ಭೂದಾನ, ಬಿತ್ತುವಟ್ಟಗಳನ್ನು ನೀಡುತ್ತಿದ್ದರು. ಇವು ಪುಣ್ಯವಾದ ಕೆಲಸವೆಂದು ಜನರ ಹಾಗೂ ರಾಜಪ್ರಭುಗಳ ನಂಬಿಕೆಯಾಗಿತ್ತು. ವಿಜಯನಗರ ಸಾಮ್ರಾಜ್ಯದ ದೊರೆ ಪ್ರೌಢದೇವರಾಯನ ಮಂತ್ರಿಯಾಗಿದ್ದ ಲಕ್ಷ್ಮೀಧರನು ಕ್ರಿ.ಶ.1411ರಲ್ಲಿ ಹಂಪೆಯಲ್ಲಿ ಹಾಕಿಸಿದ ಶಾಸನ. ಈ ಶಾಸನದಲ್ಲಿ ಲಕ್ಷ್ಮೀಧರನು ಮಗುವಾಗಿದ್ದ ಸಂಧರ್ಭದ ತಾಯಿ ಹಾಲನ್ನು ಕುಡಿಸುವಾಗ ಕಿವಿಯಲ್ಲಿ ಹೇಳಿದ ನೀತಿಪಾಠ ಈ ರೀತಿಯಿದೆ,

> **'ಕೆರೆಯಂ ಕಟ್ಟಿಸು, ಬಾವಿಯಂ ಸವೆಸು, ದೇವಾಗಾರಮಂ ಮಾಡಿಸ**
> **ಜ್ಜಱಿಯೊಳ್ ಸಿಲ್ಕಿದನಾಥರಂ ಬಿಡಿಸು, ಮಿತ್ರರ್ಗಿಂಬುಕೆಯ್ ನಂಬಿದ।**
> **ರ್ಗ್ಗಱಿವಟ್ಟಾಗಿರು, ಶಿಷ್ಟರಂ ಪೊರೆಯೆನುತ್ತಿಂತೆಲ್ಲಮಂ ಪಿಂದೆ ತಾ**
> **ಯೆಱಿದಳ್ಪಾಲೆಱಿವಂದುತೊಟ್ಟು ಕಿವಿಯೊಳ್ ಲಕ್ಷ್ಮೀಧರಾಮಾತ್ಯನಾ॥**[77]

ಹೀಗೆ ಕವಿ ನಮ್ಮ ಸಂಸ್ಕೃತಿಯ ತಿರುಳನ್ನು ಮುಂದೆ ಇಟ್ಟಿದ್ದಾನೆ. ಕೆರೆಯನ್ನು ಕಟ್ಟಿಸು, ಬಾವಿಯನ್ನು ತೋಡಿಸು, ದೇವಾಲಯವನ್ನು ನಿರ್ಮಿಸು, ಅಲ್ಲದೆ ಸಂಕಟದಲ್ಲಿ ಸಿಲುಕಿದ ಅನಾಥರನ್ನು ಬಿಡಿಸು, ಗೆಳೆಯರಿಗೆ ಸಹಾಯಕನಾಗು, ನಂಬಿದವರಿಗೆ ಆಶ್ರಯದಾತನಾಗು, ಒಳ್ಳೆಯವರನ್ನು ರಕ್ಷಿಸು ಎಂಬ ಆದರ್ಶ ನೀತಿಪಾಠವನ್ನು ತಾಯಿಯು ಮಗನಿಗೆ ಹೇಳುವ ಸಂದರ್ಭ ಸಾರ್ವಕಾಲಿಕವಾದುದು. ಈ ಜನಹಿತ ಕಾರ್ಯಗಳಿಂದ ಪುಣ್ಯ ಪ್ರಾಪ್ತಿಯಾಗುತ್ತದೆಂಬ ನಂಬಿಕೆ ಅಂದಿನ ಕಾಲದ ಜನರಲ್ಲಿತ್ತು. ಊರನ್ನು ಕಟ್ಟುವ ಮೊದಲು ಕೆರೆಗಳನ್ನು ಕಟ್ಟು, ಊರು ತನ್ನಿಂದ ತಾನೇ ಬೆಳೆಯುತ್ತದೆ ಎಂಬ ಜಾನಪದ ಮಾತೊಂದಿದೆ. ಎಂದರೆ ಕೆರೆ ಕಟ್ಟಿದಲ್ಲಿ ಊರು ನಿರ್ಮಿತವಾಗುತ್ತಿತ್ತು ಎಂಬುದು ನಿಜದ

ಸಂಗತಿ. 'ಜೀವಂ ಜೀವನಾಧಾರಂ' ಎಂಬಂತೆ. ಜೀವನ ಎಂಬ ಪದಕ್ಕೆ ನೀರು ಎಂಬ ಅರ್ಥವಿದೆ. ಜೀವನ ನಡೆಸಲು ನೀರಿನ ಅಗತ್ಯವಿದೆ. ಒಂದು ದೇಶದ, ನಾಡಿನ ಬೆಳವಣಿಗೆಗೆ ನೀರು ಜೀವನಾಡಿ ಇದ್ದಂತೆ. ಕೃಷಿಕರ ಬದುಕಿಗೆ ಜೀವನಾಧಾರ ನೀರು. ಅಷ್ಟೇ ಅಲ್ಲ ಕೈಗಾರಿಕೆಗಳ ಉಪಯೋಗಕ್ಕೂ ನೀರಿನ ಅವಶ್ಯಕತೆ ಇದೆ. ಇಂತಹ ನೀರಿನ ಮಹತ್ವವನ್ನು ಅರಿತ ಜನರು ಕೆರೆನಿರ್ಮಾಣವನ್ನು ಮಾಡಿದ್ದಾರೆ.

ಪ್ರಸ್ತುತ ಬೆಂಗಳೂರು ನಗರದಲ್ಲಿ ಭೂಮಿಯ ಬೇಡಿಕೆ ಹೆಚ್ಚುತ್ತಿದ್ದು, ಕೃಷಿಯೇತರ ಉದ್ದೇಶಗಳಿಗಾಗಿ ಭೂಮಿಯನ್ನು ಬಳಸಿಕೊಳ್ಳುತ್ತಿರುವುದು ಗಮನಿಸಬಹುದು. ಆದರೆ ಬೆಂಗಳೂರು ಜಿಲ್ಲೆಯಲ್ಲಿ ಕ್ರಿ.ಶ. ಸುಮಾರು 8ನೇ ಶತಮಾನದ ಆನಂತರದಲ್ಲಿ ಕೃಷಿ ಅಭಿವೃದ್ಧಿಗಾಗಿ ನೀರಾವರಿ ವ್ಯವಸ್ಥೆಯನ್ನು ಅಳವಡಿಸಿಕೊಂಡಿದ್ದರು ಎಂಬುದು ಶಾಸನಗಳಿಂದ ತಿಳಿಯುತ್ತದೆ.

ಬೆಂಗಳೂರು ಸಮುದ್ರ ಮಟ್ಟದಿಂದ 900ಅಡಿ ಎತ್ತರದಲ್ಲಿದೆ. ಒಂದು ನಾಡಿನ ಅಭಿವೃದ್ಧಿಯು ಆ ನಾಡಿನ ನೀರಾವರಿ ಸ್ಥಿತಿಯನ್ನು ಅವಲಂಬಿಸಿದೆ. ನೀರಾವರಿಯು ಮುಖ್ಯವಾಗಿ ನದಿ ಬಾವಿ ಕೆರೆಗಳನ್ನು ಅವಲಂಬಿಸಿರುತ್ತಿತ್ತು. ಸಾಗುವಳಿ ಭೂಮಿಯ ವಿಸ್ತರಣೆಗೆ ಹಾಗೂ ಜನರಿಗೆ ಕುಡಿಯುವ ನೀರಿನ ವ್ಯವಸ್ಥೆಗಾಗಿ ಕೆರೆಗಳ ನಿರ್ಮಾಣ ಪ್ರಾಚೀನ ಕಾಲಕ್ಕಾಗಲೇ ಸಣ್ಣ, ಮಧ್ಯಮ ಹಾಗೂ ಬೃಹತ್ ಪ್ರಮಾಣದ ನೂರಾರು ಕೆರೆಗಳು ಅಸ್ತಿತ್ವದಲ್ಲಿದ್ದು ಕೃಷಿ ಸಂಸ್ಕೃತಿಯನ್ನು ಪೋಷಿಸಲಾಗುತ್ತಿತ್ತು.

ಶಾಸನಗಳಲ್ಲಿ ಸಾಮಾನ್ಯವಾಗಿ ಅಂಬುಧಿ, ಕೆರೆ, ಕಟ್ಟೆ, ಕೊಳ, ದೊಣೆ, ಕುಂತೆ, ಸರೋವರ, ಪುಷ್ಕರಣಿ, ತಟಾಕ, ಸಮುದ್ರ ಇತ್ಯಾದಿ ಪದಗಳು ಕೆರೆಗೆ ಸಂಬಂಧಿಸಿದಂತೆ ಉಲ್ಲೇಖವಾಗಿದೆ. ಹಾಗೂ ಕೆರೆ–ಕುಂಟೆ, ಗದ್ದೆ–ಬಿದ್ದಲು(Wet and Drylands), ಗುಡಿಗುಯಲು(Huts and plots), ತೋಟಾ–ತುಡಕೀ (Orchard and flower gardens), ಕಡಾರಂಭಾ–ನೀರಾರಂಭಾ(Land cultivated by rain water and irrigation water) ಎಂಬ ನೀರಾವರಿಗೆ ಸಂಬಂಧಿಸಿದ ಪದಗಳು ಶಾಸನಗಳಲ್ಲಿ[78] ದೊರೆಯುತ್ತವೆ.

ಬೆಂಗಳೂರು ಬಯಲು ಪ್ರದೇಶವಾಗಿದ್ದು, ಇಲ್ಲಿ ತುಂಬಿ ಹರಿಯುವ ನದಿಗಳಾಗಲಿ, ತೊರೆಗಳಾಗಲಿ ಇಲ್ಲ. ಬೆಂಗಳೂರಿನಲ್ಲಿ ವೃಷಭಾವತಿ ನದಿಯನ್ನು ಹೊರತು ಪಡಿಸಿದರೆ ಯಾವುದೇ ನದಿಗಳಿಲ್ಲ. ಪ್ರಸ್ತುತ ವೃಷಭಾವತಿ ನದಿಕೂಡ ತನ್ನ ಅಸ್ತಿತ್ವವನ್ನು ಕಳೆದುಕೊಂಡು ಕಲುಷಿತಗೊಂಡಿದೆ. ಈ ನದಿ ಬಸವನಹಳ್ಳಿ ಎಂದರೆ ಇಂದಿನ ಬಸವನಗುಡಿಯಲ್ಲಿ ಹುಟ್ಟುತ್ತದೆ ಎಂಬ ಅಂಶ ಶಾಸನದಿಂದ ತಿಳಿಯುತ್ತದೆ.[79]

ಬೆಂಗಳೂರಿನ ಶಾಸನಗಳಲ್ಲಿ ಕೆರೆಗಳ ಉಲ್ಲೇಖ ಸಿಗುವುದು ಗಂಗರ ಕಾಲದಲ್ಲಿ. ಗಂಗರು ಸುಮಾರು ಐದನೇ ಶತಮಾನದಿಂದ ಹತ್ತನೆಯ ಶತಮಾನದವರೆಗೆ ದಕ್ಷಿಣ ಕರ್ನಾಟಕದ ಕೆಲವು ಭಾಗಗಳನ್ನು ಆಳಿದರು. ಅದರಲ್ಲಿ ಬೆಂಗಳೂರು ಒಂದು ಎಂಬುದು ಈಗಾಗಲೇ ರಾಜಕೀಯ ಚರಿತ್ರೆಯಲ್ಲಿ ಸ್ಪಷ್ಟವಾಗಿದೆ. ಇವರ ಕಾಲಕ್ಕೆ ಸಂಬಂಧಿಸಿದ ಕೆಲವು ಶಾಸನಗಳು ಅವರ ಕಾಲದ ನೀರಾವರಿ ವ್ಯವಸ್ಥೆ ಮತ್ತು ಕೃಷಿ ಪದ್ಧತಿಯ ಬಗ್ಗೆ ತಿಳಿಸುತ್ತವೆ. ಕ್ರಿ.ಶ.870ರ ಶಾಸನವೊಂದು ಅಗರದ ಕೆರೆ ಕಟ್ಟೇ ಕೆಳಗೆ ಪಶ್ಚಿಮ ತೂಬಿನ ಬಳಿ ದೊರೆತಿದೆ.[80] ಇದು ನಾಗತ್ತರನ ಅಧೀನದಲ್ಲಿದ್ದ ಅಧಿಕಾರಿ ಇರ್ವ್ವೂಲಿಯೂರಿನ ಒಡೆಯನಾಗಿದ್ದ ಇರುಗಮಯ್ಯನ ಮಗ ಸಿರಯಮಯ್ಯನು ಎರಡು ಕೆರೆಯನ್ನು ಹಾಗು ಮೂಡಣದಲ್ಲಿ ಒಂದು ಕೆರೆಯನ್ನು ಕಟ್ಟಿಸಿದನೆಂಬ ಉಲ್ಲೇಖವಿದೆ. ಈ ಕೆರೆಯು ಕ್ರಿ.ಶ. ಸುಮಾರು 890ರಲ್ಲಿ ನಿರ್ಮಾಣವಾಗಿದೆಯೆಂಬುದು ಗಮನಾರ್ಹ ಅಂಶ.

ಕೆರೆಗಳ ನಿರ್ಮಾಣ ಮತ್ತು ನಿರ್ವಹಣೆಯಲ್ಲಿ ಅಂದಿನ ಆ ಗ್ರಾಮದ ನಾಯಕ ಮತ್ತು ಮಹಾಜನರ ಪಾತ್ರ ಮುಖ್ಯವಾಗಿರುತ್ತಿತ್ತು. ಅವರುಗಳು ಕೆರೆಯ ನಿರ್ವಹಣೆಗಾಗಿ ಕೆರೆಬಂಡಿಗಳನ್ನು ಹೊಂದಿರುತ್ತಿದ್ದರು. ವಿಜಯನಗರ ಕಾಲದಲ್ಲಿ ಅಗರ ಕೆರೆಯನ್ನು ಜೀರ್ಣೋದ್ಧಾರ ಮಾಡಿರುವ ಉಲ್ಲೇಖ ಸಿಗುತ್ತದೆ. ವಿಜಯನಗರ ಕಾಲಕ್ಕಾಗಲೇ ವ್ಯವಸ್ಥಿತವಾದ ಕೆರೆಯನ್ನು ಕಟ್ಟಿಸುತ್ತಿದ್ದರು ಎಂಬುದು ಆಂಧ್ರ ಪ್ರದೇಶದ ಕಡಪ ಜಿಲ್ಲೆಯಲ್ಲಿ ಕ್ರಿ.ಶ.1369ರ ಬುಕ್ಕರಾಯನ ಕಾಲದ ಶಾಸನದಿಂದ ತಿಳಿಯುತ್ತದೆ. "ಒಂದು ಕೆರೆಯನ್ನು ನಿರ್ಮಿಸಬೇಕಾದಾಗ ತೆಗೆದುಕೊಳ್ಳಬೇಕಾದ ಅತೀ ಮುಖ್ಯವಾದ ಕೆಲವು ಮುನ್ನೆಚ್ಚರಿಕೆ ಕ್ರಮಗಳನ್ನು ಇದೇ ಶಾಸನ ತಿಳಿಸುತ್ತದೆ. ಕೆರೆಯಿಂದ ನೀರು ಸ್ರವಿಸಬಾರದು, ಕೆರೆಯ ಪಾತ್ರದಲ್ಲಿನ ಮಣ್ಣು ಉಪ್ಪಿನಂಶದಿಂದ ಕೂಡಿರಬಾರದು, ಎರಡು ರಾಜ್ಯಗಳ ನಡುವಿನ ಗಡಿ ಪ್ರದೇಶವನ್ನು ಆಯ್ಕೆ ಮಾಡಬಾರದು, ಕೆರೆಯ ಮಧ್ಯ ಭಾಗವನ್ನು ಗಮನಿಸಬೇಕು, ಅವು ಎತ್ತರ ಅಥವಾ ಉಬ್ಬಾಗಿರಬಾರದು ಅತ್ಯಲ್ಪ ನೀರು ಬರುವ ಪ್ರದೇಶವನ್ನು ಆಯ್ಕೆ ಮಾಡಬಾರದು ಮತ್ತು ಅತಿಹೆಚ್ಚು ಆಯಕಟ್ಟು ಇರುವ ಜಾಗವನ್ನು ಆರಿಸಬಾರದು. ಸ್ವಲ್ಪ ಜಮೀನಿದ್ದು ಅಧಿಕ ನೀರು ಬರುವಂತಹ ಜಾಗವನ್ನು ಆಯ್ಕೆ ಮಾಡಬಾರದು."[81] ಹೀಗೆ ವಿಜಯನಗರ ಕಾಲದ ತಂತ್ರಜ್ಞಾನವು ಎಷ್ಟರ ಮಟ್ಟಿಗೆ ಬೆಳೆದಿತ್ತು ಎಂಬುದು ನಮಗೆ ಈ ಶಾಸನದಿಂದ ತಿಳಿದುಬರುತ್ತದೆ. ಕ್ರಿ.ಶ.1515ರ ಶಾಸನದ ಪ್ರಕಾರ,[82] ಕೃಷ್ಣದೇವರಾಯನು ಆಳುತ್ತಿದ್ದ ಸಂದರ್ಭದಲ್ಲಿ ಸಿವಣಪ್ಪನಾಯಕನು ತನ್ನ ತಂದೆಗೆ ಒಳ್ಳೆಯದಾಗಲಿ ಎಂಬ ಉದ್ದೇಶದಿಂದ ಅಗರದ ಕೆರೆಯಲ್ಲಿರುವ ಹೂಳನ್ನು ತೆಗೆಸಲು ಬಂಡಿಯನ್ನು ಹೊಡೆಸಲು ಕೊಟ್ಟ ಹೊಲ ಎಂದಿದೆ. ಕೆರೆಬಂಡಿ ಎಂಬ ಪದವು ಕೆರೆಯ ಕೆಲಸಗಳಿಗೆ ಅನೇಕ

ಸಾಮಗ್ರಿಗಳು ಬೇಕಾಗಿದ್ದವು ಎಂಬುದನ್ನು ಸೂಚಿಸುತ್ತವೆ. ಅದರಲ್ಲಿ ಎತ್ತಿನ ಬಂಡಿಗಳು ಇದ್ದವು ಎಂಬುದು ವಿಶೇಷ. ಇವುಗಳನ್ನು ಕೆರೆಯ ಕೆಲಸಗಳಿಗಾಗಿಯೇ ಮೀಸಲಿಟ್ಟು ಉಪಯೋಗಿಸುತ್ತಿದ್ದರಿಂದ ಕೆರೆಬಂಡಿ ಎಂದೇ ಕರೆಯಲಾಗುತ್ತಿತ್ತು. ಕೆರೆಯಲ್ಲಿ ಹೂಳೆತ್ತಲು ಈ ಬಂಡಿಗಳ ಸಹಾಯವನ್ನು ಪಡೆಯುತ್ತಿದ್ದರು. ಪ್ರಸ್ತುತ ಅಗರ ಕೆರೆ ಬೆಂಗಳೂರಿನ ಹೆಚ್.ಎಸ್.ಆರ್. ಬಡಾವಣೆಯ ಎದುರು ಭಾಗದಲ್ಲಿದೆ. ಈ ಕೆರೆ ತನ್ನ ಮೂಲ ಅಸ್ತಿತ್ವವನ್ನು ಕಳೆದುಕೊಂಡಿದೆ. ನಗರ ಅಭಿವೃದ್ಧಿ ಇಲಾಖೆಯಿಂದ ಯಾವುದೇ ಅಭಿವೃದ್ಧಿ ಹೊಂದದೆ ಕೆರೆಯಲ್ಲಿ ಜೊಂಡು, ಪಾಚಿ ಬೆಳೆದು ಕೆರೆಯ ಸೌಂದರ್ಯ ಮತ್ತು ನೀರು ಹಾಳಾಗಿದೆ.

ಕ್ರಿ.ಶ.1308ರ ಹೊಯ್ಸಳರ ಶಾಸನದಲ್ಲಿ[83] ಎಲಹಂಕನಾಡನ್ನು ಆಳುತ್ತಿದ್ದ ಮುದೆಯ ಅಲ್ಲವ ಎಂಬ ದಂಡನಾಯಕನ ಸರ್ವಾಧಿಕಾರಿ ಉರಿಯಣ್ಣನು ಹೆಬ್ಬಾಳದ ಕೃಷಿಕರಿಗೆ ಭೂಮಿಯನ್ನು ನೀಡಿದನು ಎಂದಿದೆ. ಹೆಬ್ಬಾಳದ ಮೇಲುರಸ್ತೆಯಿಂದ ಹೋದರೆ ಅದರ ಹೆಬ್ಬಾಗಿಲಿನಲ್ಲಿ ಇರುವುದೇ ಈ ಹೆಬ್ಬಾಳದ ಕೆರೆ. ಕ್ರಿ.ಶ.1342ರ ಹೊಯ್ಸಳರ ಶಾಸನವೊಂದು ಗಾಣಿಗರ ಹಳ್ಳಿ ಕೆರೆಯ ಉತ್ತರದ ಕೋಡಿಯ ಬಳಿದೊರೆತಿದೆ. ಈ ಶಾಸನದಲ್ಲಿ ಮಾವಿನಕೆರೆ, ಹುರುವಾಮಾರಾಡಿಯ ಕೆರೆ(ಹುಳಿಮಾವು ಕೆರೆ) ಒಳಗಾದ ಚತುಸೀಮೆಯ ಗದ್ದೆಯನ್ನು ಕೊಡುಗೆಯಾಗಿ ನೀಡಲಾಗಿದೆ ಎಂಬ ಉಲ್ಲೇಖವಿದೆ.

ಕ್ರಿ.ಶ.1431ರ ವಿಜಯನಗರ ಅರಸರ ಆಳ್ವಿಕೆಯ ಸಂದರ್ಭ ಕೆಂಪೇಗೌಡ ನಾಡಪ್ರಭುಗಳ ಆಳ್ವಿಕೆಯ ಶಾಸನದಲ್ಲಿ ದೇವಸಮುದ್ರದ ಹಿರಿಯಕೆರೆಯ ಕೆಳಗೆ ಬೀಜವರಿಗದ್ದೆ ಎಂಬ ಉಲ್ಲೇಖವಿದೆ.[84] ಕೃಷಿಗಾಗಿ ಈ ಹಿರಿಯ ಕೆರೆಯನ್ನು ಬಳಸಲಾಗುತ್ತಿದ್ದಿರಬಹುದು. ಸಂದ್ರ, ಸಮುದ್ರ ಇವು ಕೆರೆಯ ವಿಸ್ತೀರ್ಣವನ್ನು ಸೂಚಿಸುತ್ತದೆ. ಈ ಶಾಸನದಲ್ಲಿ ಉಲ್ಲೇಖಿಸುವ ಹಿರಿಯಕೆರೆ, ದೇವಸಮುದ್ರ ಈ ಹಿನ್ನೆಲೆಯಲ್ಲೇ ಬಳಸಿರಬಹುದು. ಸಮುದ್ರ ಎಂದರೆ ಒಂದು ಕೆರೆ ಬಹಳ ದೊಡ್ಡದಾಗಿದ್ದರೆ ಅದನ್ನು ಸಮುದ್ರಕ್ಕೆ ಹೋಲಿಸಿ ಈ ರೀತಿ ಹೇಳಲಾಗಿದೆ. ಹಾಗೂ ಹಿರಿಯಕೆರೆ ಎಂತಲೂ ಕರೆದಾಗ ಅದಕ್ಕಿಂತಲೂ ಚಿಕ್ಕದಾದ ಕೆರೆಯೊಂದು ಆ ಪ್ರದೇಶದಲ್ಲಿತ್ತು ಎಂಬುದಾಗಿ ಭಾವಿಸಬಹುದು.

ಬೆಂಗಳೂರು ಜಿಲ್ಲೆಯ ಅರಳಾಲು ಗ್ರಾಮದ ಎರಡನೆಯ ಹರಿಹರನ ಕಾಲದ ಶಾಸನವು ಮಾರಸಮುದ್ರ ಕೆರೆಯ ತೂಬನ್ನು ನಿಲ್ಲಿಸುವ ಸಮಯದಲ್ಲಿ ಅಲ್ಲಗೌಡ(ಅಲ್ಲಗೌಂಡ) ಎಂಬಾತನು ನೀರಿನಲ್ಲಿ ಮುಳುಗಿ ಸಾಯುತ್ತಾನೆ ಎಂಬ ವಿಷಯವನ್ನು ಹೇಳುತ್ತದೆ. ಆನಂತರ ಗುಳಿಯೋಜ ಎಂಬಾತನು ಅದನ್ನು ಸರಿಪಡಿಸಲೋಸುಗ ಎರಡು ಖಂಡುಗ ಗದ್ದೆ, ಒಂದು ಖಂಡುಗ ಹೊಲ ಮತ್ತು ಮೂರು ಅಂಕಣದ ಮನೆಯನ್ನು ಪಡೆದು ಸರಿಪಡಿಸುತ್ತಾನೆ. ಆ ಕೆರೆಯ ತೂಬಿನ ಉಸ್ತುವಾರಿಯನ್ನು

ಗೂಳಿಯೋಜ ವಹಿಸಿಕೊಳ್ಳುತ್ತಾನೆ. ಸಾಮಾನ್ಯವಾಗಿ ಕೆರೆಯನ್ನು ಕಟ್ಟಿಸಿದವರಿಗೆ ಅಥವಾ ಆ ಕೆರೆಯ ಮೇಲುಸ್ತುವಾರಿ ನೋಡಿಕೊಳ್ಳುವವರಿಗೆ ಆ ಕೆರೆಯ ಸುತ್ತಲೇ ಭೂಮಿಯನ್ನು ನೀಡುತ್ತಿದ್ದ ವಾಡಿಕೆಯಿತ್ತು.

ಪ್ರಾಚೀನ ಮತ್ತು ಮಧ್ಯಕಾಲೀನ ಸಂದರ್ಭದಲ್ಲಿ ರಾಜರಷ್ಟೇ ಅಲ್ಲದೆ ಶ್ರೀಮಂತರು, ವರ್ತಕರು ಹಾಗೂ ಅಧಿಕಾರಿಗಳು ಕೂಡಾ ಕೆರೆಗಳನ್ನು ಕಟ್ಟಿಸುವುದು, ದುರಸ್ತಿ ಕಾರ್ಯದಲ್ಲಿ ಭಾಗವಹಿಸುವುದನ್ನು ಶಾಸನಗಳಿಂದ ತಿಳಿಯಬಹುದು. ಮಾದವ ಶೆಟ್ಟಿಯಪುತ್ರ ರಾಮಶೆಟ್ಟಿ ಮೊದಲಾದ ವರ್ತಕರು ಕೆರೆಯನ್ನು ಕಟ್ಟಿಸಿದ ಉಲ್ಲೇಖವಿದೆ.[85]

ಬೆಂಗಳೂರಿನ ಸ್ಥಾಪಕ ಹಿರಿಯ ಕೆಂಪೇಗೌಡನು(1521–1569) ನಗರದಲ್ಲಿ ಹಲವಾರು ಕೆರೆಗಳ ನಿರ್ಮಾಪಕನಾಗಿದ್ದ. ಅವುಗಳಲ್ಲಿ ಅತ್ಯಂತ ಪ್ರಖ್ಯಾತವಾದುದು ಕೆಂಪಾಂಬುಧಿ ಕೆರೆ. ಈ ಕೆರೆ ಗವಿಪುರದ ಆಗ್ನೇಯಕ್ಕಿದೆ. ಚಾಮರಾಜಪೇಟೆಯನ್ನು ಮುಟ್ಟುವ ಒಂದು ಗುಡ್ಡ ಹಾಗೂ ಗವಿಪುರದವರೆಗೂ ಹಬ್ಬಿದ ಇನ್ನೊಂದು ಗುಡ್ಡದ ನಡುವಿನ ಕಿರಿದಾದ ಕಣಿವೆಗೆ ಅಡ್ಡಲಾಗಿ ಕಟ್ಟೆಯನ್ನು ಕಟ್ಟಿ ಕೆರೆಯನ್ನು ನಿರ್ಮಿಸಲಾಗಿದೆ. ಕೆಂಪೇಗೌಡ ಧರ್ಮಾಂಬುಧಿ ಕೆರೆಯನ್ನೂ(ಈಗಿನ ಬಸ್ ನಿಲ್ದಾಣ) ಕಟ್ಟಿಸಿದ. ಬೆಂಗಳೂರು ಎತ್ತರದಲ್ಲಿರುವುದರಿಂದ ಇಲ್ಲಿಂದ ಮಳೆನೀರು ಕೋರಮಂಗಲ ಆಡುಗೋಡಿಗೆ ಹರಿದು ಅನಂತರ ಚೆಲ್ಲಘಟ್ಟ ಕೆರೆಗೆ ಹೋಗುತ್ತಿತ್ತು. ಅಲ್ಲಿಂದ ಮುಂದೆ ಯಮಲೂರು ಹಾಗೂ ಬೆಳ್ಳಂದೂರು ಕೆರೆಗಳನ್ನು ಸೇರುತ್ತಿತ್ತು. ಅದರಾಚೆಗೂ ಹರಿಯುತ್ತಿದ್ದ ನೀರಿಗೆ ಕೆಂಪೇಗೌಡನು ವರತೂರಿನಲ್ಲಿ ಅಡ್ಡಗಟ್ಟೆ ಹಾಕಿಸಿದನು. ಅಂತಿಮವಾಗಿ ನೀರು ಉತ್ತರ ಪಿನಾಕಿನಿಯನ್ನು ಸೇರುತ್ತಿತ್ತು.[86]

ಬೆಂಗಳೂರಿನಲ್ಲಿ ಚನ್ನಮ್ಮನ ಅಚ್ಚುಕಟ್ಟು ಎಂಬ ಪ್ರದೇಶವಿದೆ. ಕೆರೆಯ ಅಥವಾ ನೀರು ಸಂಗ್ರಹವಾಗುವ ವಿರುದ್ಧ ದಿಕ್ಕಿನ ಪ್ರದೇಶಕ್ಕೆ ಅಚ್ಚುಕಟ್ಟು ಪ್ರದೇಶವೆಂದು ಕರೆಯಲಾಗುತ್ತದೆ. ಇದು ಕೃಷಿ ಮಾಡುತ್ತಿದ್ದ ಸ್ಥಳ. ವಿಜಯನಗರ ಕಾಲದಲ್ಲಿ ಈ ರೀತಿಯ ಪದಗಳ ಬಳಕೆ ಆಗಿದೆ. ನಾಡಪ್ರಭುಗಳು ತಮ್ಮ ತಾಯಿಯ ಹೆಸರಿನಲ್ಲಿ ನಿರ್ಮಿಸಿದ ಚನ್ನಮ್ಮನ ಕೆರೆಯ ಸುತ್ತಲು ಕೃಷಿ ಪ್ರದೇಶವನ್ನು ಅಚ್ಚುಕಟ್ಟು/ಆಯಕಟ್ಟು ಎಂದು ಕರೆಯುವ ವಾಡಿಕೆ ಇತ್ತು. ಇಂದು ಆ ಪ್ರದೇಶದಲ್ಲಿ ಯಾವುದೇ ಕೃಷಿ ಚಟುವಟಿಕೆಗಳು ನಡೆಯದೆ ಇದ್ದರು ಇಂದಿಗೂ ಚನ್ನಮ್ಮನ ಅಚ್ಚುಕಟ್ಟು ಎಂದೇ ಕರೆಯಲಾಗುತ್ತಿದೆ. ಕೆಂಪೇಗೌಡ ಧರ್ಮಾಂಬುದಿ ಎಂಬ ಕೆರೆಯನ್ನೂ ಕಟ್ಟಿಸಿದ್ದ. ಆದರೆ ಇಂದು ಈ ಕೆರೆಯ ಭಾಗ ಬೆಂಗಳೂರಿನ ಕೇಂದ್ರ ಬಸ್‌ನಿಲ್ದಾಣ(ಮೆಜೆಸ್ಟಿಕ್) ಆಗಿದೆ.

ಬ್ರಿಟಿಷರು ತಮ್ಮ ಆಳ್ವಿಕೆಯ ಸಂದರ್ಭದಲ್ಲಿ 1799ರಲ್ಲಿ ಮೈಸೂರಿನ ಭೌಗೋಳಿಕ ಹಾಗೂ ಅಂಕಿ ಅಂಶಗಳ ಸಮೀಕ್ಷೆಯನ್ನು ಆರಂಭಿಸಿದರು. ಆ ಸಮೀಕ್ಷೆಯನ್ನು ನಡಿಸಿದವನು ಕರ್ನಲ್ ಮೆಕೆಂಜಿ. ಈತ ಮೈಸೂರು ಭೂ ವೈಜ್ಞಾನಿಕ ಹಾಗೂ ಸಂಖ್ಯಾ ಪರಿಶೀಲನಾ ಸಮೀಕ್ಷೆಯ ವರದಿ(1799–1806)ಯಲ್ಲಿ ಕೊಟ್ಟಿರುವ ಬೆಂಗಳೂರು ಕೆರೆಗಳ ವಿವರಗಳು ಇಂತಿವೆ, ದೊಡ್ಡಕೆರೆಗಳು–275, ಚೆನ್ನಾಗಿರುವ ಕಟ್ಟೆಗಳು–524, ಚೆನ್ನಾಗಿದ್ದ ಕುಂಟೆಗಳು–424, ಚೆನ್ನಾಗಿಲ್ಲದ ಅಣೆಕಟ್ಟುಗಳು–94[87] ಎಂಬ ಅಂಕಿಅಂಶವನ್ನು ನೀಡಿದ್ದಾನೆ.

ಮೈಸೂರಿನ ನಾನಾ ಜಿಲ್ಲೆಗಳಲ್ಲಿ ಇದ್ದ ಕೆರೆಗಳ ಸಂಖ್ಯೆ(1871ರಲ್ಲಿ) 2,227 ಆಗಿತ್ತು. ಇವುಗಳಲ್ಲಿ ಬೆಂಗಳೂರು ಜಿಲ್ಲೆಯ ಕೆರೆಗಳು ನಂದಿದುರ್ಗ ವಿಭಾಗಕ್ಕೆ ಸೇರಿಕೊಳ್ಳುತ್ತಿತ್ತು. ಇದರಲ್ಲಿ ಕಡಿಮೆ ಮತ್ತು ಹೆಚ್ಚು ಕಂದಾಯ ಕಟ್ಟುತ್ತಿದ್ದ ಕೆರೆಗಳು ಸೇರಿದ್ದವು.[88]

ಬೆಂಗಳೂರಿನ ಶಾಸನಗಳಲ್ಲಿ ಬಾವಿ ನಿರ್ಮಾಣದ ಬಗ್ಗೆ ಯಾವುದೇ ಮಾಹಿತಿ ದೊರೆಯುವುದಿಲ್ಲ. 1901ರ ನೀರಾವರಿ ಆಯೋಗದ ವರದಿ ಮಾಡಿದಾಗ ಬಾವಿಗಳ ಪರಿಸ್ಥಿತಿ ಅನುಕೂಲಕರವಾಗಿತ್ತು. ಬೆಂಗಳೂರು ಜಿಲ್ಲೆಯಲ್ಲಿ ನೆಲಮಟ್ಟದಿಂದ ಮೂರು ನಾಲ್ಕು ಅಡಿಗಳಲ್ಲಿ ನೀರು ಇರುತ್ತಿತ್ತು. ಈಗ ಪರಿಸ್ಥಿತಿ ತುಂಬ ಕೆಟ್ಟಿದೆ. ಅಂತರ್ಜಲಮಟ್ಟ ನೆಲಕ್ಕೆ ನೂರಾರು ಅಡಿಗಳ ಆಳಕ್ಕೆ ಹೋಗಿದೆ.[89]

ಕೆರೆಯನ್ನು ಕಟ್ಟಿಸುತ್ತಿದ್ದದ್ದು ಎಷ್ಟು ಮುಖ್ಯವೋ ಅದರ ಸಂರಕ್ಷಣೆಯೂ ಅಷ್ಟೇ ಮುಖ್ಯವಾಗಿತ್ತು. ಅದನ್ನು ರಕ್ಷಿಸುವವರಿಗೆ ಧನ, ಧಾನ್ಯ, ದತ್ತಿ, ಭೂಮಿ ಮುಂತಾದ ಅನೇಕ ರೀತಿಯ ಕೊಡುಗೆಗಳನ್ನಿತ್ತು ಉತ್ತೇಜಿಸುತ್ತಿದ್ದರು. ಬೆಂಗಳೂರುನಗರ ಬೆಳೆಯುತ್ತಿರುವುದರಿಂದ ಈ ಕೆರೆಗಳು ಒಂದಾದ ಮೇಲೆ ಒಂದರಂತೆ ನಾಶವಾಗುತ್ತಿವೆ. ಆ ಸ್ಥಳಗಳಲ್ಲಿ ವಸತಿ ಬಡಾವಣೆಗಳು ನಿರ್ಮಾಣವಾಗುತ್ತಿವೆ. ಬೆಂಗಳೂರಿನಲ್ಲಿ ಈಗ ಬಾರಿ ಮಳೆ ಬಂದು ಯಾವುದಾದರೂ ಜನವಸತಿ ಪ್ರದೇಶದಲ್ಲಿ ನೀರು ಮನೆಗಳಿಗೆ ನುಗ್ಗಿದೆಯೆಂದರೆ ಆ ಪ್ರದೇಶವು ಹಿಂದೊಮ್ಮೆ ಕೆರೆಯಾಗಿತ್ತೆಂದು ಖಚಿತವಾಗುತ್ತದೆ.

## ತೆರಿಗೆ ಪದ್ಧತಿ

ಒಂದು ಸುವ್ಯವಸ್ಥಿತ ರಾಜ್ಯದ ಅಸ್ತಿತ್ವಕ್ಕೆ ಆಡಳಿತ ವ್ಯವಸ್ಥೆ ಎಷ್ಟು ಮುಖ್ಯವೋ ಆರ್ಥಿಕ ವ್ಯವಸ್ಥೆಯು ಅಷ್ಟೇ ಮುಖ್ಯ. ರಾಜ್ಯವೊಂದರ ಪ್ರಮುಖ ಅಂಗ ಕೋಶವ್ಯವಸ್ಥೆ(ಅರ್ಥವ್ಯವಸ್ಥೆ). ಈ ಕೋಶಕ್ಕೆ ನಿಯಮಿತವಾಗಿ ಆದಾಯ ಬರುವಂತೆ ಮಾಡಿಕೊಂಡ ವ್ಯವಸ್ಥೆಯೇ 'ತೆರಿಗೆ ಸಂಗ್ರಹಣೆ' ಅಥವಾ 'ಕರಸಂಗ್ರಹಣೆ' ಇದರ ಉಲ್ಲೇಖ ನಮಗೆ ಶಾಸನಗಳಿಂದ ತಿಳಿದು ಬರುತ್ತದೆ.

ಪ್ರಾಚೀನ ಮತ್ತು ಮಧ್ಯಕಾಲೀನ ಸಂದರ್ಭದಲ್ಲಿ ವೈವಿಧ್ಯಮಯ ತೆರಿಗೆಗಳು ಅಸ್ತಿತ್ವದಲ್ಲಿದ್ದವು ಒಕ್ಕಲುತನದ ತೆರಿಗೆಗಳು, ಸುಂಕಗಳು, ವ್ಯಾಪಾರದ ತೆರಿಗೆಗಳು, ಸಾರಿಗೆ, ಸಾಗಾಣಿಕೆಯ ಮೇಲಿನ ಸುಂಕ, ವೃತ್ತಿ ತೆರಿಗೆ, ಧಾರ್ಮಿಕ ಶುಲ್ಕಗಳು ಇದ್ದವು. ಹೀಗೆ ಎಲ್ಲಾ ಕ್ಷೇತ್ರದಲ್ಲೂ ಸುಂಕವನ್ನು ವಿಧಿಸಿ ಜನರಿಂದ ಹಣವನ್ನು ಸಂಗ್ರಹಿಸಲಾಗುತ್ತಿತ್ತು. ಇಷ್ಟೇ ಅಲ್ಲದೆ ತಪ್ಪಿತಸ್ಥರಿಂದ ದಂಡಗಳು, ಶುಲ್ಕಗಳನ್ನು ವಿಧಿಸಲಾಗುತ್ತಿತ್ತು. ತೆರಿಗೆಯನ್ನು ಹಲವು ಹೆಸರುಗಳಿಂದ ಕರೆಯಲಾಗುತ್ತಿತ್ತು. ಸುಂಕ, ಕರ, ಕಟು, ಕಟ್ಟುಗೂಳು, ಕಾಣಿಕೆ, ಕಿರುಕುಳ, ಕಟ್ಟುಕೊಡುಗೆ, ಸರ್ವಮಾನ್ಯ ಮೊದಲಾದ ಹೆಸರುಗಳು ಶಾಸನಗಳಿಂದ ತಿಳಿಯುತ್ತವೆ. ಇಂತಹ ತೆರಿಗೆಗಳನ್ನು ವಸೂಲು ಮಾಡುವ ಕ್ರಮವಿತ್ತು. ಹಾಗೂ ಅಧಿಕಾರಿಗಳನ್ನೂ ನೇಮಿಸುತ್ತಿದ್ದರು. ಈ ಸುಂಕವನ್ನು ವಸೂಲಿ ಮಾಡಲಿಕ್ಕೆಂದೇ ಪ್ರತ್ಯೇಕ ಸ್ಥಳಗಳು(ಕಟ್ಟೆ) ಇದ್ದವು. ಬೆಂಗಳೂರಿನ ಶಾಸನಗಳಲ್ಲಿ ಹೆಜ್ಜುಂಕ ಅಧಿಕಾರಿ[90], ಸುಂಕದ ಮಣೆಗಾರರು[91] ಕಾಣಸಿಗುತ್ತಾರೆ. ಇವರು ಸುಂಕವಸೂಲಿ ಮಾಡಲು ಇದ್ದ ಅಧಿಕಾರಿಗಳಿವರು. ನಗರದಲ್ಲಿ ಅಸ್ತಿತ್ವದಲ್ಲಿರುವ ಸ್ಥಳನಾಮಗಳಾದ ಸುಂಕೇನಹಳ್ಳಿ ಇಂದಿನ ಬಸವನಗುಡಿ, ಸುಂಕದ ಕಟ್ಟೆಗಳು ಪ್ರಾಚೀನ ಬೆಂಗಳೂರಿನಲ್ಲಿ ತೆರಿಗೆ ಪದ್ಧತಿಯ ಅಸ್ತಿತ್ವಕ್ಕೆ ಸಾಕ್ಷಿಯಾಗಿ ನಿಲ್ಲುತ್ತವೆ. ಪ್ರಸ್ತುತ ಈ ಅಧ್ಯಾಯದಲ್ಲಿ ಪ್ರಾಚೀನ ಬೆಂಗಳೂರು ನಗರದ ಅರ್ಥವ್ಯವಸ್ಥೆಯಲ್ಲಿ ಕಂಡುಬರುವ ತೆರಿಗೆಗೆ ಸಂಬಂಧಿಸಿದ ವಿವರಗಳನ್ನು ಶಾಸನಗಳಲ್ಲಿ ದೊರೆಯುವ ತೆರಿಗೆ/ಸುಂಕ ಪದ್ಧತಿಯ ಬಗ್ಗೆ ವಿವೇಚಿಸಲಾಗಿದೆ. ಈ ಅಧ್ಯಾಯದಲ್ಲಿನ ತೆರಿಗೆಯ ಅರ್ಥವಿವರಣೆಗೆ ಶ್ರೀನಿವಾಸರಿತ್ತಿಯವರ ಪ್ರಾಚೀನ ಕರ್ನಾಟಕದ ಆಡಳಿತ ಪರಿಭಾಷಾ ಕೋಶವನ್ನು ಬಳಸಿಕೊಳ್ಳಲಾಗಿದೆ.

**ಹೊಗೆದೆರೆ:–** ಕ್ರಿ.ಶ.1226ರ ಕಾಲದ ಶಾಸನವೊಂದು ನಾಗಶೆಟ್ಟಿಹಳ್ಳಿಯಲ್ಲಿ ದೊರಕಿದೆ.[92] ಈ ಶಾಸನದಲ್ಲಿ 'ಹೊಗೆದೆರೆ'ಯ ಉಲ್ಲೇಖವಿದೆ. ಇದೊಂದು ವೃತ್ತಿ ತೆರಿಗೆ. ಬಹುಶಃ ಕಮ್ಮಾರನ ಕುಲುಮೆಯ ಮೇಲಿನ ಕರ ಅಥವಾ ಕಮ್ಮಾರಿಕೆಯ ಮೇಲೆ ವಿಧಿಸುತ್ತಿದ್ದ ತೆರಿಗೆಯಾಗಿದೆ.

**ಅಕ್ಕಸಾಲಿಗರ ತೆರಿಗೆ:–** ಚಿನ್ನ ಬೆಳ್ಳಿ ಮುಂತಾದ ಕೆಲಸ ಮಾಡುವವರ ಮೇಲೆ ವಿಧಿಸುತ್ತಿದ್ದ ತೆರಿಗೆ. ಕ್ರಿ.ಶ. 1301ರ ಹೊಯ್ಸಳರ ಕಾಲದ ಶಾಸನ ಗುಂಜೂರು ಗ್ರಾಮದ ಸೋಮೇಶ್ವರ ದೇವಸ್ಥಾನದ ತಳಪಾದಿ ಕಲ್ಲಿನಲ್ಲಿ ದೊರೆತಿದೆ.[93] ಹೊಯ್ಸಳರ ಕಾಲದ ಈ ಶಾಸನದಲ್ಲಿ ಅಕ್ಕಸಾಲಿಗರ ಮೇಲೆ ತೆರಿಗೆ ವಿಧಿಸುತ್ತಿದ್ದ ಉಲ್ಲೇಖವಿದೆ. ಇದೊಂದು ವೃತ್ತಿ ತೆರಿಗೆ. ಜನಸಾಮಾನ್ಯರು ಮಾಡುತ್ತಿದ್ದ ವೃತ್ತಿಯ ಮೇಲೆ ತೆರಿಗೆಯನ್ನು ವಿಧಿಸಲಾಗುತ್ತಿತ್ತು.

**ಮಗ್ಗ ದೆರೆ(ವೃತ್ತಿ ತೆರಿಗೆ):–** ನೇಯ್ಗೆಯ ಮಗ್ಗಗಳ ಮೇಲಿನ ಕರ. ಕ್ರಿ.ಶ.1301ರ ಗುಂಜೂರು ಗ್ರಾಮದ ಶಾಸನ[94] ಹಾಗೂ ಕ್ರಿ.ಶ.1336ರ ದೊಮ್ಮಲೂರಿನಲ್ಲಿ ದೊರೆತ ಹೊಯ್ಸಳರ ಕಾಲದ ಶಾಸನದಲ್ಲಿ

'ಮಗ್ಗದೆರೆ'ಯ ಉಲ್ಲೇಖವಿದೆ.[95] ಇದೊಂದು ವೃತ್ತಿತೆರಿಗೆ. ಕ್ರಿ.ಶ.1408ರ ವಿಜಯನಗರ ಶಾಸನದ ಪ್ರಕಾರ ಕನ್ನೆಲ್ಲಿಯ ತಿರುಮಲೆನಾಥ ದೇವರಿಗಾಗಿ ಕನ್ನೆಲ್ಲಿ ಗ್ರಾಮದ ಎರಡು ಮಗ್ಗವನ್ನು ಸುಂಕಮಾನ್ಯ ಮಾಡಿರುವ ವಿಷಯದ ಪ್ರಸ್ತಾಪವಿದೆ.[96] ವಿಶೇಷ ಸಂದರ್ಭಗಳಲ್ಲಿ, ದೇವಾಲಯಕ್ಕೆ ನೀಡುವ ಸಂದರ್ಭಗಳಲ್ಲಿ ಸುಂಕವನ್ನು ಮಾನ್ಯ ಮಾಡುವ ಪದ್ಧತಿ ಇತ್ತು.

**ಹಾದರ:–** ವೇಶ್ಯೆಯರಿಗೆ ಹಾಕುತ್ತಿದ್ದ ತೆರಿಗೆ. ಕ್ರಿ.ಶ.1332ರ ಹೊಯ್ಸಳರ ಕಾಲದ ಶಾಸನದಲ್ಲಿ ಈ ತೆರಿಗೆಯ ಉಲ್ಲೇಖವಿದೆ.[97] ವೇಶ್ಯಾಪದ್ಧತಿ ಹೊಯ್ಸಳರ ಕಾಲಕ್ಕಾಗಲೇ ಅಸ್ತಿತ್ವದಲ್ಲಿತ್ತೆಂಬುದು ಇದರಿಂದ ತಿಳಿದುಬರುತ್ತದೆ.

**ಪಾಂಚಾಳವಳಕೆ ಕಟು:–**ಕ್ರಿ.ಶ.1332ರ ಹೊಯ್ಸಳರ ಕಾಲದ ಶಾಸನದಲ್ಲಿ ಈ ತೆರಿಗೆಯ ಉಲ್ಲೇಖವಿದೆ.[98] ವೀರಪಾಂಚಾಳರನ್ನೇ ಈ ಶಾಸನದಲ್ಲಿ ಉಲ್ಲೆಖಿಸಿರಬೇಕು. ಐದು ಕರಕುಶಲ ವೃತ್ತಿಗಳನ್ನು ಅನುಸರಿಸುವ ವೃತ್ತಿಗಾರರನ್ನು ವೀರಪಾಂಚಾಳರೆನ್ನಲಾಗುತ್ತದೆ. ಈ ವೃತ್ತಿಗಳೆಂದರೆ, ಕಂಚುಗಾರ, ಕುಂಬಾರ, ಕಮ್ಮಾರ, ಬಡಗಿ ಮತ್ತು ಅಕ್ಕಸಾಲಿ, ಈ ಐದು ವೃತ್ತಿಗಳು ಅಂದಿನ ಸಮಾಜದ ಅವಿಭಾಜ್ಯ ಅಂಗವಾದ್ದರಿಂದ ಇವರನ್ನು ವೀರಪಂಚಾಳರು ಎಂದು ಕರೆಯಲಾಗುತ್ತಿತ್ತು. ಇವರ ಮೇಲೆ ತೆರಿಗೆಯನ್ನು ವಿಧಿಸುತ್ತಿದ್ದರು.

**ಆನೆ ಹದಿಕೆ:–** ಆನೆಯ ಮೇಲೆ ಸರಕುಗಳನ್ನು(ಮುತ್ತು, ರತ್ನ ಇತ್ಯಾದಿ) ಸಾಗಿಸುವುದಕ್ಕಾಗಿ ಕೊಡುವ ಸುಂಕ. ಹಾಗೂ ಆನೆಯ ದಂಡಿನ ನಿರ್ವಹಣೆಗಾಗಿ ಕೊಡಬೇಕಾದ ಕರ. ಕ್ರಿ.ಶ.1336ರ ಹೊಯ್ಸಳ ವೀರಬಲ್ಲಾಳ ಕಾಲದ ಶಾಸನದಲ್ಲಿ ಈ ತೆರಿಗೆಯ ಉಲ್ಲೇಖವಿದೆ.[99]

**ಕಿಱುಕುಳ:–** ಚಿಲ್ಲರೆ ವ್ಯಾಪಾರದ ತೆರಿಗೆ. ಕ್ರಿ.ಶ.1336ರ ಹೊಯ್ಸಳ ವೀರಬಲ್ಲಾಳನ ಕಾಲದ ಶಾಸನದಲ್ಲಿ ಈ ತೆರಿಗೆಯ ಉಲ್ಲೇಖವಿದೆ.[100] ಚಿಲ್ಲರೆ ವ್ಯಾಪಾರದ ಮೇಲೆ ಹಾಕುವ ಸುಂಕಕ್ಕೆ ಕಿರುಕುಳ ಎಂದರ್ಥ.

**ಅಡಕೆಲೆ ಸುಂಕ: –** ಅಡಕೆ ಮತ್ತು ವೀಳೆಯದೆಲೆಗೆ ಒಟ್ಟಾಗಿ ವಿಧಿಸುತ್ತಿದ್ದ ಸುಂಕ. ಅಷ್ಟೇ ಅಲ್ಲದೆ ಅಡಕೆ ಮತ್ತು ಎಲೆ ಇವುಗಳ ಮೇಲೆ ಪ್ರತ್ಯೇಕವಾಗಿಯೂ ತೆರಿಗೆ ವಿಧಿಸುತ್ತಿದ್ದರು. ಕ್ರಿ.ಶ.1336ರ ಹೊಯ್ಸಳರ ಕಾಲದ ಶಾಸನದಲ್ಲಿ ಈ ತೆರಿಗೆಯ ಉಲ್ಲೇಖವಿದೆ.[101]

**ಕುದುರೆಯ ಸುಂಕ:–** ರಾಜ್ಯದ ಆಡಳಿತ ವ್ಯವಸ್ಥೆಯಲ್ಲಿ ಅಶ್ವದಳವು ಮುಖ್ಯಪಾತ್ರ ವಹಿಸುತ್ತಿತ್ತು. ಹಾಗೂ ಶ್ರೀಮಂತ ವ್ಯಕ್ತಿಗಳು ಕುದುರೆಗಳನ್ನು ತಮ್ಮ ಕೆಲಸಗಳಿಗಾಗಿ ಕೊಂಡುಕೊಳ್ಳುತ್ತಿದ್ದರು. ಹಾಗಾಗಿ ಕುದುರೆಗಳ ಮಾರಾಟದ ಮೇಲೆ ಸುಂಕವನ್ನು ಹಾಕುತ್ತಿದ್ದರು. ಕ್ರಿ.ಶ.1301ರ ಹೊಯ್ಸಳರ ಕಾಲದ ಶಾಸನದಲ್ಲಿ ಈ ತೆರಿಗೆಯ ಉಲ್ಲೇಖವಿದೆ.[102]

**ಜಕಾತಿ ಸುಂಕ:–** ಅಂಗಡಿ ಮುಗ್ಗಟ್ಟುಗಳಿಗೆ ಹಾಕುತ್ತಿದ್ದ ಸುಂಕಕ್ಕೆ ಜಕಾತಿ ಸುಂಕ ಎಂದು ಹೇಳಲಾಗುತ್ತಿತ್ತು. ವ್ಯಾಪಾರಸ್ಥರು(ವರ್ತಕರು) ತಾವು ಹೊಂದಿದ ಅಂಗಡಿಗಳ ವ್ಯಾಪಾರದ ಆಧಾರದ ಮೇಲೆ ರಾಜ್ಯಕ್ಕೆ ಹಣವನ್ನು ಪಾವತಿಸಬೇಕಾಗಿತ್ತು. ಕ್ರಿ.ಶ.1301ರ ಹೊಯ್ಸಳರ ಕಾಲದ ಶಾಸನದಲ್ಲಿ ಈ ತೆರಿಗೆಯ ಉಲ್ಲೇಖವಿದೆ.[103] ಆದರೆ ತೆರಿಗೆಯ ಪ್ರಮಾಣದ ಉಲ್ಲೇಖವಿಲ್ಲ.

**ಗೇಣುವೊಡೆದ ತಲೆ (ಕಂಮಗಿರು):–** ಒಂದು ವಿಧವಾದ ಕರ. ಕ್ರಿ.ಶ.1332ರ ಹೂಡಿ ಗ್ರಾಮದ ಶಾಸನದಲ್ಲಿ[104] ಹೊಯ್ಸಳರ ದೊರೆ ವೀರಬಲ್ಲಾಳನ ಆಳ್ವಿಕೆಯ ಕಾಲದಲ್ಲಿ ಈ ತೆರಿಗೆ ಅಸ್ತಿತ್ವದಲ್ಲಿತ್ತು. ಕ್ರಿ.ಶ.1347ರ ಹೊಲಿಯನ ಕೆರೆಯ ಶಾಸನದಲ್ಲಿ 'ಕಂಮಗಿರುಗೇಣುವೊಡದ ತಲೆ' ಎಂಬ ಉಲ್ಲೇಖವಿದೆ.[105] ಆದರೆ ಈ ತೆರಿಗೆಯನ್ನು ಯಾವ ಸಂದರ್ಭದಲ್ಲಿ ವಿಧಿಸುತ್ತಿದ್ದರು ಎಂಬುದು ಸ್ಪಷ್ಟವಿಲ್ಲ.

**ಮನೆದೆರೆ (ಆಸ್ತಿ ತೆರಿಗೆ):–** ಮನೆಯ ವಿಸ್ತಾರದ ಮೇಲೆ ಮನೆ ಕಂದಾಯ ನಿರ್ಧಾರವಾಗುತ್ತಿತ್ತು. ಮಹಡಿ ಮನೆಗಳಾಗಿದ್ದರೆ ಒಂದು ರೀತಿಯ ತೆರಿಗೆ ಅಥವಾ ದೊಡ್ಡ ಹಜಾರವನ್ನು ಹೊಂದಿದ ಮನೆಗಳಾಗಿದ್ದರೆ ಒಂದು ರೀತಿಯ ತೆರಿಗೆ ನೀಡಬೇಕಾಗುತ್ತಿತ್ತು. ಕ್ರಿ.ಶ.1336ರ ಹೊಯ್ಸಳರ ಕಾಲದ ಶಾಸನದಲ್ಲಿ ಈ ತೆರಿಗೆಯ ಉಲ್ಲೆಖವಿದೆ.[106]

**ಕಾಣಿಕೆ:–** ಸ್ವಯಂ ಪ್ರೇರಣೆಯಿಂದ ಕೊಡುತ್ತಿದ್ದ ಹಣ. ಕಂದಾಯವೆಂದರೆ ರಾಜ್ಯದ ಬೊಕ್ಕಸಕ್ಕೆ ಕೊಡಬೇಕಾಗಿದ್ದ ಸುಂಕ ಅಥವಾ ತೆರಿಗೆ. 'ಕಾಣಿಕೆ' ಒಂದು ರೀತಿಯ ತೆರಿಗೆ ಆದರೆ ಜನರು ಸ್ವಯಂ ಪ್ರೇರಣೆಯಿಂದ ರಾಜನ ಬೊಕ್ಕಸಕ್ಕೆ ನೀಡುತ್ತಿದ್ದ ಹಣವಾಗಿತ್ತು. ಕ್ರಿ.ಶ.1336ರ ಹೊಯ್ಸಳರ ಕಾಲದ ಶಾಸನದಲ್ಲಿ 'ಕಾಣಿಕೆ–ಕಂದಾಯ' ಎಂಬ ಪದಗಳ ಪ್ರಸ್ತಾಪವಿದೆ.[107] ಈ ಶಾಸನದ ಪ್ರಕಾರ ಮೈಲೆಯ ನಾಯಕ ಕಿತ್ತಲೆನೆಲೆಯ ಹೊನ್ನಗೌಡನ ಮಕ್ಕಳಿಗೆ ಹಳ್ಳಿಯೊಂದನ್ನು ದಾನ ಕೊಟ್ಟಾಗ ಕಾಣಿಕೆ ಕಂದಾಯವನ್ನು ಸರ್ವಮಾನ್ಯವಾಗಿ ದಾನ ಕೊಟ್ಟಿದ್ದಾನೆ. ಯಾವ ಹಳ್ಳಿ ಎಂಬ ಉಲ್ಲೇಖವಿಲ್ಲ. ಹಳ್ಳಿಯೊಂದನ್ನು ದಾನ ನೀಡಿದಾಗ ತೆರಿಗೆಯನ್ನು ಮಾನ್ಯಮಾಡಲಾಗುತ್ತಿತ್ತು.

ಸುಂಕ ಕೊಮಾರ ಕಾಣಿಕೆ ಎಂಬ ತೆರಿಗೆಯೊಂದು ಪ್ರಾಚೀನ ಸಂದರ್ಭದಲ್ಲಿ ಅಸ್ತಿತ್ವದಲ್ಲಿತ್ತು. ಈ ತೆರಿಗೆಯ ವಿಶೇಷತೆಯೆಂದರೆ, ರಾಜನ ಪಟ್ಟಾಭಿಷೇಕ, ವಿವಾಹ, ಪುತ್ರೋತ್ಸವ ಮುಂತಾದ ಸಂದರ್ಭಗಳಲ್ಲಿ ಜನರು ಹೆಚ್ಚುವರಿಯಾಗಿ ಪಾವತಿಸಬೇಕಾಗಿದ್ದ ಕೊಡುಗೆ. ಹೊಯ್ಸಳ ವೀರಬಲ್ಲಾಳನು ಆಳ್ವಿಕೆ ಮಾಡುತ್ತಿದ್ದ ಸಂದರ್ಭದ ಕ್ರಿ.ಶ.1336ರ ಶಾಸನವು ದೊಮ್ಮಲೂರಿನ ಸೋಮೇಶ್ವರ ದೇವಸ್ಥಾನದ

ತಳಪಾದಿ ಕಲ್ಲಿನ ಮೇಲೆ ದೊರೆತಿದೆ. ಈ ಶಾಸನದಲ್ಲಿ 'ಸುಂಕ ಕೊಮರ ಕಾಣಿಕೆ'ಯ ಉಲ್ಲೇಖವಿದೆ.[108] ಆದರೆ ಯಾವ ಅರಸನ ಮಗ, ಯಾರು ಕಾಣಿಕೆ ನೀಡಿದರು ಎಂಬುದರ ಉಲ್ಲೆಖವಿಲ್ಲ.

**ಹದಿಕೆ ಕರ:–** ಜನಸಾಮಾನ್ಯರು ಸಾಮಾನ್ಯವಾಗಿ ಹುಲ್ಲು ಹೊದಿಕೆಯ ಮನೆಗಳಲ್ಲಿ ವಾಸಿಸುತ್ತಿದ್ದರು. ಇಂತಹ ಮನೆಗಳ ಮೇಲೆ ವಿಧಿಸುವ ಒಂದು ರೀತಿಯ ತೆರಿಗೆಯೇ 'ಹದಿಕೆ'. ಕ್ರಿ.ಶ.1336ರ ಹೊಯ್ಸಳರ ಕಾಲದ ಶಾಸನದಲ್ಲಿ ಈ ತೆರಿಗೆಯ ಉಲ್ಲೇಖವಿದೆ.[109]

**ಕಟ್ಟುಗೂಳು:–** ಕಾಣಿಕೆ ರೂಪದಲ್ಲಿ ಕೊಡುತ್ತಿದ್ದ ತೆರಿಗೆ. ಕ್ರಿ.ಶ.1336ರ ಸೋಮೇಶ್ವರ ದೇವಾಲಯದಲ್ಲಿ ದೊರೆತ ಹೊಯ್ಸಳ ವೀರಬಲ್ಲಾಳನ ಕಾಲದ ಶಾಸನದಲ್ಲಿ ಈ ಕರದ ಉಲ್ಲೆಖವಿದೆ.[110]

**ದಂಡ ಉಂಡುಗೆ/ತಪ್ಪು ತವಡಿ:–** ತಪ್ಪಿಗಾಗಿ ಕೊಡುವ ದಂಡ. ಕ್ರಿ.ಶ.1332 ಹೊಯ್ಸಳರ ಕಾಲದ ಶಾಸನ ಹೂಡಿಗ್ರಾಮ[111] ಮತ್ತು ಕ್ರಿ.ಶ.1336ರ ಹೊಯಿಸಳ ವೀರಬಲ್ಲಾಳನ ಬ್ಯಾಡರಹಳ್ಳಿಯಲ್ಲಿ[112] ದೊರೆತ ಶಾಸನದಲ್ಲಿ ಈ ತೆರಿಗೆಯ ಉಲ್ಲೆಖವಿದೆ. ತಪ್ಪುಮಾಡಿದ ವ್ಯಕ್ತಿಗೆ ಜುಲ್ಮಾನೆ ವಿಧಿಸಲಾಗುತ್ತಿತ್ತು. ಈ ತೆರಿಗೆ ಪ್ರಾಚೀನ ಕಾಲದಿಂದಲೂ ಅಸ್ತಿತ್ವದಲ್ಲಿತ್ತು.

**ನೀರುನೇಣು:–** ಕ್ರಿ.ಶ.1336ರ ಹೊಯ್ಸಳರ ಬ್ಯಾಡರಹಳ್ಳಿ ಶಾಸನದಲ್ಲಿ ಈ ತೆರಿಗೆಯ ಉಲ್ಲೇಖವಿದೆ.[113] ಕೃಷಿಭೂಮಿಯ ನೀರಾವರಿ ಮೇಲೆ ವಿಧಿಸಲಾಗುತ್ತಿದ್ದ ತೆರಿಗೆ.

**ಮದುವೆ ಸುಂಕ:–** ಕ್ರಿ.ಶ.1412ರ ವಿಜಯನಗರ ಕಾಲದ ಶಾಸನದಲ್ಲಿ ಮದುವೆ ಸುಂಕ ಎಂಬ ತೆರಿಗೆಯ ಉಲ್ಲೇಖವಿದೆ. ಹಾಗೂ ಕ್ರಿ.ಶ.1652ರ ಹುಳಿಮಾವು ಶಾಸನದಲ್ಲಿ 'ಮದುವೆಸುಂಕದ' ಉಲ್ಲೇಖವಿದೆ.[114] ಯಲ್ಲಪ್ಪ ನಾಯಕನು ಸಾರಕ್ಕಿಯ ಸೀಮೆಗೆ ಮದುವೆಯ ಸುಂಕವನ್ನು ಬಿಟ್ಟುಕೊಟ್ಟಿರುವ ವಿಷಯ ತಿಳಿಯುತ್ತದೆ. ಈ ಸುಂಕ ಮಾನ್ಯ 'ನಾನಾಜಾತಿಗಳಿಗೆ ಮದುವೆ ಸುಂಕವನ್ನು ಬಿಟ್ಟುಕೊಟ್ಟಿರುವುದಾಗಿ ತಿಳಿಸುವ ಶಾಸನವಿದು.' ಸಾರಕ್ಕಿ ಜನರನ್ನು ಮದುವೆ ಸುಂಕದಿಂದ ಮುಕ್ತಗೊಳಿಸಲಾಗಿತ್ತು. ಅನಾದಿಕಾಲದಿಂದಲೂ ನಡೆದು ಕೊಂಡು ಬಂದಿರುವ ವಿವಾಹಪದ್ಧತಿ ಜನಸಾಮಾನ್ಯರ ಸಂಪ್ರದಾಯಗಳಲ್ಲಿ ಒಂದು. ಈ ವಿಶೇಷ ಸಂದರ್ಭಕ್ಕೆ ಜನರಿಂದ ವಿವಾಹ ತೆರಿಗೆಯನ್ನು ವಸೂಲು ಮಾಡಲಾಗುತ್ತಿತ್ತು.

**ಕಾಡಾರಂಭ:–** ಹೊಲದಲ್ಲಿ ಮಾಡುವ ವ್ಯವಸಾಯ ಹಾಗೂ ನೀರಾವರಿ ಸೌಕರ್ಯವಿಲ್ಲದ ಒಕ್ಕಲುತನದ ಭೂಮಿಯ ಮೇಲಿನ ಕರ. ಕ್ರಿ.ಶ.1544ರ ವಿಜಯನಗರ ಅರಸ ಸದಾಶಿವರಾಯರ ಕಾಲದ ಶಾಸನದಲ್ಲಿ 'ಕಾಡಾರಂಭ'ದ ಉಲ್ಲೇಖವಿದೆ.[115]

**ನೀರಾರಂಭ:–** ನೀರಾವರಿ ತೆರಿಗೆ. ಗದ್ದೆಯಲ್ಲಿ ಮಾಡುವ ವ್ಯವಸಾಯ ಹಾಗೂ ನೀರಾವರಿ ಭೂಮಿಯ ಮೇಲಿನ ಕರ. ಕ್ರಿ.ಶ.1544ರ ವಿಜಯನಗರ ಅರಸ ಸದಾಶಿವರಾಯನ ಕಾಲದ ಶಾಸನದಲ್ಲಿ 'ನಿರಾರಂಭ'ದ ಉಲ್ಲೇಖವಿದೆ. ಬೆಂಗಳೂರು ನಗರದಲ್ಲಿ ದೊರೆಯುವ ಬಹುತೇಕ ಶಾಸನದಲ್ಲಿ ಕಾಡಾರಂಭ ಮತ್ತು ನೀರಾರಂಭದ ಉಲ್ಲೇಖವಿದೆ. ಈ ತೆರಿಗೆಗಳ ಪ್ರದೇಶವೊಂದನ್ನು ದಾನ ನೀಡುವ ಸಂದರ್ಭದಲ್ಲಿ ಈ ಕರವನ್ನು ಮಾನ್ಯ ಮಾಡಲಾಗಿದೆ.

**ಕುರಿತೆರಿಗೆ:–** ಕುರಿಸಾಕಾಣಿಕೆಯ ಮೇಲೆ ಹಾಕುತ್ತಿದ್ದ ತೆರಿಗೆ. ಕ್ರಿ.ಶ.1614ರ ಸುಗಟೂರು ಅರಸರಿಗೆ ಸೇರುವ ಶಾಸನವೊಂದು ಆನೇಕಲ್ಲಿನಲ್ಲಿ ದೊರೆತಿದೆ.[116] ಈ ಶಾಸನ ಕುರಿತೆರಿಗೆಯನ್ನು ಮಾನ್ಯಮಾಡಿದ್ದರ ಬಗ್ಗೆ ಉಲ್ಲೇಖಿಸುತ್ತದೆ. ವಿಶೇಷ ಸಂದರ್ಭಗಳಲ್ಲಿ ತೆರಿಗೆಗಳನ್ನು ಮಾನ್ಯ ಮಾಡುವ ಪದ್ಧತಿ ಜಾರಿಯಲ್ಲಿತ್ತು.

ಹೀಗೆ ಬೆಂಗಳೂರಿನಲ್ಲಿ ದೊರೆತ ಎಲ್ಲಾ ಶಾಸನಗಳು ಪ್ರಾಚೀನ ಕಾಲದಲ್ಲಿ ಇದ್ದ ತೆರಿಗೆ ವಿಧಗಳನ್ನು ಪರಿಚಯಿಸುತ್ತದೆಯೇ ಹೊರತು ತೆರಿಗೆಯ ಪ್ರಮಾಣ ಎಷ್ಟೆಂಬುದನ್ನು ಉಲ್ಲೇಖಿಸಿಲ್ಲ. ಆದರೆ ಹೋಯ್ಸಳರ ಕಾಲದ ತಾಮ್ರ ಶಾಸನವೊಂದರಲ್ಲಿ ತೆರಿಗೆಯ ಪ್ರಮಾಣ ಎಷ್ಟೆಂಬುದನ್ನು ಉಲ್ಲೇಖಿಸಲಾಗಿದೆ. ಸುಂಕ–ಗದ್ಯಾಣ5, ಪಣ2, ಅಡಕೆಲಸುಂಕ–ಗದ್ಯಾಣ5, ವೀರಸೇಸೆ–ಗದ್ಯಾಣ6, ಪಣ2, ಆನೆಯಸೇಸೆ–ಗದ್ಯಾಣ 13, ಕುದುರೆಯ ಸೇಸೆ–ಗದ್ಯಾಣ21, ಕುಮಾರ ಮಾಣಿಕೆ–ಪಣ6 ಎಂದಿದೆ.[117] ಈ ಶಾಸನವು ಹೊಯ್ಸಳರ  ಕಾಲದ ಆರ್ಥಿಕ ಸ್ಥಿತಿ–ಗತಿ ಹೇಗಿತ್ತು ಎಂಬುದನ್ನು ತಿಳಿಯುವುದಕ್ಕೆ ಸಹಾಯಕವಾಗಿದೆ. ಹೀಗೆ ತೆರಿಗೆಗಳು ರಾಜ್ಯದ ವಿಸ್ತರಣೆಗಾಗಿ ಬೇಕಾದ ಸೌಲಭ್ಯಗಳನ್ನು ಒದಗಿಸಲು ಸಹಾಯಕವಾಗುತ್ತಿದ್ದವು. ಹೀಗೆ ಬೆಂಗಳೂರು ನಗರ ಜಿಲ್ಲೆಯ ಶಾಸನಗಳಲ್ಲಿ ಉಲ್ಲೇಖವಾಗಿರುವ ವೃತ್ತಿ ತೆರಿಗೆಗಳು, ಸಾಮಾಜಿಕ ತೆರಿಗೆಗಳು, ದಂಡ/ಶುಲ್ಕಗಳು ಮೊದಲಾದ ತೆರಿಗೆಗಳನ್ನು ಈ ಅಧ್ಯಾಯದಲ್ಲಿ ಪರಿಚಯಿಸಲಾಗಿದೆ.

## ಕೈಗಾರಿಕೆಗಳು/ವೃತ್ತಿಗಳು

ಭಾರತದಲ್ಲಿ ವೃತ್ತಿ ಆಧಾರದ ಮೇಲೆ ಜಾತಿ, ವರ್ಗವ್ಯವಸ್ಥೆ ನಿರ್ಧಾರವಾಗಿರುವಂತದ್ದು ಎಂಬ ವಿಷಯ ಈಗಾಗಲೇ ಚರ್ಚಿತ ವಿಷಯ. ಇಂತಹ ವೃತ್ತಿಗಳಲ್ಲಿ ಪ್ರಮುಖವಾದಂತಹದ್ದು ನೇಕಾರಿಕೆ, ಗಾಣತಯಾರಿಕೆ, ಬಡಗಿಗಳು, ಕಮ್ಮಾರಿಕೆ, ಆಚಾರಿ(ಅಕ್ಕಸಾಲಿಗಳು) ಮೊದಲಾದವರನ್ನು ಹೆಸರಿಸಬಹುದು. ಈ ವೃತ್ತಿಗಳೇ ಅಂದಿನ ಸಮಾಜದ ಮುಖ್ಯ ಕಸುಬು ಹಾಗೂ

ಕೈಗಾರಿಕೋದ್ಯಮಗಳಾಗಿದ್ದವು. ಬೆಂಗಳೂರಿನ ಶಾಸನಗಳನ್ನು ಅವಲೋಕಿಸಿದಾಗ ಈ ವೃತ್ತಿ, ಕಸುಬುಗಳ ಬಗ್ಗೆ ಉಲ್ಲೇಖ ದೊರೆಯುತ್ತದೆ.

**ನೇಕಾರರು:–** ಪ್ರಾಚೀನ ಕಾಲದಲ್ಲಿದ್ದ ಕೈಗಾರಿಕೆಗಳಲ್ಲಿ ಜವಳಿ ಉದ್ಯಮವೂ ಒಂದು. ದಾರವನ್ನು ನೂಲುವುದು ಬಟ್ಟೆತಯಾರಿಸುವುದು ನೇಕಾರರ ಕೆಲಸವಾಗಿರುತ್ತಿತ್ತು. ಗುಂಜೂರು,[118] ಕನ್ನೆಲ್ಲಿಯಲ್ಲಿ[119] ದೊರೆತ ಶಾಸನಗಳು ಮಗ್ಗದೆರೆಯ ಬಗ್ಗೆ ತಿಳಿಸುತ್ತವೆ. ನೇಕಾರರ ಮಗ್ಗಗಳ ಮೇಲೆ ವಿಧಿಸುತ್ತಿದ್ದ ತೆರಿಗೆಯೆ ಮಗ್ಗದೆರೆ. ನೆಯ್ಗೆಯು ಬಹಳ ಪ್ರಾಚೀನ ಮತ್ತು ಪ್ರಮುಖವೂ ಆದ ಕೈಗಾರಿಕೆಯಾಗಿತ್ತು. ಬುಕನಾನ್ ತನ್ನ ಕೃತಿಯಲ್ಲಿ "ಬೆಂಗಳೂರಿನ ನೇಕಾರರು ಪ್ರತಿಭಾವಂತರು. ಸೊಗಸಾದ ಬಟ್ಟೆ ತಯಾರಿಸುತ್ತಾರೆ. ಬೇಡಿಕೆಯನ್ನು ಗಮನಿಸಿ ಸರಕನ್ನು ಒದಗಿಸುತ್ತಾರೆ. ನೇಕಾರವೃತ್ತಿಯನ್ನು ದೇವಾಂಗ ಜನರು, ತೊಗಟವೀರ ಜನಾಂಗದವರು ಅನುಸರಿಸುತ್ತಿದ್ದರು. ದೇವಾಂಗ ಜನಾಂಗದವರು ಹತ್ತಿ ಬಟ್ಟೆಗೆ ಕೆಂಪು ಬಣ್ಣ ಹಾಕುತ್ತಿದ್ದರು ಹಾಗೂ ಕಡು ನೀಲಿ ಬಣ್ಣ ತಯಾರಿಸುತ್ತಿದ್ದರು"[120] ಎನ್ನುತ್ತಾರೆ. ಎಂದರೆ ಇವರಿಗೆ ಬಣ್ಣ ತಯಾರಿಕೆಯ ಬಗ್ಗೆಯೂ ಅರಿವಿತ್ತು ಎಂಬುದು ಸ್ಪಷ್ಟ. ತೊಗಟವೀರ ಜನಾಂಗದವರು ಒರಟು ಹಾಗೂ ದಪ್ಪ ಬಿಳಿ ಹತ್ತಿ ಬಟ್ಟೆಗಳನ್ನು ತಯಾರಿಸುತ್ತಾರೆ. ಕೆಂಪು ಅಂಚು, ಇವುಗಳನ್ನು ನೇಯುವವರ ಹೆಸರುಗಳಿಂದಲೇ ಇವರನ್ನು ಗುರುತಿಸುವ ಪದ್ಧತಿ ಇತ್ತು ಎಂದು ತಿಳಿಸುತ್ತಾನೆ.

**ವೀರ ಪಾಂಚಾಳರ ಉದ್ಯಮಗಳು:–** ಲೋಹಕರ್ಮಿಗಳು(ಕಂಚುಗಾರರು, ಅಕ್ಕಸಾಲಿಗರು), ಕಮ್ಮಾರರು, ಬಡಗಿಗಳು, ಕಲ್ಲುಕುಟಿಗರು, ಕುಂಬಾರರು ಇವರನ್ನು ವೀರ ಪಾಂಚಾಳರು ಎಂದು ಕರೆಯಲಾಗುತ್ತಿತ್ತು. ಕ್ರಿ.ಶ.1306ರ ಶಾಸನದಲ್ಲಿ ವಿವಿಧ ವೃತ್ತಿಗಳಾದ ಬಡಗಿ, ಕಮ್ಮಾರ, ಅಕ್ಕಸಾಲಿಗ ಮೊದಲಾದವರು ನಾಲ್ಕು ನಾಡಿನ ವೀರಪಾಂಚಾಲರು ಎಂದು ಉಲ್ಲೇಖಿಸಿದೆ.[121] ಕ್ರಿ.ಶ.1336ರ ಶಾಸನದಲ್ಲಿ[122] 'ಪಾಂಚಾಳರ ಕಟು' ಎಂಬ ತೆರಿಗೆಯ ಉಲ್ಲೇಖವಿದೆ. ಈ ವೃತ್ತಿಯ ಮೇಲೆ ವಿಧಿಸಲಾಗುತ್ತಿದ್ದ ತೆರಿಗೆ.

**ಅಕ್ಕಸಾಲಿಗರು:–** ಬೆಳ್ಳಿ, ಬಂಗಾರ ತಯಾರಿಕರಾಗಿರುತ್ತಿದ್ದರು. ದೇವರಿಗೆ ಬೇಕಾದ ವಿಶಿಷ್ಟ ಆಭರಣಗಳನ್ನು ತಯಾರಿಸುತ್ತಿದ್ದರು. ಇವರನ್ನು ಆಚಾರಿಗಳು ಎಂದೂ ಕರೆಯಲಾಗುತ್ತಿತ್ತು. ಕ್ರಿ.ಶ.750ರ ಶಾಸನದಲ್ಲಿ 'ಪೊನಾಚಾರಿ'ಯೆಂಬುವನು ಕೋಜೋತಗೌಡರ ಮಗ ವೆಳಚ್ಚಿ–ಗೌಡನಿಗೆ ಒಂದು 'ಪಟ್ಟದಳ'ವನ್ನು ಮಾಡಿಕೊಡುತ್ತಾನೆ.[123] 'ಪಟ್ಟದಳ'ವೆಂದರೆ ಯಾವುದೋ ಒಂದು ಚಿನ್ನದ ಒಡವೆಗಳನ್ನು ತಯಾರು ಮಾಡುವವರ ಒಡೆವೆಯನ್ನು ಮಾಡಿಕೊಟ್ಟಿರಬಹುದು. ಕ್ರಿ.ಶ.966ರಲ್ಲಿ ಮಾಗಡಿ ತಾಲೂಕಿನಲ್ಲಿ ಗಾವುಂಡನೊಬ್ಬನ ಮಗ ವೈಕುಂಠವಾಸಿಯಾದ್ದರಿಂದ ತನ್ನ ಮಗನ ಹೆಸರಿನಲ್ಲಿ ದಡಿಗೇಶ್ವರ ಎಂಬ ದೇವಾಲಯವನ್ನು ಕಟ್ಟಿಸುತ್ತಾನೆ. ಈ ಶಾಸನದಲ್ಲಿ ದೇವಾಲಯವನ್ನು 'ಗಂಗಾಚಾರಿ'

ಎಂಬುವನು ಮಾಡಿದ ಎಂಬ ಉಲ್ಲೇಖವಿದೆ.[124] ಆಚಾರಿಗಳು ದೇವರ ವಿಗ್ರಹಗಳು, ಆಭರಣಗಳನ್ನಷ್ಟೇ ಅಲ್ಲದೆ ದೇವಾಲಯವನ್ನು ನಿರ್ಮಿಸುವ ಉಸ್ತುವಾರಿ ವಹಿಸುತ್ತಿದ್ದರು.

ಇನ್ನೂ ಕೆಲವು ಶಾಸನಗಳಲ್ಲಿ ಆಚಾರಿಗಳ ಹೆಸರುಗಳು ಉಲ್ಲೇಖವಾಗಿದೆ. ಕ್ರಿ.ಶ.750ರ ಶಾಸನದಲ್ಲಿ 'ಕೇವಳಿ ಕಾಮಸ ಆಚಾರಿ',[125] ಮಾಣಿಕಾಚಾರಿ,[126] ಶ್ರೀ ಆ...ವಮ್ಮಚಾರಿ[127] ಈ ಆಚಾರಿಗಳು ಮತ್ತು ಓಜರು ವೀರಗಲ್ಲುಗಳೂ, ದೇವಾಲಯ ನಿರ್ಮಾಣ, ದೇವಾಲಯಕ್ಕೆ ಅಗತ್ಯವಾದ ವಸ್ತುಗಳ ನಿರ್ಮಾಣ ಕಾರ್ಯಗಳಲ್ಲಿ ತೊಡಗಿದ್ದರು ಎಂಬುದು ಶಾಸನಗಳಿಂದ ತಿಳಿಯುತ್ತದೆ.

**ಕಮ್ಮಾರರು:–** ಕುಲಮೆ ಮೂಲಕ ಕಬ್ಬಿಣದ ವಸ್ತುಗಳನ್ನು ತಯಾರಿಸುತ್ತಿದ್ದರು ಗೃಹೋಪಯೋಗಿ ವಸ್ತುಗಳು, ಕೃಷಿ, ಸಂಬಂಧಿತ ಹಾಗೂ ಯುದ್ಧಕ್ಕೆ ಬೇಕಾದ ಉಪಕರಣವನ್ನು ತಯಾರಿಸುತ್ತಿದ್ದರು. ಕ್ರಿ.ಶ.1226ರ ನಾಗಸೆಟ್ಟಿಹಳ್ಳಿಯಲ್ಲಿ ದೊರೆತ ಶಾಸನದಲ್ಲಿ 'ಹೊಗೆದೆರೆ' ಎಂಬ ತೆರಿಗೆಯ ಉಲ್ಲೇಖವಿದೆ.[128] ಗ್ರಾಮೀಣ ಪ್ರದೇಶದಲ್ಲಿ ಕುಲುಮೆಗಳು ಪ್ರಮುಖ ಕೈಗಾರಿಕೆಗಳಾಗಿ ಬೆಳೆದಿದ್ದವು.

**ಬಡಗಿಗಳು:–** ಕೃಷಿಕರಿಗೆ ಅವಶ್ಯಕವಾದ ನೇಗಿಲು, ನೊಗ, ಪಿಠೋಪಕರಣಗಳು ದೇವಾಲಯಕ್ಕೆ ಅಗತ್ಯವಾದ ವಸ್ತುಗಳನ್ನು ಮರದಿಂದ ತಯಾರಿಸುತ್ತಿದ್ದರು. ಕ್ರಿ.ಶ.1306ರ ಶಾಸನದಲ್ಲಿ ಬಡಗಿಗಳ ಉಲ್ಲೇಖವಿದೆ.[129] ಇವರು ವೀರಪಾಂಚಲರಲ್ಲಿ ಒಂದು ವೃತ್ತಿ ಎಂಬುದನ್ನು ತಿಳಿಸುತ್ತದೆ.

**ಕಲ್ಲುಕುಟಿಗರು:–** ಕಾನಕಾನಹಳ್ಳಿ ತಾಲ್ಲೂಕು ಅರಳಾಳು ಗ್ರಾಮದಲ್ಲಿ ಕೆರೆಯೊಂದನ್ನು ನಿರ್ಮಾಣ ಮಾಡಿರುವ ವಿಷಯ ತಿಳಿಸುವ ಕ್ರಿ.ಶ.1400 ಶಾಸನವೊಂದು ದೊರೆಯುತ್ತದೆ. ಈ ಕೆರೆಯನ್ನು ನಿರ್ಮಾಣ ಮಾಡಿದವರು ಗೂಳಿಯೋಜ ಮತ್ತು ಕಲ್ಲುಕುಟಿಗ ಓಜ ಎಂಬ ವ್ಯಕ್ತಿಗಳು. ಕಲ್ಲುಕುಟಿಗರು ಕೆರೆನಿರ್ಮಾಣ ಕೆಲಸದಲ್ಲೂ ನಿರತರಾಗಿದ್ದ ವಿಷಯ ಈ ಶಾಸನದಲ್ಲಿ ಉಕ್ತವಾಗಿದೆ.[130] ಸಿಂಗನಾಡಿನ ಮಹಾಪ್ರಭು ಅಲ್ಲಗೌಡನೂ ಈ ಪ್ರದೇಶದಲ್ಲಿ ಪ್ರಯಾಣ ಮಾಡುತ್ತಿರುವಲ್ಲಿ ಹಾಳಾದ ಕೆರೆಯನ್ನು ಕಂಡು ಕೆರೆಯನ್ನೂ, ತೂಬನ್ನೂ, ಹೊಸದಾಗಿ ಕಟ್ಟಿಸಬೇಕೆಂಬ ಗೂಳಿಯೋಜ ಮತ್ತು ಕಲ್ಲುಕುಟಿಗ ಓಜರನ್ನು ಕರೆಕಳಿಸಿ ಅವರಿಂದ ಕೆರೆ ನಿರ್ಮಾಣಕಾರ್ಯ ಮಾಡಿಸಿರುವ ಉಲ್ಲೇಖವಿದೆ.

ಕ್ರಿ.ಶ.1509ರ ಮತ್ತೊಂದು ಶಾಸನವು ಪೆಬೋಜ ಎಂಬ ಕಲ್ಲುಕುಟಿಗನ ಸಾಧನೆಯನ್ನು ತಿಳಿಸುತ್ತದೆ.[131] ರಾಮದೇವರ ದೇವಾಲಯದ ಪ್ರತಿಷ್ಠಾಪನೆ. ಈ ಸಮಾರಂಭದಲ್ಲಿ ಕಲ್ಲುಕುಟಿಗನಾದ ಪೆಬೋಜನು ಹತ್ತು ಮಂದಿ ಜನರ ತಲೆ ಬುರುಡೆ ಉರಿದು ಹೋಗುವಂತಹ ದುರ್ಘಟನೆಯಲ್ಲಿ ಅವರನ್ನು ರಕ್ಷಿಸಿದನು ಎಂಬುದನ್ನು ತಿಳಿಸುತ್ತದೆ. ಈ ಕಲ್ಲುಕುಟಿಗರನ್ನು ವಡ್ಡರೆಂದೂ ಬೋವಿಗಳೆಂದೂ

ಕರೆಯಲಾಗುತ್ತದೆ. ಇವರಲ್ಲಿ ಕಲ್ಲುವಡ್ಡರು ಮತ್ತು ಮಣ್ಣುವಡ್ಡರು ಎಂಬ ಎರಡು ವಿಂಗಡಣೆ ಇದೆ. ಮಣ್ಣು, ಕಲ್ಲು ಕೆಲಸ ಮಾಡುವುದು, ಕೆರೆ, ಬಾವಿ ತೋಡುವುದು, ಇವರ ಪಾರಂಪರಿಕ ವೃತ್ತಿಯಾಗಿತ್ತು.

**ಓಜರು:–** ಕ್ರಿ.ಶ.1296ರ ಕಾಲದ ವೀರಗಲ್ಲನ್ನು ಕಂದವೋಜನು ಮಾಡಿದ ಉಲ್ಲೇಖವಿದೆ.[132] ಕಾದಾಟ ಒಂದರಲ್ಲಿ ರಾಮೇಗೌಡ ಎಂಬಾತ ವೀರ ಮರಣ ಹೊಂದುತ್ತಾನೆ. ವೀರನ ಸ್ಮರಣಾರ್ತವಾಗಿ ರಾಮೇಗೌಡರ ತಂದೆ ಬೀಮೇಗೌಡ ಕಲ್ಲನ್ನು ನಿಲ್ಲಿಸಿದನು. ಈ ವೀರಗಲ್ಲಿನ ರೂವಾರಿ ಆಚಾರಿ ತಿಸ್ತಿವೂರ ಕಂದವೋಜ ಎಂದಿದೆ. ಕಾನಕನಹಳ್ಳಿಯ ಕ್ರಿ.ಶ.1292 ಮತ್ತು ಕ್ರಿ.ಶ.1293ರ[133] ಕಾಲದ ಮತ್ತೆರಡು ವೀರಗಲ್ಲುಗಳು ದೊರೆಯುತ್ತವೆ. ಇವುಗಳನ್ನು ಮಾಡಿದವನು 'ಆಚಾರಿ' ಎಂಬ ಮಾತು ಬರುತ್ತದೆ. ಕ್ರಿ.ಶ.1386ರ ಶಾಸನವು[134] ಒಡೆಯಪನೆಂಬ ಶಿಲ್ಪಿಯ ಬಗ್ಗೆ ಹೇಳುತ್ತದೆ. ಈತ ಪೊಂನಪಿಳೆಯ ಎಂಬ ಆಚಾರಿಯ ಮಗ. ದೇವನಹಳ್ಳಿ ತಾಲ್ಲೂಕಿನ ನಲ್ಲೂರು ಎಂಬ ಗ್ರಾಮದ ರಾಮಸ್ವಾಮಿ ದೇವಸ್ಥಾನದ ಹತ್ತಿರವಿರುವ ಶಾಸನವು ಹೇಳುವ ಪ್ರಕಾರ, ಆ ದೀಪಮಾಲೆಯ ಕಂಬವನ್ನು ಈ ಆಚಾರಿಯು ಮಾಡಿರುವುದನ್ನು ಗಮನಿಸಬಹುದು.

ಕ್ರಿ.ಶ.1299 ಶಾಸನದಲಿ[135] ಹೇಳುವಂತೆ, ಬೋಳೋಜ ಎಂಬುವನು 'ಜವಮಾರಯ್ಯನೆಂಬುವನಿಗೆ ಒಂದು ಗಾಣವನ್ನು ಮಾಡಿಕೊಡುತ್ತಾನೆ ಎಂಬ ಉಲ್ಲೇಖವಿದೆ. ಗಾಣದಿಂದ ಎಣ್ಣೆಯನ್ನು ತೆಗೆಯುವ, ಗಾಣಗಳನ್ನು ತಯಾರಿಕೆ ಮಾಡುತ್ತಿದ್ದವರು ಓಜರು ಎಂಬುದು ತಿಳಿಯುತ್ತದೆ.

ವ್ಯವಸಾಯವೇ ಜನರ ಮುಖ್ಯ ಕಸುಬಾಗಿದ್ದರೂ ಅದಕ್ಕೆ ಪೂರಕವಾಗಿ ಬೇಕಾದ ಇತರ ಕಸುಬುಗಳಾದ ಬಡಗಿ, ಕಮ್ಮಾರ, ಚಮ್ಮಾರ, ಕುಂಬಾರ ಮೊದಲಾದ ವೃತ್ತಿ/ಕಸುಬುಗಳನ್ನು ಮಾಡುತ್ತಿದ್ದರು. ಬಹುಪಾಲು ಕಸುಬುಗಳು ವಂಶಪರಾಂಪರ್ಯವಾಗಿ ಬೆಳೆದು ಬಂದಿದ್ದವು. ತೆರಿಗೆಗಳನ್ನು ವಿವರಿಸುವ ಹಲವು ಶಾಸನಗಳಲ್ಲಿ ಮಗ್ಗದೆರೆ, ಸಾದದೆರೆ, ಮೇದದೆರೆ, ಕುಂಬಾರದೆರೆ, ಪನ್ನಾಯದೆರೆ, ಉರವಲುದೆರೆ, ಗಾಣದೆರೆ ಮೊದಲಾದ ವಿವರಣೆಗಳಿವೆ. ಇವೆಲ್ಲವೂ ಪ್ರಾಚೀನ ಮತ್ತು ಮಧ್ಯಕಾಲೀನ ಸಂದರ್ಭದಲ್ಲಿದ್ದ ಪ್ರಮುಖ ಕೈಗಾರಿಕೆಗಳ ಮೇಲೆ ವಿಧಿಸುತ್ತಿದ್ದ ತೆರಿಗೆಗಳಾಗಿದ್ದವು. ಆದ್ದರಿಂದ ನೂಲುವುದು, ನೇಯುವುದು, ಬಟ್ಟೆಗಳಿಗೆ ಬಣ್ಣ ಹಾಕುವುದು ಎಣ್ಣೆ ಉತ್ಪನ್ನ, ಮೊದಲಾದ ಹಲವಾರು ಉಪಕಸುಬುಗಳು ಪ್ರಗತಿಪಥದಲ್ಲಿದ್ದವು ಎಂಬುದು ಸ್ಪಷ್ಟ.

## ವರ್ತಕರು/ವ್ಯಾಪಾರ

ವ್ಯಾಪಾರವನ್ನೇ ವೃತ್ತಿಯನ್ನಾಗಿಸಿಕೊಂಡ ವರ್ಗವೊಂದು ಪ್ರಾಚೀನ ಕಾಲದಿಂದಲೂ ನಮ್ಮ ಸಮಾಜದಲ್ಲಿ ನೆಲೆನಿಂತಿದೆ. ವರ್ತಕರು ಮುಖ್ಯವಾಗಿ ಉತ್ಪಾದನಾ ಮತ್ತು ವಿನಿಮಯ(ವ್ಯಾಪಾರ) ವೃತ್ತಿಯವರು, ಎಂದು ಎರಡು ತೆರನಾಗಿದ್ದಾರೆ. ಕರ್ನಾಟಕದ ವರ್ತಕರಲ್ಲಿ ವ್ಯಾಪರವನ್ನೇ ವೃತ್ತಿಯಾಗಿಸಿಕೊಂಡ ಸೆಟ್ಟಿ, ಬಣಂಜಿಗ, ಸೆಟ್ಟಿಗುತ್ತ, ನಕರ, ಮುಂಮುರಿದಂಡ, ವಡ್ಡವ್ಯವಹಾರಿ, ಗವರ ಮೊದಲಾದ ವರ್ತಕರಾಗಿದ್ದಾರೆ. ಜೊತೆಗೆ ಉತ್ಪಾದನೆ-ವಿನಿಮಯ ಕಾರ್ಯಗಳೆರಡನ್ನೂ ಮಾಡುವ ಕುಂಬಾರ, ಅಕ್ಕಸಾಲಿ, ಮಾದಿಗ, ಸಮಗಾರ, ಮೇದ ಮೊದಲಾದವರು ಉತ್ಪಾದಕ ವಿನಿಮಯ ವರ್ತಕರಾಗಿದ್ದಾರೆ.[136] ಈ ಉಭಯ ಪ್ರಕಾರದ ವರ್ತಕರ ಬಗೆಗೂ ಕರ್ನಾಟಕದ ಶಾಸನಗಳು ವಿವರ ಒದಗಿಸುತ್ತವೆ. ಬೆಂಗಳೂರು ಶಾಸನಗಳನ್ನು ಗಮನಿಸಿದಾಗ ಇಲ್ಲಿ ದೊರೆಯುವ ವರ್ತಕರು ತಮ್ಮ ವ್ಯಾಪಾರ ವ್ಯವಹಾರಗಳೊಟ್ಟಿಗೆ ಕೆರೆ, ಸಂತೆ, ನಿರ್ಮಾಣ, ದೇವಾಲಯಗಳಿಗೆ ದೀಪಮಾಲೆ, ಜೀರ್ಣೋದ್ಧಾರದಂಥ ರಚನಾತ್ಮಕ ಕಾರ್ಯಗಳನ್ನು ಮಾಡಿದ್ದಾರೆ. ಅಂಗಭೋಗ, ರಂಗಭೋಗಗಳಿಗೆ ದೇವಾಲಯಗಳಿಗೆ ದಾನವನ್ನೂ ಮಾಡಿದ್ದಾರೆ.

ಕ್ರಿ.ಶ.1332ರ ಹೂಡಿ ಶಾಸನದ ಪ್ರಕಾರ,[137] "ಕುಂದವಾಡದ ಸೋವಗೌಡ ಹುಳ್ಳ ಗೌಡ ಹರಿಯಮ ಗೌಡರು ಚಿಂನಗೆರ್ವಿಕದ ಬಿರಿಸೆಟ್ಟಿ ಮಗ ಪಟ್ಟಣ ಸ್ವಾಮಿ ಸಂಗಿಸೆಟ್ಟಿ ಮುಟ್ಟಿಸೆಟ್ಟಿಗಳ್ಗೆ ಬುಧವಾರದ ಸಂತೆಯ ಮಾಡಿಯೆಂದು ನಿಮಯಮಿಸಿರುವ ವಿಷಯವಿದೆ." ಸಂತೆಗಳ ನಿರ್ಮಾಣ, ಪಟ್ಟಣಗಳ ರಚನೆ, ಸಂಯೋಜನೆಯನ್ನು ಈ ಪಟ್ಟಣಸ್ವಾಮಿಗಳು ನಿರ್ವಹಿಸುತ್ತಿದ್ದರು. ಇದರ ಉಸ್ತುವಾರಿ ವರ್ತಕರದ್ದೇ ಆಗಿರುತ್ತಿತ್ತು.

ವ್ಯಾಪಾರಧರ್ಮದ ಸಮಸ್ತ ವಾರಸುದಾರಿಕೆ ಹೊತ್ತ ವರ್ತಕರು ಧಾರ್ಮಿಕ ಕಾರ್ಯಗಳನ್ನು ನೆರವೇರಿಸಿದ್ದಾರೆ. 'ಬಮ್ಮಣಸೆಟ್ಟಿಯ ಮಗ ಮಾಚೆರೂಳ ಸೆಟ್ಟಿ, ದೀಪಮಾಲ ಕಂಬ ಮಾಡಿಸಿರುವ ಉಲ್ಲೇಖವಿದೆ.'[138] ದೇವಾಲಯದ ಮುಂದಿನ ದೀಪಮಾಲೆ ಕಂಬವನ್ನು ನಿರ್ಮಿಸಿದ್ದಾನೆ. ಕ್ರಿ.ಶ.1400ರ ಶಾಸನದಲ್ಲಿ[139] ಬೇಹೂರ ಚಲ್ಲಾಂಡಿ ಸೆಟ್ಟಿ ಮಗ ಗೌಡ ಸೊಣ್ಣಪ್ಪ ನಕರೇಶ್ವರ ದೇವಾಲಯಕ್ಕೆ ಪೂಜೋಪಕರಣವನ್ನು ದಾನ ನೀಡಿದ್ದಾನೆ. "ನಕರೇಶ್ವರ ಗುಡಿಯ ನಿತ್ಯೋತ್ಸವ, ಪಕ್ಷೋತ್ಸವ, ಮಾಸೋತ್ಸವಕ್ಕೆ ತಿರುಮಲಸೆಟ್ಟಿ ಲಕ್ಷ್ಮೀಪತಿಸೆಟ್ಟಿ, ಪಿಂಗಾಣಿಸೆಟ್ಟಿ, ಕೃಷ್ಣಸೆಟ್ಟಿ, ನಾರಾಯಣ ಸೆಟ್ಟಿ, ವೆಂಕಟಪತಿ ಸೆಟ್ಟಿ, ವೆಂಕಟಗಿರಿಸೆಟ್ಟಿ, ರಘುಪತಿ ಸೆಟ್ಟಿ ರಾಮಿಸೆಟ್ಟಿ ಚೆನ್ನಾರಿಸೆಟ್ಟಿಯರು ಹಣದಾನ ಮಾಡಿರುವ ಉಲ್ಲೇಖಗಳಿವೆ. ಮತ್ತೊಂದು ಶಾಸನದಲ್ಲಿ, "ಅಯ್ಯಾವೊಳೆ ಐನೂರ್ವರು ಉಭಯ

ನಾನಾ ದೇಸಿ ಪಟ್ಟಣಸ್ವಾಮಿ ವೀರಬಲ್ಲಾಳ ಸೆಟ್ಟಿ ಮರಿಯ ಹೊಲ್ಲಸೆಟ್ಟಿ ದೊಡಲಸೆಟ್ಟಿ ಹೊಟೆಯ ಇರಿಗಿಸೆಟ್ಟಿ ಮೈಲಾರಸೆಟ್ಟಿ ಹೊರವಡಿ ಮಲ್ಲಿಸೆಟ್ಟಿ ಕಲ್ಲಿಸೆಟ್ಟಿ ಚಿಕ್ಕ ಗೌಡ ಹಲರು ನಕರು ಮುಮ್ಮರಿದಂಡರು ಗವರೇಶ್ವರ ದೇವಾಲಯದ ಶ್ರೀ ಕಾರ್ಯ ಅಂಗಭೋಗ ರಂಗಭೋಗ ಪಂಚಾಮೃತ ಷೋಡಶೋಪಚಾರ ಖಂಡಸ್ಫುಟಿತ ಜೀರ್ಣೋದ್ಧಾರಕ್ಕೆ ಸಂತೆಯ ಆಯವನ್ನು ಬಿಟ್ಟುಕೊಟ್ಟಿದ್ದಾರೆ."[140] ಹೀಗೆ ವರ್ತಕರು ಧಾರ್ಮಿಕವಾಗಿಯೂ, ಆರ್ಥಿಕವಾಗಿಯೂ ಉತ್ತಮ ಸ್ಥಾನವನ್ನು ಹೊಂದಿದ್ದರು.

ಶಾಸನಗಳಲ್ಲಿ ಇವರು ಪಟ್ಟಣಸ್ವಾಮಿಗಳು, ಮಹಾವಡ್ಡವ್ಯವಹಾರಿ, ಸೆಟ್ಟಿ, ಎಂದೆಲ್ಲಾ ಕಾಣಸಿಗುತ್ತಾರೆ. ವರ್ತಕರಲ್ಲಿ ವಿವಿಧ ಪಂಗಡಗಳಿದ್ದವು. ಶಾಸನದಲ್ಲಿ ಇವರನ್ನು 'ಶ್ರೀಮನ್ಮಹಾವಡ್ಡಬ್ಯವಹಾರಿಗಳು, ನಾನಾದೇಸಿ, ನಖರ, ಸೆಟ್ಟಿ, ಗುತ್ತ, ನಕರ ಮುಂಮುರಿದಂಡ, ವಡ್ಡವ್ಯವಹಾರಿ, ಗವರೆ, ಗಾತ್ರಿಗ, ಸೆಟ್ಟಿಕಾರ, ಹಲರು, ಎಳಮೆ ಬೇರೆ ಬೇರೆ ವಿನಿಮಯ ವರ್ತಕ ಪ್ರಕಾರದವರೆಂದು ಗುರುತಿಸಬಹುದು.

**ಪಟ್ಟಣಸ್ವಾಮಿಗಳು:–** ವರ್ತಕರ ಮುಖಂಡನನ್ನು ಪಟ್ಟಣಸ್ವಾಮಿಗಳು ಎಂದು ಕರೆಯಲಾಗುತ್ತದೆ. ಕ್ರಿ.ಶ.1427ರ ಮಾಸ್ತೇನಹಳ್ಳಿ ಶಾಸನದ ಪ್ರಕಾರ, "ಜುಂಜುವೋಬೆಯ ನಾಯಕನ ಮಗ ಚಿಕ್ಕ ತಿಮ್ಮಯ ನಾಯಕನು ಮೊರಸುನಾಡ ಪ್ರಭು ಚೊಕ್ಕದೇವ, ವಡ್ಡವ್ಯವಹಾರಿ, ಉಭಯ ನಾನಾದೇಶಿಯರೊಂದಿಗೆ ಸೇರಿ ಪಳೆಯಪ್ಪನಿಗೆ ಪಟ್ಟಣಸ್ವಾಮಿತನವನ್ನು ನೀಡಿರುವನು" ಎಂದಿದೆ.[141] ಕ್ರಿ.ಶ.1412ರ ಮಾಯಿಸಂದ್ರದ ಮತ್ತೊಂದು ಶಾಸನದ ಪ್ರಕಾರ, "ಜಂಜೋಜೆ ನಾಯ್ಕರ ಮಕ್ಕಳು ಹಿರಿಯ ಮುದಿಯ ನಾಯಕರು ತಮ್ಮ ನಾಯಕತನಕ್ಕೆ ಸಲುವ ಹಿರಸು ನಾಡ ಸೋಮಗೊಂಡನ ಸಂತೆಯನ್ನು ಕಟ್ಟಿಸಿ ಆ ಹಿರಸನಾಡ ಪ್ರಭು ಚೊಕ್ಕದೇವ ಮಾರದೇವ ಕೇತಪ್ಪ ಗಂಗೀದೇವನೊಳಗಾದ ಪ್ರಭುಗಳು ಅಯಿವತ್ತಾರು ದೇಶದ ಹಲರಿಗೆ ಮುಖ್ಯರಾದ ಗುಂಡಶೆಟ್ಟಿ ತಾರಮು ತಿರುಮಲ್ಲ ಸೆಟ್ಟಿ ಸಹದೇವಸೆಟ್ಟಿಯ ಮಂಚಿಸೆಟ್ಟಿವೊಳಗಾದ ಸಮಸ್ತ ನಾಡು ಹಲಯಕೋಟೆ ಪಟ್ಟಣಸ್ವಾಮಿ ತನವನ್ನು ಮಾರಿಸೆಟ್ಟಿಯ ಮಕ್ಕಳು ದಂಡಿಸೆಟ್ಟಿ ತಿರುಮಲಸೆಟ್ಟಿಗಳಿಗೆ ಕೊಟ್ಟು ಸಲಿಸುವ ಮಾನ್ಯ ಹೊಲ ಹದಿನೈದು ಗುಳ ಗದ್ದೆ, ತತ್ತನಕೆರೆ ಕೆಳಗೆ ಸಾವಿರ....ಕೆರೆಯ ಕೆಳಗೆ ಹತ್ತು ಕೊಳಗ ಅಯಾಗದೆ ಕಂಡುಗ ಅಯಿದು, ಕತ್ತೆ, ಕುದುರೆ, ತೊತ್ತು ಮದಿವೆಯ ಸುಂಕ ಸರ್ವಮಾನ್ಯ" ಪಡೆದಿರುವ ಉಲ್ಲೇಖವಿದೆ.[142] ವರ್ತಕರಿಗೆ ಸಂತೆ ಕಟ್ಟಿಸಲು, ಅಧಿಕಾರ ನೀಡಿದಷ್ಟೇ ಅಲ್ಲದೆ ಆ ಪಟ್ಟಣದ ಸ್ವಾಮಿಗಳಾಗಿ(ಮುಖಂಡರಾಗಿ), ಖರ್ಚುವೆಚ್ಚವನ್ನು ನಿಭಾಯಿಸಲು ಅವಶ್ಯಕವಾದ ಹೊಲ, ತೆರಿಗೆ ಮಾನ್ಯ ಮೊದಲಾದ ಸವಲತ್ತುಗಳನ್ನು ನೀಡಲಾಗುತ್ತಿತ್ತು. ಬಹುಶಃ ಅವರ ಅಧಿಕಾರಕ್ಕೆ ನೀಡಲಾಗುತ್ತಿದ್ದ ಸಂಭಾವನೆಯ ರೂಪವಿದ್ದಿರಬಹುದು. ಪಟ್ಟಣಸ್ವಾಮಿಗಳು ಶಾಸನೋಕ್ತ ಸ್ಥಳಗಳ ಪಟ್ಟಣಸ್ವಾಮಿಗಳೇ ಇರಬೇಕು.

ಹೊಸಕೋಟೆಯಲ್ಲಿ ದೊರೆತ ಕ್ರಿ.ಶ.1491ರ ಶಾಸನ[143] "ವಾಗಟದ ಗೌಡಸೆಟ್ಟಿ ಪಟ್ಟಣಸ್ವಾಮಿ ಮಿಂಡಗುದ್ದಲಿವೊಳಗಾದ ಸಮಸ್ತ ಹಲರು" ಎಂದಿದೆ. ಒಂದು ಪುರದ ಪ್ರಧಾನ ಕಾರ್ಯಚಟುವಟಿಕೆಗಳು, ವ್ಯಾಪಾರ–ವ್ಯವಹಾರಗಳು ಆ ಪ್ರದೇಶದ ಗೌಡ, ಸೆಟ್ಟಿ, ಪಟ್ಟಣಸ್ವಾಮಿಗಳ ಅಧೀನದಲ್ಲಿರುತ್ತಿದ್ದವು. ದೊಡ್ಡಬಳ್ಳಾಪುರದಲ್ಲಿ ದೊರೆತ ಮತ್ತೊಂದು ಶಾಸನದ ಪ್ರಕಾರ, ತ್ರೈಲೋಕ್ಯ ಪಟ್ಟಣಸ್ವಾಮಿ ವೀರಬಲ್ಲಾಳ ಸೆಟ್ಟಿಯೂ ಉಭಯ ನಾನಾದೇಸಿಯರಿಗೆ ಮುಖ್ಯಸ್ಥನಾಗಿದ್ದ ಎಂಬುದು ತಿಳಿಯುತ್ತದೆ.[144] ಈತ ಬಳ್ಳಾಳ ಪುರದ ವರ್ತಕರ ಮುಖಂಡನಾಗಿದ್ದಿರಬಹುದು. ಇದೇ ಶಾಸನದಲ್ಲಿ 'ಅಯ್ಯಾವಳೆ ಅಯ್ನೂರ್ವ ಸ್ವಾಮಿಗಳು' ಎಂಬ ಅಂಶ ತಿಳಿಯುತ್ತದೆ. ಐನೂರು ಜನ ವರ್ತಕರು ಸೇರಿದ ಒಂದು ಸಂಘವಿರಬಹುದು.

**ವಡ್ಡವ್ಯವಹಾರಿಗಳು:–** ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದ ವರ್ತಕ ಪ್ರಕಾರಗಳಲ್ಲಿ ವಡ್ಡವ್ಯವಹಾರಿ ಅತ್ಯಂತ ಪ್ರಮುಖವಾದ ಪ್ರಕಾರವಾಗಿದೆ. ಮಾಸ್ತೇನಹಳ್ಳಿ ಶಾಸನದಲ್ಲಿ 'ಮಹಾವೊಡ್ಡಂಬೆವಹಾರಿ'[145] ಎಂಬ ಉಲ್ಲೇಖವಿದೆ. ವಡ್ಡ ಎಂದರೆ ವೃದ್ಧ, ಹಿರಿಯ ಎಂಬರ್ಥವಿದೆ. 'ಮಹಾ' ಪದವನ್ನು ನೋಡಿದಾಗ ಈ ವರ್ತಕರಲ್ಲಿ ಉನ್ನತ ಶ್ರೇಣಿಯನ್ನು ನೀಡಿರುವ ಸೂಚನೆಯಾಗಿದೆ.

**ನಕರರು:–** ಮಧ್ಯಕಾಲೀನ ಕರ್ನಾಟಕದ ಪಟ್ಟಣಗಳ ವ್ಯಾಪರದಲ್ಲಿ ನಕರರು ಗಮನಾರ್ಹವಾದ ಪಾತ್ರವಹಿಸಿದ್ದಾರೆ. ಶಾಸನಗಳು ಇವರನ್ನು ಅಂಗಡಿ ಸೆಟ್ಟಿಯರೆಂದು ಕರೆದಿರುವುದರಿಂದ ಇವರು ಸಂತೆ, ಪೇಟೆಗಳಿಗೆ ಬಂದ ವಿವಿಧ ಸರಕುಗಳನ್ನು ಖರೀದಿಸಿ ಸ್ಥಿರವಾದ ಅಂಗಡಿ ಇಲ್ಲವೆ ಮಳಿಗೆಗಳಲ್ಲಿಟ್ಟು ಮಾರುವ ವ್ಯಾಪಾರಿಗಳೆಂದು ಹೇಳಬಹುದು.[146] ಬೆಂಗಳೂರು ಜಿಲ್ಲೆಗೆ ಸೇರುವ ಬೇಗೂರಿನಲ್ಲಿ ದೊರೆತ ಶಾಸನದಲ್ಲಿ ಉಲ್ಲೇಖವಾಗಿರುವ ಸೆಟ್ಟಿ 'ನಕರ' ವಿಭಾಗಕ್ಕೆ ಸೇರಿದವನು ಎಂದು ತಿಳಿಯುತ್ತದೆ. ಇದೊಂದು ವರ್ತಕ ಪ್ರಕಾರ.

**ನಾನಾದೇಶಿ:–** ಶಾಸನಗಳಲ್ಲಿ ಉಲ್ಲೇಖವಾಗುವ ನಾನಾದೇಶಿ, ಉಭಯದೇಶಿಯರು ಎಂಬ ಪದಗಳು ವರ್ತಕರನ್ನು ಸೂಚಿಸುತ್ತಿದ್ದರೂ ಇವು ಯಾವುವು ವರ್ತಕರ ಪ್ರಭೇದವಲ್ಲ. ಪರಸ್ಥಳ, ಇತರ ದೇಶಗಳಿಂದ ವ್ಯಾಪಾರಕ್ಕೆ ಬಂದಿರುವ ವಿಷಯವನ್ನು ಸೂಚಿಸುತ್ತವೆ. ಕ್ರಿ.ಶ.1628ರ ಚಿಕ್ಕಪೇಟೆಯಲ್ಲಿ ದೊರೆತ ಶಾಸನದಲ್ಲಿ ಪರಸ್ಥಳದ ವರ್ತಕರು[147] ಎಂದಿದ್ದರೆ, ದೊಡ್ಡಬಳ್ಳಾಪುರದ ಶಾಸನದಲ್ಲಿ 'ಉಭಯ ನಾನಾದೇಸಿ' ಎಂಬ ಉಲ್ಲೇಖವಿದೆ.[148] ಮಾಸ್ತೇನಹಳ್ಳಿ, ನಿಡುಗಲ್ಲು, ಮಾಗಡಿ ಈ ಪ್ರದೇಶದಲ್ಲೆಲ್ಲಾ

ನಾನಾದೇಶಿಯ ವರ್ತಕರು ವಲಸೆ ಬಂದು ತಮ್ಮ ವ್ಯಾಪಾರದ ವಿಸ್ತಾರವನ್ನು ಹರಡಿದ್ದರು ಎಂಬುದು ದೊರೆತ ಶಾಸನಗಳಿಂದ ಸ್ಪಷ್ಟವಾಗುತ್ತದೆ.

ಇನ್ನೂ ಕೆಲವು ಶಾಸನಗಳಲ್ಲಿ ಹಲರು, ಸಟ್ಟಿಕಾರ, ಎಳಮೆ ಎಂಬ ಉಲ್ಲೇಖಗಳು ಸಿಗುತ್ತವೆ. ಕ್ರಿ.ಶ.1412ರ ಮಾಯಿಸಂದ್ರ ಶಾಸನದಲ್ಲಿ 'ಮಂಚಿಸೆಟ್ಟಿಯರು ಹಲರು ವರ್ತಕವರ್ಗದವರು' ಎಂದಿದೆ.[149] ಬಿ.ಆರ್.ಹಿರೇಮಠರು ಹೇಳುವ ಪ್ರಕಾರ, ಸೆಟ್ಟಿಕಾರ, ಹಲರು, ಎಳಮೆ, ಸಾಲಿಕೆ ಬಲ್ಲಾಳುಗಳು ತುಳುನಾಡಿನ ವರ್ತಕರೆಂದು ಹೇಳುತ್ತಾರೆ. ಕರಾವಳಿ ಪ್ರದೇಶದ (ವಿಶೇಷವಾಗಿ ತುಳುನಾಡು) ಶಾಸನಗಳಲ್ಲಿ ಮಾತ್ರ ಅಧಿಕವಾಗಿ ಕಾಣಸಿಗುವ ವರ್ತಕ ಪ್ರಕಾರಗಳಿವು ಎಂದು ಅಭಿಪ್ರಾಯಿಸಿದ್ದಾರೆ. ಈ ವರ್ತಕರು ವ್ಯಾಪಾರಕ್ಕೆಂದು ಇತರ ಭಾಗಗಳಿಗೆ ವಲಸೆ ಹೋಗಿರುವುದನ್ನು ಗುರುತಿಸಬಹುದು.

ವರ್ತಕರು ತಮ್ಮ ಬೆಲೆಬಾಳುವ ಸರಕು ಸಾಗಿಸುವಾಗ ದಾರಿಹೋಕರಿಂದ ಅಪಾರ ನಷ್ಟವಾಗ ಬಾರದು ಎಂಬ ಉದ್ದೇಶದಿಂದ ತಮ್ಮ ವಸ್ತು ಮತ್ತು ಪ್ರಾಣ ರಕ್ಷಣೆಗೆ ಮುಂದಾಗುತ್ತಿದ್ದರು. ಯುದ್ಧಗಳಲ್ಲಿ ಭಾಗಿಗಳಾಗಿರುವ ಉದಾಹರಣೆಗಳು ನಮಗೆ ದೊರೆಯುತ್ತವೆ. ಕ್ರಿ.ಶ.1105ರ ಶಾಸನದ ಪ್ರಕಾರ,[150] "ಹೆಂಜೇರು ಯುದ್ಧದಲ್ಲಿ ಕುದುರೆ, ಆಳುಗಳನ್ನು ಕೊಂದು ವಿಜಯಿಗಳಾಗಿ ಬಂದ ಚಲುಕಿಯರ ವಡ್ಡವ್ಯವಹಾರಿ ಮಾರೋ ಸೆಟ್ಟಿ ಕಿ(ಕೊ)ಲ್ವರಾಯನು ಕೀರ್ತಿಯನ್ನು, ಶ್ವೇತಛತ್ರ, ಪಲ್ಲಕ್ಕಿ, ಅಂಗರಕ್ಷಕ, ಗದ್ದುಗೆಗಳ ಗೌರವವನ್ನೂ ಪಡೆದುಕೊಂಡಿದ್ದಾನೆ." ರಾಜರಿಂದ ಇಂತಹ ವರ್ತಕರು ಗೌರವಾಧಾರ, ಮನ್ನಣೆಯನ್ನು ಪಡೆದು ಉತ್ತಮ ಅಧಿಕಾರ, ಸವಲತ್ತುಗಳನ್ನು ಪಡೆದಿರುತ್ತಿದ್ದರು. ಕ್ರಿ.ಶ.1402ರ ಬೇಗೂರು ಶಾಸನದ ಪ್ರಕಾರ, 'ತ್ರೇತಾಯುಗದಲ್ಲಿ ಶ್ರೀ ರಾಮಚಂದ್ರಸ್ವಾಮಿ ಕೊಟ್ಟವಸ್ತುಗಳಲ್ಲಿ 'ಗರುಡ ಧ್ವಜವೂ ಒಂದೆಂಬ ಅಂಶವನ್ನು ಪ್ರಕಟಿಸುತ್ತದೆ. ಇದರಿಂದ ವಿಷ್ಣುವಿನ ವಾಹನ 'ಗರುಡ'ನೂ ಇವರ ಧ್ವಜದಲ್ಲಿ ರಾಜಮಾನನಾಗಿದ್ದುದು ವ್ಯಕ್ತವಾಗುತ್ತದೆ. ಈ ಧ್ವಜವುಳ್ಳವರು ವೈಷ್ಣವ ವರ್ತಕರಿರಬಹುದೆನಿಸುತ್ತದೆ. ಅಷ್ಟೇ ಅಲ್ಲದೆ ಈ ವರ್ತಕರು ಭೇರಿ, ಮೃದಂಗಳನ್ನು ಹೊಂದಿದ್ದರು.[151] ಇವೆಲ್ಲವೂ ವರ್ತಕರು ಪಡೆದಿದ್ದ ಗೌರವಯುತವಾದ ಅಂಶಗಳು.

ಆನೇಕಲ್ಲು ತಾಲೂಕಿಗೆ ಸೇರುವ ಇಂದಿನ ವನಕನಹಳ್ಳಿಯು ಅಂದಿನ ವನಕಾರ ಪಟ್ಟಣ ಅಥವಾ ವನ್ನಕಾರ ಪಟ್ಟಣವಾಗಿತ್ತು. ಇದೊಂದು ಪ್ರಸಿದ್ಧ ವ್ಯಾಪಾರಿ ಕೇಂದ್ರವಾಗಿತ್ತು ಎಂಬುದು ಅಲ್ಲಿನ ಸ್ಥಳೀಯರ ಹೇಳಿಕೆ. ತಮಿಳು ಶಾಸನವೊಂದರಲ್ಲಿ[152] ವನ್ನಕಾರ ಪಟ್ಟಣದ ಉಲ್ಲೇಖವಿದೆ. ಬಹುಶಃ ವರ್ತಕರ ಪಟ್ಟಣವೇ ಕಾಲನಂತರದಲ್ಲಿ ವರ್ತಕರ ಪಟ್ಟಣವಾಗಿದೆ. ತಮಿಳು ಭಾಷೆಯ ಪ್ರಭಾವದಿಂದ ವನಕಾರ ಪಟ್ಟಣವಾಗಿ ನಂತರ ವನಕನಹಳ್ಳಿ ಎಂದಾಗಿರಬಹುದು. ಪ್ರಾಚೀನ ಮತ್ತು ಮಧ್ಯಕಾಲೀನ

ಸಂದರ್ಭದಲ್ಲಿನ ಆರ್ಥಿಕ ವ್ಯವಸ್ಥೆಯಲ್ಲಿ ಸಂತೆ, ಅಂಗಡಿ, ಪೇಟೆ, ಪಟ್ಟಣಗಳಿಗೆ ಪ್ರಾಮುಖ್ಯತೆ ದೊರಕಿದ್ದೇ ಈ ವರ್ತಕರಿಂದ ಆದ ಕಾರಣ ಬೆಂಗಳೂರಿನಲ್ಲಿ ಕೆಂಪೇಗೌಡನ ಕಾಲದಲ್ಲಿ ಅಪಾರವಾದ ಪೇಟೆಗಳು ನಿರ್ಮಾಣವಾದವು. ಅರಳೆಪೇಟೆ, ಅಕ್ಕಿಪೇಟೆ, ರಾಗಿಪೇಟೆ(ಈಗಿನ ಗೋಡನ್ ರಸ್ತೆಯ ಹತ್ತಿರ), ಕುಂಬಾರ ಪೇಟೆ, ಗಾಣಿಗರ ಪೇಟೆ, ಗೊಲ್ಲರ ಪೇಟೆ, ಕುರುಬರ ಪೇಟೆ(ಕಿಲಾರಿ ರಸ್ತೆಯಲ್ಲಿದೆ) ಬಳೆಪೇಟೆ, ಹೊಸತರಗುಪೇಟೆ, ಕುಂಚುಟಿಗರ ಪೇಟೆ(ಕಿಲಾರಿರಸ್ತೆ), ಹಳೆತರಗುಪೇಟೆ, ಕುರುಬರಪೇಟೆ, (ಕೆಂಗೇರಿಗೇಟ್ ಪೊಲೀಸ್ ಠಾಣೆಯ ಹಿಂದೆ), ಮಂಡಿಪೇಟೆ, ಮುತ್ಯಾಲಪೇಟೆ, ಚಿಕ್ಕಪೇಟೆ, ಉಪ್ಪಾರಪೇಟೆ, ನಗರ್ತಪೇಟೆ ಹೀಗೆ ಮೊದಲಾದ ಪೇಟೆಗಳು ವ್ಯಾಪಾರಿಕೇಂದ್ರಗಳಾಗಿದ್ದವು. ಇಂದಿಗೂ ಈ ಸ್ಥಳಗಳು ಮೂಲ ಹೆಸರುಗಳನ್ನು ಉಳಿಸಿಕೊಂಡು ತನ್ನ ಮೂಲ ಸಂಸ್ಕೃತಿಯ ನೆಲೆಗೆ ಸಾಕ್ಷಿಗಳಾಗಿವೆ.

ಬುಕನನ್ ತನ್ನ ಕೃತಿಯಲ್ಲಿ ಬೆಂಗಳೂರಿನಲ್ಲಿ ನಡೆಯುತ್ತಿದ್ದ ವ್ಯಾಪಾರ ವ್ಯವಹಾರದ ಬಗ್ಗೆ ಈ ಮುಂದಿನಂತೆ ದಾಖಲಿಸುತ್ತಾನೆ. "ತಂಜಾವೂರು ವರ್ತಕರು ಮುತ್ತುಗಳನ್ನು ಮಾರಿ ಹಣವನ್ನು ಪಡೆಯುತ್ತಾರೆ. ಸೇಲಂ ಮತ್ತು ಧರ್ಮಪುರಿಗಳಿಂದ ಒಮ್ಮೊಮ್ಮೆ ವ್ಯಾಪಾರಿಗಳು ಬರುತ್ತಾರೆ. ಮೈಸೂರು ಸಂಸ್ಥಾನದಲ್ಲಿನ ರಾಜನು ನಗರ ಜಿಲ್ಲೆಯ ಸುತ್ತಮುತ್ತಲ ಪ್ರದೇಶಗಳಾದ ಬಿದೇನೂರು(ಬಿದನೂರು), ಶೃಂಗ–ಗಿರಿ(ಶೃಂಗೇರಿ), ಕೊಪ್ಪ, ಕಳಸ, ಮುತ್ತೂರು ಮುಂತಾದ ಊರುಗಳೊಂದಿಗೆ ವ್ಯಾಪಾರ ಸಂಪರ್ಕವಿದೆ. ಬೆಂಗಳೂರಿನವರು ಈ ಊರುಗಳೊಂದಿಗೆ ಅಡಿಕೆ, ಮೆಣಸು, ಗಂಧದಮರ, ಏಲಕ್ಕಿ ಇತ್ಯಾದಿಗಳನ್ನು ತರಿಸಿಕೊಳ್ಳುತ್ತಾರೆ. ಪ್ರತಿಯಾಗಿ ಅವರು ದವಸ, ಹೊಗೆಸೊಪ್ಪು, ಹುಣಿಸೆ, ಮಸ್ಲಿನ್, ರೇಷ್ಮೆ, ಹತ್ತಿಬಟ್ಟೆ ಇತ್ಯಾದಿ ಕಳುಹಿಸುತ್ತಿದ್ದರು. ಗುಬ್ಬಿಯಿಂದ ಬೆಂಗಳೂರಿಗೆ ಮೆಣಸು, ಅಡಿಕೆ, ತೆಂಗಿನ ಕಾಯಿ ರವಾನೆಯಾಗುತ್ತಿತ್ತು. ದೊಡ್ಡಬಳ್ಳಾಪುರದಿಂದ ಬೆಂಗಳೂರಿಗೆ ಸೊಗಸಾದ ಕೆಂಪು ಹತ್ತಿಬಟ್ಟೆ ರವಾನೆಯಾಗುತ್ತಿತ್ತು. ಚಿತ್ರದುರ್ಗ ಮತ್ತು ಬೆಂಗಳೂರಿನ ನಡುವೆಯೂ ವ್ಯಾಪಾರ ವ್ಯವಹಾರವಿತ್ತು."[153] ಎಂಬುದಾಗಿ ಅಭಿಪ್ರಾಯ ವ್ಯಕ್ತಪಡಿಸಿದ್ದಾನೆ. ಬೆಂಗಳೂರು ನಗರ ಅಂದಿನಿಂದ ಇಂದಿನವರೆಗೂ ವ್ಯಾಪರಕೇಂದ್ರವಾಗಿರುವುದು ಗಮನಾರ್ಹ.

## ಸಂತೆಗಳ ನಿರ್ಮಾಣ

ಸಂತೆ ರೈತರ ಅವಿಭಾಜ್ಯ ಅಂಗ. ಪ್ರಾಚೀನ ಕಾಲದಿಂದಲೂ ಸಂತೆಯು ರೈತರು ಬೆಳೆದ ಬೆಳೆಗಳ ವಿನಿಮಯ ಕೇಂದ್ರವಾಗಿ ರೂಪುಗೊಂಡಿದೆ. ರೈತ ತಾನು ಬೆಳೆದ ಬೆಳೆಯನ್ನು ಒಂದೆಡೆ ಸೇರಿಸಿ ಗ್ರಾಹಕರಿಗೆ ಎಲ್ಲಾ ವಸ್ತುಗಳು ಒಂದೇ ಕಡೆ ಸಿಗುವಂತೆ ಸಾಧ್ಯವಾಗುವುದೇ ಈ ಸಂತೆಯಿಂದ. ಸಂತೆ

ಎಂಬ ಪದ ಸಂಸ್ಥಾ>ಸಂಸ್ಥೆ>ಸಂತೆ ಎಂಬ ಸಂಸ್ಕೃತ ಪದದಿಂದ ರೂಪುಗೊಂಡ ಪದ. ರೈತರ, ವ್ಯಾಪರಸ್ಥರ ಹಾಗೂ ಜನಸಾಮಾನ್ಯರ ಒಳಿತಿಗಾಗಿ ರಾಜಮಹಾರಾಜರು ಸಂತೆಗಳ ನಿರ್ಮಾಣವನ್ನು ಪ್ರಾಚೀನ ಕಾಲದಲ್ಲೇ ನಿರ್ಮಿಸಿದರು. ಅಂದು ಸಂತೆ ನಡೆಸಲು ರಾಜರ ಪ್ರೇರಣೆ, ಪ್ರೋತ್ಸಾಹ ಇದ್ದೇ ಇರುತ್ತಿತ್ತು. ಏಕೆಂದರೆ ಈ ಸಂತೆಗಳಿಂದ ರಾಜ್ಯಕ್ಕೆ ಆದಾಯ ಬರುತ್ತಿತ್ತು. ಈ ವಿಷಯವನ್ನು ಶಾಸನಗಳ ಮೂಲಕ ತಿಳಿಯಬಹುದು. ಈ ಸಂತೆಗಳ ನಿರ್ಮಾಣದಿಂದ ರೈತರಿಗಷ್ಟೇ ಅಲ್ಲದೆ ಇತರ ವ್ಯಾಪಾರಿ ವರ್ಗದವರಿಗೂ ಅಧಿಕ ಲಾಭಗಳಿರುತ್ತಿತ್ತು. ಇತರ ಕಡೆಗಳಿಂದ ಬಂದ ವರ್ತಕರು ಈ ಸಂತೆಗಳ ಪ್ರಯೋಜನ ಪಡೆದುಕೊಳ್ಳುತ್ತಿದ್ದರು.

ಕ್ರಿ.ಶ.1331ರ ಹೊಯ್ಸಳರ ಕಾಲದ ಶಾಸನವು ಈ ಸಂತೆಯ ನಿರ್ಮಾಣದ ಬಗ್ಗೆ ತಿಳಿಸುತ್ತದೆ.[154] ಹೊಯ್ಸಳರ ದೊರೆ ವೀರಬಲ್ಲಾಳನು ಚೋಳ ಮಹಾರಾಜನು ಕೇಳಿಕೊಂಡಿದ್ದಕ್ಕಾಗಿ ಸಂತೆ ನಿರ್ಮಾಣಕ್ಕಾಗಿ ದಾನ ನೀಡಿರುವ ವಿಷಯ ತಿಳಿಯುತ್ತದೆ. ತೊರವಳಿನಾಡ ಸಮಸ್ತ ಪ್ರಭುಗಳು, ಬಮ್ಮಿಸೆಟ್ಟಿಯ ಮಕ್ಕಳಾದ ಬೈರಿಸೆಟ್ಟಿ ಮತ್ತು ಮುಕುತಿ ಸೆಟ್ಟಿಗಳಿಗೆ ಗದ್ದೆಯನ್ನು ನೀಡಿರುವುದು ತಿಳಿಯುತ್ತದೆ.

ಹೊಯ್ಸಳರಷ್ಟೇ ಅಲ್ಲದೆ ವಿಜಯನಗರದ ಅರಸರು ಸಂತೆಗಳ ನಿರ್ಮಾಣಕ್ಕೆ ಪ್ರೊತ್ಸಾಹವನ್ನು ನೀಡಿರುವುದು ಕ್ರಿ.ಶ1410ರ ಬಿದಿರುಗುಪ್ಪೆ ಶಾಸನದಿಂದ ತಿಳಿಯುತ್ತದೆ.[155] ಹಿರಸು ನಾಡನ್ನು ಆಳುತ್ತಿದ್ದ ಜಂಬೋಜಿ ನಾಯ್ಕ ಮತ್ತು ಅವನ ಮಕ್ಕಳು ಹಿರಿಯ ಮುದಿಯ ನಾಯ್ಕರು ತಮ್ಮ ನಾಡಿಗೆ ಸೇರುವ ಸೋಮಗೊಂಡನ ಹಳ್ಳಿಯಲ್ಲಿ ಸಂತೆಯನ್ನು ಕಟ್ಟಿಸಿರುವ ಉಲ್ಲೇಖವಿದೆ. ವಿಜಯನಗರ ಕಾಲದ್ದೇ ಆದ ಕ್ರಿ.ಶ.1418ರ ಮತ್ತೊಂದು ಶಾಸನವು ಒಬ್ಬ ಗ್ರಾಮದ ಅಧಿಕಾರಿ ಸಂತೆಯನ್ನು ನಿರ್ಮಾಣ ಮಾಡಿರುವ ಉಲ್ಲೇಖ ಸಿಗುತ್ತದೆ. ಹಿಮ್ಮರೆ ನಾಡಿನಲ್ಲಿ ಬಲ್ಲಗಾವುಂಡನು ತನ್ನ ಕೈಯಾರೆ ಸಂತೆಯನ್ನು ಕಟ್ಟಿಸುತ್ತಾನೆ. ಸೆಟ್ಟಿಯ ಮಕ್ಕಳಾದ[156] ವೆಂಕಟಸೆಟ್ಟಿ, ಮಲ್ಲಿಸೆಟ್ಟಿ ಮಕ್ಕಳು ಮಣಿಗಸೆಟ್ಟಿಗಳಿಗೆ ಹೊಲ ಮತ್ತು ಗದ್ದೆಯ ಮೇಲಿನ ಸುಂಕವನ್ನು ಸಂತೆ ನಿರ್ಮಾಣಕ್ಕೆ ಬಿಟ್ಟುಕೊಡಲಾಗಿದೆ.

ಒಟ್ಟಿನಲ್ಲಿ ಸಂತೆಗಳ ನಿರ್ಮಾಣ ಆ ಪಟ್ಟಣದ ನಾಯಕ, ಗೌಡ, ಸಾಮಂತ ಹಾಗೂ ಪಟ್ಟಣ ಸ್ವಾಮಿಗಳ ಕರ್ತವ್ಯವಾಗಿರುತ್ತದೆ. ಈ ಸಂತೆಗಳು ಆ ದೇಶದ ಆರ್ಥಿಕ, ಸಾಮಾಜಿಕ, ಔದ್ಯೋಗಿಕ ಪ್ರಗತಿಯಲ್ಲಿ ಮಹತ್ವದ ಸ್ಥಾನವನ್ನು ಪಡೆದಿರುತ್ತವೆ.

## ನಾಣ್ಯಪದ್ಧತಿ

ಮನುಷ್ಯ ನಾಗರೀಕನಾಗುತ್ತಾ ಭೂಮಿಯನ್ನು ತನ್ನ ಉತ್ಪಾದನಾಂಗವಾಗಿ ಬಳಸಿಕೊಂಡ. ಆನಂತರ ತನ್ನ ಅವಶ್ಯಕತೆಯನ್ನು ಪೂರೈಸಿಕೊಳ್ಳಲು ವಸ್ತುವಿನಿಮಯ ಪದ್ಧತಿಯನ್ನು ಅನುಸರಿಸುತ್ತಿದ್ದ. ತದನಂತರ ಒಂದು ವಸ್ತುವಿಗೆ ಇಂತಿಷ್ಟು ಬೆಲೆ ಎಂದು ನಿಗದಿಪಡಿಸಲು ಪ್ರಾರಂಭಿಸಿದ. ಈ ಪದ್ಧತಿಯನ್ನು ಜಾರಿಗೆತರಲು ಭೂಮಿಯಲ್ಲಿ ಸಿಗುವ ಲೋಹಗಳನ್ನು ಬಳಸಿಕೊಂಡು ನಾಣ್ಯಗಳನ್ನು ಟಂಕಿಸತೊಡಗಿದ. ಈ ನಾಣ್ಯಗಳು ಚಿನ್ನ, ಬೆಳ್ಳಿ, ತಾಮ್ರ, ಕಂಚು, ಹಿತ್ತಾಳೆ ಮತ್ತು ಮಿಶ್ರಲೋಹಗಳಿಂದಲೂ ಕೂಡಿರುತ್ತಿತ್ತು. ಲೋಹಗಳ ಆಧಾರದ ಮೇಲೂ ಈ ನಾಣ್ಯಗಳ ಹೆಸರು ನಿರ್ಧಾರವಾಗುತ್ತಿತ್ತು. ಉದಾಹರಣೆಗೆ ಚಿನ್ನದ ನಾಣ್ಯವನ್ನು ಪೊನ್/ಹೊನ್ನು ಎಂದು ಕರಯಲಾಗುತ್ತಿತ್ತು. ನಾಣ್ಯಗಳು ನಮ್ಮ ಸಾಂಸ್ಕೃತಿಕ ಚರಿತ್ರೆಯ ಅವಿಭಾಜ್ಯ ಅಂಗ. ನಾಣ್ಯಪದ್ಧತಿಗಳ ಆಧಾರದ ಮೇಲೆ ಆಯಾ ಕಾಲಘಟ್ಟದ ರಾಜಕೀಯ, ಆರ್ಥಿಕ, ಸಾಮಾಜಿಕ, ಧಾರ್ಮಿಕ ಚರಿತ್ರೆಯನ್ನು ತಿಳಿಯಬಹುದು.

**ಗದ್ಯಾಣ:–** ಗದ್ಯಾಣ ಎನ್ನುವುದು ವಿಶೇಷವಾಗಿ ಬಳಕೆಯಲ್ಲಿದ್ದ ಚಿನ್ನದ ನಾಣ್ಯ. ಸಾಮಾನ್ಯವಾಗಿ ದಕ್ಷಿಣ ಭಾರತದ ಎಲ್ಲ ರಾಜಮನೆತನಗಳೂ ಈ ನಾಣ್ಯವನ್ನು ಚಲಾವಣೆಗೆ ತಂದಿದ್ದವು. ಇದರ ತೂಕ 50–52 ಗ್ರೇನ್‌ಗಳಾಗಿದ್ದವು. ಕೆಲವು ಸಮಯ ಇದು 60 ಗ್ರೇನ್‌ವರೆಗೆ ಹೋಗಿತ್ತು. ಇದೇ ದಕ್ಷಿಣ ಭಾರತದ ಅತ್ಯಂತ ಹೆಚ್ಚಿನ ಮೌಲ್ಯದ ನಾಣ್ಯವಾಗಿತ್ತು.[157] ಕ್ರಿ.ಶ.1110ರ ಕಾಲದ ರಾಜೇಂದ್ರ ಚೋಳನ ಶಾಸನದಲ್ಲಿ ಗದ್ಯಾಣದ ಉಲ್ಲೇಖವಿದೆ.[158] ಕ್ರಿ.ಶ.1339ರ ಹೊಯ್ಸಳರ ಕಾಲದ ಶಾಸನದಲ್ಲಿ 'ಗ100–ನೂರುವರಹಕೆ' ಎಂದಿದೆ.[159] ಕ್ರಿ.ಶ.1431ರ ಪ್ರೌಢದೇವರಾಯನ ಕಾಲದ ಕೊಡಿಗೆಹಳ್ಳಿ ಶಾಸನದಲ್ಲಿ ಗುತ್ತಿಗೆಯ ಪ್ರಮಾಣ ಕಾಣಿಕೆ ಸಹ ಹುಟ್ಟುವಳಿ 'ಗ 16', ಆ ಗ್ರಾಮಕ್ಕೆ ಅಂದಿನಾದಾಯ ಬಿಟ್ಟುಕೊಟ್ಟದ್ದು ಗ3 ಎಂದಿದೆ.[160] ಶಾಸನಗಳಲ್ಲಿ ಗದ್ಯಾಣವನ್ನು 'ಗ' ಎಂಬ ಅಕ್ಷರದಿಂದ ಹೆಸರಿಸಲಾಗಿದೆ. ಗಂಗ ಚೋಳ, ವಿಜಯನಗರದ ಅರಸರ ಕಾಲದಲ್ಲಿ ಗದ್ಯಾಣವೆಂಬ ಚಿನ್ನದ ನಾಣ್ಯ ಚಲಾವಣೆಯಲ್ಲಿ ಇತ್ತು ಎಂಬುದು ಸ್ಪಷ್ಟವಾಗುತ್ತದೆ.

**ಕಟಿಂಜು:–** ಇದು ಚಿನ್ನದ ನಾಣ್ಯವಾಗಿತ್ತು. ಇದು 48 ಗ್ರೇನ್ ತೂಕವುಳ್ಳದ್ದಾಗಿತ್ತು. ಗಂಗರ ಕಾಲದ ಶಾಸನದಲ್ಲಿ ಕಟಿಂಜುವಿನ ಉಲ್ಲೇಖವಿದೆ.[161]

**ಪೊನ್ನು:–** ಪೊನ್ನು ಎಂದರೆ ಹೊನ್ನು. ಗದ್ಯಾಣದ ಇನೊಂದು ಹೆಸರು. ಶಾಸನಗಳಲ್ಲಿ 'ಹೊನ್ನು' ಎಂದು ಉಲ್ಲೇಖಿಸಲಾಗಿದೆ. ಚಿನ್ನದ ನಾಣ್ಯ. ಕ್ರಿ.ಶ.1431ರ ಪ್ರೌಡದೇವರಾಯನ ಶಾಸನದಲ್ಲಿ 'ಇಪ್ಪತ್ತು ಹೊನ್ನಿನ ಗ್ರಾಮ' ಎಂಬ ಉಲ್ಲೇಖವಿದೆ.[162] ಕ್ರಿ.ಶ.1023ರ ರಾಜೇಂದ್ರ ಚೋಳನ ಶಾಸನದಲ್ಲಿ 'ಪೊನ್ನು' ಎಂದು ಉಲ್ಲೇಖವಿದೆ.[163]

**ಪಣ:–** ಕ್ರಿ.ಶ.1267ರ ಹೊಯ್ಸಳ ವೀರನರಸಿಂಹನ ಕಾಲದ ಶಾಸನದಲ್ಲಿ "ಹತ್ತಿಯ ಹೇಜು(ಎಣಿಕೆ) 10ಕ್ಕೆ ಪಣ 1, ಅರಿಸಿನದ ಹೇಜು 10ಕ್ಕೆ ಪಣ 1, ಬೆಲ್ಲದ ಹೇಜು 10ಕ್ಕೆ ಪಣ 1, ಉಪ್ಪಿನ ಹೇಜು 20ಕ್ಕೆ ಪಣ 1, ದವಸದ ಹೇಜು 10ಕ್ಕೆ ಪಣ 2, ಏಲಕ್ಕಿಕಯ ಹೇಜು 10ಕ್ಕೆ ಪಣ 2"[164] ಎಂದಿದೆ. ದೇವಾಲಯದ ಅಂಗಭೋಗ ರಂಗಭೋಗದ ಜೀರ್ಣೋದ್ಧಾರಕ್ಕೆ ನೀಡಿರುವ ದಾನವಿದು. ಈ ಶಾಸನದಲ್ಲಿ ಆ ವಸ್ತುವಿನ ಅಳತೆ, ಪ್ರಮಾಣದ ಆಧಾರದ ಮೇಲೆ ಒಂದು ಪಣವನ್ನು ನಿರ್ಧರಿಸಿರುವುದನ್ನು ಕಾಣಬಹುದು. ಪಣ ಎಂಬುದು ಚಿನ್ನದ ನಾಣ್ಯ. ಹಣವೆಂತಲೂ ಕರೆಯಲಾಗುತ್ತದೆ. 'ಪಣ ಒಂದಕ್ಕೆ ನಾಲ್ಕು ಹಾಗಗಳೂ ಸಮನಾಗಿರುತ್ತವೆ. 6.2.ಗ್ರೇನ್ ತೂಕವನ್ನು ಪಣ ಹೊಂದಿತ್ತು ಎಂದು ತಿಳಿಯುತ್ತದೆ.[165] ಈ ನಾಣ್ಯ ಚೋಳ, ಹೊಯ್ಸಳ, ವಿಜಯನಗರದ ಅರಸರ ಕಾಲದಲ್ಲಿ ಹೆಚ್ಚು ಚಲಾವಣೆಯಲ್ಲಿತ್ತು.

**ವರಹ:–** ವರಹ ಅಥವಾ ವರಹಾ ಎನ್ನುವುದು ಇನ್ನೊಂದು ವರಿಷ್ಠ ಚಿನ್ನದ ನಾಣ್ಯ. ಬಾದಾಮಿ ಚಲುಕ್ಯರು ಮೊಟ್ಟಮೊದಲನೆಯ ಬಾರಿಗೆ ಈ ನಾಣ್ಯವನ್ನು ಆರಂಭಿಸಿದರು. ಇದರ ಮೇಲೆ ಚಲುಕ್ಯರ ಲಾಂಛನವಾದ ವರಾಹದ ಚಿತ್ರವಿದ್ದಿತು. ಆದುದರಿಂದ ಇದಕ್ಕೆ ವರಹ ಎನ್ನುವ ಹೆಸರು ಬಂದಿತು. ಅನಂತರ ಇದು ವರಿಷ್ಠ ಮಟ್ಟದ ನಾಣ್ಯದ ಸಂಕೇತವೇ ಆಯಿತು. ಇದರ ಮೇಲೆ ಹಂದಿಯ ಚಿತ್ರವಿಲ್ಲದಿದ್ದರೂ, ಆ ತೂಕದ ಚಿನ್ನದ ನಾಣ್ಯವನ್ನು ವರಹವೆಂದೇ ಜನಗಳು ಕರೆಯಲು ಆರಂಭಿಸಿದರು. ಆನೆ, ಸಿಂಹ, ದೇವ–ದೇವತೆಗಳಿರುವ ವರಹವಿಲ್ಲದಿರುವ 52 ಗ್ರೇನ್ ತೂಕದ ಚಿನ್ನದ ನಾಣ್ಯಗಳಿಗೆ ವರಹವೆಂಬ ಹೆಸರೇ ರೂಢಿಯಲ್ಲಿ ಬಂದಿತು. ಹೀಗಾಗಿ ಹೊಯ್ಸಳ, ಕಲ್ಯಾಣದ ಚಾಳುಕ್ಯ ಮುಂತಾದ ರಾಜಮನೆತನಗಳ ಕಾಲದಿಂದ ಆರಂಭವಾಗಿ, ವಿಜಯನಗರ ಕಾಲದಲ್ಲಿಯೂ ಬಳಕೆಯಲ್ಲಿದ್ದು, ಮೈಸೂರು ಒಡೆಯರು ಅವರೂ ಇದನ್ನು ಮುಂದುವರಿಸಿಕೊಂಡು ಹೋದರು. ಉಡುಗೊರೆಯನ್ನು ಕೊಡುವಾಗ ವರಹ ಎನ್ನುವ ಪದವನ್ನು ಬಳಸುವ ಪದ್ಧತಿ ಅಲ್ಲಲ್ಲಿ ಕಾಣಬರುತ್ತದೆ.[166] ಬೆಂಗಳೂರಿನ ಕೊಡಿಗೆಹಳ್ಳಿ, ಬಿಂಗೀಪುರ, ತ್ಯಾಮಗೊಂಡಲು ಶಾಸನದಲ್ಲಿ 'ವರಹ' ಎಂಬ ನಾಣ್ಯದ ಬಗ್ಗೆ ಉಲ್ಲೇಖವಿದೆ. ಕ್ರಿ.ಶ.1431ರ ಪ್ರೌಢದೇವರಾಯನ ಕಾಲದ ಶಾಸನದಲ್ಲಿ 'ವರಹ ಇಪ್ಪತ್ತು' ಎಂದಿದ್ದರೆ,[167] ಕ್ರಿ.ಶ.1760ರ ಮೈಸೂರು ಕೃಷ್ಣರಾಜಒಡೆಯರ್‌ರವರು ಬೆಂಗಳೂರು ಸ್ಥಳದ ಜಿಗಣಿ ಹೋಬಳಿ ಬಿಂಗೀಪುರ ಗ್ರಾಮದ ಹುಟ್ಟುವಳಿಗೆ ಇನ್ನೂರು ವರಹಕ್ಕೆ ಕ್ರಯ ಮತ್ತು ಎರಡು ಸಾವಿರ ವರಹವನ್ನು ಹೈದರಾಲಿಯ ಬೊಕ್ಕಸಕ್ಕೆ ಒಪ್ಪಿಸಿದ ವಿವರವಿದೆ.[168] ಹಾಗೂ ಕ್ರಿ.ಶ.1762ರ ತ್ಯಾಮಗೊಂಡ್ಲು ಶಾಸನದಲ್ಲಿ ನೂರೈವತ್ತು ವರಹ, ಐದುನೂರು ವರಹ ಎಂದಿದೆ.[169]

**ಅರವೀಸ:–** ಕ್ರಿ.ಶ.1628ರ ಶಾಸನದಲ್ಲಿ '1 ಅರವೀಸ' ಎಂದಿದೆ.[170] ವೀಸ ಎಂಬುದು ಸಣ್ಣನಾಣ್ಯ. ವೀಸದ ಅರ್ಧಬೆಲೆಯ ನಾಣ್ಯವೇ ಅರವೀಸ. ಇದೊಂದು ತಾಮ್ರದ ನಾಣ್ಯ. ಇದರ ತೂಕ 15 ಗ್ರೇನ್. ಇದನ್ನು ಅರೆಕಾಸು ಎಂತಲೂ ಕರೆಯಲಾಗುತ್ತದೆ.

**ಕಾಸು:–** ಕಾಸು ಎಂಬುದು ತಾಮ್ರದ ಚಿಕ್ಕ ನಾಣ್ಯ. ಇದರ ತೂಕ 30 ಗ್ರೇನ್. ಕ್ರಿ.ಶ.1586ರ ಆವತಿನಾಡ ಪ್ರಭುಗಳ ಶಾಸನದಲ್ಲಿ 'ಮೂಲೆಗಾಸು 1' ಎಂದಿದೆ.[171] ಹೀಗೆ ನಾಣ್ಯಗಳು ಒಂದು ಕಾಲಘಟ್ಟದ ಅಥವಾ ಸಾಮ್ರಾಜ್ಯದ ಸಾಂಸ್ಕೃತಿಕ ಚರಿತ್ರೆಯ ಚೌಕಟ್ಟನ್ನು ಕಟ್ಟಿಕೊಡುವುದರ ಜೊತೆಗೆ ಪರಂಪರಾಗತ ಮೌಲ್ಯಗಳಿಗೆ ಹೆಚ್ಚು ಒತ್ತುಕೊಡುತ್ತವೆ ಎಂದರೆ ತಪ್ಪಾಗಲಾಗದು. ಹಾಗಾಗಿ ಬೆಂಗಳೂರು ನಗರದ ಶಾಸನಗಳಲ್ಲಿ ಉಲ್ಲೇಖವಾಗಿರುವ ದಿನನಿತ್ಯದ ವ್ಯವಹಾರಕ್ಕೆ ಅಗತ್ಯವಾದ ನಾಣ್ಯಪರಂಪರೆಯ ಬಗ್ಗೆ ಈ ವಿಭಾಗದಲ್ಲಿ ವಿಶ್ಲೇಷಿಸಲಾಗಿದೆ.

## ಭೂದಾನದ ವಿಧಾನಗಳು

ಭೂಮಿ ಸರ್ವ ಸಂಪತ್ತಿನ ಮೂಲ. ಅರ್ವಾಚೀನ ಕಾಲದಿಂದಲೂ ಭೂಮಿ ಮಾನವ ಸಂಕುಲದ ಜೀವನೆಲೆ. ಭೂಮಿಯ ಆಸೆರೆಯೊಂದಿಗೆ ಮಾನವನ ಜೀವ ಸಂಕುಲದ ಬೆಳವಣಿಗೆ ಸಾಧ್ಯ. ಇಂತಹ ಭೂಮಿಯನ್ನು ಶ್ರೇಷ್ಠತೆಯ ಸ್ಥಾನಕೊಟ್ಟು ಪೂಜಿಸಲಾಗುತ್ತಿದೆ. ನಿಸರ್ಗದತ್ತವಾಗಿ ಬಂದ ಬೆಟ್ಟಗುಡ್ಡ, ಕಾಡು, ನದಿ, ಮಣ್ಣು ಇವೆಲ್ಲವೂ ಮನುಷ್ಯನ ಅವಶ್ಯಕತೆಯ ಬಳಕೆಗಳಾಗಿವೆ. ಹಾಗಾಗಿ ಭೂಮಿ ಜನರ ಉತ್ಪಾದನಾಂಗವಾಗಿ ಇದರ ಮೇಲಿನ ಹಿಡಿತ ಪಡೆಯಲು ಮನುಷ್ಯ ತನ್ನ ಅನುಕೂಲಕ್ಕಾಗಿ ಅಳತೆ, ಮಾಪನ, ಚೌಕಟ್ಟುಗಳನ್ನು ಸೃಷ್ಟಿಸಿಕೊಂಡು ತನ್ನ ಸ್ವತ್ತನ್ನಾಗಿಸಿಕೊಂಡನು. ರಾಜರು, ಅಧಿಕಾರಿಗಳು, ಸಮಾನ್ಯವರ್ಗದವರು ತಮ್ಮ ಅಧೀನದಲ್ಲಿದ್ದ ಭೂಮಿಯನ್ನು ಕೆಲವು ವಿಶೇಷ ಸಂದರ್ಭದಲ್ಲಿ ದಾನ ನೀಡುತ್ತಿದ್ದರು. ಈ ರೀತಿಯನ್ನು ಶಾಸನಗಳಲ್ಲಿ ಕಟ್ಟುಕೊಡುಗೆ, ಕೆರೆ–ಕಟ್ಟುಮಾನ್ಯ, ಬಿತ್ತುವಟ್ಟ, ಉಂಬಳಿ, ಕೊಡುಗೆ, ಇನಾಮು, ಭಟಮಾನ್ಯ ಗವುಡುಗೊಡಿಗೆ ಎಂದೆಲ್ಲಾ ಕರೆಯಲಾಗುತ್ತದೆ. ಮೇಲುನೋಟಕ್ಕೆ ಈ ಎಲ್ಲಾ ಪದಗಳು ಒಂದೇ ಎನಿಸಿದರೂ ಕೆಲವು ಮೂಲಭೂತ ವ್ಯತ್ಯಾಸಗಳಿವೆ.

**ಕಲ್ನಾಟು:–** "ತಮಿಳು ಸಾಹಿತ್ಯ ಕೃತಿಗಳಲ್ಲಿ ಪದೇ ಪದೇ ಉಲ್ಲೇಖವಾಗುವ 'ನಾಟ್ಟುಕಲ್' ಎಂಬುದೇ ಕಾಲಾಂತರದಲ್ಲಿ ನಾಟ್ಟುಕಲ್>ಕಲ್ಲುನಾಟ್ಟು>ಕಲ್ನಾಟು>ಕಲ್ನಾಡು ಆಗಿರಬಹುದು. ಈ ಪದ ತಮಿಳಿನಿಂದಲೇ ಕನ್ನಡಕ್ಕೆ ಪಲ್ಲಟರೂಪವಾಗಿ ಬಂದಿರಬಹುದು ಅಥವಾ ಇದೇ ರೂಪದಲ್ಲಿ ಮೊದಲಿಂದಲೂ ಇರಬಹುದು. ಆದರೆ ಈ ಎರಡೂ ಪದಗಳ ಪ್ರಯೋಗಗಳನ್ನು ಗಮನಿಸಿದಾಗ ಇವುಗಳ ಅರ್ಥ ಒಂದೇ ಎಂಬುದು ಸ್ಪಷ್ಟವಾಗುತ್ತದೆ." ಎಂದು ಡಾ.ಆರ್.ಶೇಷಶಾಸ್ತ್ರಿಗಳು

ಅಭಿಪ್ರಾಯಿಸಿದ್ದಾರೆ.[172] ಕ್ರಿ.ಶ.890ರ ಗಂಗರ ಕಾಲದ ಬೇಗೂರು ಶಾಸನದಲ್ಲಿ ಕಲ್ನಾಟಿನ ವಿಷಯವಿದೆ. ಗಂಗ ಅಧಿಕಾರಿ ನಾಗತ್ತರನು ಯುದ್ಧದಲ್ಲಿ ಹೋರಾಡಿ ಸಾವನ್ನಪ್ಪಿದ ನೆನಪಿಗಾಗಿ ಆತನ ಹೆಸರಲ್ಲಿ ಬೆಂಪೂರು–12 ಗ್ರಾಮವನ್ನು ಕಲ್ನಾಡಾಗಿ ನೀಡಲಾಗಿದೆ.[173] ವೀರನೊಬ್ಬ ಯುದ್ಧದಲ್ಲಿ ಮರಣ ಹೊಂದಿದರೆ ಅವನ ನೆನಪಿನಲ್ಲಿ ಶಾಸನ ಸಹಿತವಾಗಿ ಗ್ರಾಮವನ್ನು ದಾನನೀಡುವ ಪದ್ಧತಿಯೇ ಕಲ್ನಾಟು.

**ಬಿಟ್ಟುವಟ್ಟ:–** ಕೆರೆಯ ನಿರ್ಮಾಣ ಹಾಗೂ ಸಂರಕ್ಷಣೆಯ ಸಲುವಾಗಿ ನೀಡಲಾದ ಭೂಮಿ. ಕಟ್ಟುಕೊಡಿಗೆಯಂತೆಯೇ. ಕೆರೆ ಬಹಳ ಕಾಲ ಉಳಿಯಬೇಕಾದರೆ ಆಗಾಗ್ಗೆ ಅದರ ಯೋಗಕ್ಷೇಮಕ್ಕೆ ಗಮನವೀಯಬೇಕಾಗುತ್ತದೆ. ಅದರ ಕಟ್ಟೆ ಒಡೆಯಬಹುದು, ತೂಬು ಹಾಳಾಗಬಹುದು, ಮರಳಿನಿಂದ ಕೆರೆ ಹೂತು ಹೋಗಬಹುದು ಇವುಗಳಿಗೆ ಗಮನ ಕೊಡಲು ಹಣವು ಬೇಕಾಗುತ್ತದೆ. ಅದಕ್ಕಾಗಿ ಊರಿನ ಜನ ಸೇರಿ ಕೆರೆಗಾಗಿ ಒಂದು ಜಮೀನನ್ನು ಬಿಡುತ್ತಿದ್ದರು. ಬಹುಶಃ ಇದನ್ನೇ 'ಬಿತ್ತುವಾಟ' ಅಥವಾ 'ಬಿತ್ತುವಟ್ಟ' ಎಂದು ಶಾಸನಗಳಲ್ಲಿ ಕರೆದಿರುವುದು. ಈ ಗದ್ದೆಯಿಂದ ಬರುವ ಆದಾಯವನ್ನು ಕೆರೆಗಾಗಿ ಮೀಸಲಿಡುತ್ತಿದ್ದರು.[174] ಕ್ರಿ.ಶ.870ರ ಅಗರದಲ್ಲಿ ದೊರೆತ ಗಂಗರ ಕಾಲದ ಶಾಸನದಲ್ಲಿ ಸಿರಿಯಮಯ್ಯ ಎಂಬುವನು ಕೆರೆಯ ತೂಬನ್ನು ಸರಿಪಡಿಸಲು ಮೂರು ಕೆರೆಯ ಬಿತ್ತುವಟ್ಟವನ್ನು ಪಡೆದನು ಎಂಬ ವಿಷಯ ತಿಳಿಯುತ್ತದೆ.[175]

**ಕಟ್ಟುಕೊಡಿಗೆ:–** ಕೆರೆಕಟ್ಟಿದವನಿಗೆ ಕಂದಾಯವಿಲ್ಲದ ಭೂಮಿಯನ್ನು ಕೊಡುವುದು. ಇದನ್ನು ದಶವಂದ ಎಂದೂ ಕರೆಯಲಾಗುತ್ತಿತ್ತು. ಕ್ರಿ.ಶ.1342ರ ಹೊಯ್ಸಳರ ಶಾಸನವೊಂದರಲ್ಲಿ, 'ಸೇನಬೋವ ಅಲ್ಲಾಳಜೀಯರೊಳಗಾದ ಸಮಸ್ತ ನಾಡಗೌಡರು ಸೇರಿ ಮಾರಪ್ಪ ಎಂಬುವನಿಗೆ ನಾಗಸೆಟ್ಟಿಹಳ್ಳಿಗೆ ಸೇರುವ ಚತುಸೀಮೆಯನ್ನು ಕೊಟ್ಟ ಕೊಡುಗೆ' ಎಂದಿದೆ.[176] ಕ್ರಿ.ಶ.1530ರ ಯಲಹಂಕ ನಾಡಪ್ರಭುಗಳ ಶಾಸನದಲ್ಲಿ ಕೆಂಪೇಗೌಡರಿಗೆ ಪುರವೊಂದನ್ನು ನೀಡಿದ 'ಕೊಟ್ಟಕೊಡುಗೆ' ಎಂದಿದೆ.[177] ಗೋಣಿಗಟ್ಟಪುರ, ಇಟ್ಟಂಗೂರು ಮೊದಲಾದ ಕಡೆ ದೊರೆತ ಶಾಸನದಲ್ಲಿ ಕಟ್ಟುಕೊಡುಗೆಯ ಉಲ್ಲೇಖವಿದೆ. ಹೀಗೆ ಭೂಮಿಯನ್ನು ದಾನಮಾಡಿರುವುದನ್ನು ಗುರುತಿಸಬಹುದು.

**ಮಾನ್ಯ:–** ತೆರಿಗೆ ವಿನಾಯಿತಿ. ಆನೇಕಲ್ಲು ತಾಲೂಕಿನ ಮೇಡಿಹಳ್ಳಿ ಶಾಸನದಲ್ಲಿ 'ತಿಮ್ಮಣ್ಣ ಎಂಬುವರು ಗಂಗಾಧರ ಭಟ್ಟರಿಗೆ ಕೊಟ್ಟ ಮಾನ್ಯದ ಹೊಲದಾನ ಧಾರೆ' ಎಂದಿದೆ.[178]

**ಸರ್ವಮಾನ್ಯ:–** ಪೂರಾ ಮುಫತ್ತಾಗಿ ನೀಡಲಾದ ಜಮೀನು. ಕ್ರಿ.ಶ. 1363ರ ಅಗರ ಗ್ರಾಮದ ಶಾಸನದಲ್ಲಿ ಮೈಲೆಯ ನಾಯಕರು ಯಲಹಂಕನಾಡ ಅಲ್ಲಾಳ ಜೀಯನ ಮಗ ತಣ್ಣಿಯಪ್ಪನಿಗೆ ನೀಡಿದ

ಕ್ರಮವೆಂದರೆ ತೊರವಳಿನಾಡಿನ ಮೂಳಗದ್ದೆ, ಬೆದ್ದಲು ಚತುಸ್ಸೀಮೆಯನ್ನು ಸರ್ವಮಾನ್ಯದ ಕೊಡುಗೆಯಾಗಿ ನೀಡಲಾಗಿದೆ.[179] ಅಂದರೆ ಯಾವುದೇ ರೀತಿಯ ತೆರಿಗೆಗಳಿಂದ ಮುಕ್ತವಾಗಿ ನೀಡುತ್ತಿದ್ದ ಜಮೀನು ಅಥವಾ ಹಳ್ಳಿ/ಗ್ರಾಮ.

**ನೆತ್ತರು ಕೊಡುಗೆ:–** ಊರು ಸಮಾಜ ಅಥವಾ ನಾಡಿನ ಹಿತಕ್ಕಾಗಿ ಸೇವೆ ಸಲ್ಲಿಸಿದವರು ಮತ್ತು ಪ್ರಾಣ ತೆತ್ತವರಿಗಾಗಿ ಭೂದಾನವನ್ನು ನೀಡಲಾಗುತ್ತಿತ್ತು. ತೆರಿಗೆ ಮುಕ್ತವಾದ ಈ ಭೂಮಿಯನ್ನು ನೆತ್ತರು ಕೊಡುಗೆ ಅಥವಾ ಉಂಬಳಿ ಎಂದು ಕರೆಯಲಾಗುತ್ತಿತ್ತು. ಕ್ರಿ.ಶ.1624ರ ಕಾಲದ ಆನೇಕಲ್ಲು ತಾಲೂಕಿನ ಕಾಮನಾಯಕನಹಳ್ಳಿಯಲ್ಲಿ ದೊರೆತ ಶಾಸನವು ನೆತ್ತರು ಕೊಡುಗೆಯ ಬಗ್ಗೆ ಹೇಳುತ್ತದೆ.[180] ಶಿಂಗಸೇನನಾಯಕ ರಾಜ ಜಗಳದಲ್ಲಿ ಸಾವನ್ನು ಅಪ್ಪಿದಾಗ ಕಾಳಿನಾಯಕನ ಹಳ್ಳಿಯನ್ನು ನೆತ್ತರು ಕೊಡುಗೆಯಾಗಿ ಇಡೀ ಹಳ್ಳಿಯನ್ನೇ ದಾನ ನಿಡಿದ್ದಾನೆ. ಹಾಗೂ ಕ್ರಿ.ಶ.1600ರ ಕಾಲದ ಕಾಡಜಕ್ಕನಹಳ್ಳಿ ಶಾಸನದಲ್ಲಿ ನೆತ್ತರು ಕೊಡುಗೆಯ ಬಗ್ಗೆ ಉಲ್ಲೇಖವಿದೆ. ಚಿಕ್ಕರಾಯ ತಮ್ಮೇಗೌಡರು ಕಾಡಜಕ್ಕನಹಳ್ಳಿಯನ್ನು ತಿಮ್ಮ ಎಂಬುವನಿಗೆ ನೆತ್ತರು ಕೊಡುಗೆಯಾಗಿ ನೀಡಿದ್ದಾರೆ.

**ಕೊಡುಗೆ:–** ಕ್ರಿ.ಶ.1801ರ ಕಾಲದ ಶಾಸನದಲ್ಲಿ ವರ್ತಕರು ಕಟ್ಟಿಸಿದ ಕೆರೆ, ಕುಂಟೆ, ತೋಪು, ಕೊಡಿಗೆ, ಹೊಲ ಎಂದಿದೆ.[181]

ಹೀಗೆ ಭೂಮಿಯನ್ನು ರಾಜರು ಧಾರ್ಮಿಕ ಕಾರಣಗಳಿಗೆ ಹಾಗೂ ತಮಗೆ ಸೇವಾವೃತ್ತಿ ಮಾಡಿದವರಿಗೆ ಪ್ರತಿಫಲವಾಗಿ ನೀಡುತ್ತಿದ್ದರು. ಭೂಮಿದಾನದ ಹಿಂದಿನ ಉದ್ದೇಶ ಪುಣ್ಯಾರ್ಜನೆ ದೊರಕುತ್ತದೆ ಎಂಬ ನಂಬಿಕೆ. ಇದು ಧಾರ್ಮಿಕ ಚಟುವಟಿಕೆ ಎಂಬಂತೆ ನಮ್ಮ ಸಂಸ್ಕೃತಿಯಲ್ಲಿ ಕಾಣಸಿಗುತ್ತದೆ.

## ಅಳತೆ ಮಾಪನಗಳು

ಭೂಮಿ ಜನರ ಜೀವನಾಧಾರ. ಒಂದು ಕಡೆ ನೆಲೆನಿಂತು ನಾಗರೀಕನಾದ ಮನುಷ್ಯ ತನ್ನ ಕೃಷಿ ಚಟುವಟಿಕೆ, ಜೀವನಾಧಾರಕ್ಕೆ ಭೂಮಿಯ ಮೇಲೆ ಹಿಡಿತ ಹೊಂದ ಬಯಸತೊಡಗಿದ. ಇಂತಹ ಸಂದರ್ಭಗಳಿಂದಾಗಿ ಜನರು ವಾಸಿಸುವ ಭೂಮಿಯನ್ನು, ಕೃಷಿಭೂಮಿಯನ್ನು ಅಳೆಯುವ ಪದ್ಧತಿ ಪ್ರಾಚೀನ ಕಾಲದಲ್ಲೇ ಪ್ರಚಲಿತವಿದ್ದಿತು. ಪ್ರಾಚೀನ ಕಾಲದಲ್ಲಿನ ಭೂಮಾಪನಗಳ ರೀತಿ ಹಾಗೂ ಯಾವ ಆಧಾರದಲ್ಲಿ ಭೂಮಿಯನ್ನು ಅಳೆಯುತ್ತಿದ್ದರು ಎಂಬುದನ್ನು ಶಾಸನಗಳ ಮೂಲಕ ತಿಳಿಯಬಹುದು.

ಬೆಂಗಳೂರು ನಗರ ಜಿಲ್ಲೆಯ ಶಾಸನಗಳನ್ನು ಗಮನಿಸುವುದಾದರೆ, ಭೂಮಿಯನ್ನು ಖಂಡುಗ ಕೊಳಗ, ಗುಳಗದ್ದೆ, ಸಲಗೆ, ಬೀಜವರಿಯ ಆಧಾರವಾಗಿ ಭೂಮಿಯನ್ನು ಅಳತೆ ಮಾಡುತ್ತಿದ್ದುದು

ತಿಳಿಯುತ್ತದೆ. ನಾಗೊಂಡಹಳ್ಳಿಯಲ್ಲಿ ದೊರೆತ ಗಂಗರ ಶಾಸನದಲ್ಲಿ 'ಪದಿ(10)ಕೊಳಗ ಭತ್ತ ಬೆಳೆಯುವ ಜಾಗವನ್ನು ದಾನ ನೀಡಿರುವ' ವಿಷಯವಿದೆ.[182] ಭೂಮಿಯಲ್ಲಿ ಬೆಳೆಯುವ ಧಾನ್ಯದ ಪ್ರಮಾಣದ ಆಧಾರದ ಮೇಲೆ ಭೂ ಮಾಪನ ನಿರ್ಧಾರವಾಗುತ್ತಿತ್ತು.

ಆನೇಕಲ್ಲಿನಲ್ಲಿ ದೊರೆತ ವಿಜಯನಗರ ಕಾಲದ ಶಾಸನದಲ್ಲಿ ಕೊಳಗ[183] ಖಂಡುಗ ಗದ್ದೆ[184] ಎಂಬ ಉಲ್ಲೇಖವಿದ್ದರೆ. ಹೆಮ್ಮಿಗೆ ಪುರದ ಶಾಸನದಲ್ಲಿ ಮಹದೇವರಾಯರ ಮಗ ಪರುಸ ದೇವನಾರು ಎಂಬುವನು ಪೂರ್ವದ ಮಾನ್ಯ ಹೊಲ ಖಂಡುಗ, ಗದ್ದೆ, ಎರಡು ಹೊತ್ತಿನ ಉಪವೇದ್ಯ 10 ಗದ್ದೆ[185] ಎಂದಿದೆ. ವಿಜಯನಗರ ಕಾಲದ ಮತ್ತೊಂದು ಶಾಸನದಲ್ಲಿ ಬತ್ತಾದಾಯ ಬೀಜವರಿ ಭೂಮಿ[186] ಎಂದಿದೆ. ಹೀಗೆ ಧಾನ್ಯವನ್ನು ಬಿತ್ತಬಹುದಾದ ಬೀಜಾವರಿ ಆಧಾರದಲ್ಲಿಯೂ ಭುಮಿಯನ್ನು ಅಳೆಯತ್ತಿದ್ದರು.

ಚೋಳರ ಕಾಲದ ಶಾಸನದಲ್ಲಿ 'ಭೂಮಿ 4000 ಗದ್ದೆ ಸಲಗೆ, 500ಗದ್ದೆ ಸಲಗೆ, 1ಭಲಾರಿ ಭೂಮಿಗದ್ದೆ, 500 ಸುವರ್ಣ್ಣಕಾ ಭೂಮಿ'[187] ಎಂಬ ಉಲ್ಲೇಖವಿದೆ. ಸಲಗೆಯಲ್ಲಿ ಅಳತೆ ಮಾಡಿರುವ ಉಲ್ಲೇಖವಿದೆ.

ವಿಜಯನಗರದ ಕೃಷ್ಣದೇವರಾಯನ ಆಳ್ವಿಕೆಗೆ ಸೇರಿದ ಬಹುಭಾಗ ಭೂಮಿಯಲ್ಲಿ ಬೆಲೆಯ ಬಗ್ಗೆ ಖಚಿತ ನೀತಿಯನ್ನು ಸ್ಥಾಪಿಸಿದ್ದರು. ಜಮೀನು ಅಳೆಯಲು ರಾಜನ ಎತ್ತರಕ್ಕೆ ಸಮನಾದ ಕೋಲನ್ನು ಬಳಸುತ್ತಿದ್ದರು. ಅದನ್ನು 'ಮಟ್ಟದ ಕೋಲು' ಎನ್ನುತ್ತಿದ್ದರು. ಈ ಕೋಲು 6 ಅಡಿ ಎಂದು ಭಾವಿಸಬಹುದು. ಪ್ರತಿ ಊರಿನ ಜಮೀನನ್ನು 'ತುಂಡುನೆಲ'ಗಳನ್ನಾಗಿ ಅಳೆಯುತ್ತಿದ್ದರು. ಹತ್ತು ಕೋಲು ಅಥವಾ 60 ಅಡಿ, ಚೌಕ ಹೀಗೆ ಅಳೆಯುತ್ತಿದ್ದರು. ಇದು 3 ಶತಮಾನಗಳ ಹಿಂದೆ ಇದ್ದ ಚಕ್ರವರ್ತಿ ಕೃಷ್ಣದೇವರಾಯನ ಕಾಲದ ರೇಖಾಗಣಿತ ಜ್ಞಾನವನ್ನು ಹೇಳುತ್ತದೆ ಎಂದು ಬುಕಾನಾನ್ ತಿಳಿಸಿದ್ದಾನೆ.[188] ಹದಿನೆಂಟನೇ ಶತಮಾನದಲ್ಲಿದ್ದ ಕೆಲವು ವ್ಯಾಪಾರಿಗಳೆಲ್ಲಾ ಚರ್ಚೆ ಮಾಡಿ ಕೆಲವು ವಸ್ತುಗಳ ಬೆಲೆಯನ್ನು ಪಟ್ಟಿಮಾಡಿದರು. ಬೆಲೆಕಟ್ಟಲು ಸುಲಭವಾಗಲೆಂದು 'ಸೇರಿಂಗ ಪಟ್ಟಂ' ಅನುಸರಿಸುತ್ತಿದ್ದರು. ಹಾಗೂ ವಿನಿಮಯವಾದ 'ಫಣಂ'(ಪಣ!)ಅನ್ನು ಮಾನದಂಡವನ್ನಾಗಿಸಿ ಕೊಂಡಿದ್ದರು ಎಂಬ ಅಂಶವನ್ನು ಬುಕನನ್ ದಾಖಲಿಸುತ್ತಾನೆ.

ಒಟ್ಟಾರೆ ಪ್ರಾಚೀನ ಬೆಂಗಳೂರು ಜಿಲ್ಲೆಯ ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿಯನ್ನು ಅವಲೋಕಿಸಿದರೆ ಅಂದಿನ ಸಮಕಾಲೀನ ಕಾಲಘಟ್ಟದ ಕರ್ನಾಟಕದ ಬೇರೆಯಾವುದೇ ಪ್ರದೇಶಕ್ಕಿಂತಲೂ ಬೆಂಗಳೂರಿನ ಪರಿಸ್ಥಿತಿ ಭಿನ್ನವಾಗಿರಲಿಲ್ಲವೆಂಬುದು ತಿಳಿಯುತ್ತದೆ.

## ಕೊನೆ ಟಿಪ್ಪಣಿಗಳು

1. ಬಿ.ಎಲ್.ರೈಸ್(ಸಂ)–EC IX ಬೆಂಗಳೂರು–40, ವರ್ತೂರು, ಪು.19
2. ಶ್ರೀನಿವಾಸ ರಿತ್ತಿ(ಸಂ)–ಪ್ರಾಚೀನ ಕರ್ನಾಟಕದ ಆಡಳಿತ ಪರಿಭಾಷಾಕೋಶ, ಪು.22
3. ಬಿ.ಎಲ್.ರೈಸ್(ಸಂ)–EC IX ನೆಲಮಂಗಲ–42, ಬೂದಿಹಾಳ, ಪು.68
4. ಪೂರ್ವೋಕ್ತ, ನೆಲಮಂಗಲ–31, ಹೆಸರುಘಟ್ಟ, ಪು.64
5. ಪೂರ್ವೋಕ್ತ, ಆನೇಕಲ್ಲು–81, ಬನ್ನೇರುಘಟ್ಟ, ಪು.254
6. ಪೂರ್ವೋಕ್ತ, ಬೆಂಗಳೂರು–54, ದೊಡ್ಡನೆಕ್ಕುಂದಿ, ಪು.23
7. ಪೂರ್ವೋಕ್ತ, ಬೆಂಗಳೂರು–82, ಬೇಗೂರು, ಪು.30
8. Francis Buchanan-A Jouney froM madras through the countries of mysore canara and malbar, p-193.194
9. ಬಿ.ಎಲ್.ರೈಸ್(ಸಂ)–EC IX ಬೆಂಗಳೂರು–96, ಬೇಗೂರು, ಪು.33
10. ಪೂರ್ವೋಕ್ತ, ಆನೇಕಲ್ಲು–7, ಶಿಡಿಹೊಸಕೋಟೆ, ಪು.251
11. ಪೂರ್ವೋಕ್ತ, ಬೆಂಗಳೂರು–129, ನಾಗಶೆಟ್ಟಿಹಳ್ಳಿ, ಪು.49
12. ಪೂರ್ವೋಕ್ತ, ಬೆಂಗಳೂರು–109, ಕೆಂಗೇರಿ, ಪು.89
13. ಪೂರ್ವೋಕ್ತ, ದೊಡ್ಡಬಳ್ಳಾಪುರ–5, ತಿಪ್ಪೂರು, ಪು.134
14. ಪೂರ್ವೋಕ್ತ, ನೆಲಮಂಗಲ–74, ಶಿವಗಂಗೆ, ಪು.87
15. ಪೂರ್ವೋಕ್ತ, ಬೆಂಗಳೂರು–127, ಕೊಡುಗೆ ಹಳ್ಳಿ, ಪು.48
16. ಪೂರ್ವೋಕ್ತ, ಆನೇಕಲ್ಲು–7, ಮಾದಿಗೆರೆ, ಪು.237
17. ಎಂ.ಎಂ.ಕಲಬುರ್ಗಿ–ಶಾಸನಗಳಲ್ಲಿ ಶಿವಶರಣರು, ಪು.68
18. ಬಿ.ಎಲ್.ರೈಸ್(ಸಂ)–EC IX ಕಾನಕನಹಳ್ಳಿ–90, ಪು.288
19. ಪೂರ್ವೋಕ್ತ, ಹೊಸಕೋಟೆ–41, ಕೊರಟಗೆರೆಗ್ರಾಮ, ಪು.205
20. ಪೂರ್ವೋಕ್ತ, ಮಾಗಡಿ–18, ಕಲ್ಯ, ಪು.105,106
21. ಮುನಿರಾಜಪ್ಪ–ಮಾಗಡಿ ಸೀಮೆ ಇತಿಹಾಸ–ಸಂಸ್ಕೃತಿ, ಪು.97
22. EC IX ಅನುಬಂಧ ಸಂಪುಟ–135, ಸೋಲೂರು, ಪು.111

23. ಶ್ರೀನಿವಾಸ ರಿತ್ತಿ(ಸಂ)–ಪ್ರಾಚೀನ ಕರ್ನಾಟಕ ಆಡಳಿತ ಪರಿಭಾಷಾ ಕೋಶ, ಪು.50

24. ಬಿ.ಎಲ್.ರೈಸ್(ಸಂ)–EC IX ನೆಲಮಂಗಲ–82, ಪು.90

25. ಪೂರ್ವೋಕ್ತ, ದೊಡ್ಡಬಳ್ಳಾಪುರ–39, ಅರಳುಮಲ್ಲಿಗೆ ಗ್ರಾಮ, ಪು.147

26. ಪೂರ್ವೋಕ್ತ, ಬೆಂಗಳೂರು–88, ಬೇಗೂರು, ಪುಟ.31

27. ಪೂರ್ವೋಕ್ತ, ಬೆಂಗಳೂರು–94, ಬೇಗೂರು, ಪುಟ.32

28. ಚನ್ನಕ್ಕ ಪಾವಟೆ– ಕರ್ನಾಟಕ ಶಾಸನೋಕ್ತ ಮಹಿಳೆ–ಸಂಸ್ಕೃತಿ ಸಮೀಕ್ಷೆ, ಪುಟ.80

29. ಬಿ.ಎಲ್.ರೈಸ್(ಸಂ)–EC IX ಬೆಂಗಳೂರು–93, ಬೇಗೂರು, ಪುಟ–32

30. ಬಿ.ಎಲ್.ರೈಸ್(ಸಂ)–EC IX ಬೆಂಗಳೂರು–60, ಮಣ್ಣೆ, ಪುಟ,75

31. ಚನ್ನಕ್ಕ ಪಾವಟೆ, ಕರ್ನಾಟಕ ಶಾಸನೋಕ್ತ ಮಹಿಳೆ–ಸಂಸ್ಕೃತಿ ಸಮೀಕ್ಷೆ, ಪುಟ,97

32. ಸೂರ್ಯನಾಥ ಕಾಮತ್, ಪ್ರೊ.ಎಂ.ಎಚ್.ಕೃಷ್ಣಯ್ಯ(ಸಂ)–ಬೆಂಗಳೂರು ದರ್ಶನ, ಪು.45

33. ಬಿ.ಎಲ್.ರೈಸ್(ಸಂ)–EC IX ಹೊಸಕೋಟೆ–11, ಸಿದ್ಧನಹಳ್ಳಿ, ಪು.197

34. ಬಿ.ಎಲ್.ರೈಸ್(ಸಂ)–EC IX ಬೆಂಗಳೂರು–6, ಪು.5

35. ಬಿ.ಎಲ್.ರೈಸ್(ಸಂ)–EC IX ಬೆಂಗಳೂರು–64, ಮಡಿವಾಳ, ಪು.26

36. ಎಂ.ಜಿ.ಮಂಜುನಾಥ(ಸಂ), ಯಲಹಂಕನಾಡಪ್ರಭುಗಳ ಶಾಸನ ಸಂಪುಟ–ಕೃಷ್ಣಸಾಗರ–43, ಪು.70

37. ಪೂರ್ವೋಕ್ತ, ತುಮಕೂರು–44, ಹುಲಿಯೂರುದುರ್ಗ, ಪುಟ.72

38. ಪೂರ್ವೋಕ್ತ, ತುಮಕೂರು–45, ಹುಲಿಯೂರುದುರ್ಗ, ಪುಟ.73

39. ಪೂರ್ವೋಕ್ತ, ತುಮಕೂರು–47, ಹುಲಿಯೂರುದುರ್ಗ, ಪುಟ.75

40. ಪೂರ್ವೋಕ್ತ, ನೆಲಮಂಗಲ–41, ಪುಟ.66

41. ಪೂರ್ವೋಕ್ತ, ಕೋರಮಂಗಲ–95, ಪುಟ.199

42. ಎಚ್.ತಿಪ್ಪೇರುದ್ರಸ್ವಾಮಿ–ಕರ್ಣಾಟಕ ಸಂಸ್ಕೃತಿ ಸಮೀಕ್ಷೆ ಪು.221, 222

43. ಬಿ.ಎಲ್.ರೈಸ್(ಸಂ)–EC IX ಬೆಂಗಳೂರು–2, ಚಿಕ್ಕಪೇಟೆ, ಪು.3

44. ಚಿದಾನಂದಮೂರ್ತಿ–ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.209,210

45. ಶ್ರೀನಿವಾಸ ರಿತ್ತಿ–ಪ್ರಾಚೀನ ಕರ್ನಾಟಕದ ಆಡಳಿತ ಪರಿಭಾಷಾಕೋಶ, ಪು.117

46. ಡಾ.ಆರ್.ಗೋಪಾಲ್(ಸಂ)–ಮಂಡ್ಯ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪು.167

47. S.Leela Shantakumari-History of the Agraharas : Karnataka, 400-1300, p-2

48. ಬಿ.ಎಲ್.ರೈಸ್(ಸಂ)–EC IX ಬೆಂಗಳೂರು–40, ವರ್ತೂರು, ಪು.19

49. ಪೂರ್ವೋಕ್ತ, ಬೆಂಗಳೂರು–41, ಪಟ್ಟಂದೂರು, ಪು.19

50. ಪೂರ್ವೋಕ್ತ, ಹೊಸಕೋಟೆ–136, ಅರೇಹಳ್ಳಿ, ಪು.229

51. ಪೂರ್ವೋಕ್ತ, ಬೆಂಗಳೂರು–139, ಚಿಕ್ಕಜಾಲ, ಪು.51

52. ಪೂರ್ವೋಕ್ತ, ಬೆಂಗಳೂರು–68, ಮಡಿವಾಳ, ಪು.26

53. ಬಿ.ಎಲ್.ರೈಸ್(ಸಂ)–EC IX ಹೊಸಕೋಟೆ–111, ಕಮ್ಮಸಂದ್ರ, ಪು.224

54. ಪೂರ್ವೋಕ್ತ, ಬೆಂಗಳೂರು–6, ಪು.5

55. ಡಾ.ಎಂ.ಜಿ.ಮಂಜುನಾಥ–ಬೆಂಗಳೂರಿನ ಬಖೈರುಗಳು, ಪು.46,47

56. ಬಿ.ಎಲ್.ರೈಸ್(ಸಂ)–EC IX ಬೆಂಗಳೂರು–82, ಬೇಗೂರು, ಪು.29

57. ಪೂರ್ವೋಕ್ತ, ದೊಡ್ಡಬಳ್ಳಾಪುರ–45, ದೊಡ್ಡಹಜ್ಜಾಜಿ, ಪು.150

58. ಪೂರ್ವೋಕ್ತ, ಬೆಂಗಳೂರು–26 ದೊಡ್ಡಬೊಮ್ಮಸಂದ್ರ, ಪು.15

59. ಪೂರ್ವೋಕ್ತ, ಬೆಂಗಳೂರು–123, ಗೊಂಗಡಿಪುರ ಪು.45

60. ಪೂರ್ವೋಕ್ತ, ದೊಡ್ಡಬಳ್ಳಾಪುರ–42, ಪುಟ್ಟೈಯನ ಅಗ್ರಹಾರ, ಪು.149

61. ಪೂರ್ವೋಕ್ತ, ದೊಡ್ಡಬಳ್ಳಾಪುರ–19, ಕಂಚಿಗನಹಾಳು, ಪು.139

62. ಪೂರ್ವೋಕ್ತ, ನೆಲಮಂಗಲ–31, ಹೆಸರುಘಟ್ಟ, ಪು.31

63. ಪೂರ್ವೋಕ್ತ, ದೊಡ್ಡಬಳ್ಳಾಪುರ–2 ರಾಮಪುರ, ಪು.133

64. ಪೂರ್ವೋಕ್ತ, ಹೊಸಕೋಟೆ–39, ವೋಬಳಹಳ್ಳಿ, ಪು.204

65. ಪೂರ್ವೋಕ್ತ, ಬೆಂಗಳೂರು–116, ತುರಹಳ್ಳಿ, ಪು.42

66. ಪೂರ್ವೋಕ್ತ, ಹೊಸಕೋಟೆ–158, ಮುತ್ತುಕೂರು ಅಗ್ರಹಾರ, ಪು.234

67. ಪೂರ್ವೋಕ್ತ, ದೊಡ್ಡಬಳ್ಳಾಪುರ–58, ಕಾಮಾಕ್ಷಿಪುರ ಅಗ್ರಹಾರ, ಪು.155

68. ಡಾ.ಎಂ.ಜಿ.ಮಂಜುನಾಥ–ಬೆಂಗಳೂರಿನ ಬಖೈರುಗಳು, ಪು.43

69. ಡಾ.ಎಂ.ಜಿ.ಮಂಜುನಾಥ–ಯಲಹಂಕನಾಡಪ್ರಭುಗಳ ಶಾಸನ ಸಂಪುಟ–ಕಾಗದದ ದಾನಪತ್ರ–50, ಪು.79

70. ಬಿ.ಎಲ್.ರೈಸ್(ಸಂ)–EC IX ಬೆಂಗಳೂರು–61, ಹೂಡಿ, ಪು.25

71. ಪೂರ್ವೋಕ್ತ, ಬೆಂಗಳೂರು–30, ಅಲ್ಲಾಳಸಂದ್ರ, ಪು.16

72. ಪೂರ್ವೋಕ್ತ, ಬೆಂಗಳೂರು–119, ಹೆಮ್ಮಿಗೆಪುರ, ಪು.43

73. ಪೂರ್ವೋಕ್ತ, ಬೆಂಗಳೂರು–134, ಯಶವಂತಪುರ, ಪು.50

74. ಪೂರ್ವೋಕ್ತ, ಬೆಂಗಳೂರು–42, ನಾಗೊಂಡಹಳ್ಳಿ, ಪು.20

75. ಪೂರ್ವೋಕ್ತ, ಆನೇಕಲ್ಲು–82, ಬನ್ನೇರುಘಟ್ಟ, ಪು.254

76. ಪೂರ್ವೋಕ್ತ, ದೊಡ್ಡಬಳ್ಳಾಪುರ–31, ಪು.146

77. ಡಾ.ಎಚ್.ತಿಪ್ಪೇರುದ್ರಸ್ವಾಮಿ–ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಪು.363

78. ಬಿ.ಎಲ್.ರೈಸ್(ಸಂ)–EC IX ಬೆಂಗಳೂರು–3, ಅಲ್ಲಾಳಸಂದ್ರ, ಪು.16

79. ಪೂರ್ವೋಕ್ತ, ಬೆಂಗಳೂರು–70, ಸುಂಕೇನಹಳ್ಳಿ, ಪು.27

80. ಪೂರ್ವೋಕ್ತ, ಬೆಂಗಳೂರು–79, ಅಗರ, ಪು.88

81. ಸಿ.ಎಸ್.ವಾಸುದೇವನ್– ಹಂಪಿ ಪರಿಸರದ ಕೆರೆಗಳು, ಪು.23

82. ಬಿ.ಎಲ್.ರೈಸ್(ಸಂ)–EC IX ಬೆಂಗಳೂರು–80, ಅಗರ, ಪು.29

83. ಪೂರ್ವೋಕ್ತ, ಬೆಂಗಳೂರು–134, ಹೆಬ್ಬಾಳ, ಪು.50

84. ಪೂರ್ವೋಕ್ತ, ಬೆಂಗಳೂರು–127, ಕೊಡಿಗೆಹಳ್ಳಿ, ಪು.47

85. ಪೂರ್ವೋಕ್ತ, ಆನೇಕಲ್ಲು–70, ಶಿಡಿಹೊಸಕೋಟೆ, ಪು.251

86. ಎಂ.ಎ.ಆರ್. 1935 ಪು.25(ಎ)

87. ನೀಲತ್ತ ಹಳ್ಳಿಕಸ್ತೂರಿ(ಅನುವಾದ)–ಕರ್ನಾಟಕದಲ್ಲಿ ಕೆರೆನೀರಾವರಿ, ಪು.202

88. ಪೂರ್ವೋಕ್ತ, ಪು.205

89. ಪೂರ್ವೋಕ್ತ, ಪು.6

90. ಬಿ.ಎಲ್.ರೈಸ್(ಸಂ)–EC IX ಬೆಂಗಳೂರು–8, ದೊಮ್ಮಲೂರು, ಪು.10

91. ಪೂರ್ವೋಕ್ತ, ದೊಡ್ಡಬಳ್ಳಾಪುರ–5, ತಿಪ್ಪೂರು, ಪು.135

92. ಪೂರ್ವೋಕ್ತ, ಬೆಂಗಳೂರು–130, ನಾಗಶೆಟಿಹಳ್ಳಿ, ಪು.49

93. ಪೂರ್ವೋಕ್ತ, ಬೆಂಗಳೂರು–51, ಗುಂಜೂರು, ಪು.22

94. ಪೂರ್ವೋಕ್ತ, ಬೆಂಗಳೂರು–51, ಗುಂಜೂರು, ಪು.22

95. EC IX ಅನುಬಂಧಸಂಪುಟ, ಬೆಂಗಳೂರು–165, ಸರ್ಜಾಪುರ, ಪು.35

96. ಬಿ.ಎಲ್.ರೈಸ್(ಸಂ)–EC IX ಬೆಂಗಳೂರು–122, ಕನ್ನೆಲ್ಲಿ, ಪು.44

97. ಪೂರ್ವೋಕ್ತ, ಬೆಂಗಳೂರು–61, ಹೂಡಿ, ಪು.25

98. EC IX ಅನುಬಂಧ ಸಂಪುಟ, ಬೆಂಗಳೂರು–165, ಸರ್ಜಾಪುರ, ಪು.35

99. ಪೂರ್ವೋಕ್ತ, ಬೆಂಗಳೂರು–165, ಸರ್ಜಾಪುರ, ಪು.35

100. ಪೂರ್ವೋಕ್ತ, ಬೆಂಗಳೂರು–165, ಸರ್ಜಾಪುರ, ಪು.35

101. ಪೂರ್ವೋಕ್ತ, ಬೆಂಗಳೂರು–165, ಸರ್ಜಾಪುರ, ಪು.35

102. ಬಿ.ಎಲ್.ರೈಸ್(ಸಂ)–EC IX ಬೆಂಗಳೂರು–51, ಗುಂಜೂರು, ಪು.22

103. ಪೂರ್ವೋಕ್ತ, ಬೆಂಗಳೂರು–51, ಗುಂಜೂರು, ಪು.22

104. ಪೂರ್ವೋಕ್ತ, ಬೆಂಗಳೂರು–61, ಹೂಡಿ, ಪು.25

105. ಪೂರ್ವೋಕ್ತ, ಬೆಂಗಳೂರು–97, ಹೊಲಿಯನಕೆರೆ, ಪು.36

106. EC IX ಅನುಬಂಧಸಂಪುಟ, ಬೆಂಗಳೂರು–165, ಸರ್ಜಾಪುರ, ಪು.35

107. ಬಿ.ಎಲ್.ರೈಸ್(ಸಂ)–EC IX ಬೆಂಗಳೂರು–110, ಬ್ಯಾಡರಹಳ್ಳಿ, ಪು.89

108. EC IX ಅನುಬಂಧ ಸಂಪುಟ, ಬೆಂಗಳೂರು–165, ಸರ್ಜಾಪುರ, ಪು.35

109. ಪೂರ್ವೋಕ್ತ, ಬೆಂಗಳೂರು–165, ಸರ್ಜಾಪುರ, ಪು.35

110. EC IX ಅನುಬಂಧಸಂಪುಟ, ಬೆಂಗಳೂರು–165, ಸರ್ಜಾಪುರ, ಪು.35

111. ಬಿ.ಎಲ್.ರೈಸ್(ಸಂ)–EC IX ಬೆಂಗಳೂರು–61, ಹೂಡಿ, ಪು.25

112. ಪೂರ್ವೋಕ್ತ, ಬೆಂಗಳೂರು–110, ಬ್ಯಾಡರಹಳ್ಳಿ, ಪು.40

113. ಪೂರ್ವೋಕ್ತ, ಬೆಂಗಳೂರು–110, ಬ್ಯಾಡರಹಳ್ಳಿ, ಪು.89

114. ಪೂರ್ವೋಕ್ತ, ಬೆಂಗಳೂರು–105, ಹುಳಿಮಾವು, ಪು.38

115. ಪೂರ್ವೋಕ್ತ, ಬೆಂಗಳೂರು–30, ಅಲ್ಲಾಳಸಂದ್ರ, ಪು.16

116. ಪೂರ್ವೋಕ್ತ, ಆನೇಕಲ್ಲು–47, ಹಳೇಹಳ್ಳಿ, ಪು.246

117. ಪೂರ್ವೋಕ್ತ, ಬೆಂಗಳೂರು–6, ಪು.9

118. ಪೂರ್ವೋಕ್ತ, ಬೆಂಗಳೂರು–51, ಗುಂಜೂರು, ಪು.22

119. ಪೂರ್ವೋಕ್ತ, ಬೆಂಗಳೂರು–122, ಕನ್ನೆಲ್ಲಿ, ಪು.44

120. Francis Buchanan - A Journey from madras through the countries of mysore canara and malbar, p-193.194

121. ಬಿ.ಎಲ್.ರೈಸ್(ಸಂ)–EC IX ದೊಡ್ಡಬಳ್ಳಾಪುರ–52, ಇಸ್ತೂರು, ಪು.153

122. EC IX ಅನುಬಂಧ ಸಂಪುಟ, ಬೆಂಗಳೂರು–165, ಸರ್ಜಾಪುರ, ಪು.35

123. ಬಿ.ಎಲ್.ರೈಸ್(ಸಂ)–EC IX ಹೊಸಕೋಟೆ–87, ಅಟ್ಟೂರು, ಪು.129

124. ಪೂರ್ವೋಕ್ತ, ಮಾಗಡಿ–75, ಮೂಡ್ಲುಪಾಳ್ಯ, ಪು.120

125. ಪೂರ್ವೋಕ್ತ, ಹೊಸಕೋಟೆ–85, ಚಿಕ್ಕನಲ್ಲೂರು, ಪು.217

126. ಪೂರ್ವೋಕ್ತ, ಹೊಸಕೋಟೆ–111, ಕಂಮಸಂದ್ರ, ಪು.224

127. ಪೂರ್ವೋಕ್ತ, ಮಾಗಡಿ–80, ತಾವರೆಕೆರೆ, ಪು.131

128. ಪೂರ್ವೋಕ್ತ, ಬೆಂಗಳೂರು–130, ನಾಗಶೆಟ್ಟಿ ಹಳ್ಳಿ, ಪು.49

129. ಪೂರ್ವೋಕ್ತ, ದೊಡ್ಡಬಳ್ಳಾಪುರ–52, ಪು.153

130. ಪೂರ್ವೋಕ್ತ, ಕಾನಕಾನಹಳ್ಳಿ–97, ಅರಳಾಳು, ಪು.292

131. ಪೂರ್ವೋಕ್ತ, ಕಾನಕಾನಹಳ್ಳಿ–21, ಪು.264

132. ಪೂರ್ವೋಕ್ತ, ಕಾನಕಾನಹಳ್ಳಿ–46, ಪುರುಸಗೊಂಡಹಳ್ಳಿ, ಪು.271

133. ಪೂರ್ವೋಕ್ತ, ಕಾನಕಾನಹಳ್ಳಿ–28, ಕೋಟೆಕೊಪ್ಪ, ಪು.265

134. ಪೂರ್ವೋಕ್ತ, ದೇವನಹಳ್ಳಿ–40, ಸುರಧೇನುಪುರ, ಪು.176

135. ಪೂರ್ವೋಕ್ತ, ಆನೇಕಲ್ಲು–36, ಗಟ್ಟಹಳ್ಳಿ, ಪು.243

136. ಬಿ.ಆರ್.ಹಿರೇಮಠ–ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಪು.27

137. ಬಿ.ಎಲ್.ರೈಸ್(ಸಂ)–EC IX ಬೆಂಗಳೂರು–61, ಹೂಡಿ, ಪು.25

138. ಪೂರ್ವೋಕ್ತ, ಬೆಂಗಳೂರು–16, ಯಲಹಂಕ, ಪು.11

139. ಪೂರ್ವೋಕ್ತ, ಬೆಂಗಳೂರು–90, ಬೇಗೂರು, ಪು.31

140. ಪೂರ್ವೋಕ್ತ, ದೊಡ್ಡಬಳ್ಳಾಪುರ–31, ಪು.145

141. ಪೂರ್ವೋಕ್ತ, ಆನೇಕಲ್ಲು–64, ಮಾಸ್ತೇನಹಳ್ಳಿ, ಪು.250

142. ಪೂರ್ವೋಕ್ತ, ಆನೇಕಲ್ಲು–44, ಮಾಯಿಸಂದ್ರ, ಪು.245

143. ಪೂರ್ವೋಕ್ತ, ಹೊಸಕೋಟೆ–128, ಕಸಬೆ, ಪು.228

144. ಪೂರ್ವೋಕ್ತ, ದೊಡ್ಡಬಳ್ಳಾಪುರ–31, ಪು.145

145. ಪೂರ್ವೋಕ್ತ, ಆನೇಕಲ್ಲು–64, ಮಾಸ್ತೇನಹಳ್ಳಿ, ಪು.250

146. ಬಿ.ಆರ್.ಹಿರೇಮಠ–ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಪು.34
147. ಬಿ.ಎಲ್.ರೈಸ್(ಸಂ)–EC IX ಬೆಂಗಳೂರು–1, ಬಳ್ಳಾಳಪುರಪೇಟೆ, ಪು.2
148. ಪೂರ್ವೋಕ್ತ, ಬೆಂಗಳೂರು ದೊಡ್ಡಬಳ್ಳಾಪುರ–31, ಪು.145
149. ಪೂರ್ವೋಕ್ತ, ಆನೇಕಲು–44, ಮಾಯಿಸಂದ್ರ
150. ಪೂರ್ವೋಕ್ತ, ಬೆಂಗಳೂರು–142, ಪು.53
151. ಪೂರ್ವೋಕ್ತ, ಬೆಂಗಳೂರು–90, ಬೇಗೂರು, ಪು.34
152. ಪೂರ್ವೋಕ್ತ, ಆನೇಕಲ್ಲು–54, ಪು.208
153. Francis Buchanan-A Journey from madras through the countries of mysore canara and malbar, p-194,195
154. ಬಿ.ಎಲ್.ರೈಸ್(ಸಂ)–EC IX ಬೆಂಗಳೂರು–61, ಹೂಡಿ, ಪು.25
155. ಪೂರ್ವೋಕ್ತ, ಆನೇಕಲ್ಲು–44, ಮಾಯಿಸಂದ್ರ, ಪು.245
156. ಪೂರ್ವೋಕ್ತ, ಆನೇಕಲ್ಲು–4, ಮಾದಿಗೇರಿ, ಪು.236
157. ಎ.ವಿ.ನರಸಿಂಹಮೂರ್ತಿ–ಭಾರತೀಯ ನಾಣ್ಯ ಪರಂಪರೆ, ಪು.32
158. ಬಿ.ಎಲ್.ರೈಸ್(ಸಂ)–EC IX ಬೆಂಗಳೂರು–85, ಬೇಗೂರು, ಪು.31
159. ಪೂರ್ವೋಕ್ತ, ಹೊಸಕೋಟೆ–44, ವೋಬಳೇನಹಳ್ಳಿ, ಪು.206
160. ಪೂರ್ವೋಕ್ತ, ಬೆಂಗಳೂರು–127, ಕೊಡಿಗೆ ಹಳ್ಳಿ, ಪು.47
161. ಡಾ.ಸ್ಮಿತಾರೆಡ್ಡಿ–ದೊಡ್ಡ ನಾಗಮಂಗಲದ ಗಂಗರ ಶಾಸನ, ಎಂ.ಜಿ.ನಾಗರಾಜ, ಪಿ.ವಿ.ಕೃಷ್ಣಮೂರ್ತಿ(ಸಂ), ಇತಿಹಾಸ ದರ್ಶನ, ಸಂಪುಟ–14, ಪು.26
162. ಬಿ.ಎಲ್.ರೈಸ್(ಸಂ)–EC IX ಬೆಂಗಳೂರು–127, ಕೊಡಿಗೆಹಳ್ಳಿ, ಪು.47
163. ಪೂರ್ವೋಕ್ತ, ಹೊಸಕೋಟೆ–10, ಒಳಗೆರೆ, ಪು.197
164. ಪೂರ್ವೋಕ್ತ, ದೊಡ್ಡಬಳ್ಳಾಪುರ–31, ಪು.146
165. ಶ್ರೀನಿವಾಸ ರಿತ್ತಿ(ಸಂ)–ಪ್ರಾಚೀನ ಕರ್ನಾಟಕದ ಆಡಳಿತ ಪರಿಭಾಷಾ ಕೋಶ, ಪು.106
166. ಎ.ವಿ.ನರಸಿಂಹಮೂರ್ತಿ–ಭಾರತೀಯ ನಾಣ್ಯ ಪರಂಪರೆ, ಪು.32.33
167. ಬಿ.ಎಲ್.ರೈಸ್(ಸಂ)–EC IX ಬೆಂಗಳೂರು–127, ಕೊಡಿಗೆಹಳ್ಳಿ, ಪು.47
168. ಪೂರ್ವೋಕ್ತ, ಆನೇಕಲ್ಲು–90, ಬಿಂಗೀಪುರ, ಪು.236

169. ಪೂರ್ವೋಕ್ತ, ನೆಲಮಂಗಲ–51, ತ್ಯಾಮಗೊಂಡ್ಲು, ಪು.72

170. ಪೂರ್ವೋಕ್ತ, ಬೆಂಗಳೂರು–1, ಬಳ್ಳಾಪುರ ಪೇಟೆ, ಪು.1

171. ಬಿ.ಎಲ್.ರೈಸ್(ಸಂ)–EC IX ದೊಡ್ಡಬಳ್ಳಾಪುರ–5, ತಿಪ್ಪೂರು, ಪು.134

172. ಡಾ.ಆರ್.ಶೇಷಶಾಸ್ತ್ರಿ–ಕರ್ನಾಟಕದ ವೀರಗಲ್ಲುಗಳು, ಪು.145

173. ಬಿ.ಎಲ್.ರೈಸ್(ಸಂ)–EC IX ಬೆಂಗಳೂರು–83, ಬೇಗೂರು, ಪು.30

174. ಡಾ.ಎಂ.ಚಿದಾನಂದಮೂರ್ತಿ–ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.504

175. ಬಿ.ಎಲ್.ರೈಸ್(ಸಂ)–EC IX ಬೆಂಗಳೂರು–79, ಅಗರ, ಪು.28

176. ಪೂರ್ವೋಕ್ತ, ಬೆಂಗಳೂರು–129, ನಾಗಶೆಟ್ಟಿಹಳ್ಳಿ, ಪು.49

177. ಪೂರ್ವೋಕ್ತ, ಬೆಂಗಳೂರು–126, ಯಶವಂತಪುರ, ಪು.46

178. ಪೂರ್ವೋಕ್ತ, ಆನೇಕಲ್ಲು–14, ಮೇಡಿಹಳ್ಳಿ, ಪು.239

179. ಪೂರ್ವೋಕ್ತ, ಬೆಂಗಳೂರು–81, ಅಗರ, ಪು.29

180. ಪೂರ್ವೋಕ್ತ, ಬೆಂಗಳೂರು–58,ಕಾಮನಾಯಕನ ಹಳ್ಳಿ, ಪು.249

181. ಪೂರ್ವೋಕ್ತ, ಆನೇಕಲ್ಲು–70, ಶಿಡಿಹೊಸಕೋಟೆ, ಪು.251

182. ಪೂರ್ವೋಕ್ತ, ಬೆಂಗಳೂರು–42, ನಾಗೊಂಡಹಳ್ಳಿ, ಪು.20

183. ಪೂರ್ವೋಕ್ತ, ಆನೇಕಲ್ಲು–44, ಪು.245

184. ಪೂರ್ವೋಕ್ತ, ಆನೇಕಲ್ಲು–4, ಪು.236

185. ಪೂರ್ವೋಕ್ತ, ಬೆಂಗಳೂರು–119, ಹೆಮ್ಮಿಗೆಪುರ, ಪು.48

186. ಪೂರ್ವೋಕ್ತ, ನೆಲಮಂಗಲ–53, ಮುದ್ದಲಿಂಗನಹಳ್ಳಿ, ಪು.73

187. ಪೂರ್ವೋಕ್ತ, ನೆಲಮಂಗಲ–1, ಸೋಮದೇವನಹಳ್ಳಿ, ಪು.55

188. Francis Buchanan - A Journey from madras through the countries of mysore canara and malbar, p-194,195

# ಅಧ್ಯಾಯ–ಐದು
# ಸ್ಮಾರಕ ಶಿಲ್ಪಗಳು

"ಹುಟ್ಟಿದ ಪ್ರತಿಯೊಬ್ಬರೂ ಮರಣ ಹೊಂದುವುದು ಪ್ರಕೃತಿಯ ನಿಯಮ. ಆದರೆ ಸಾವಿನ ಹಿಂದಿರುವ ಕಲ್ಪನೆಗಳು, ಭಾವನೆಗಳು ಜನಾಂಗದಿಂದ ಜನಾಂಗಕ್ಕೆ, ಕಾಲದಿಂದ ಕಾಲಕ್ಕೆ ಭಿನ್ನವಾಗಿರುತ್ತವೆ. ಗತಿಸಿಹೋದ ಮಾನವನನ್ನು ಸಮಾಧಿ ಮಾಡಿದ ನಿರ್ದಿಷ್ಟ ಸ್ಥಳದ ಗುರುತಿಗಾಗಿಯೋ, ಮಡಿದವನ ಸ್ಮರಣೆ ಬರುವಂತೆ ಕೆಲವಾರು ಸಂಕೇತಗಳನ್ನೋ, ಗುರುತುಗಳನ್ನೋ ಒಂದು ನಿಗದಿಯಾದ ಸ್ಥಳದಲ್ಲಿ ಅಥವಾ ಸಮಾಧಿ ಮಾಡಿದ ಸ್ಥಳದಲ್ಲಿ ನೆಡುತ್ತಿದ್ದರು. ಇವು ಸಾಮಾನ್ಯವಾಗಿ ಆಯಾ ದೇಶಗಳಲ್ಲಿನ ಧರ್ಮ, ನಂಬಿಕೆ, ಸಾಮಾಜಿಕ ಪ್ರತಿಷ್ಠೆಗಳನ್ನನುಸರಿಸಿಯೇ ಬೆಳೆದಿದೆ. ಬೃಹದಾಕಾರದ ಪಿರಮಿಡ್ಡುಗಳಿಂದ ಹಿಡಿದು ಸಣ್ಣ ಪುಟ್ಟ ಕಲ್ಲುಗಳವರೆಗೂ ಇವುಗಳ ವ್ಯಾಪ್ತಿಯನ್ನು ಗುರುತಿಸಬಹುದು. ಹಾಗೆಯೇ ಪ್ರಾಗೈತಿಹಾಸಿಕ ಕಾಲದ ಕಲ್ಲಿನ ಮನೆಗಳಿಂದ ಹಿಡಿದು ಅಮೃತ ಶಿಲೆಗಳಿಂದ ನಿರ್ಮಿಸಿದ ಉನ್ನತ ನಾಗರೀಕತೆಯ ಶ್ರೇಷ್ಠ ವಾಸ್ತುವಿನವರೆಗೂ ಇದರ ವೈಭವವನ್ನು ಗುರುತಿಸಬಹುದು."[1] ಸಾವಿನ ನಂತರದ ಜೀವನದ ಕಲ್ಪನೆಯಲ್ಲಿ, ಸತ್ತವ್ಯಕ್ತಿಯ ಮೇಲಿನ ನೆನಪಿನ ಗುರುತಿಗಾಗಿ, ಅವನ ಕೀರ್ತಿಯನ್ನು ಪ್ರಸರಿಸಲಿಕ್ಕಾಗಿ ಇಂತಹ ಸ್ಮಾರಕಗಳು ಹುಟ್ಟಿಕೊಂಡಿವೆ. ಕರ್ನಾಟಕದಲ್ಲಿನ ಜನರು ಇಂದಿಗೂ ಹುತಾತ್ಮರಾದ ವ್ಯಕ್ತಿಗಳ ನೆನಪಿನಲ್ಲಿ ಸ್ಮಾರಕಗಳನ್ನು ಹಾಕಿಸುತ್ತಿದ್ದಾರೆ. ಹಾಗಾಗಿ ವ್ಯಕ್ತಿಯೊಬ್ಬನ ಅಂತ್ಯಸಂಸ್ಕಾರದ ವಿಧಿಯು ಬೇರೆ–ಬೇರೆ ಪ್ರದೇಶಗಳಲ್ಲಿ, ಜನ ಸಮೂಹಗಳಲ್ಲಿ ವಿಭಿನ್ನವಾಗಿರುತ್ತದೆ. ನಾಗರೀಕತೆಯೊಂದರ ವಿಭಿನ್ನ ಸಂಸ್ಕೃತಿಯೊಂದನ್ನು ಸ್ಮಾರಕ ಶಿಲ್ಪಗಳು ಕಟ್ಟಿಕೊಡುತ್ತವೆ.

ಸ್ಮಾರಕ ಎಂಬ ಪದಕ್ಕೆ 'ಸ್ಮರಿಸು' ಎಂಬ ಅರ್ಥವಿದೆ. ಸತ್ತ ವ್ಯಕ್ತಿಯ ನೆನಪನ್ನು ಸ್ಮರಿಸಿಕೊಳ್ಳುವುದೇ ಸ್ಮಾರಕಗಳಾಗಿವೆ. ಈ ಹಿನ್ನೆಲೆಯಲ್ಲಿ ಅಗಾಧವಾದ ಸ್ಮಾರಕ ಶಿಲ್ಪಗಳು ಜನ್ಮತಾಳಿವೆ. ಎಲ್ಲಾ ಸ್ಮಾರಕಗಳು ಸತ್ತ ವ್ಯಕ್ತಿಯ ನೆನಪನ್ನುಂಟು ಮಾಡಲು ಇರುವ ಸಂಕೇತಗಳು. ಜನಾಂಗವೊಂದರ ಅಂತ್ಯಸಂಸ್ಕಾರ ಪದ್ಧತಿಯ ಪ್ರತಿರೂಪವೇ ಈ ಸ್ಮಾರಕ ಕಲ್ಲುಗಳು. ಬೆಂಗಳೂರಿನಾದ್ಯಂತ ಇಂತಹ ನೂರಾರು ಸ್ಮಾರಕ ಶಿಲ್ಪಗಳು ಕಾಣಸಿಗುತ್ತವೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ದೊರೆತ ಸ್ಮಾರಕ ಶಿಲ್ಪಗಳಾದ ವೀರಗಲ್ಲುಗಳು, ಮಾಸ್ತಿಕಲ್ಲುಗಳು, ಆತ್ಮಾಹುತಿ ಶಿಲ್ಪಗಳನ್ನು ಮತ್ತು ಪೂರಕವಾದ ವೀರಶಾಸನಗಳನ್ನು ವಿಶ್ಲೇಷಿಸುವ ಪ್ರಯತ್ನವನ್ನು ಪ್ರಸ್ತುತ ಅಧ್ಯಾಯದಲ್ಲಿ ಮಾಡಲಾಗಿದೆ.

## ವೀರಗಲ್ಲುಗಳು

ರಾಜಕೀಯ ದೃಷ್ಟಿಯಿಂದ ವೀರಗಲ್ಲುಗಳು ಮಹತ್ವನ್ನು ಪಡೆದಿದ್ದರೂ, ಅವು ಒಂದು ನಾಡಿನ ಜನರ ಮನೋಧರ್ಮ, ಜೀವನಮೌಲ್ಯವನ್ನು ತಿಳಿಸುವಲ್ಲಿ ನೆರವಾಗುತ್ತವೆ. ಪ್ರಾಣದ ಹಂಗನ್ನು ತೊರೆದು ತಮ್ಮ ನಾಡಿಗಾಗಿ ಹೋರಾಡುವ ವ್ಯಕ್ತಿಯೊಬ್ಬನ ವೀರಗಾಥೆಯಾಗಿರುತ್ತವೆ. ವೀರಗಲ್ಲುಗಳು ಸಾಮಾಜಿಕ ನಿಷ್ಠೆ, ಸ್ವಾಮಿಭಕ್ತಿ, ಸ್ವಾಭಿಮಾನಗಳ ಪ್ರತೀಕವಾಗಿರುತ್ತವೆ. ಅಷ್ಟೇ ಅಲ್ಲದೆ ಸಮಾಜವೊಂದರ ಅಂತ್ಯ ಸಂಸ್ಕಾರದ ವಿಧಿ–ವಿಧಾನವನ್ನು ತಿಳಿಸುತ್ತವೆ. ಹಾಗೂ ಒಂದು ನಾಡಿನ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಡುವಲ್ಲಿ ಉತ್ತಮ  ಆಕರವಾಗಿವೆ.

**'ಜಿತೇನ ಲಭ್ಯತೇ ಲಕ್ಷ್ಮೀ ಹತೇನಾಪಿ ಸುರಾಂಗನಾ**
**ಕ್ಷಣವಿಧ್ವಂಸಿನೀ ಕಾಯೇ ಕಾ ಚಿಂತಾ ಮರಣೇ ರಣೇ॥'**

ವೀರಗಲ್ಲಿನಲ್ಲಿ ಸಾಮಾನ್ಯವಾಗಿ ಕಾಣಸಿಗುವ ಶ್ಲೋಕವಿದು. ಯುದ್ಧದಲ್ಲಿ ಗೆದ್ದರೆ ಲಕ್ಷ್ಮಿ ದೊರಕುವಳು, ಸತ್ತರೆ ವೀರ ಸ್ವರ್ಗ ದೊರಕುವುದು ಎಂಬ ಭಾವನೆ ಬೇರೂರಿತ್ತು. ಯುದ್ಧದಲ್ಲಿ ಹೋರಾಡಿ ಮಡಿದ ವ್ಯಕ್ತಿಗೆ ವೀರಸ್ವರ್ಗದ ಕಲ್ಪನೆಯೊಂದು ಹುಟ್ಟಿಕೊಂಡು ಯುದ್ಧ ವೀರನಿಗೆ ಪ್ರಾಮುಖ್ಯತೆ ದೊರೆಯಿತು. ವೀರಸ್ವರ್ಗ ಜೀವನ ಮೌಲ್ಯವೆಂಬಂತೆ ರೂಪುಪಡೆಯಿತು. ಈ ಹಿನ್ನೆಲೆಯಲ್ಲಿಯೇ ವೀರಕಾವ್ಯ, ವೀರಶಾಸನಗಳು ಹುಟ್ಟಿಕೊಂಡು ಜನಮನದಲ್ಲಿ ಬಲಿದಾನದ ಮನೋಭಾವ ಹೆಚ್ಚಾಗತೊಡಗಿತ್ತು.

ರನ್ನ ತನ್ನ ಗದಾಯುದ್ಧ ಅಥವಾ ಸಾಹಸಭೀಮ ವಿಜಯದಲ್ಲಿ ವೀರನಾದವನ ಕರ್ತವ್ಯ ಏನೆಂಬುದನ್ನು ದ್ರೌಪದಿಯ ಮೂಲಕ ಈ ರೀತಿ ಹೇಳಿಸಿದ್ದಾನೆ.

**"ತುಱುಗೋಳೊಳ್ ಪೆಣ್ಬುಯ್ಯಲೊ**
**ಳೆಱೆವೆಸದೊಳ್ ನಂಟನೆಡಱಿಳೊಳೂರಟೆವಿನೊಳಂ**
**ತಱೆಸಂದು ಗಂಡುತನಮನೆ**
**ನೆಱಪದವಂ ಗಂಡನಲ್ಲನೆಂತು ಷಂಡಂ"[2]**

ಅಂದರೆ ತುರುಗಳನ್ನು(ಹಸುಗಳನ್ನು) ರಕ್ಷಿಸುವುದು, ಸ್ತ್ರೀಯರ ಮಾನ ಕಾಪಾಡುವುದು, ಊರುಗಳನ್ನು ರಕ್ಷಿಸುವುದು ಗಂಡಸರ ಪರಮ ಕರ್ತವ್ಯವಾಗಿತ್ತೆಂದು ಇದರ ಅರ್ಥ. ಶತ್ರುಗಳಿಂದ ಸಂಪತ್ತಿನ ರಕ್ಷಣೆ ಮಾಡುವುದು ವೀರರ ಪರಮ ಕರ್ತವ್ಯವಾಗಿತ್ತೆಂದು ತಿಳಿದುಬರುತ್ತದೆ.

ಕರ್ನಾಟಕದಲ್ಲಿ ನಮಗೆ ದೊರೆಯುವ ಮೊಟ್ಟಮೊದಲ ವೀರಗಲ್ಲೆಂದರೆ ಕ್ರಿ.ಶ.ಸುಮಾರು500ರ ತಮಟಕಲ್ಲಿನ ಗ್ರಾಮದಲ್ಲಿ ದೊರೆಯುವ 'ಗುಣಮಧುರಾಂಕನ' ಶಾಸನ. ತಮಟಕಲ್ಲಿನ ಶಾಸನವು ಗುಣಮಧುರನನ್ನು ಯುದ್ಧಭೂಮಿಯಲ್ಲಿ ಯಮಸ್ವರೂಪಿಯೆಂದೂ, ಅವನ ಗುಣವನ್ನು ಅವನ ಶತ್ರುಗಳೂ ಮೆಚ್ಚುತ್ತಿದ್ದರು ಎಂಬ ಅಂಶವನ್ನು ತಿಳಿಸುತ್ತದೆ. ಬಾದಾಮಿಯ ಕಪ್ಪೆ ಅರಭಟ್ಟನ ಶಾಸನವು ನಮ್ಮ ಜನ ಯಾರನ್ನು ವೀರನೆಂಬುದಾಗಿ ಭಾವಿಸಿದ್ದರೋ ಅಂಥ ವೀರನೊಬ್ಬನ ಸ್ಪಷ್ಟ ಚಿತ್ರಣವನ್ನು ನೀಡುತ್ತದೆ. ವೀರನಾದವನಿಗಿರಬೇಕಾದ ಸಂಯಮ, ಉದಾತ್ತತೆ ಮತ್ತು ಪರಾಕ್ರಮ ಗುಣಗಳನ್ನು ಕಪ್ಪೆ ಅರಭಟ್ಟನಲ್ಲಿ ಕಂಡು ಆ ಶಾಸನ ಹೊಗಳಿದೆ. ಕಪ್ಪೆ ಅರಭಟ್ಟನನ್ನು ಹೊಗಳುವ ಆ ಪದ್ಯಗಳು ಕೇವಲ ಕಪ್ಪೆ ಅರಭಟ್ಟನ ಪ್ರಶಸ್ತಿಯಾಗದೆ ನಿಜವಾದ ವೀರನ ವೀರತನಕ್ಕೆ ಬರೆದ ಭಾಷ್ಯವಾಗಿದೆ.[3] ಪ್ರಾಚೀನ ಕರ್ನಾಟಕದಲ್ಲಿ ದೊರೆಯುವ ಶಾಸನಗಳಲ್ಲಿ ದಾನಶಾಸನಗಳನ್ನು ಹೊರತುಪಡಿಸಿದರೆ ಇಂತಹ ವೀರಶಾಸನಗಳೇ ಹೆಚ್ಚು ದೊರೆಯುತ್ತವೆ. ಈ ವೀರಶಾಸನಗಳೂ ಯುದ್ಧದ ಚಿತ್ರಣವನ್ನು ಅದರ ಪರಿಣಾಮವನ್ನು ಯುದ್ಧದ ಹಿನ್ನಲೆಯನ್ನು ಚಿತ್ರಿಸುವಲ್ಲಿ ನೆರವಾಗುತ್ತವೆ. ಒಂದು ಯುದ್ಧದ ಸಂಪೂರ್ಣ ಮಾಹಿತಿ ನಮಗೆ ಈ ಶಾಸನಗಳಿಂದ ದೊರೆಯದೇ ಇದ್ದರೂ ಯುದ್ಧಪ್ರಸಂಗವೊಂದರ ಸಾಕ್ಷಿಯಾಗಿ ನಿಲ್ಲುತ್ತವೆ. ಇಂತಹ ವೀರಗಲ್ಲುಗಳ ಅಧ್ಯಯನ ಸಾಂಸ್ಕೃತಿಕ ಚರಿತ್ರೆಯೊಂದನ್ನು ಕಟ್ಟಿಕೊಡುತ್ತದೆ.

ಬೆಂಗಳೂರಿನಲ್ಲಿ ದೊರೆಯುವ ವೀರಗಲ್ಲುಗಳನ್ನು ಗಮನಿಸಿದಾಗ ವೀರರು ಬೇರೆ–ಬೇರೆ ವಿಷಯಕ್ಕಾಗಿ ಮತ್ತು ವಿಭಿನ್ನ ಸಂದರ್ಭಗಳಲ್ಲಿ ವೀರಸ್ವರ್ಗವನ್ನು ಪಡೆದಿರುವ ಅಂಶ ತಿಳಿಯುತ್ತದೆ. ಭಿನ್ನತೆಯನ್ನು ಅವಲೋಕಿಸಿ ಅಧ್ಯಯನದ ಉದ್ದೇಶದಿಂದ ವೀರಗಲ್ಲುಗಳನ್ನು ಈ ಕೆಳಗಿನಂತೆ ವಿಂಗಡಿಸಬಹುದು.

1. **ತುರುಗೋಳ್ ವೀರಗಲ್ಲುಗಳು**
2. **ಯುದ್ಧದ ವೀರಗಲ್ಲುಗಳು**
3. **ಬೇಟೆಯ ವೀರಗಲ್ಲುಗಳು(ಹುಲಿ, ಹಂದಿ, ಜಿಂಕೆ ಮೊದಲಾದ ಪ್ರಾಣಿಗಳ ಬೇಟೆ)**
4. **ಊರಳಿವು**

ಈ ಮೊದಲಾದ ಕಾರಣಗಳಿಂದ ಮಡಿದ ವೀರರ ಸ್ಮಾರಕ ಶಿಲ್ಪಗಳು ಅಥವಾ ವೀರಗಲ್ಲುಗಳನ್ನು ಕಾಣಬಹುದು.

## ತುರುಗೋಳ್/ಗೋಗ್ರಹಣದ ವೀರಗಲ್ಲುಗಳು

ನಮ್ಮ ನಾಡಿನ ಮೂಲ ಕಸುಬೇ ವ್ಯವಸಾಯ. ಇದಕ್ಕೆ ಪಶುಗಳ ಅವಶ್ಯಕತೆ ಹೆಚ್ಚು. ಮಾನವನ ಸಹಾಯಕ ಜೀವಿಯಾಗಿದ್ದ ದನ–ಕರುಗಳು ಗ್ರಾಮೀಣ ಜನರ ಬದುಕಿನ ಆರ್ಥಿಕ ಮೂಲವಾಗಿತ್ತು ಹಾಗಾಗಿ ಇವುಗಳನ್ನು ಸಂಪತ್ತಿನಲ್ಲಿ ಒಂದೆಂದು ಪರಿಗಣಿಸಲಾಗಿತ್ತು. ಭಾರತೀಯರಿಗೆ ಗೋವು ಪವಿತ್ರವಾದದ್ದು. ದೈವೀ ಕಲ್ಪನೆಯಲ್ಲಿ ಗೋವನ್ನು ಪೂಜ್ಯಸ್ಥಾನಕ್ಕೆ ಏರಿಸಿದ್ದಾರೆ. ಮಹಾಭಾರತದಲ್ಲಿ ಯಕ್ಷನು ಧರ್ಮರಾಯನಿಗೆ 'ಯಾವುದು ಅಮೃತ' ಎಂಬ ಪ್ರಶ್ನೆ ಮುಂದಿಟ್ಟಾಗ ಆಕಳ ಹಾಲೇ ಅಮೃತ ಎಂದು ಹೇಳುತ್ತಾನೆ. ಕನ್ನಡದ ಮಹಾಕವಿ ಕುಮಾರವ್ಯಾಸ ಭಾರತದಲ್ಲಿ ಯಕ್ಷನು ಧರ್ಮರಾಯನಿಗೆ 'ಮರ್ತ್ಯಾವಳಿಗೆ ಮಾತೆಯರಾರು' ಎಂದು ಪ್ರಶ್ನಿಸಿದಾಗ 'ಮಾತಾರೂಪು ಗೋವುಗಳಿದು' ಎಂದು ಧರ್ಮರಾಯನು ನುಡಿದು ಗೋವುಗಳೇ ತಾಯಿಗೆ ಸಮಾನ ಎಂದು ಹೇಳುತ್ತಾನೆ. ಭಗವದ್ಗೀತೆಯಲ್ಲಿಯೂ ಕೃಷ್ಣನು ಇದನ್ನೇ ಹೇಳುತ್ತಾನೆ. "ಗೋವೋವಿಸೌಸ್ಯ ಮಾತಹಃ। ಮಾತರಃ ಸರ್ವಭೂತಾನಾಂ ಗಾವಃ ಸರ್ವ ಸುಖಪ್ರದಾ॥" ಎಂದು ಹೇಳಿ ಗೋವುಗಳೇ ವಿಶ್ವಕ್ಕೆ ತಾಯಿಯ ಸಮಾನ, ಅವುಗಳಿಂದಲೇ ಸರ್ವಸುಖ ಪ್ರಾಪ್ತಿ ಎಂದು ಹೇಳುತ್ತಾನೆ.[4] ಅನಾದಿ ಕಾಲದಿಂದಲೂ ಗೋವು ಭಾರತೀಯರ ದೈವಿ ಕಲ್ಪನೆಯಲ್ಲಿ ಒಂದು ಹಾಗೂ ಸಂಪತ್ತಿನ ಇನ್ನೊಂದು ರೂಪ.

'ತುರು' ಎಂದರೆ ಹಸು, ಆಕಳು, ದನ ಎಂಬರ್ಥವಿದೆ. 'ಕೋಳ್' ಎಂದರೆ ತೆಗೆದುಕೊಂಡು ಹೋಗುವುದು. ಕಳ್ಳರು ದನಗಳನ್ನು ಅಪಹರಿಸಿಕೊಂಡು ಹೋಗುವುದನ್ನು 'ತುಱುಗೋಳ್' ಎನ್ನಲಾಗುತ್ತದೆ. ತಮ್ಮ ದನಗಳನ್ನು ಕಳ್ಳಕಾಕರಿಂದ ರಕ್ಷಿಸಿಕೊಳ್ಳಲು ಹೋರಾಡುತ್ತಿದ್ದ ಪ್ರಸಂಗವನ್ನು 'ತುಱುಗೋಳ್' ಕದನ ಎಂದು ಕರೆಯಲಾಗುತ್ತಿತ್ತು. ಹೀಗೆ ಯಾವುದೇ ಮುನ್ಸೂಚನೆಯೂ ಇಲ್ಲದೆ ಆಕಸ್ಮಿಕವಾಗಿ ನಡೆಯುತ್ತಿದ್ದ ಒಂದು ರೀತಿಯ ಗ್ರಹಣದಂತೆ ತುರುಗಾಳಗವು ಜರುಗುತ್ತಿದ್ದುದರಿಂದ ಗೋಗ್ರಹಣ ಎಂದು ಕರೆಯಲಾಗಿದೆ. ತುರುಗಾಳಗ ಪ್ರಮುಖವಾಗಿ ರಾಜಕೀಯ ಉದ್ದೇಶದಿಂದ ನಡೆಯುತ್ತಿತ್ತು. ಶತ್ರುರಾಜರ ತುರುಗಳನ್ನು ಅಪಹರಿಸುವುದರ ಮೂಲಕ ಅವರ ಮೇಲೆ ಸವಾಲು ಎಸೆದು ಅವರನ್ನು ಕೆಣಕಿ ಯುದ್ಧಕ್ಕೆ ಆಹ್ವಾನವನ್ನೀಯುವುದಕ್ಕಾಗಿ ಈ ತುರುಗಾಳಗವನ್ನು ಆರಂಭಿಸುತ್ತಿದ್ದರು.[5] ಯುದ್ಧದಲ್ಲಿ ಹೋರಾಡಿ ಮರಣ ಹೊಂದುವ ವೀರರ ಗುಂಪು ಒಂದು ಕಡೆಯಾದರೆ. ತಮ್ಮ ಜೀವನೋಪಾಯದ ದನಗಳನ್ನು ಕಾಪಿಟ್ಟುಕೊಳ್ಳಲು ಹೋರಾಡುವ ವೀರರು ಮತ್ತೊಂದು ಕಡೆ. ಈ ದನಗಳು ತಮ್ಮಂತೆಯೇ ಎಂದು ಮಾನವೀಯತೆ ಮೆರೆಯುವ ವ್ಯಕ್ತಿಗಳು ಒಂದು ಕಡೆಯಾದರೆ. ದನಗಳನ್ನು ಅಪಹರಿಸಿಕೊಂಡು ಹೋಗುವ ದುರಾಸೆಯ ವ್ಯಕ್ತಿಗಳು ಮತ್ತೊಂದು

ಕಡೆ. ಪ್ರಾಚೀನ ಸಂದರ್ಭದಲ್ಲಿದ್ದ ಸಮುದಾಯಗಳ ಮನಸ್ಥಿತಿಗಳನ್ನು, ಅವಳಿವೈರುದ್ಯದ ವ್ಯಕ್ತಿತ್ವವನ್ನು ಪರಿಚಯಿಸುವಲ್ಲಿ ತುರುಗೋಳು ಶಾಸನಗಳು ಮುಖ್ಯವಾಗುತ್ತವೆ.

ಡಾ.ಎಂ.ಚಿದಾನಂದಮೂರ್ತಿಯವರು ಹೇಳುವಂತೆ, 'ತುರುಗಾಳಗವು ಮೂರು ಕಾರಣಗಳಿಂದ ಮಹತ್ವ ಪಡದುಕೊಂಡಿದೆ. ಮೊದಲನೆಯದಾಗಿ, ಗೋವು ಪೂಜನೀಯವಾದುದು. ಎರಡನೆಯದಾಗಿ, ಅದು ಕಳೆದುಕೊಳ್ಳಲಾಗದ ಆಸ್ತಿ. ಮೂರನೆಯದಾಗಿ, ಅವುಗಳನ್ನು ಕಳೆದುಕೊಳ್ಳುವುದರಲ್ಲಿ ಊರಿನ ವ್ಯಕ್ತಿಯ ಮಾನದ ಪ್ರಶ್ನೆಯೂ ಇದೆ.'[6] ತುರುಕಾಳಗ ಉಲ್ಲೇಖ ನಮಗೆ ಮೊದಲು ದೊರೆಯುವುದು ಮಹಾಭಾರತದಲ್ಲಿ. ವೀರರಾದ ಪಾಂಡವರನ್ನು ಅಜ್ಞಾತವಾಸದಿಂದ ಪ್ರಕಟಗೊಳಿಸುವಲ್ಲಿ ಕೌರವನು ವಿರಾಟನ ಗೋವುಗಳನ್ನು ಸೆರೆಹಿಡಿದುದನ್ನು ಈ ಹಿನ್ನೆಲೆಯಲ್ಲಿ ನೋಡಬಹುದು. ಮಹಾಭಾರತದ ಈ ವಿರಾಟಪರ್ವದ ಕಾಳಗ 'ತುರುಗೋಳ್' ಯುದ್ಧವೇ ಆಗಿದ್ದು, ನಮ್ಮ ದೇಶದಲ್ಲಿ ತುರುಗೋಳ್ ಯುದ್ಧ ಘಟನೆ ಅಷ್ಟು ಪ್ರಾಚೀನಕ್ಕೆ ಹೋಗುತ್ತದೆ. ಕರ್ನಾಟಕದಾದ್ಯಂತ ತುರುಗೋಟು ವೀರಗಲ್ಲುಗಳು ನಮಗೆ ದೊರೆಯುತ್ತವೆ. ಈ ವೀರಗಲ್ಲುಗಳು ಶಾಸನಗಳ ರೂಪದಲ್ಲಿಯೂ ಹಾಗೂ ಶಿಲ್ಪಗಳ ರೂಪದಲ್ಲಿಯೂ ನಮಗೆ ಕಾಣಸಿಗುತ್ತವೆ. ಬೆಂಗಳೂರಿನಲ್ಲಿ ದೊರೆಯುವ ಮೊದಲ ತುರುಗೋಳಿನ ಉಲ್ಲೇಖ ಕ್ರಿ.ಶ.900ರ ಗಂಗರ ಕಾಲಕ್ಕೆ ಸೇರುತ್ತದೆ. ನಾಗತ್ತರನ ಆಳು ಮಂಗಲ ಬೀವಣ್ಣ ಎಂಬುವನು ತುಱುಗಳನ್ನು ರಕ್ಷಿಸಲು ಹೋಗಿ ಮರಣ ಹೊಂದುತ್ತಾನೆ.[7] ಗಟಿಂಜವಾಗಿಲು ಎಂಬ ಸ್ಥಳದಲ್ಲಿ ತುಱುಗಳನ್ನು ಅಪಹರಿಸಲು ಬಂದ ಶತ್ರುಗಳೊಟ್ಟಿಗೆ ಹೋರಾಡಿ ವೀರನೊಬ್ಬ ಸತ್ತ ವಿಷಯ ತಿಳಿಸುವ ಶಾಸನ ಗಂಗರ ಕಾಲಕ್ಕೆ ಸೇರಿದೆ. ಶಾಸನದ ಬಹುಭಾಗ ತ್ರುಟಿತವಾಗಿರುವುದರಿಂದ ವೀರನ ಹೆಸರಿನ ಉಲ್ಲೇಖವಿಲ್ಲ.[8] ಗಂಗರ ಕಾಲದ್ದೇ ಆದ ಮತ್ತೊಂದು ಶಾಸನದಲ್ಲಿ ಗಂಗ ಮಹಾನಿಗನ ಮಗ ಬಾದೆಯನ್ನಿ ರಟ್ಟಿ ಎಂಬುವನು ತುರುಗೋಳಿನಲ್ಲಿ ಕಾದಾಡಿ ಸುರಲೋಕವನ್ನು ಪಡೆಯುತ್ತಾನೆ ಎಂದಿದೆ.[9]

ಆನೇಕಲ್ಲು ತಾಲೂಕಿನ ಹೆಬ್ಬಗೋಡಿಯಲ್ಲಿ ತುರುಗೋಳಿನ ಶಾಸನವೊಂದು ದೊರೆತಿದೆ. ಗಂಗ ಎಱೆಯಪ್ಪನ ಆಳ್ವಿಕೆಯಲ್ಲಿ ನಾಗತ್ತರನ ನಾಡನ್ನು ಆಳುತ್ತಿದ್ದಾಗ ಒಬ್ಬ ವ್ಯಕ್ತಿ ತುಱುಗೋಳ ಕಾಳಗದಲ್ಲಿ ಮರಣಹೊಂದುತ್ತಾನೆ. ಹೋರಾಡಿ ಮರಣ ಹೊಂದಿದ ಈ ವ್ಯಕ್ತಿಗಾಗಿ ಪೆಪ್ಪರವಾಯ್ ಎಂಬ ಸ್ಥಳದಲ್ಲಿ ಕೊಳಗ ಗದ್ದೆಯನ್ನು ದಾನ ಮಾಡಲಾಗಿದೆ. ಆದರೆ ಈ ಕಾಳಗದಲ್ಲಿ ಸತ್ತವ್ಯಕ್ತಿಯ ಹೆಸರಿನ ಉಲ್ಲೇಖವಿಲ್ಲ. ಮತ್ತೊಂದು ಶಾಸನದ ಪ್ರಕಾರ ರಾಚಸೆಟ್ಟಿಯರ ಮಗ ಮರಮ್ಮಸೆಟ್ಟಿ ಪರಳೂರಿನ(ಹರಳೂರು) ತುರುಗಳನ್ನು ಅಪಹರಿಸುತ್ತಾನೆ. ತುರುಗಳ ಅಪಹರಣ ಮಾಡಿದ ಮರಮ್ಮ ಸೆಟ್ಟಿಯನ್ನು ಎದುರಿಸುವ ಪ್ರಯತ್ನ ಮಾಡಿ ಬೀಳ್ಗುನ್ದದಲ್ಲಿ(ಮೇಡಹಳ್ಳಿಯಲ್ಲಿರುವ ಇಂದಿನ ಹಾಳುಗುಡ್ಡ)

ಕಾದಿ ಸತ್ತವನು ರಾಚವಲ್ಲರ ಭಾವ ಎಂದು ಶಾಸನದಲ್ಲಿದೆ.[10] ಈ ಶಾಸನವನ್ನು ಸಂಶೋಧಿಸಿದ ಆದಿಯಪ್ಪ ಪಾಸೋಡಿಯವರು ಲಿಪಿಯ ಆಧಾರದ ಮೇಲೆ ಗಂಗರ ಕಾಲಕ್ಕೆ ಸೇರಿರಬಹುದಾದ ಶಾಸನವಿದು ಎಂದು ಅಭಿಪ್ರಾಯಿಸಿದ್ದಾರೆ. ಈ ಪರಳೂರು ಇಂದಿನ ಹೊಸಕೋಟೆಯಲ್ಲಿರುವ ಸ್ಥಳವಾಗಿದೆ. ಸಾಮಾನ್ಯವಾಗಿ ತುರುಗಳನ್ನು ಕಾಪಾಡಿ ವೀರಮರಣ ಹೊಂದಿದ ವ್ಯಕ್ತಿಯ ಹೆಸರನ್ನು ಶಾಸನಗಳಲ್ಲಿ ಉಲ್ಲೇಖಿಸಲಾಗುತ್ತಿತ್ತು. ಆದರೆ ಈ ಶಾಸನದಲ್ಲಿ ರಾಚಮಲ್ಲರ ಭಾವ ಎಂದಷ್ಟೇ ಇದೆ. ಈ ಶಾಸನದ ಮತ್ತೊಂದು ವಿಶೇಷತೆ ಎಂದರೆ ತುರುಗಳನ್ನು ಅಪಹರಿಸಿದ ವ್ಯಕ್ತಿಯು ರಾಚಸೆಟ್ಟಿಯರ ಮಗ ಮರಮ್ಮಸೆಟ್ಟಿ ಎಂದು ಹೆಸರನ್ನು ಉಲ್ಲೇಖಿಸಲಾಗಿದೆ. ಕ್ರಿ.ಶ.1000 ಪೆರಿಯೂರನ್ನು ಮಾದಿಯ ಗಾವುಂಡನೆಂಬುವನು ಆಳುತ್ತಿದ್ದಾಗ ಸಿರಿಲೂರನ ಮಗ ಮಾರಸಿಂಗನು ತುರುಗಳನ್ನು ಅಪಹರಿಸುತ್ತಿದ್ದ ಕಳ್ಳರೊಂದಿಗೆ ಕಾದಾಡಿ ಸಾವನ್ನಪ್ಪುತ್ತಾನೆ.[11] ಶಾಸನೋಲ್ಲೇಖಿತ ಪೆರಿಯೂರು ಇಂದಿನ ಹಿರಿಯೂರು. ಅದೇ ಸ್ಥಳದಲ್ಲಿ ಮತ್ತೊಂದು ಕಲ್ಲಿನ ಮೇಲೆ ಕೊಸಿಗರ ಮಟ್ಟಿಗುರಾಮ ಎಂಬುವನು ತುರುಗೋಳ್‌ನಲ್ಲಿ ಕಾದು ಸತ್ತ ವಿಷಯವಿದೆ.[12]

ಬಸವಸೆಟ್ಟಿಯ ಮಗ ಕಾದಲ್ಬಾಗಿಲ ಚಬ್ಬಿಸೆಟ್ಟಿ. ಈ ಚೆಬ್ಬಿಸೆಟ್ಟಿಯ ತಮ್ಮ ಮಣಿಯಮಸೆಟ್ಟಿಯರು ತುರುಗೋಳವೊಂದರಲ್ಲಿ ವೀರಮರಣ ಹೊಂದಿದ್ದಾರೆ.[13] ವ್ಯಾಪಾರಿಗಳು ಆಕಳುಗಳನ್ನು ಸಾಗಾಣಿಕೆಗಾಗಿ ಬಳಸುತ್ತಿದ್ದಿರಬಹುದು ಅಥವಾ ವರ್ತಕರನ್ನು ದಾರಿಗಳ್ಳರು ಕೊಳ್ಳೆ ಹೊಡೆಯಲು ಬಂದಾಗ ಹೋರಾಟ ನಡೆದಿರಬಹುದು. ಹಾಗೂ ವ್ಯಾಪಾರಕ್ಕಾಗಿ ಬೇಕಾದ ಈ ಗೋವುಗಳ ಸಾಕಾಣಿಕೆಯ ಜವಾಬ್ದಾರಿ ವರ್ತಕರದ್ದೇ ಆಗಿದ್ದಾಗ ಅದರ ರಕ್ಷಣೆಯ ಹೊಣೆಯೂ ಅವರದ್ದೇ ಆಗಿರುತ್ತದೆ. ಈ ಸಂದರ್ಭದಲ್ಲಿ ಹೋರಾಡಿ ವೀರಸ್ವರ್ಗವನ್ನು ಪಡೆದಿದ್ದಾರೆ.

ಪುರುಷರು ಗೋವುಗಳನ್ನು ಸೆರೆಹಿಡಿದು ಮತ್ತು ಸೆರೆಹಿಡಿದ ಗೋವುಗಳನ್ನು ರಕ್ಷಿಸಲು ಹೋರಾಡಿ ಮಡಿದ ಪ್ರಸಂಗಗಳು ಸಾಮಾನ್ಯವಾಗಿ ಕಾಣಸಿಗುತ್ತವೆ. ಆದರೆ ಈ ತುರುಕಾಳಗದಲ್ಲಿ ಮಾಚಗಾವುಂಡನ ಮಗಳು ಲಕ್ಷ್ಮಮ ಗಾವುಣ್ಡಿಯು ಸಱಿಕ್ಕನೂರಿನ ಎಮ್ಮೆ ಮತ್ತು ತುರುಗಳನ್ನು ಹೊಡೆದೊಯ್ಯುತ್ತಿರಲು ಶತ್ರುಗಳೊಂದಿಗೆ ಹೋರಾಡಿ ತುರುಗಳನ್ನು ರಕ್ಷಿಸಿ ಮಡಿಯುತ್ತಾಳೆ. ಹೆಣ್ಣೊಬ್ಬಳ ವೀರತೆಯನ್ನು ಮೆರೆದ ಶಾಸನವಿದು. ಮಹಿಳೆಯರು ತಮ್ಮ ಗಂಡನೊಂದಿಗೆ ಚಿತೆ ಏರುವುದರೊಂದಿಗೆ ಸತಿ ಹೋಗುತ್ತಿದ್ದ ಪ್ರಸಂಗಗಳೇ ಹೆಚ್ಚಿದ್ದ ಕಾಲದಲ್ಲಿ ದಿಟ್ಟತನದಿಂದ ಹೋರಾಡಿ ವೀರಸ್ವರ್ಗ ಪಡೆಯುತ್ತಿದ್ದ ಮಹಿಳೆಯರ ಸಂಖ್ಯೆ ವಿರಳವೆನ್ನಬಹುದು. ಹೀಗೆ ಬೆಂಗಳೂರಿನಲ್ಲಿ ದೊರೆತ

ಶಾಸನಗಳಲ್ಲಿ ಉಲ್ಲೇಖಿತ ಮಂಗಲ ಬೀವಣ್ಣ, ಬಾದೆಯನ್ನಿ ರಟ್ಟಿ, ಮಾರಸಿಂಗ, ಕೊಸಿಗರ ಮಟ್ಟಿಗುರಾಮ, ಲಕ್ಷ್ಮಮ ಗಾವುಂಡಿ ಇವರೆಲ್ಲರೂ ತುರುಗಳನ್ನು ಕಾಪಾಡಲು ಹೋರಾಡಿದ ವೀರರು.

ತುರುಗೋಳು ವೀರಗಲ್ಲನ್ನು ಗುರುತಿಸಲು ನಮಗೆ ನೆರವಾಗುವುದೇ ಆ ಕಲ್ಲಿನಲ್ಲಿ ಬಿಡಿಸಲಾಗಿದ್ದ ಆಕಳಿನ ಚಿತ್ರ. ತುರುಕಾಳಗದಾಗಿದ್ದರೆ ಕಡ್ಡಾಯವಾಗಿ ಶಿಲ್ಪಿಗಳು ದನದ ಚಿತ್ರವನ್ನು ಬಿಡಿಸುತ್ತಿದ್ದರು. ಇದರಿಂದ ಲಿಪಿ ಇಲ್ಲದಿದ್ದರೂ ಆ ಶಿಲ್ಪಗಳು ತುಱುಗೊಳ್ ಯುದ್ಧದ ವೀರಗಲ್ಲುಗಳೆಂದು ಗುರುತಿಸಲು ಸಾಧ್ಯವಾಗುತ್ತದೆ. ಬೆಂಗಳೂರು ನಗರದಲ್ಲಿ ಶಾಸನ ರಹಿತ ತುರುಗೋಳಿನ ವೀರಗಲ್ಲುಗಳು ದೊರೆತಿವೆ.

ಬೇಗೂರಿನಲ್ಲಿನ ನಾಗೇಶ್ವರ ದೇವಾಲಯದಲ್ಲಿ ತುರುಗೋಳ್‌ನ ಶಿಲ್ಪವಿದೆ. ಇದು ಗಂಗರ ಕಾಲದ ಅಂದರೆ ಕ್ರಿ.ಶ. ಸುಮಾರು 900ರ ಕಾಲಘಟ್ಟದ ವೀರಗಲ್ಲು. ಈ ಶಿಲ್ಪವು ಮೂರು ಹಂತದಲ್ಲಿದೆ. ಮೊದಲಹಂತದಲ್ಲಿ ಎರಡು ಸಾಲು ದನಗಳು ಹಾಗೂ ಎರಡು ಎಮ್ಮೆಗಳ ಚಿತ್ರಣವಿದೆ. ದನಗಳೊಂದಿಗೆ ಎಮ್ಮೆಗಳನ್ನು ಅಪಹರಿಸಿಕೊಂಡು ಹೋಗುತ್ತಿದ್ದರು ಎಂಬುದು ತಿಳಿಯುತ್ತದೆ. ಮಧ್ಯದ ಹಂತವನ್ನು ಎರಡು ಭಾಗಗಳಾಗಿ ಮಾಡಿ ಒಂದೊಂದು ಭಾಗದಲ್ಲಿ ಒಬ್ಬೊಬ್ಬ ವೀರ ಹೋರಾಡುತ್ತಿರುವಂತಿದೆ. ಕೊನೆಯ ಹಂತದಲ್ಲಿ ಇಬ್ಬರು ವೀರರೂ ಅಪ್ಸರೆಯರೊಡನೆ ಕುಳಿತಿದ್ದಾರೆ. ಶತ್ರುಗಳ ಚಿತ್ರಣವಿಲ್ಲ.

ಬೇಗೂರಿನಲ್ಲೇ ಮತ್ತೊಂದು ತುರುಗೋಳು ವೀರಗಲ್ಲು ದೊರೆತಿದೆ. ಇದೂ ಸಹ ಕ್ರಿ.ಶ. ಸುಮಾರು 900ರ ಕಾಲಘಟ್ಟದ ವೀರಗಲ್ಲು. ವೀರನು ವೀರಮುಡಿಕಟ್ಟಿ, ಎಡಗೈನಲ್ಲಿ ಬಿಲ್ಲನ್ನು ಹಿಡಿದು ನಿಂತಿದ್ದಾನೆ. ಬಲಗೈನಲ್ಲಿ ಕತ್ತಿಯೊಂದನ್ನು ಹಿಡಿದುಕೊಂಡಿದ್ದಾನೆ. ತಲೆಯಿಂದ ಕಾಲಿನವರೆಗೂ ಬಾಣಗಳು ಚುಚ್ಚಿಕೊಂಡಿವೆ. ವೀರನ ಬಲಗಡೆಗೆ ಮೂರು ಎಮ್ಮೆಗಳ ಚಿತ್ರಣವಿದೆ. ಆದರೆ ಮುಂದಕ್ಕೆ ಶಿಲಾಫಲಕದ ಕಲ್ಲು ಹೊಡೆದು ಹೋಗಿದೆ. ಮೇಲಿನ ಭಾಗದಲ್ಲಿ ವೀರನನ್ನು ಅಪ್ಸರೆಯರು ವೀರನ ತೋಳುಗಳನ್ನು ಹಿಡಿದು ಕರೆದೊಯ್ಯುತ್ತಿದ್ದಾರೆ.

ದೊಡ್ಡಬೇಗೂರಿನಲ್ಲಿ ಎರಡು ಹಂತದ ವೀರಗಲ್ಲು ದೊರೆತಿದೆ. ಇದು ಕ್ರಿ.ಶ. ಸುಮಾರು 10ನೆಯ ಶತಮಾನದ ವೀರಗಲ್ಲು ಎಂದು ಗುರ್ತಿಸಲಾಗಿದೆ. ಈ ಕಲ್ಲಿನ ಬಲತುದಿಗೆ ತ್ರುಟಿತವಾಗಿರುವ ಶಾಸನವಿದೆ. ಕೆಳಹಂತದಲ್ಲಿ ವೀರನೊಬ್ಬನು ವೀರಮುಡಿಯನ್ನು ಕಟ್ಟಿದ್ದಾನೆ. ಕೊರಳಲ್ಲಿ ಕಂಠಾಭರಣ, ಕೈ–ಕಾಲುಗಳಿಗೆ ಕಡಗ, ನಡುವಿನಲ್ಲಿ ಸೊಂಟ ಪಟ್ಟಿಗಳಿಂದ ಅಲಂಕೃತವಾದಂತೆ ಬಿಡಿಸಲಾಗಿದೆ. ಎಡಗೈನಲ್ಲಿ ಬಿಲ್ಲನ್ನು, ಬಲಗೈನಲ್ಲಿ ಬಾಕನ್ನು ಹಿಡಿದಿರುವಂತೆ ಚಿತ್ರಿಸಲಾಗಿದೆ. ವೀರನ ದೇಹಕ್ಕೆ ಬಾಣಗಳು ನಾಟಿರುವಂತೆ ಚಿತ್ರಿಸಿದ್ದು ತುರುಗಳು ವೀರನ ಶಿಲ್ಪದ ಬಲಗಡೆ ಚಿತ್ರಿತಗೊಂಡಿದೆ. ಮೇಲಿನ ಹಂತದಲ್ಲಿ

ವೀರನ ಇಬ್ಬರು ಅಪ್ಸರೆಯರು ಆಸೀನ ಭಂಗಿಯಲ್ಲಿ ಕುಳಿತ ವೀರನ ತೋಳುಗಳನ್ನು ಹಿಡಿದು ಹೊತ್ತೊಯುತ್ತಿದ್ದಾರೆ.

ಅಗರದ ಆಂಜನೇಯ ದೇವಾಲಯದ ಬಳಿಯ ವೀರಗಲ್ಲಿದೆ. ಇದು ಕ್ರಿ.ಶ. ಸುಮಾರು 10ನೆಯ ಶತಮಾನದ ವೀರಗಲ್ಲು ಎಂದು ಗುರ್ತಿಸಲಾಗಿದೆ. ಯುದ್ಧ ಮಾಡುತ್ತಿರುವ ವೀರನ ಚಿತ್ರಣವಿದೆ. ವೀರನು ತನ್ನ ಬಲಗೈನಲ್ಲಿ ಬಿಲ್ಲನ್ನು, ಎಡಗೈನಲ್ಲಿ ಖಡ್ಗವನ್ನು ಹಿಡಿದಿದ್ದಾನೆ. ಬೆನ್ನಿನಲ್ಲಿ ಬಾಣಗಳ ಬತ್ತಳಿಕೆ ಇದೆ. ವೀರಮುಡಿ, ಕೊರಳಲ್ಲಿ ಆಭರಣ, ಕಾಲು ಮತ್ತು ಕೈಗಳಲ್ಲಿ ಕಡಗಳಿಂದ ಅಲಂಕೃತವಾಗಿದ್ದಾನೆ. ಈ ವೀರನ ಪಕ್ಕದಲ್ಲೇ ಎರಡು ತುರುಗಳ ಚಿತ್ರವಿದೆ. ಯುದ್ಧಕ್ಕೆ ಹೊರಟಿರುವ ವೀರನಿಗಾಗಿ ವಾದ್ಯ, ಮೇಳ ಬಾರಿಸುತ್ತಿರುವ ಚಿತ್ರಣವಿದೆ. ವೀರನ ಪಕ್ಕದಲ್ಲಿ ಅಶ್ವದ ಚಿತ್ರಣವಿದೆ. ಇದರ ಮೇಲೆ ವೀರನನ್ನು ಅಪ್ಸರೆಯರು ಹೊತ್ತೊಯ್ಯುತ್ತಿರುವಂತೆ ಚಿತ್ರಿಸಲಾಗಿದೆ. ವೀರ ಕೈಲಾಸವಾಸಿಯಾಗಿ ಪದ್ಮಾಸನದಲ್ಲಿ ಅಂಜಲಿ ಬದ್ಧನಾಗಿ ಕೈಮುಗಿದು ಕುಳಿತಿರುವಂತೆ ಬಿಡಿಸಲಾಗಿದೆ.

ಬೆಂಗಳೂರಿನ ರೈಲ್ವೆ ನಿಲ್ದಾಣದ ಹಿಂಭಾಗದಲ್ಲೊಂದು ತುರುಕಾಳಗದ ವೀರಗಲ್ಲೊಂದು ಇದೆ. ಇದು ಕ್ರಿ.ಶ. ಸುಮಾರು 12ನೆಯ ಶತಮಾನದ ವೀರಗಲ್ಲು ಎಂದು ಗುರ್ತಿಸಲಾಗಿದೆ. ವೀರನು ಬಲಗೈನಲ್ಲಿ ಕತ್ತಿಯನ್ನು ಹಿಡಿದುಕೊಂಡಿದ್ದಾನೆ. ಕೊರಳಲ್ಲಿ ಆಭರಣ, ಕೈಗಳಲ್ಲಿ ಕಡಗಗಳಿಂದ ಅಲಂಕೃತನಾಗಿದ್ದಾನೆ. ವೀರನ ಪಕ್ಕದಲ್ಲಿ ಗೋವುಗಳನ್ನು ಬಿಡಿಸಲಾಗಿದೆ. ಈ ಗೋವುಗಳ ಸಂರಕ್ಷಣೆಯನ್ನು ಮಾಡಿ ವೀರ ಸಾವನ್ನಪ್ಪಿರುವ ವಿಷಯವನ್ನು ಈ ಶಿಲ್ಪ ತಿಳಿಸುತ್ತದೆ.

ಬಂಜಾರ ಪಾಳ್ಯದಲ್ಲೊಂದು ತುರುಕಾಳಗದ ವೀರಗಲ್ಲೊಂದು ದೊರಕಿದೆ. ಇದು ಕ್ರಿ.ಶ. ಸುಮಾರು 13ನೆಯ ಶತಮಾನದ ವೀರಗಲ್ಲು ಎಂದು ಗುರ್ತಿಸಲಾಗಿದೆ. ಈ ಶಿಲಾಫಲಕದಲ್ಲಿ ವೀರನು ಎಡಗೈನಲ್ಲಿ ಬಿಲ್ಲನ್ನು, ಬಲಗೈನಲ್ಲಿ ಪುಟ್ಟ ಆಯುಧವನ್ನು ಹಿಡಿದಿದ್ದಾನೆ. ನಡುವಿನಲ್ಲಿ ಖಡ್ಗವಿದೆ. ವೀರಮುಡಿಯನ್ನು ಕಟ್ಟಿದ್ದಾನೆ. ಈತನ ಪಾದದ ಬಳಿಯಲ್ಲಿ ತುರುವಿನ ಚಿತ್ರಣವಿದೆ. ಶತ್ರುಗಳ ಬಾಣ ಈತನ ದೇಹವನ್ನು ಪ್ರವೇಶಿಸಿರುವಂತೆ ಶಿಲ್ಪಿ ಕಂಡರಿಸಿದ್ದಾನೆ. ಈ ವೀರಗಲ್ಲಿನ ಮೇಲ್ಭಾಗದಲ್ಲಿ ವೀರನು ಅಪ್ಸರೆಯೊಂದಿಗೆ ನಿಂತಿರುವ ಚಿತ್ರಣವಿದೆ.

ತುರುಗಾಳಗವು ಕಳ್ಳತನ ಮತ್ತು ರಾಜಕೀಯ ಉದ್ದೇಶಗಳಿಗಾಗಿಯೇ ನಡೆಯುತ್ತಿತ್ತು. ಯುದ್ಧಗಳು ನಡೆಯುತ್ತಿದ್ದದ್ದೆ ಸಂಪತ್ತು, ನಾಡು, ಹಸು, ಸೈನ್ಯ, ಹೆಣ್ಣು ಹೀಗೆ ಜನರು ಯಾವುದು ಮೌಲ್ಯ ಎಂದು ನಂಬಿದ್ದರೋ ಅದರ ಸಂರಕ್ಷಣೆಗಾಗಿ ಹೋರಾಡಿ ಅಪಹರಿಸಿದ್ದನ್ನು ಹಿಂದಿರುಗಿಸಿಕೊಟ್ಟಾಗ ಅಂತಹ ವೀರರ ಬಗ್ಗೆ ಗೌರವ ಭಾವನೆ ಮೂಡುವುದು ಸಹಜ. ಒಂದು

ನಾಡಿನ ಜೀವಧನವಾಗಿದ್ದ ತುರುಗಳನ್ನು ಅಪಹರಿಸಿದಾಗ ಸುಮ್ಮನಿರುವುದು ಹೇಡಿತನವೆಂದೇ ಭಾವಿಸಲಾಗಿತ್ತು. ಹಾಗಾಗಿ ತುರುಗಳು ಅಪಹರಣಕ್ಕೆ ಒಳಗಾದಾಗ ತಮ್ಮ ಪ್ರಾಣವನ್ನೂ ಲೆಕ್ಕಿಸದೆ ಹೊರಾಡುತ್ತಿದ್ದರು.

## ಯುದ್ಧದ ವೀರಗಲ್ಲುಗಳು

ತಮ್ಮ ನಾಡಿನ ರಕ್ಷಣೆಗಾಗಿ ಅಸಾಮಾನ್ಯವಾಗಿ ಹೋರಾಡಿ ಮಡಿದ ವೀರರ ಪರಾಕ್ರಮಗಳನ್ನು ಹೇಳುವ ಶಾಸನಗಳೇ ವೀರಶಾಸನಗಳು. ಈ ಶಾಸನವು ವ್ಯಕ್ತಿಯೊಬ್ಬನ ಪ್ರಶಸ್ತಿಶಾಸನವಾಗಿರುತ್ತವೆ. ಈತ ಯಾವುದೇ ಹೋರಾಟದಲ್ಲಿ ಸತ್ತಿರಲಿ, ಗೆದ್ದಿರಲಿ ಆತನ ವೀರಗುಣವನ್ನು ವೈಭವೀಕರಿಸಲಾಗಿರುತ್ತದೆ. ವೀರನ ಪ್ರಶಂಸೆಯನ್ನು ಜನರಿಗೆ ತಿಳಿಸುವ ಉದ್ದೇಶದಿಂದ ಕಲ್ಲುಗಳನ್ನು ಜನರು ಸಂಚರಿಸುವ ಜಾಗಗಳಲ್ಲಿ ಹಾಕಿಸುತ್ತಿದ್ದಿರಬೇಕು. ಹಾಗಾಗಿ ಇವುಗಳು ಊರಬಾಗಿಲ ಮುಂದೆ, ದೇವಾಲಯಗಳ ಮುಂದೆ, ಹೊಲಗದ್ದೆಗಳಲ್ಲಿ ಹೆಚ್ಚಾಗಿ ಕಾಣಸಿಗುತ್ತವೆ. ಶಾಸನ ಸಹಿತ ವೀರಗಲ್ಲುಗಳು ಶಾಸನ ರಹಿತ ವೀರಗಲ್ಲೂಗಳೆರಡೂ ಬೆಂಗಳೂರಿನಲ್ಲಿವೆ. ಎಪಿಗ್ರಾಫಿಯಾ ಕರ್ನಾಟಿಕ IX ರಲ್ಲಿ ಉಲ್ಲೇಖಿತವಾಗಿರುವ ವೀರಗಲ್ಲು ಶಾಸನಗಳಷ್ಟೇ ಅಲ್ಲದೆ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ದೊರೆತ ಶಾಸನ ರಹಿತ ವೀರಗಲ್ಲು ಶಿಲ್ಪವನ್ನು ಅಧ್ಯಯನಕ್ಕೆ ಒಳಪಡಿಸಿಕೊಳ್ಳಲಾಗಿದೆ.

ಬೆಂಗಳೂರಿನಲ್ಲಿ ದೊರೆಯುವ ಪ್ರಥಮ ವೀರಗಲ್ಲೆಂದರೆ ಕ್ರಿ.ಶ.750ರ ಗಂಗರ ದೊರೆ ಶ್ರೀಪುರುಷನ ಕಾಲದಲ್ಲಿ ಕರಿಕನಾಡಿನ ಬಿದಿರ್ಕಲ್ಲನ್ನು ಆಳುತ್ತಿದ್ದ ಕುಕ್ಕರನೆಂಬ ಪಾಳೆಗಾರನದ್ದು.[14] ಈತ ಹೋರಾಟದಲ್ಲಿ ಇರಿತಕ್ಕೆ ಒಳಗಾಗಿ ಮಡಿದ ಸಂಗತಿಯನ್ನು ತಿಳಿಸುತ್ತದೆ. ಗಂಗರ ಕಾಲದ ಅಧಿಕಾರಿ ನಾಗತ್ತರನ ವೀರಾವೇಶದ ಹೋರಾಟವನ್ನು ತಿಳಿಸುವ ಕ್ರಿ.ಶ.890ರ ಶಾಸನವೊಂದು ಬೆಂಗಳೂರಿನಲ್ಲಿದೆ. ಶಿಲ್ಪದ ದೃಷ್ಟಿಯಿಂದ ಈ ವೀರಗಲ್ಲು ಅದ್ವಿತಿಯವಾಗಿದೆ. ಗಂಗದೊರೆ ಎರೆಯಪ್ಪನ ಸಾಮಂತ ಅಧಿಕಾರಿ ನಾಗತ್ತರನು ಬೀರಮಹೇಂದ್ರ ಎಂಬ ಅರಸನೊಂದಿಗೆ ಹೋರಾಡಿದನು. ಆನೆಯ ಜೊತೆಗೆ ಹೋರಾಡಿ ಮರಣ ಹೊಂದಿದ ವಿಷಯವನ್ನು ಈ ವೀರಗಲ್ಲಿನ ಚಿತ್ರದಲ್ಲೇ ನೋಡಬಹುದು. ಈ ಶಿಲೆಯಲ್ಲಿ ಎಡಗಡೆ ಕುದುರೆಯ ಮುಂದೆ ನಿಂತು ಆನೆಯೊಡನೆ ಹೋರಾಡುತ್ತಿರುವ ವೀರನೇ ನಾಗತ್ತರ. ರಣರಂಗದ ಸಮಗ್ರ ಚಿತ್ರಣವನ್ನು ಕಲ್ಲಿನಲ್ಲಿ ಅಳವಡಿಸಲಾಗಿದೆ. ಸೈನಿಕರು, ಗಾಯಾಳು, ಯುದ್ಧವಾದ್ಯ ಆಯುಧಗಳು, ರಕ್ತಮಾಂಸದ ಆಸೆಗೆ ಹಕ್ಕಿಗಳು ಬಂದಿರುವುದು, ಕುಂಭ ಸ್ಥಳಕ್ಕೆ ಬಾಣಗಳು ಚುಚ್ಚಿರುವ ಆನೆ. ಹೀಗೆ ಒಟ್ಟಾರೆ ಯುದ್ಧದ ರೋಚಕ ಸನ್ನಿವೇಶವನ್ನು ಪರಿಚಯಿಸುತ್ತದೆ. ಈ ವೀರಗಲ್ಲನ್ನು ಬೆಂಗಳೂರಿನ ಮ್ಯೂಸಿಯಂನಲ್ಲಿ ಸಂರಕ್ಷಿಸಿಡಲಾಗಿದೆ. ಯುದ್ಧದಲ್ಲಿ ಹೋರಾಡಿ

ವೀರಮರಣ ಹೊಂದಿದ ನಾಗತ್ತರನ ಹೆಸರಿನಲ್ಲಿ ಗಂಗ ದೊರೆ ಎರೆಯಪ್ಪನು ಇರುಗನಿಗೆ ನಾಗತ್ತರನ ಪದವಿಯನ್ನು ನೀಡಿ ಹನ್ನೆರಡು ಹಳ್ಳಿಯನ್ನು ದತ್ತಿಯಾಗಿ ನೀಡುತ್ತಾನೆ.[15] ನಾಗತ್ತರನ ಮನೆಮಗ ಬುಟ್ಟಣ ಪತಿ ಎಂಬುವನು ಬೆಂಗಳೂರಿನ ಕಾಳಗದಲ್ಲಿ ಮರಣ ಹೊಂದುತ್ತಾನೆ.[16] ಈ ಶಾಸನ ಬೆಂಗಳೂರಿನ ಪ್ರಾಚೀನತೆಯನ್ನು ಕಟ್ಟಿಕೊಡುವಲ್ಲಿ ಬಹಳ ಮುಖ್ಯ ಪಾತ್ರ ವಹಿಸುತ್ತದೆ. ಹಾಗೆಯೇ ಬುಟ್ಟಣ ಪತಿ ಬೆಂಗಳೂರಿನ ಕಾಳಗದಲ್ಲಿ ಹೋರಾಡುತ್ತಲೇ ವೀರಸ್ವರ್ಗವನ್ನು ಪಡೆದ ಸಂಗತಿಯನ್ನೂ ತಿಳಿಸುತ್ತದೆ. ಕ್ರಿ.ಶ.980ರ ಕಾಲಕ್ಕೆ ಸೇರಿದ ವೀರ ಶಾಸನವೊಂದು ದಾಸರಹಳ್ಳಿಯಲ್ಲಿ ದೊರೆತಿದೆ. 'ಶ್ರೀ ಇನ್ದ್ರ ಎಂಬುವನು ಇರಿದು ಸ್ವರ್ಗ್ಗಸ್ತನಾದನು' ಎಂಬ ವಿಷಯವಷ್ಟೇ ಇದೆ. ಆದರೆ ಈ ಇನ್ದ್ರಯಾರು? ಯಾರೋದಿಗೆ ಕಾದಾಡಿ ಮರಣ ಹೊಂದಿದ ಎಂಬ ಅಂಶವು ಶಾಸನದಲ್ಲಿ ಉಲ್ಲೇಖವಿಲ್ಲ.[17] ದೊಡ್ಡಬೆಳವಂಗಳದ ಶಾಸನದಲ್ಲಿ 'ಮಹೇಂದ್ರನ ಆಳ್ವಿಕೆಯಲ್ಲಿ ಗಂಗರಸ ಕಾದಾಟದಲ್ಲಿ ಅರದಱ್ ಒಡೆದು' ಎಂದಿದೆ.[18] ಶಾಸನದ ಕೊನೆಯಲ್ಲಿ ಇಂದ್ರಲೋಕ ಪ್ರಾಪ್ತವಾಯಿತು ಎಂದಿದೆ. ಈ ವರ್ಣನೆಯನ್ನು ಗಮನಿಸಿದರೆ ವೀರಗಲ್ಲನ್ನು ಹಾಕಿಸುವುದರ ಮೂಲಕ ವೀರನಾದವನು ಇಂದ್ರಲೋಕವನ್ನು ಸೇರುತ್ತಾನೆಂಬುದಾಗಿ ಜನ ಭಾವಿಸಿದ್ದರು ಎಂಬುದು ಸ್ಪಷ್ಟವಾಗುತ್ತದೆ.

ಕ್ರಿ.ಶ.900ರ ಶಾಸನದ ಪ್ರಕಾರ ಊರ ಗೌಡನೊಬ್ಬನು ಹೋರಾಟದಲ್ಲಿ ಇರಿತಕ್ಕೆ ಒಳಗಾಗಿ ವೀರಸ್ವರ್ಗ ಹೊಂದಿರುವ ವಿಷಯವಿದೆ.[19] ಕ್ರಿ.ಶ.966ರ ಶಾಸನವೊಂದರ ಪ್ರಕಾರ, ಮಣ್ಣೆನಾಡು–300ರ ನಾಳ್ಗಾವುಂಡನಾದ ಗಂಗಚ್ಚಿಯ ಹಿರಿಯ ಮಗ 'ದಡಿಗ'ನು ಶತ್ರುಗಳ ವಿರುದ್ಧ ಹೋರಾಡಿ ವೀರಸ್ವರ್ಗ ಪಡೆಯುತ್ತಾನೆ.[20] ಮದುರೆಯ ಯಲ್ಲ ಹೆಗ್ಗಡೆ ಗೌಡನ ಮಗ ಸಮಯದ ಕಾಮರನು ಜಗಳದಲ್ಲಿ ಸಾವನ್ನಪ್ಪುತ್ತಾನೆ. ಶಾಸನದ ಕೊನೆಯಲ್ಲಿ ಸ್ವರ್ಗಸ್ತನಾದನು ಎಂದಿದೆ. ಈ ಪದಗಳು ಸಾವಿನ ನಂತರವೂ ಜೀವನವೊಂದಿತ್ತು ಎಂಬ ಜನರ ನಂಬಿಕೆಗೆ ಸಾಕ್ಷಿಗಳಾಗಿವೆ. ಕ್ರಿ.ಶ.1140ರ ಹೊಯ್ಸಳರ ದಂಡನಾಯಕ ಮುದೆಯ ಅಯ್ಯನು ಕದಂಬೂರಿನಲ್ಲಿ ಹೋರಾಡುತ್ತಿರುವಾಗ ಹೆಗ್ಗಡೆ ಮಾಚಗಾವುಂಡನ ಮಗ ಮಾಚಿದೇವನು ಹಲವು ಶತ್ರುಗಳನ್ನು ಕೊಂದು ಮರಣ ಹೊಂದುತ್ತಾನೆ.[21] ಪ್ರತಿ ಹಳ್ಳಿ, ಗ್ರಾಮದಲ್ಲಿ ಗೌಡರ ಆಡಳಿತವಿರುತ್ತಿತ್ತು. ಒಂದು ಹಳ್ಳಿಗೆ ಅಥವಾ ಆ ಪ್ರದೇಶಕ್ಕೆ ಹಲವು ಗೌಡರು ಇರುತ್ತಿದ್ದರು. ಈ ಗೌಡರು ತಮ್ಮ ಪ್ರದೇಶವನ್ನು ಸಂರಕ್ಷಿಸಿಕೊಳ್ಳುವ ಸಲುವಾಗಿ ಶತ್ರುಗಳ ಅಥವಾ ಕಳ್ಳಕಾಕರ ಆಕ್ರಮಣದ ಸಂದರ್ಭದಲ್ಲಿ ಹೋರಾಟಕ್ಕೆ ಮುಂದಾಗುತ್ತಿದ್ದರು. ಬಾಳದಂತಿ ಸೆಟ್ಟಿಯ ಮಗ ಆಲಪ್ಪ ಎಂಬುವನು ಸಾವಂದಿಯ ದಾರಿಯಲ್ಲಿ ಕಳ್ಳರೊಡನೆ ಹೋರಾಡಿ ಮರಣ ಹೊಂದುತ್ತಾನೆ. ರಾಜರು, ಸೈನಿಕರಷ್ಟೇ ಅಲ್ಲದೆ ವರ್ತಕರು ತಮ್ಮ ಸರಕುಗಳನ್ನು ಒಂದೂರಿನಿಂದ ಮತ್ತೊಂದೂರಿಗೆ ಸಾಗಿಸುವ ಮಧ್ಯದಲ್ಲಿ

ದಾರಿಕಳ್ಳರ ಆಕ್ರಮಣಕ್ಕೆ ಒಳಗಾದಾಗ ತಮ್ಮ ರಕ್ಷಣೆ ಹಾಗೂ ವ್ಯಾಪಾರ ಸರಕುಗಳ ರಕ್ಷಣೆಗೆ ಮುಂದಾಗುತ್ತಿದ್ದರು. ಇಂತಹ ಸಂದರ್ಭದಲ್ಲಿ ವೀರಮರಣ ಹೊಂದಿದ ವರ್ತಕರ ಹೆಸರಿನಲ್ಲಿರುವ ವೀರ ಶಾಸನಗಳು ನಮಗೆ ದೊರೆಯುತ್ತವೆ.

ದೊಡ್ಡೇರಿಯಲ್ಲಿ ದೊರೆತ ಶಾಸನ ಸಹಿತ ಶಿಲ್ಪವಿರುವ ವೀರಗಲ್ಲು ಹೊಯ್ಸಳ ಮೂರನೇ ವೀರಬಲ್ಲಾಳನ ಕಾಲಕ್ಕೆ ಸೇರಿರುವಂತದ್ದು.[22] ಹೊಯ್ಸಳರ ಕಾಲದಲ್ಲಿ ಆಳ್ವಿಕೆ ನಡೆಸುತ್ತಿದ್ದ ಕುಕ್ಕಲನಾಡಿನ ಮಯಿಲೆಯ ನಾಯಕನು ಆಳುತ್ತಿದ್ದಾಗ ಆತ ಮಹಾಸಾಮಂತಾಧಿಪತಿಯಾಗಿದ್ದನು. ಹಾಗೂ ಮೈಲೆಯನಾಯ್ಕನ ತಮ್ಮ ಚೆನ್ನಯನಾಯ್ಕನು ನಾಡಪ್ರಮುಖನಾಗಿ ಕುಕ್ಕಲನಾಡನ್ನು ಆಳುತ್ತಿದ್ದನು. ಆ ಸಂದರ್ಭದಲ್ಲಿ ದೊಡ್ಡೇರಿಯಲ್ಲಿದ್ದ ಬೊಮ್ಮೋಜನ ಮಗ ಗೋವಿಂದ ಎಂಬುವನು ದಾರಿ ಕಳ್ಳರೊಂದಿಗೆ ಹೋರಾಡಿ ಸಾವನಪ್ಪಿರುವ ವಿಷಯ ತಿಳಿಸುತ್ತದೆ. ಈ ವೀರಗಲ್ಲನ್ನು ಬೊಮ್ಮೋಜನು ಹಾಕಿಸಿರುವುದಾಗಿಯೂ ತಿಳಿಯುತ್ತದೆ. ಈ ಶಾಸನದ ಪಕ್ಕದಲ್ಲಿಯೇ ವೀರಗಲ್ಲನ್ನು ಕಂಡರಿಸಲಾಗಿದೆ. ಈ ವೀರಗಲ್ಲು ಮೂರು ಹಂತದಲ್ಲಿದೆ. ಮೊದಲನೆಯ ಹಂತದಲ್ಲಿ ವ್ಯಕ್ತಿ ಇಬ್ಬರ ಮುಖಾಮುಖಿ ಹೋರಾಟದ ಚಿತ್ರಣವಿದೆ. ಒಬ್ಬ ವೀರನು ಯುದ್ಧಕ್ಕೆ ಹೊರಡಲು ಸಿದ್ಧನಾದ ಭಂಗಿಯಲ್ಲಿ ನಿಂತು ಬಲಗೈಯಿಂದ ಖಡ್ಗವನ್ನು ಎತ್ತಿರುವಂತೆ ಇದೆ. ಸೊಂಟದಲ್ಲಿ ಕಠಾರಿ ಎಡಗೈಯಲ್ಲಿ ಕೋಲು ಇದೆ. ಅದೇ ವೀರನ ಎದುರುಗಡೆಯ ವ್ಯಕ್ತಿಯೊಬ್ಬನ ಕೈಯಲ್ಲಿ ಬಿಲ್ಲು ಬಾಣವನ್ನು ಹಿಡಿದು ಬಾಣಪ್ರಯೋಗದ ದೃಶ್ಯವಿದೆ. ಅವರಿಬ್ಬರು ವ್ಯಕ್ತಿಯೊಬ್ಬನ ಶವದ ಮುಂದೆ ನಿಂತಿರುವಂತೆ ಚಿತ್ರಿಸಲಾಗಿದೆ. ವೀರಗಲ್ಲಿನ ಎರಡನೆಯ ಹಂತದಲ್ಲಿ ಅಪ್ಸರೆಯರು ವೀರನನ್ನು(ಗೋವಿಂದ) ಕೈಲಾಸಕ್ಕೆ ಕರೆದೊಯ್ಯುತ್ತಿದ್ದಾರೆ. ಇಕ್ಕೆಲಗಳಲ್ಲಿ ಮತ್ತಿಬ್ಬರು ಅಪ್ಸರೆಯರು ವಾದ್ಯಗಳನ್ನು ನುಡಿಸುತ್ತಿದ್ದಾರೆ. ಮೂರನೇಯ ಹಂತದಲ್ಲಿ ವೀರನು ಕೈಮುಗಿದು ನಿಂತಿದ್ದಾನೆ. ಅವನ ಬಲಭಾಗದಲ್ಲಿ ಶಿವಲಿಂಗ, ಎಡಭಾಗದಲ್ಲಿ ನಂದಿಯ ಚಿತ್ರಣವಿದೆ. ವೀರಗಲ್ಲಿನ ಎರಡೂ ಬದಿಯಲ್ಲಿ ಸೂರ್ಯಚಂದ್ರರ ಶಿಲ್ಪಗಳಿವೆ. ವೀರಗಲ್ಲಿನಲ್ಲಿ ಚಿತ್ರಿಸಿರುವ ಶಿವಲಿಂಗವು ವೀರನು ಕೈಲಾಸ ಸೇರುತ್ತಾನೆ ಎಂಬ ಜನರ ನಂಬಿಕೆಯನ್ನು ಬಿಂಬಿಸುತ್ತಿದೆ.

ರಾಜರು ಮಡಿದ ವೀರರ ಹೆಸರಿನಲ್ಲಿ ನೆತ್ತರು ಕೊಡುಗೆಗಳನ್ನು ನೀಡಿ ವೀರಗಲ್ಲುಗಳನ್ನು ನೆಡಿಸುತ್ತಿದ್ದರ ಉದ್ದೇಶವೇ ಆ ವ್ಯಕ್ತಿಯಿಂದ ಪಡೆದ ಉಪಕಾರಕ್ಕೆ ಮಾಡುವ ಕೃತಜ್ಞತಾಪೂರ್ವಕ ಕ್ರಿಯೆಯಾಗಿರುತ್ತಿತ್ತು. ಹಾಗೂ ಅವನ ಕುಟುಂಬ ನಿರ್ವಹಣೆಯ ಹೊಣೆ ರಾಜ್ಯದ್ದಾಗಿರುತ್ತಿತ್ತು ಮತ್ತು ಮರಣ ಹೊಂದಿದ ವೀರ ದೈವೀ ಸ್ವರೂಪಕ್ಕೆ ಏರಿ ತಮ್ಮ ಕಷ್ಟ ಸಂದರ್ಭಗಳಲ್ಲಿ ನೆರವಾಗುತ್ತಾನೆ ಎಂಬ ನಂಬಿಕೆ ಜನರಲ್ಲಿತ್ತು. ರಾಜನು ಯುದ್ಧದಲ್ಲಿ ಗೆದ್ದು ಬಂದು ಅದರಲ್ಲಿ ಪಡೆದ ಲಾಭದಲ್ಲಿ ವೀರರಿಗೆ

ಅವರ ಸಾಮರ್ಥ್ಯದನ್ವಯ ಭೂಮಿ, ಹಣ ಮೊದಲಾದುದನ್ನು ಕೊಡುಗೆಯಾಗಿ ನೀಡುತ್ತಿದ್ದ. ತಾನು ಗೆದ್ದ ಸಂಪತ್ತಿನಲ್ಲಿ ಅವರಿಗೂ ಒಂದು ಭಾಗವೆಂತಲೋ ಅಥವಾ ಹೋರಾಟದಲ್ಲಿ ಭಾಗವಹಿಸಿದ ವೀರರಿಗೆ ಉತ್ತೇಜನ ದೊರೆಯಲಿ ಹಾಗೂ ಇತರರಿಗೂ ಆದರ್ಶವಾಗಲಿ ಎಂಬ ಉದ್ದೇಶಕ್ಕಾಗಿಯೋ ಕೊಡುಗೆಗಳನ್ನು ನೀಡಲಾಗುತ್ತಿತ್ತು. ಹೀಗೆ ಬಿಟ್ಟುಕೊಟ್ಟ ದತ್ತಿಗಳನ್ನು ಕಲ್ನಾಡು, ಬೀರಗೂಳ್, ಬಾಳ್ಗಚ್ಚು, ನೆತ್ತರುಕೊಡುಗೆ, ರಕ್ತಮಾನ್ಯ, ರುಧಿರಮಾನ್ಯ ಮುಂತಾದ ಹೆಸರುಗಳಿಂದ ಶಾಸನಗಳಲ್ಲಿ ಕರೆಯಲಾಗುತ್ತದೆ.

ಬೇಗೂರಿನ ಗಂಗರ ನಾಗತ್ತರನ ಶಾಸನವೊಂದರಲ್ಲಿ 'ಕಲ್ನಾಟಿನ' ಉಲ್ಲೇಖವಿದೆ. ಶಾಸನೋಲ್ಲೇಕಿತ ಇಂತಹ ಪದಗಳ ಬಗ್ಗೆ ವಿದ್ವಾಂಸರು ವ್ಯಾಖ್ಯಾನಿಸಿದ್ದಾರೆ. "ಸತ್ತ ವೀರನ ಮನೆಯವರಿಗೆ ಕೊಟ್ಟ ದತ್ತಿಯ ಮೇರೆಗಳನ್ನು ಸೂಚಿಸಲು ಕಲ್ಲುಗಳನ್ನು ನೆಡುತ್ತಿದ್ದರು. ಅದರಿಂದ ಆ ದತ್ತಿಯನ್ನು 'ಕಲ್ನಾಡು', 'ಕಲ್ನಾಟು', 'ಕಲ್ನಟ್ಟು' ಎಂದೇ ಕರೆಯುತ್ತಿದ್ದರು." "ಕಲ್ನಾಡು ಎಂಬಲ್ಲಿ ನಾಡು ಎಂಬುದು ಪ್ರದೇಶವನ್ನೂ, ಕಲ್ಲು ಎಂಬುದು ವೀರಗಲ್ಲನ್ನೂ ಸೂಚಿಸುವುದಿಲ್ಲವೆಂದು ಭಾವಿಸಬಹುದು. ಅದು ಗಡಿಯ ಕಲ್ಲುಗಳನ್ನೂ, ಗಡಿಗಲ್ಲುಗಳ ಒಳಗಿನ ಭೂಮಿಯನ್ನೂ, ದಾನವನ್ನೂ ಸೂಚಿಸುತ್ತದೆ. 'ನಾಡು' ಅಥವಾ 'ನಾಟ್ಟು' ಎಂಬುದು ನಡು ಧಾತುವಿನ ಭಾವನಾಮ. ತಮಿಳಿನಲ್ಲಿ 'ನಾಟ್ಟ' ಎಂದರೂ 'ನಡು' ಎಂದರೂ ಒಂದೇ ಅರ್ಥ". ಎಂಬುದಾಗಿ ಡಾ.ಎಂ.ಚಿದಾನಂದಮೂರ್ತಿಯವರು ಅಭಿಪ್ರಾಯ ಪಡುತ್ತಾರೆ.[23] ಡಾ.ಕೆ.ವಿ.ರಮೇಶ್ ಅವರು "ಹಲ್ಮಿಡಿ ಶಾಸನದ 'ಸಟ್ಟಿಜ್ಜದರ್' ಮತ್ತು ಬಾಳ್ಗಚ್ಚು" ಎಂಬ ಲೇಖನದ ಕೊನೆಯ ಭಾಗದಲ್ಲಿ, "ಕಾಲ ಕಳೆದಂತೆ 'ಬಾಳ್ಗಚ್ಚು' ಎಂಬೀ ಪದವು ಬಳಕೆ ತಪ್ಪಿ ಕಲ್ನಡು, ಕಲ್ನಾಡು, ಕಲ್ನಾಟ್ಟು, ರುಧಿರಮಾನ್ಯ, ರಕ್ತಮಾನ್ಯ, ನೆತ್ತರುಗೈ, ನೆತ್ತರುಕೊಡುಗೆ ಮುಂತಾದ ಪ್ರಯೋಗಗಳು ಕನ್ನಡ ಶಾಸನಗಳಲ್ಲಿ ಬಳಕೆಗೆ ಬಂದವು" ಎಂಬುದಾಗಿ ಅಭಿಪ್ರಾಯ ಪಡುತ್ತಾರೆ.[24] ಸತ್ತ ವೀರನ ಮನೆಯವರಿಗೆ ಕೊಟ್ಟ ದತ್ತಿಯ ಮೇರೆಯನ್ನು ಸೂಚಿಸಲು ಕಲ್ಲುಗಳನ್ನು ನೆಡುತ್ತಿದ್ದರು. ಹಾಗಾಗಿ ಕಲ್ನಾಟು>ಕಲ್ನಾಡು ಆಗಿದೆ. ನಾಗತ್ತರನಿಗೆ ಎಱೆಯಪ್ಪರಸನು ಕಲ್ನಾಡಾಗಿ ಹನ್ನೆರಡು ಹಳ್ಳಿಗಳನ್ನು ಕೊಟ್ಟಿದ್ದಾನೆ. ಬೆಂಗಳೂರಿನಲ್ಲಿ ಕಲ್ನಾಡಿನ ಉಲ್ಲೇಖವಿರುವ ಏಕೈಕ ಶಾಸನವಿದು. ಗಂಗರ ಕಾಲದ ನಂತರ ಈ ಪದದ ಬಳಕೆ ಇಲ್ಲವಾಗಿ 'ನೆತ್ತರು ಕೊಡುಗೆ'ಯ ಉಲ್ಲೇಖಗಳು ಹೆಚ್ಚಾಗಿರುವುದು ಶಾಸನಗಳಿಂದ ತಿಳಿಯುತ್ತದೆ. ಸುಗುಟೂರಿನ ಮುಮ್ಮಡಿ ತಮ್ಮೇಗೌಡ ಜಯಸಿಂಹನ ಮಗ ಸಿಂಗನಾಯಕನಿಗೆ ಕಾಳಿನಾಯಕನ ಹಳ್ಳಿಯನ್ನು ನೆತ್ತರುಕೊಡುಗೆಯಾಗಿ ನೀಡಲಾಗಿದೆ.[25] ಸುಗಟೂರು ಚಿಕ್ಕರಾಯ ನಂಜಪ್ಪಗೌಡನು ಗೊಲ್ಲನಾದ ಬಾಲನ ಮಗ ಎರಮಾದನಿಗೆ ನೆತ್ತರು ಕೊಡುಗೆಯಾಗಿ

ಹೊಲವನ್ನು ನೀಡಲಾಗಿದೆ.[26] ಕಸಾಗಟ್ಟ ಗ್ರಾಮದ ವೀರರ ಗುಡಿಯಲ್ಲಿರುವ ವೀರಗಲ್ಲಿನ ಹಿಂಭಾಗದಲ್ಲಿ ನೆತ್ತರುಕೊಡುಗೆಯ ಉಲ್ಲೇಖ ಶಾಸನದ ಪ್ರಕಾರ, ನಂಜೇದೇವರು ತಳವಾಱ ಕೆಂಚೇನಾಯಕನ ಮಗ ತಮ್ಮನಾಯಕನಿಗೆ ನೆತ್ತರುಕೊಡಗಿಯಾಗಿ ಹೊಲಗದ್ದೆಗಳನ್ನು ನೀಡಲಾಗಿದೆ.[27] 'ಶಬಕಾನಸಾಹೇಬರವರು ಕುಂಮಾಜಿ ಗೌಡಗೆ ನೀಡಿದ ನೆತ್ತರಕೊಡಗೆ' ಎಂದು ಶಾಸನವೊಂದು ತಿಳಿಸುತ್ತದೆ.[28] ಆದರೆ ನೆತ್ತರುಕೊಡುಗೆಯಾಗಿ ಏನನ್ನು ನೀಡಲಾಗಿದೆ. ಯಾವಕಾರಣಕ್ಕಾಗಿ ನೀಡಲಾಗಿದೆ ಎಂಬ ವಿಷಯವಿಲ್ಲ.

ವೀರಗಲ್ಲುಗಳು ಇಂತಹ ವ್ಯಕ್ತಿ, ಇಂತಹ ಯುದ್ಧದಲ್ಲಿ ಮಡಿದ ಎಂಬ ವಿಷಯವನ್ನು ತಿಳಿಸುವುದರ ಜೊತೆ-ಜೊತೆಗೆ ಅದರ ಹಿಂದಿನ ಸಾಮಾಜಿಕ ಮತ್ತು ಮಾನವೀಯ ಮೌಲ್ಯಗಳು ಮುಖ್ಯವಾಗಿರುತ್ತವೆ. ಸತ್ತ ವೀರನ ಸಂಬಂಧಿಗಳು, ಆಪ್ತರು, ಆತನ ಇರುವಿಕೆಯನ್ನು ತಮ್ಮೊಂದಿಗೆ ಸ್ಥಾಪಿಸಿಕೊಳ್ಳುವುದಕ್ಕಾಗಿ ಈ ರೀತಿಯ ಕಲ್ಲುಗಳನ್ನು ನೆಡೆಸುತ್ತಿದ್ದರು.

ವೀರನೊಬ್ಬನ ಹೋರಾಟ, ಮರಣ ವಿಷಯವನ್ನು ಹೊಂದಿರುವ ಶಾಸನಗಳನ್ನು ಬಿಟ್ಟರೆ ಶಿಲ್ಪವುಳ್ಳ ವೀರಗಲ್ಲುಗಳು ಹೇರಳವಾಗಿ ದೊರೆಯುತ್ತವೆ. ಈ ಶಿಲ್ಪವೀರಗಲ್ಲುಗಳು ಸಾಮಾನ್ಯವಾಗಿ ಮೂರು ಸ್ತರಗಳಲ್ಲಿರುತ್ತವೆ. ಕೆಲವೊಮ್ಮೆ ನಾಲ್ಕು-ಐದು ಸ್ತರಗಳ ವೀರಗಲ್ಲುಗಳು ಕಾಣಸಿಗುತ್ತವೆ. ತುರುಗಾಳಗದ ಯುದ್ಧವಾಗಿದ್ದರೆ ಕೆಳಗಿನ ಸ್ತರದಲ್ಲಿ ಸೈನಿಕರ ಹೋರಾಟ, ಓಡುತ್ತಿರುವ ಆಕಳುಗಳ ಚಿತ್ರಣವಿರುತ್ತವೆ. ಸಂದರ್ಭಕ್ಕೆ ತಕ್ಕಂತೆ ಅಶ್ವಯುದ್ಧ, ಗಜಯುದ್ಧ, ಯೋಧರ ನಡುವಿನ ಯುದ್ಧದ ಪ್ರಸಂಗಗಳಿಂದ ಕೂಡಿರುತ್ತವೆ. ಎರಡನೆಯ ಸ್ತರದಲ್ಲಿ ಸುರಾಂಗನೆಯರು ವೀರರನ್ನು ಸ್ವರ್ಗಕ್ಕೆ ಪಲ್ಲಕ್ಕಿಯಲ್ಲಿ ಕರೆದುಕೊಂಡು ಹೋಗುತ್ತಿರುವ ಚಿತ್ರಣವಿರುತ್ತದೆ. ಮೂರನೆಯ ಹಂತದಲ್ಲಿ ಶಿವನಲ್ಲಿ ಸ್ವರ್ಗಸ್ತನಾಗುತ್ತಿರುವುದರ ಚಿತ್ರಣವಿರುತ್ತದೆ. ಹೀಗೆ ವೀರಗಲ್ಲೊಂದರಲ್ಲೇ ವೀರರಸ, ಶೃಂಗಾರ ರಸ, ಶಾಂತರಸಗಳು ಮೇಳವಿಸಿರುತ್ತವೆ. ವೀರಮರಣ ಹೊಂದಿದಾತ ಶೈವನಾದರೆ ಕೈಲಾಸವನ್ನು, ವೈಷ್ಣವನಾಗಿದ್ದರೆ ವೈಕುಂಠವನ್ನು, ಜಿನನಾಗಿದ್ದರೆ ಮೋಕ್ಷವನ್ನು ಹೊಂದುತ್ತಾರೆ ಎಂಬ ನಂಬಿಕೆ ಜನರಲ್ಲಿ ಬೇರೂರಿತ್ತು.

ವೀರನ ಘನತೆಗೆ ತಕ್ಕಂತೆ ಈ ವೀರಗಲ್ಲುಗಳ ವಿಸ್ತಾರ ಹಾಗೂ ಕಲಾತ್ಮಕವೂ ನಿರ್ಧಾರವಾಗುತ್ತಿತ್ತು. ಸಾಮಾನ್ಯವಾಗಿ ವೀರಗಲ್ಲುಗಳು ಉಬ್ಬುಚಿತ್ರಗಳಾಗಿರುತ್ತವೆ. ಸ್ತರಸಂಯೋಜಿತ ವೀರಗಲ್ಲುಗಳ ಜೊತೆಗೆ ಬೇರೆ-ಬೇರೆ ರೂಪದ ವೀರಗಲ್ಲುಗಳು ಕ್ವಚಿತ್ತಾಗಿ ನಮಗೆ ದೊರೆಯುತ್ತವೆ. ಬೆಂಗಳೂರಿನಲ್ಲಿ ದೊರೆತ ಶಾಸನ ರಹಿತ ವೀರಗಲ್ಲುಗಳು ಬೇಗೂರು, ಅಗರ, ಇಬ್ಬಲೂರು, ಕೃಷ್ಣರಾಜಪುರ, ವರ್ತೂರು, ದೊಡ್ಡೇರಿ, ಆನೇಕಲ್ಲು ಮೊದಲಾದ ಪ್ರದೇಶಗಳಲ್ಲಿ ಕಾಣಬಹುದು.

ಬೇಗೂರಿನಲ್ಲಿರುವ ವೀರಗಲ್ಲೊಂದು ಗಂಗರ ಕಾಲಕ್ಕೆ ಸೇರಿದೆ. ವೀರನನ್ನು ಪ್ರಧಾನವಾಗಿ(ದೊಡ್ಡದಾಗಿ) ಚಿತ್ರಿಸಲಾಗಿದೆ. ಆತನ ಬಲಗೈಯಲ್ಲಿ ಖಡ್ಗವನ್ನು ಎಡಗೈನಲ್ಲಿ ಗುರಾಣಿಯನ್ನು ಹಿಡಿದು ಯುದ್ಧ ಮಾಡುತ್ತಿರುವ ಭಂಗಿಯಲ್ಲಿ ಶಿಲ್ಪಿ ಚಿತ್ರಿಸಿದ್ದಾನೆ. ವೀರನ ದೇಹಕ್ಕೆ ಬಿಲ್ಲುಗಳು ನಾಟಿಕೊಂಡಿವೆ. ಇವನ ಎದುರುಗಡೆ ಚಿಕ್ಕ ಆಕೃತಿಯಾಗಿ ಎದುರಾಳಿಯ ಚಿತ್ರಣವಿದೆ. ಆತನು ಬಿಲ್ಲು ಬಾಣ ಪ್ರಯೋಗ ಮಾಡುತ್ತಿರುವ ಭಂಗಿಯಲ್ಲಿದ್ದಾನೆ. ಶಿಲಾಫಲಕದ ಮೇಲು ಭಾಗದಲ್ಲಿ ವೀರನ ಕರೆದೊಯ್ಯುತ್ತಿರುವಲ್ಲಿ ಅಪ್ಸರೆಯರ ಚಿತ್ರಣವಿದೆ.

ಇದೇ ವೀರಗಲ್ಲಿನ ಪಕ್ಕದಲ್ಲಿಯೇ ಗಂಗರ ಕಾಲಕ್ಕೆ ಸೇರಿದ ಮತ್ತೊಂದು ವೀರಗಲ್ಲಿದೆ. ಈ ಶಿಲಾಫಲಕದ ಒಂದು ಭಾಗ ಒಡೆದು ಹೋಗಿದೆ. ಉಳಿದ ಶಿಲಾಫಲಕದ ಆಧಾರದ ಮೇಲೆ ಹೇಳುವುದಾದರೆ, ವೀರರು ಯುದ್ಧಕ್ಕೆ ಹೋಗುತ್ತಿರುವ ಚಿತ್ರಣವನ್ನು ಕಂಡರಿಸಲಾಗಿದೆ. ವೀರನೊಬ್ಬ ಕುದುರೆಯನ್ನು ಏರಿ ಕುಳಿತಿದ್ದಾನೆ. ಕುದುರೆಗೆ ಗಂಟೆಯ ಹಾರವನ್ನು ಹಾಕಿರುವಂತೆ ಚಿತ್ರಿಸಲಾಗಿದೆ. ವೀರನು ಅಶ್ವದಳದವನಿರಬೇಕು. ವೀರನ ಮುಂದೆ ಕಾಲುದಳದ ಸೈನಿಕರ ಚಿತ್ರಣವಿದೆ. ಈ ವೀರರು ಕೈಯಲ್ಲಿ ಬಿಲ್ಲು ಬಾಣ, ಕತ್ತಿ ಹಿಡಿದಿದ್ದಾರೆ. ವೀರನ ಹಿಂಭಾಗದಲ್ಲಿ ಯುದ್ಧಕ್ಕೆ ಸರಾಂಜಾಮು ಸಾಗಿಸುತ್ತಿರುವ ವ್ಯಕ್ತಿಗಳ ಚಿತ್ರಣವಿದೆ.

ಕೃಷ್ಣರಾಜಪುರದ ಮಹಾಬಲೇಶ್ವರ ಸ್ವಾಮಿ ದೇವಾಲಯದ ಇರುವ ಮತ್ತೊಂದು ವೀರಗಲ್ಲು ವಿಶೇಷವಾಗಿದೆ. ಈ ವೀರಗಲ್ಲು ಮಣ್ಣಿನಲ್ಲಿ ಮುಚ್ಚಿಹೋಗಿತ್ತು. ಅದನ್ನು ಹೊರತೆಗೆದು ಇಡಲಾಗಿದೆ. ಸುಮಾರು ಏಳು ಅಡಿ ಎತ್ತರ ಮತ್ತು ಆರು ಅಡಿ ಅಗಲದ್ದಾಗಿದೆ. ಕಲ್ಲಿನ ಮಧ್ಯಭಾಗಕ್ಕೆ ಕಾಳಗವೊಂದರ ಚಿತ್ರಣವಿದೆ. ಇಬ್ಬರು ವೀರರು ಮತ್ತು ಒಂದು ಅಶ್ವದ ಚಿತ್ರಣವಿದೆ. ಅಶ್ವದ ಮೇಲೆ ವ್ಯಕ್ತಿಯೊಬ್ಬ ಕುಳಿತುಕೊಳ್ಳಲು ಅರ್ಧಚಂದ್ರಾಕೃತಿಯ ಆಸನವಿದೆ. ಒಬ್ಬ ಯೋಧ ಅಶ್ವದ ಮೇಲೆ ಎರಗಿದ್ದಾನೆ. ಮತ್ತೊಬ್ಬ ವ್ಯಕ್ತಿ ಕುದುರೆಯ ಕಡೆಗೆ ಮುಖ ಮಾಡಿ ಮುನ್ನುಗುತ್ತಿದ್ದಾನೆ. ಬಲಗೈನಲ್ಲಿ ಖಡ್ಗ ಎಡಗೈನಲ್ಲಿ ಬಿಲ್ಲನ್ನು ಹಿಡಿದಿದ್ದಾನೆ. ಈ ವೀರಗಲ್ಲಿನ ಶೈಲಿ ಗಮನಿಸಿದರೆ ಗಂಗರ ಕಾಲಕ್ಕೆ ಸೇರಿರಬಹುದಾದ ವೀರಗಲ್ಲಾಗಿದೆ.

ಅಗರದಲ್ಲಿ ಮೂರು ಹಂತದ ವೀರಗಲ್ಲಿದೆ. ಇದು ಕ್ರಿ.ಶ. ಸುಮಾರು 12ನೆಯ ಶತಮಾನದ ವೀರಗಲ್ಲು ಎಂದು ಗುರ್ತಿಸಲಾಗಿದೆ. ಮೊದಲನೆಯ ಹಂತದಲ್ಲಿ ಕಾಳಗದ ಚಿತ್ರಣವಿದೆ. ವೀರರು ಪರಸ್ಪರ ಹೋರಾಡುತ್ತಿದ್ದಾರೆ. ವೀರರು ಕೈಯಲ್ಲಿ ಗುರಾಣಿ ಮತ್ತು ಖಡ್ಗವನ್ನು ಹಿಡಿದಿದ್ದಾರೆ. ಒಂದು ಕಡೆ ಕುದುರೆಯ ಚಿತ್ರಣವಿದೆ. ಎರಡನೆಯ ಹಂತದಲ್ಲಿ ಇಬ್ಬರು ವೀರರು ನಿಂತಿದ್ದಾರೆ ಖಡ್ಗವನ್ನು

ಮೇಲಕ್ಕೆ ಎತ್ತಿ ಯುದ್ಧಕ್ಕೆ ಹೊರಟ ರೀತಿಯಲ್ಲಿ ನಿಂತಿದ್ದಾರೆ. ಇವರ ಮಧ್ಯೆ ಒರ್ವ ಸ್ತ್ರೀ ನಿಂತಿದ್ದಾಳೆ. ಮೇಲಿನ ಸ್ಥರದಲ್ಲಿ ಕೈಲಾಸವಾಸಿಯಾದ ವೀರರು ಕೈ ಮುಗಿದು ನಿಂತಿದ್ದಾರೆ. ಪಕ್ಕದಲ್ಲೇ ಶಿವಲಿಂಗದ ಚಿತ್ರಣವಿದೆ.

ಅಗರದ ಮುನೇಶ್ವರನ ದೇವಸ್ಥಾನದ ಎದುರಿಗಿನ ಮೈದಾನದಲ್ಲಿ ವೀರಗಲ್ಲೊಂದಿದೆ. ಇದು ಕ್ರಿ.ಶ. ಸುಮಾರು 14ನೆಯ ಶತಮಾನದ ವೀರಗಲ್ಲು ಎಂದು ಗುರ್ತಿಸಲಾಗಿದೆ. ಈ ವೀರಗಲ್ಲು ಒಂದೇ ಹಂತದಲ್ಲಿದ್ದು. ವೀರನು ಯುದ್ಧಕ್ಕೆ ಹೊರಟ ಭಂಗಿಯಲ್ಲಿರುವಂತೆ ಚಿತ್ರಿಸಲಾಗಿದೆ. ಕೈಯಲ್ಲಿ ಖಡ್ಗವನ್ನು ಮೇಲಕ್ಕೆ ಎತ್ತಿ ನಿಂತಿದ್ದಾನೆ.

ಭೈರಸಂದ್ರದ ಬಳಿ ದೊರೆತಿರುವ ವೀರಗಲ್ಲಿನಲ್ಲಿ ಶಿಲ್ಪಿ ಯುದ್ಧದ ರೋಚಕ ಸನ್ನಿವೇಶವನ್ನು ಅದ್ಭುತವಾಗಿ ಚಿತ್ರಿಸಿದ್ದಾನೆ. ಈ ವೀರಗಲ್ಲು ಕ್ರಿ.ಶ.12ನೇ ಶತಮಾನಕ್ಕೆ ಸೇರಿರಬಹುದಾಗಿದೆ. ವೀರನೊಬ್ಬನ ಚಿತ್ರಣ ಪ್ರಧಾನವಾಗಿದೆ. ಅವನ ಕೈಯಲ್ಲಿ ಬಿಲ್ಲನ್ನು ಹಿಡಿದು ಬಾಣ ಪ್ರಯೋಗ ಮಾಡುತ್ತಿದ್ದಾನೆ. ವೀರನ ಸುತ್ತಲೂ ಸಣ್ಣ ಗಾತ್ರದಲ್ಲಿ ಶತ್ರುಗಳನ್ನು ಚಿತ್ರಿಸಿ ಅವರೂ ಬಾಣ ಪ್ರಯೋಗ ಮಾಡುತ್ತಿರುವಂತೆ ಚಿತ್ರಿಸಲಾಗಿದೆ. ವೀರನ ಹಿಂದೆ ತಮಟೆ, ನಗಾರಿಯನ್ನು ಬಾರಿಸುತ್ತಿದ್ದಾರೆ. ಒಬ್ಬ ಕಹಳೆ ಊದುತ್ತಿದ್ದಾನೆ. ಛತ್ರಿಯನ್ನು ಹಿಡಿದಿದ್ದಾರೆ. ಶಿಲಾ ಫಲಕದ ಮೇಲುಗಡೆ ವೀರ ಸ್ವರ್ಗಸ್ತನಾಗಿ ಕುಳಿತಿದ್ದಾನೆ. ಅಕ್ಕಪಕ್ಕದಲ್ಲಿ ಸುರಾಂಗನೆಯರು ನಿಂತಿದ್ದಾರೆ.

ಬೆಂಗಳೂರು ಪೂರ್ವ ತಾಲೂಕು ಕೃಷ್ಣಾರಾಜಪುರದಿಂದ ಹೊಸಕೋಟೆ ಮಾರ್ಗದಲ್ಲಿ ಮೇಡಹಳ್ಳಿ ಗ್ರಾಮವಿದೆ. ಈ ಪ್ರದೇಶದಲ್ಲೇ ಮೂರು ನಾಲ್ಕು ವೀರಗಲ್ಲುಗಳಿವೆ. ಈ ವೀರಗಲ್ಲುಗಳು ವಿಜಯನಗರ ಕಾಲಕ್ಕೆ ಸೇರಿರಬಹುದು ಎಂದು ಗುರ್ತಿಸಲಾಗಿದೆ. ಶಿಲಾಫಲಕದಲ್ಲಿರುವ ವೀರನು ಬಲಗೈಯಲ್ಲಿ ಖಡ್ಗ, ಎಡಗೈನಲ್ಲಿ ಗುರಾಣಿ ಹಿಡಿದು ಯುದ್ಧಕ್ಕೆ ಹೊರಟ ಭಂಗಿಯಲ್ಲಿ ನಿಂತಿದ್ದಾನೆ. ವೀರನ ಹಿಂದೆ ಸಾಮಾನು ಸಾಗಿಸುತ್ತಿರುವ ರೀತಿಯಲ್ಲಿ ಚಿತ್ರಿಸಲಾಗಿದೆ. ಯುದ್ಧಕ್ಕೆ ಅಗತ್ಯವಾದ ಸಾಮಾನನ್ನು ತೆಗೆದುಕೊಂಡು ಹೋಗುತ್ತಿರುವಂತೆ ತೋರುತ್ತದೆ. ಪಕ್ಕದಲ್ಲೇ ಧ್ಯಾನಸ್ಥ ವೀರನ ಚಿತ್ರಣವಿದೆ. ವೀರನ ಎಡಭಾಗದಲ್ಲೇ ಸ್ವರ್ಗವನ್ನು ಪಡೆದ ವೀರನ ಚಿತ್ರಣವಿದೆ.

ಕೃಷ್ಣರಾಜಪುರದ ಬಳಿಯಲ್ಲಿರುವ ವೆಂಗವಿಲ್ಯನ ಕೆರೆಯ ಬಳಿಯ ಮಹಾಬಲೇಶ್ವರ ಸ್ವಾಮಿ ದೇವಾಲಯದ ಮುಂದುಗಡೆ ಐದು ವೀರಗಲ್ಲುಗಳನ್ನು ಸಾಲಾಗಿ ಜೋಡಿಸಲಾಗಿದೆ. ಇದು ಕ್ರಿ.ಶ. ಸುಮಾರು 14ನೆಯ ಶತಮಾನದ ವೀರಗಲ್ಲು ಎಂದು ಗುರುತಿಸಲಾಗಿದೆ. ಅದರಲ್ಲಿನ ಒಂದು ವೀರಗಲ್ಲು ಸುಮಾರು ಐದು ಅಡಿ ಎತ್ತರ ಮತ್ತು ಮೂರು ಅಡಿ ಅಗಲ ಉಳ್ಳದ್ದಾಗಿದೆ. ವೀರನು ಬಲಗೈನಲ್ಲಿ ಖಡ್ಗ

ಹಿಡಿದಿದ್ದರೆ, ಎಡಗೈಯ ಮುಷ್ಠಿಯನ್ನು ಮಡಚಿ ಹಿಡಿದಿದ್ದಾನೆ. ತುರುಬನ್ನು ಕಟ್ಟಿದ್ದಾನೆ. ನಡುವಿನಲ್ಲಿ ಬಿಚ್ಚುಗತ್ತಿ ಇದೆ. ಶತ್ರುಗಳು ಇವನ್ನು ಆಕ್ರಮಿಸಿದ್ದಾರೆ. ಶತ್ರುಗಳ ಬಾಣ ವೀರನ ದೇಹವನ್ನು ಹೊಕ್ಕಿದೆ. ಸ್ಮಾರಕದ ಬಲಭಾಗದ ತುದಿಯಲ್ಲಿ ವೀರನನ್ನು ಅಪ್ಸರೆಯರು ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವ ಚಿತ್ರಣವಿದೆ.

ಮಹಾಬಲೇಶ್ವರ ಸ್ವಾಮಿ ದೇವಾಲಯದಲ್ಲೇ ಇರುವ ಮತ್ತೊಂದು ವೀರಗಲ್ಲು ಸುಮಾರು ಮೂರುವರೆ ಅಡಿ ಎತ್ತರ ಮತ್ತು ಒಂದೂವರೆ ಅಡಿ ಅಗಲವಿದೆ. ವಿಜಯನಗರ ಕಾಲದ ವೀರಗಲ್ಲಾಗಿದೆ. ವೀರನು ಬಲಗೈನಲ್ಲಿ ಕತ್ತಿ ಎಡಗೈನಲ್ಲಿ ಗುರಾಣಿ ಹಿಡಿದು ನಿಂತಿದ್ದಾನೆ.

ಇಬ್ಬಲೂರಿನ ರಸ್ತೆಯ ಬದಿಯಲ್ಲಿ ಕ್ರಿ.ಶ. ಸುಮಾರು 14ನೇ ಶತಮಾನಕ್ಕೆ ಸೇರಿರಬಹುದಾದ ವೀರಗಲ್ಲೊಂದು ನೆಲದಲ್ಲಿ ಮುಚ್ಚಿಹೋಗಿದೆ. ಅದರ ಸ್ವಲ್ಪ ಭಾಗ ಮಾತ್ರ ಮೇಲೆ ಕಾಣಸಿಗುತ್ತದೆ. ವೀರನೊಬ್ಬನ ಚಿತ್ರಣವಿದೆ. ವೀರಮುಡಿ ಕಟ್ಟಿರುವ ವೀರನ ಅರ್ಧದೇಹ ಮಾತ್ರ ಗುರುತಿಸಬಹುದು. ಅದೇ ಸ್ಥಳದಲ್ಲಿರುವ ಆಂಜನೇಯನ ದೇವಸ್ಥಾನದಲ್ಲಿ ಮತ್ತೊಂದು ವೀರಗಲ್ಲಿದೆ. ಈ ವೀರಗಲ್ಲಿನಲ್ಲಿ ವೀರನೊಬ್ಬ ಕತ್ತಿ ಹಿಡಿದು ನಿಂತಿದ್ದಾನೆ.

ಮೈಸೂರು ಬ್ಯಾಂಕ್ ವೃತ್ತದ ಬಳಿಯೊಂದರ ಕಟ್ಟಡದೊಳಗೆ ಎರಡು ವೀರಗಲ್ಲುಗಳಿವೆ. ಈ ವೀರಗಲ್ಲುಗಳು ವಿಜಯನಗರ ಕಾಲಕ್ಕೆ ಸೇರಿರುವ ವೀರಗಲ್ಲು ಎಂದು ಗುರ್ತಿಸಲಾಗಿದೆ. ಒಂದು ವೀರಗಲ್ಲಿನಲ್ಲಿ ವೀರನು ಬಲಗೈನಲ್ಲಿ ಕತ್ತಿಯನ್ನು ಎತ್ತಿ ಹಿಡಿದಿದ್ದಾನೆ. ಎಡಗೈನಲ್ಲಿ ಗುರಾಣಿ ಹಿಡಿದಿದ್ದಾನೆ. ವೀರಾವೇಶದಿಂದ ಹೋರಾಡುತ್ತಿರುವಂತೆ ಚಿತ್ರಿಸಲಾಗಿದೆ. ಮತ್ತೊಂದು ವೀರಮಾಸ್ತಿಗಲ್ಲು ವೀರ ಯುದ್ಧದಲ್ಲಿ ಹೋರಾಡುತ್ತಿರುವಂತೆ ಚಿತ್ರಿಸಲಾಗಿದೆ. ಪಕ್ಕದಲ್ಲೇ ಆತನ ಸತಿ ಇದ್ದಾಳೆ. ಈಕೆ ಕೈನಲ್ಲಿ ಹೂಗುಚ್ಚ ಹಿಡಿದು ನಿಂತಿದ್ದಾಳೆ. ಸಾಮಾನ್ಯವಾಗಿ ಸತಿಯ ಕೈಯಲ್ಲಿ ಮಾದಲ ಅಥವಾ ನಿಂಬೆಹಣ್ಣು ಹಿಡಿದಿರುವಂತೆ ಚಿತ್ರಿಸಲಾಗಿರುತ್ತದೆ. ಆದರೆ ಈ ವೀರಗಲ್ಲಿನಲ್ಲಿ ಸತಿಯು ಪುಷ್ಪವನ್ನು ಹಿಡಿದು ನಿಂತಿರುವುದು ವಿಶೇಷವಾಗಿದೆ.

ಕಲಾಸಿಪಾಳ್ಯದಲ್ಲೊಂದು ವೀರಗಲ್ಲಿದೆ. ಇದಕ್ಕೆ ದೇವಾಲಯವನ್ನು ನಿರ್ಮಿಸಿ ಪೂಜಿಸಲಾಗುತ್ತಿದೆ. ಕಪ್ಪು ಕಲ್ಲಿನಲ್ಲಿ ಕೆತ್ತಿರುವ ಈ ವೀರಗಲ್ಲು ವಿಜಯನಗರ ಅರಸರ ಕಾಲಕ್ಕೆ ಸೇರಿದೆ. ಈ ವೀರಗಲ್ಲಿನಲ್ಲಿನ ವೀರನು ಬಲಗೈಯಲ್ಲಿ ಖಡ್ಗವನ್ನು ಎತ್ತಿ ಹಿಡಿದಿದ್ದಾನೆ. ಎಡಗೈನಲ್ಲಿ ಗುರಾಣಿಯನ್ನು ಬೆನ್ನಿನ ಹಿಂಭಾಗಕ್ಕೆ ಬರುವಂತೆ ಹಿಡಿದಿದ್ದಾನೆ. ನಡುವಿನಲ್ಲಿ ಬಿಚ್ಚುಗತ್ತಿ, ಕಿವಿಯಲ್ಲಿ ಕುಂಡಲಗಳು, ತುರುಬು, ಕತ್ತಿನಲ್ಲಿ ಹಾರ,

ಕೈಗಳಲ್ಲಿ ಕಡಗ ಹಾಗೂ ವೀರಗಚ್ಚೆಯನ್ನು ಧರಿಸಿ ನಿಂತಿದ್ದಾನೆ. ಯುದ್ಧವೀರನೊಬ್ಬನ ಸುಂದರ ಚಿತ್ರವೊಂದನ್ನು ಶಿಲ್ಪಿ ಕಂಡರಿಸಿದ್ದಾನೆ.

ವರ್ತೂರಿನ ಕೆರೆ ಕೆಳಗೆ ವೀರಗಲ್ಲೊಂದಿದೆ. ಇದು ಕ್ರಿ.ಶ. ಸುಮಾರು 14ನೇ ಶತಮಾನಕ್ಕೆ ಸೇರಿದ್ದಿರಬಹುದಾದ ವಿಜಯನಗರ ಕಾಲದ ವೀರಗಲ್ಲೆಂದು ಗುರುತಿಸಲಾಗಿದೆ. ವೀರನು ಎಡಗೈನಲ್ಲಿ ಗುರಾಣಿ, ಬಲಗೈನಲ್ಲಿ ಕತ್ತಿ ಹಿಡಿದು ಯುದ್ಧ ಮಾಡುವ ರೀತಿಯಲ್ಲಿ ನಿಂತಿರುವ ಸಾಮಾನ್ಯ ವೀರಗಲ್ಲು.

ವೀರಸ್ವರ್ಗವನ್ನು ಪಡೆದವರನ್ನು ದೈವೀಸ್ವರೂಪಕ್ಕೆ ಏರಿಸಿ ಅವರ ಹೆಸರಿನಲ್ಲಿ ಗುಡಿಗಳನ್ನು ನಿರ್ಮಿಸುತ್ತಿದ್ದರು. ಕಾನಕಾನಹಳ್ಳಿ, ದೊಡ್ಡಬಳ್ಳಾಪುರ, ಬೆಂಗಳೂರಿನಲ್ಲಿನ ಗ್ರಾಮಗಳಲ್ಲಿ ವೀರರ ಗುಡಿಗಳಿವೆ. ಇಂದು ಹುತಾತ್ಮರ ಸ್ಮಾರಕಗಳನ್ನು ನಿಲ್ಲಿಸುವಂತೆ ಅಂದು ಈ ವೀರರ ಹೆಸರಿನಲ್ಲಿ ನಿಲ್ಲಿಸುತ್ತಿದ್ದ ಸ್ಮಾರಕಗಳಿವು. ಸ್ಮಾರಕಗಳಿಗೆ ಪೂಜೆ, ಹವನ, ದೀಪ, ಧೂಪ, ಹೂವು ಸಲ್ಲಿಸಿ ತಲೆತಲಾಂತರಗಳಿಂದಲೂ ಪೂಜಿಸಿಕೊಂಡು ಬರುತ್ತಿದ್ದಾರೆ. ಹೀಗೆ ಮಡಿದ ವೀರರು ಜನರ ದೃಷ್ಟಿಯಲ್ಲಿ ಪೂಜನೀಯ ದೇವತೆಗಳಾಗಿದ್ದಾರೆ.

ಡಾ.ಆರ್.ಶೇಷಶಾಸ್ತ್ರಿಗಳು ಹೇಳುವಂತೆ, ವೀರಗಲ್ಲುಗಳನ್ನು ಹಾಕಿಸುತ್ತಿದ್ದ ಉದ್ದೇಶದ ಹಿಂದೆ ಲೌಕಿಕ ಮತ್ತು ಪಾರಮಾರ್ಥಿಕ ದೃಷ್ಟಿಗಳೆರಡೂ ಇತ್ತೆಂದು ತೋರುತ್ತದೆ. ವೀರನ ಪರಾಕ್ರಮವನ್ನು ಮೆಚ್ಚಿ ವೀರಗಲ್ಲನು ನೆಡುವುದು, ಅವನ ಪರಾಕ್ರಮ ಲೋಕಕ್ಕೂ ತಿಳಿಯಲೆಂದು ನೆಡುವುದು. ಇವು ಲೌಕಿಕ ಉದ್ದೇಶಗಳು. ಮಡಿದ ವೀರನಿಗೆ ವೀರಗಲ್ಲನ್ನು ನಿಲ್ಲಿಸುವುದು ತಮ್ಮ ಕರ್ತವ್ಯ ಎಂದು ಭಾವಿಸಿ, ಹಾಗೆ ವೀರಗಲ್ಲು ನಿಲ್ಲಿಸುವುದರ ಮೂಲಕ ಅವನಿಗೆ ಸ್ವರ್ಗವೋ, ಕೈಲಾಸವೋ, ವೈಕುಂಠವೋ ಪ್ರಾಪ್ತವಾಗುತ್ತದೆಂದು ನಂಬಿ ವೀರಗಲ್ಲುಗಳನ್ನು ನೆಡುವುದು. ಇವು ಪಾರಮಾರ್ಥಿಕ ಉದ್ದೇಶಗಳು[29] ಒಟ್ಟಾರೆ ಹೇಳುವುದಾದರೆ ಈ ಎಲ್ಲಾ ವೀರಗಲ್ಲುಗಳನ್ನು ನೆಡುತ್ತಿದ್ದರ ಹಿಂದಿರುವ ಉದ್ದೇಶ ವೀರನೊಬ್ಬನ ಪರಾಕ್ರಮ ಲೋಕಕ್ಕೆ ತಿಳಿಯಲಿ ಎಂಬುದು ಎಷ್ಟು ನಿಜವೋ ಹಾಗೇ ಸಮಾಜದಲ್ಲಿರುವ ಇತರರಿಗೆ ಆದರ್ಶ ಪ್ರಾಯವಾಗುತ್ತಿದ್ದು, ಮುಂದಿನ ಪೀಳಿಗೆಯವರು ಇದರಿಂದ ಉತ್ತೇಜಿತರಾಗಿ ದೇಶಕ್ಕಾಗಿ, ನಾಡಿಗಾಗಿ ಮುಂದಾಗಿ ದುಡಿಯಲಿ ಎಂಬ ಆಕಾಂಕ್ಷೆಯಿತ್ತೆಂಬುದು ಸ್ಪಷ್ಟವಾಗುತ್ತದೆ.

## ಯುದ್ಧಗಳು

ಕ್ಷತ್ರಿಯರಿಗೆ ಯುದ್ಧವೆನ್ನುವುದು ನಿಯಮವಾಗಿ ಶಾಂತಿಯೆನ್ನುವುದು ಅಪವಾದವಾಗಿದ್ದ ಕಾಲವದು. "ಸೈನ್ಯಾತ್ ವಿನಾ ನೈವ ರಾಜ್ಯಂ ನ ಧನಂ ನ ಪರಾಕ್ರಮಃ"–ಸೈನ್ಯವಿಲ್ಲದೆ ರಾಜ್ಯವಿಲ್ಲ,

ಧನವಿಲ್ಲ, ಪರಾಕ್ರಮವಿಲ್ಲ ಎಂದು ಅವರು ನಂಬಿದ್ದರು. ರಾಜನೊಬ್ಬನು ಯುದ್ಧಕ್ಕೆ ಸಿದ್ಧವಾದರೆ ಸಾಕು, ಅವನ ಉಪ್ಪನ್ನುಂಡು ಬದುಕಿದ ಸೈನಿಕರು ಯುದ್ಧಕ್ಕೆ ಸಿದ್ಧರಾಗುತ್ತಿದ್ದರು. ಯುದ್ಧದಲ್ಲಿ ಹೋರಾಡಿ ರಾಜನ ಉಪಕಾರವನ್ನು ತೀರಿಸುವುದು ತಮ್ಮ ಕರ್ತವ್ಯವೆಂದು ಅವರು ಭಾವಿಸುತ್ತಿದ್ದರು. ಇದನ್ನೇ ಕಾವ್ಯಗಳಲ್ಲಿಯೂ ಶಾಸನಗಳಲ್ಲಿಯೂ 'ಜೋಳದಪಾಟಿ' ಎಂದು ಕರೆದಿರುವುದು.[30] ಯದ್ಧವೆಂಬುದು ವ್ಯಕ್ತಿಗಳು ತಮ್ಮ ಸ್ವಪ್ರತಿಷ್ಠೆಯನ್ನು ಕಾಯ್ದುಕೊಳ್ಳಲು ನಡೆಸುವ ಸೆಣಸಾಟವೇ ಆಗಿದೆ. ತಮ್ಮ ಅಸ್ತಿತ್ವದ ಮೇಲುಗೈ ಸಾಧಿಸಿಕೊಳ್ಳಲು, ನಾಡುಗಳನ್ನು ಕಟ್ಟಲು, ಸಾಮ್ರಾಜ್ಯವನ್ನು ವಿಸ್ತರಿಸಿಕೊಳ್ಳಲು ಅಧಿಕಾರವನ್ನು ಕಾಪಿಟ್ಟುಕೊಳ್ಳಲು ಯುದ್ಧಗಳು ನಡೆದಿವೆ ಹಾಗೂ ನಡೆಯುತ್ತಲಿವೆ. ರಾಜಮನೆತನಗಳ ಆಳ್ವಿಕೆಗೆ ಒಳಪಟ್ಟ ಬೆಂಗಳೂರು ಯುದ್ಧಗಳಿಂದೇನು ಹೊರತಾಗಿಲ್ಲ. ಆದರೆ ಯುದ್ಧಗಳಿಗೆ ಸಂಬಂಧಿಸಿದಂತೆ ಬೆರಳೆಣಿಕೆಯಷ್ಟು ಶಾಸನಗಳು ಮಾತ್ರ ದೊರೆಯುತ್ತವೆ. ಶಾಸನಗಳ ಆಧಾರದ ಮೇಲೆ ಇಲ್ಲಿ ನಡೆದ ಯುದ್ಧಗಳನ್ನು ಗುರುತಿಸಲು ಸಾಧ್ಯವಾಗಿದೆ. ಕೆಲವು ಯುದ್ಧಗಳ ಉಲ್ಲೇಖಗಳು ಶಾಸನಗಳ ಮೂಲಕ ತಿಳಿಯುತ್ತವೆ.

**ತುಂಬೆಪಾಡಿ ಕಾಳಗ :** ಬೆಂಗಳೂರು ಜಿಲ್ಲೆಯ ಬೇಗೂರು ವೀರಗಲ್ಲು ಶಾಸನದಲ್ಲಿ ತುಂಬೇಪಾಡಿಯಲ್ಲಿ ನಡೆದ ಯುದ್ಧದ ಬಗ್ಗೆ ತಿಳಿಯುತ್ತದೆ. ಕ್ರಿ.ಶ.900ರಲ್ಲಿ ಗಂಗರ ಅಧಿಕಾರಿ ನಾಗತ್ತರನಿಗೂ ಹಾಗೂ ಬೀರಮಹೇಂದ್ರನಿಗೂ ತುಂಬೆಪಾಡಿಯಲ್ಲಿ ಯುದ್ಧವೊಂದು ಜರಗುತ್ತದೆ. ಈ ಶಾಸನದಲ್ಲಿ ಉಲ್ಲೇಖಗೊಂಡಿರುವ ತುಂಬೇಪಾಡಿ ತುಮಕೂರು ಜಿಲ್ಲೆ ಮಧುಗಿರಿ ತಾಲೂಕಿನಲ್ಲಿರುವ ತುಂಬಾಡಿ ಎಂದು ಗುರುತಿಸಲಾಗಿದೆ.

**ಬೆಂಗಳೂರು ಕಾಳಗ :** ಕ್ರಿ.ಶ.900ರ ಗಂಗರ ಕಾಲದಲ್ಲಿ ಬೆಂಗಳೂರು ಕಾಳಗವೊಂದು ನಡೆದಿದೆ. ಆದರೆ ಈ ಯುದ್ಧ ಯಾರ ನಡುವೆ ನಡೆಯಿತು ಎಂಬುದು ತಿಳಿದಿಲ್ಲ. ಶಾಸನದ ಪ್ರಕಾರ ಬೆಂಗಳೂರು ಕಾಳಗಲ್ಲಿ ಬುಟ್ಟಣಪತಿ ಸತ್ತ ವಿಷಯ ತಿಳಿಯುತ್ತದೆ.[31]

**ಗುಣ್ಡಿಕಾಳಗ :** ಕ್ರಿ.ಶ.750ರ ಕುಕ್ಕರೆನಾಡಿನಲ್ಲಿನ ಊರಾಳು ಜತ್ತ ಎಂಬ ತಳವಾರನು ವೊಗುಣ್ಡಿಕಾಳೆಗದಲ್ಲಿ ಶತ್ರುಗಳಿಂದ ಇರಿತಕ್ಕೆ ಒಳಗಾಗಿ ಸತ್ತನು ಎಂದಿದೆ.[32]

ಗಂಗ, ಚೋಳ, ರಾಷ್ಟ್ರಕೂಟ, ಹೊಯ್ಸಳ, ವಿಜಯನಗರ ಮೊದಲಾದ ರಾಜಮನೆತನಗಳ ಸಾಮ್ರಾಜ್ಯ ವಿಸ್ತರಣೆಯ ದಾಹ ಪರಸ್ಪರ ನಡುವಿನ ದ್ವೇಷ, ಸ್ವಪ್ರತಿಷ್ಠೆಯಿಂದಾಗಿಯೂ ಘರ್ಷಣೆಗಳು ನಡೆದಿರುವುದನ್ನು ಈ ಸಂದರ್ಭದಲ್ಲಿ ಸ್ಮರಿಸಬಹುದು. ಹಾಗಾಗಿ ಕರ್ನಾಟಕ ರಾಜ್ಯದಾದ್ಯಂತ

ಸಾವಿರಾರು ವೀರಗಲ್ಲುಗಳನ್ನು ಕಾಣಬಹುದು. ಅದೇ ರೀತಿ ಬೆಂಗಳೂರಿನಲ್ಲಿಯೂ ನೂರಾರು ವೀರಗಲ್ಲುಗಳಿರುವುದನ್ನು ಗುರ್ತಿಸಬಹುದು.

## ಪ್ರಾಣಿಬೇಟೆಯ ವೀರಗಲ್ಲುಗಳು

ಪ್ರಾಚೀನ ಕಾಲದಿಂದಲೂ ಪ್ರಾಣಿ ಬೇಟೆಯಾಡುವುದು ಒಂದು ರೀತಿಯ ಪದ್ಧತಿಯಾಗಿ ಬೆಳೆದುಕೊಂಡಿದೆ. ಇದರ ಹಿಂದಿನ ಉದ್ದೇಶವನ್ನು ಕೆದಕ ಹೊರಟರೆ ಮನರಂಜನೆಗಾಗಿ(ಹವ್ಯಾಸ), ಪ್ರಾಣಿಗಳ ಮಾಂಸಕ್ಕಾಗಿ, ಶೌರ್ಯ ಪ್ರದರ್ಶನಕ್ಕಾಗಿ ಮತ್ತೂ ಕೆಲವೊಮ್ಮೆ ಈ ಪ್ರಾಣಿಗಳು ಕೃಷಿಕರು ಬೆಳೆದ ಬೆಳೆಗಳನ್ನು ಹಾನಿ ಮಾಡುತ್ತಿದ್ದವು ಹಾಗಾಗಿ ಬೆಳೆಗಳ ರಕ್ಷಣೆಗಾಗಿ ಪ್ರಾಣಿಗಳೊಂದಿಗೆ ಹೋರಾಡುತ್ತಿದ್ದರು. ಇಂತಹ ಶಾಸನ ಶಿಲ್ಪಗಳು ಅಗಾಧವಾಗಿ ದೊರೆಯುತ್ತವೆ.

**ಹಂದಿಬೇಟೆಯ ವೀರಗಲ್ಲು:–** ಹಂದಿಬೇಟೆ ಕರ್ನಾಟಕದ ಅರಸರಿಗೆ ಬಹು ಪ್ರಿಯವಾದ ಬೇಟೆಯಾಗಿತ್ತೆಂದು ತೋರುತ್ತದೆ. ಪಂಪಭಾರತದ ಒಂದು ಪದ್ಯದಿಂದ ವೀರರಾದವರಿಗೆ, ಬೇಟೆಗಾರರಾದವರಿಗೆ ತಮಗೆ ಹಂದಿ ಬೇಟೆಯಾಡುವುದರಲ್ಲಿ ವಿಶೇಷವಾದ ಪ್ರಾವೀಣ್ಯವಿದೆ ಎಂಬುದಾಗಿ ಹೇಳಿಕೊಳ್ಳುವುದು ಹೆಮ್ಮೆಯ ವಿಷಯವಾಗಿತ್ತೆಂದು ತಿಳಿಯುತ್ತದೆ ಎಂದು ಡಾ.ಆರ್.ಶೇಷಶಾಸ್ತ್ರಿಯವರು ಅಭಿಪ್ರಾಯ ಪಡುತ್ತಾರೆ.[33]

ಕ್ರಿ.ಶ.1080ರ ಚೋಳರ ಒಂದು ವೀರಗಲ್ಲಿನಲ್ಲಿ ರಾಮದೇವನು ಬೇಟೆಗೆ ಪೊರವಟ್ಟು ಹಿರಿಯ ಹಂದಿಗೆ ತಾಗಿ ಕೊಲ್ಲಲ್ಪಡುತ್ತಾನೆ.[34] ಹೀಗೆ ರಾಮದೇವನು ಹಂದಿಯನ್ನು ಬೇಟೆಯಾಡಲು ಹೋದನೋ ಅಥವಾ ಹಂದಿಯಿಂದ ಆಗುವ ಅನಾಹುತವನ್ನು ತಪ್ಪಿಸಲು ಬೇಟೆಯಾಡಿದನೋ ತಿಳಿಯದು. ಆದರೆ ಹಂದಿಯಿಂದ ರಾಮದೇವನು ಹತನಾಗುತ್ತಾನೆ.

ಯಲಹಂಕದ ಪ್ರದೇಶದಲ್ಲಿ ದೊರೆತ ಶಾಸನವೊಂದು ವಿಶೇಷವಾಗಿದೆ. ಹಂದಿಯೊಡನೆ ಕಾದಾಡುವ ಬೇಟೆನಾಯಿಯ ಶಿಲ್ಪವಿರುವ ಶಾಸನವೊಂದು ದೊರೆತಿದೆ. ಕ್ರಿ.ಶ. ಸುಮಾರು 11ನೇ ಶತಮಾನಕ್ಕೆ ಸರಿಹೊಂದುವ ಚೋಳರ ಕಾಲದ ಶಾಸನವಿದು. "ಸ್ವಸ್ತಿ ಶ್ರೀ ರಾಜೇಂದ್ರ ಚೋಡ ದೇವನ ರಾಜ್ಯದೊಳೆ ತನ್ನಾಲ ಪಲ್ಲವಗಾವುಂಡನ್ನ ನಾಯು ಕೇಸರಿ ಪಂದಿಯುಂ ತಾಗುವೊಡೆ ಮಡಿದ"[35] ಎಂದಿದೆ. ಪಲ್ಲವ ಗಾವುಂಡನೆಂಬ ಬೇಟೆಗಾರನ ನಾಯಿ ಕೇಸರಿ ಹಂದಿಯೊಂದಿಗೆ ಕಾದಾಡಿ ಸತ್ತದ್ದಕ್ಕೆ ಸ್ಮಾರಕವಾಗಿ ಈ ವೀರಗಲ್ಲನ್ನು ಹಾಕಿಸಲಾಗಿದೆ. ಹಂದಿಯೊಡನೆ ಕಾದಾಡುವ ವೀರಗಲ್ಲು ಕರ್ನಾಟಕದಲ್ಲೇ ಅತಿ ವಿರಳ. ಈ ಸಂದರ್ಭದಲ್ಲಿ ಆತಕೂರಿನಲ್ಲಿ ದೊರೆತ ಕ್ರಿ.ಶ.950ರ ನಾಯಿ ಮತ್ತು

ಹಂದಿ ಬೇಟೆ ವೀರಗಲ್ಲನ್ನು ಸ್ಮರಿಸಬಹುದು. ಇಲ್ಲಿ ಸತ್ತ ಕಾಳಿ ಎಂಬ ಹೆಸರಿನ ನಾಯಿಗಾಗಿ ವೀರಗಲ್ಲನ್ನು ಹಾಕಿಸಿರುವ ವಿಷಯವಿದೆ. ರಾಷ್ಟ್ರಕೂಟರಿಗೂ ಚೋಳರಿಗೂ ನಡೆದ ಘೋರ ಯುದ್ಧದಲ್ಲಿ ಬೂತುಗನ ಅಂಕಕಾರನಾದ ಮನಾಲರನು ಅದ್ಭುತ ಸಾಹಸವನ್ನು ತೋರಿಸುತ್ತಾನೆ. ಅವನನ್ನು ಮೆಚ್ಚಿದ ಬೂತುಗನು ಏನು ಬೇಕಾದರೂ ಕೇಳಿಕೋ ಕೊಡುತ್ತೇನೆ ಎಂದಾಗ ಮನಾಲರನು ಬೂತುಗನ ಹತ್ತಿರವಿದ್ದ ಕಾಳಿ ಎಂಬ ಹೆಸರಿನ ನಾಯಿಯನ್ನು ಬೇಡಿ ಪಡೆಯುತ್ತಾನೆ. ಮುಂದೆ ಅವನು ಒಮ್ಮೆ ಬೇಟೆಯಾಡುತ್ತಿರುವಾಗ ಅವನ ನಾಯಿಯು ಹಂದಿಯೊಂದನ್ನು ಕೆಣಕಿ ಅದನ್ನು ಕೊಂದು ತಾನೂ ಸಾಯುತ್ತದೆ. ಆಗ ಮನಾಲರನು ಆ ನಾಯಿಯನ್ನು ವೀರನ ಮಟ್ಟಕ್ಕೇರಿಸಿ ಅದರ ಸ್ಮಾರಕವಾಗಿ ಒಂದು ವೀರಗಲ್ಲನ್ನು ಸ್ಥಾಪಿಸುತ್ತಾನೆ. ಆ ವೀರಗಲ್ಲನ್ನು ಪ್ರತಿನಿತ್ಯವೂ ಪೂಜಿಸಲು ಒಬ್ಬ ಗೊರವನನ್ನು ನೇಮಿಸಿ ಒಂದು ಹೊಲವನ್ನು ದಾನಮಾಡುತ್ತಾನೆ.[36] ಹೀಗೆ ಆತಕೂರಿನಲ್ಲಿ ನಾಯಿ ಕಾಳಿಯ ಮಲಾರ ಮತ್ತು ಯಲಹಂಕದಲ್ಲಿ ನಾಯಿ ಕೇಸರಿಯ ಪಲ್ಲವ ಗಾವುಂಡನು ಹಂದಿಯೊಂದಿಗೆ ಹೋರಾಡಿದ ತಮ್ಮ ಪ್ರೀತಿಯ ನಾಯಿಗಳ ಹೆಸರಿನಲ್ಲಿ ಶಾಸನಗಳನ್ನು ಹಾಕಿಸಿರುವುದು ವಿಶೇಷವಾಗಿದೆ.

ಕೋರಮಂಗಲದ ಲಕ್ಷ್ಮೀದೇವಾಲಯದ ಪಕ್ಕದಲ್ಲೊಂದು ಹಂದಿ ಬೇಟೆಯ ವೀರಗಲ್ಲಿದೆ. ಈ ಶಿಲಾಫಲಕದಲ್ಲಿ ವೀರನೊಬ್ಬನು ಕುದುರೆಯ ಮೇಲೆ ಕುಳಿತು ಬೇಟೆಗೆ ಹೋಗುತ್ತಿದ್ದಾನೆ. ಕೈಯಲ್ಲಿ ಉದ್ದನೆಯ ಈಟಿ ರೀತಿಯ ಆಯುಧ ಹಿಡಿದಿದ್ದಾನೆ. ಅವನ ಪಕ್ಕದಲ್ಲಿ ಪ್ರಧಾನವಾಗಿ ವೀರನೊಬ್ಬನ ಚಿತ್ರಣವಿದೆ. ಈ ವೀರನು ಎಡಗೈನಲ್ಲಿ ಉದ್ದನೆಯ ಈಟಿಯನ್ನು ಬಲಗೈನಲ್ಲಿ ಕತ್ತಿಯನ್ನು ಹಿಡಿದು ನಿಂತಿದ್ದಾನೆ. ತುರುಬನ್ನು ಕಟ್ಟಿದ್ದಾನೆ. ಕೊರಳಲ್ಲಿ ಆಭರಣಗಳಿವೆ. ಇವನ ಪಕ್ಕದಲ್ಲೇ ಸಣ್ಣಗಾತ್ರದಲ್ಲಿ ವೀರನ ಚಿತ್ರಣವಿದೆ. ಈ ವೀರನು ಹಂದಿಯನ್ನು ಹಿಡಿದು ಕತ್ತಿಯಿಂದ ಇರಿಯುತ್ತಿದ್ದಾನೆ. ಹಂದಿಯು ತನ್ನ ಎರಡು ಕಾಲನ್ನು ಮೇಲೆತ್ತಿ ವೀರನ ಮೇಲೆ ಎರಗಿದೆ. ಇದು ವಿಶೇಷವಾಗಿರುವ ಹಂದಿಬೇಟೆಯ ವೀರಗಲ್ಲಾಗಿದೆ.

ಸಾಮಾನ್ಯವಾಗಿ ಹಂದಿಬೇಟೆಯ ವೀರಗಲ್ಲುಗಳು ವಿಶೇಷವಾಗಿ ಎರಡು ರೂಪದಲ್ಲಿ ಚಿತ್ರಿಸಲಾಗಿರುತ್ತದೆ. ಒಂದು ಹಂದಿ ಮತ್ತು ನಾಯಿಗಳ ಹೋರಾಟವನ್ನು ನಿರೂಪಿಸಿದರೆ ಮತ್ತೊಂದು ವೀರನು ಹಂದಿಯೊಂದಿಗೆ ಹೋರಾಡುತ್ತಿರುವಂತೆ ನಿರೂಪಿಸುವ ವೀರಗಲ್ಲುಗಳಾಗಿವೆ. ಬೆಂಗಳೂರು ನಗರದಲ್ಲಿ ಎರಡೂ ರೀತಿಯ ಹಂದಿಬೇಟೆಯ ವೀರಗಲ್ಲುಗಳು ದೊರೆತಿವೆ.

**ಜಿಂಕೆ(ಕಡವೆ)ಬೇಟೆಯ ವೀರಗಲ್ಲು:–** ಕ್ರಿ.ಶ. ಸುಮಾರು ಹತ್ತನೇ ಶತಮಾನಕ್ಕೆ ಸರಿಹೊಂದುವ ಜಿಂಕೆ ಬೇಟೆ ವೀರಗಲ್ಲೊಂದು ಬನಶಂಕರಿಯ ಎರಡನೇ ಹಂತದಲ್ಲಿ ದೊರೆತಿದೆ. ಸುಮಾರು ನಾಲ್ಕು ಅಡಿ

ಅಗಲ, ನಾಲ್ಕು ಅಡಿ ಎತ್ತರವಿರುವ ಈ ವೀರಗಲ್ಲಿನಲ್ಲಿರುವ ವೀರನು ಬಿಲ್ಲಿಗೆ ಬಾಣವನ್ನು ಹೂಡಿ ನಿಂತಿದ್ದಾನೆ. ಮುಡಿಯನ್ನು ಕಟ್ಟಿದ್ದಾನೆ. ಈತನ ಮುಂದೆ ಚಿಕ್ಕದಾದ ಕಡೆವೆ(ಜಿಂಕೆ)ಯ ಚಿತ್ರವಿದೆ. ಇದರ ಕೊಂಬುಗಳ ಚಿತ್ರಣದಿಂದ ಮಾತ್ರ ಇದನ್ನು ಕಡವೆಯೆಂದು ಗುರುತಿಸಬಹುದು. ಕೊಂಬುಗಳು ಕವಲು ಕವಲುಗಳಾಗಿ ಉದ್ದವಾಗಿ ಚಿತ್ರಿತವಾಗಿದೆ. ಮತ್ತೊಂದು ಗಮನಾರ್ಹ ಅಂಶವೆಂದರೆ ವೀರನ ನಡುವಿಗೆ ಬಾಣವೊಂದು ಚುಚ್ಚಿಕೊಂಡಿದೆ. ಶಿಲ್ಪದ ತುದಿಯ ಎಡಮೂಲೆಯಲ್ಲಿ ಅಪ್ಸರೆಯರು ವೀರನನ್ನು ಸ್ವರ್ಗಕ್ಕೆ ಕೊಂಡೊಯ್ಯುತ್ತಿದ್ದಾರೆ.

**ಹುಲಿಬೇಟೆ ವೀರಗಲ್ಲು:–** ಬಹಳ ಪ್ರಾಚೀನ ಕಾಲದಿಂದಲೂ ಹುಲಿಬೇಟೆಯು ಪ್ರಚಲಿತವಾಗಿದೆ. ಹಂದಿ, ಹುಲಿ ಮೊದಲಾದ ದುಷ್ಟಪ್ರಾಣಿಗಳೂ ಊರಿನೊಳಗೆ ನುಗ್ಗಿ ಸಾಮಾನ್ಯ ಜನರ ಮೇಲೆ ಎರಗಿ ತೊಂದರೆ ನೀಡುತ್ತಿದ್ದವು. ಇಂತಹ ಸಂದರ್ಭದಲ್ಲಿ ತಮ್ಮ ಪ್ರಾಣವನ್ನೂ ಲೆಕ್ಕಿಸದೆ ಹೋರಾಡಿ ಜನರ ರಕ್ಷಣೆ ಮಾಡುತ್ತಿದ್ದ ವೀರನ ಕೀರ್ತಿ ಪತಾಕೆಯನ್ನು ಮೆರೆಸಲು ಈ ರೀತಿ ಹಂದಿಬೇಟೆ, ಹುಲಿಬೇಟೆಯ ವೀರಗಲ್ಲುಗಳನ್ನು ಹಾಕಿಸುತ್ತಿದ್ದರು. ಶಾಸನವಿಲ್ಲದ ಆದರೆ ಹುಲಿಯೊಡನೆ ಹೋರಾಡುತ್ತಿರುವ ವೀರರ ಶಿಲ್ಪಗಳು ಕರ್ನಾಟಕದಾದ್ಯಂತ ದೊರೆಯುತ್ತವೆ. ಬೆಂಗಳೂರಿನಲ್ಲಿಯೂ ಶಾಸನರಹಿತ ಹುಲಿಬೇಟೆಯ ವೀರಗಲ್ಲುಗಳು ದೊರೆತಿವೆ.

ಬೆಂಗಳೂರು ಕೋಟೆಯ ಒಳಗೋಡೆಯ ಮೇಲೆ ವೀರನೊಬ್ಬ ಹುಲಿಯೊಂದಿಗೆ ಸೆಣಸಾಡುವ ಚಿತ್ರಣವಿದೆ. ವೀರನು ಬಲಗಾಲನ್ನು ನೆಲಕ್ಕೆ ಊರಿ ಕುಳಿತ ಭಂಗಿಯಲ್ಲಿದ್ದಾನೆ. ಆತನ ಎದುರಿಗೆ ಹುಲಿಯು ತನ್ನ ಎಡಗಾಲನ್ನು ಎತ್ತಿ ವೀರನ ಮೇಲೆ ದಾಳಿ ಮಾಡುತ್ತಿದೆ. ವೀರನು ಕತ್ತಿಯನ್ನು ಹುಲಿಯ ಬಾಯಿಗೆ ಚುಚ್ಚುತ್ತಿರುವ ರೀತಿಯಲ್ಲಿ ಚಿತ್ರಿಸಲಾಗಿದೆ. ಇದನ್ನು ಹೊಯ್ಸಳರ ಲಾಂಛನವೆಂದು ಕೆಲವರು ಅಭಿಪ್ರಾಯ ಪಟ್ಟಿರುವುದೂ ಉಂಟು. ಆದರೆ ಇದು ಸಾಮಾನ್ಯ ವೀರನೊಬ್ಬನ ವೀರಗಲ್ಲು.

ಡಾ.ಎಂ.ಚಿದಾನಂದಮೂರ್ತಿಯವರು ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದಲ್ಲಿ ಹಲವು ವೀರಗಲ್ಲುಗಳನ್ನು ತಂದು ಸಂರಕ್ಷಿಸಿಟ್ಟಿದ್ದಾರೆ. ಈ ವೀರಗಲ್ಲುಗಳು ಸುತ್ತಮುತ್ತಲ ಪ್ರದೇಶಗಳಾದ ಮಾಗಡಿ, ಕೆಂಗೇರಿ, ಬಿಡದಿ ಹೀಗೆ ಇತರೆ ಪ್ರದೇಶಗಳಿಂದ ತಂದಿರಿಸಲಾಗಿದೆ. ಈ ವೀರಗಲ್ಲುಗಳಲ್ಲಿ ಹುಲಿಬೇಟೆಯ ವೀರಗಲ್ಲೊಂದು ಕಾಣಸಿಗುತ್ತದೆ. ವೀರನು ಬಲಗೈನಲ್ಲಿ ಈಟಿಯಂತಹ ಆಯುಧವನ್ನು ಹಿಡಿದಿದ್ದಾನೆ. ಹುಲಿ ವೀರನ ಮೇಲೆ ಆಕ್ರಮಣಮಾಡಿದೆ. ಆ ಸಂಧರ್ಭದಲ್ಲಿ ವೀರ ಕತ್ತಿಯನ್ನು ಮೇಲೆತ್ತಿದ್ದಾನೆ. ವೀರಾವೇಷದಿಂದ ಹುಲಿಯೊಂದಿಗೆ ಸೆಣಸಾಡುವ ಚಿತ್ರಣವಿದೆ.

## ಊರಳಿವು

ರಾಜ್ಯವೊಂದರ ರಕ್ಷಣೆಗೆ ಸೈನ್ಯಪಡೆಯೊಂದು ಅವಶ್ಯಕತೆ ಇತ್ತು. ರಾಜ್ಯದ ಗಡಿಯನ್ನು ಆಕ್ರಮಿಸಿದಾಗ, ನಾಡಿನೊಳಗೆ ಸಣ್ಣಪುಟ್ಟ ಹೋರಾಟಗಳಾದಾಗ ರಾಜನ ಸೇನೆಯು ರಾಜ್ಯದ ರಕ್ಷಣೆಗಾಗಿ ಧಾವಿಸುತ್ತಿತ್ತು. ಶತ್ರುಗಳಿಂದ ದಾಳಿ ಸಮಯದಲ್ಲಿ ಗಟ್ಟಿಯಾಗಿ ನಿಂತು ವೈರಿಗಳಿಂದ ಊರನ್ನು ರಕ್ಷಿಸಿಕೊಳ್ಳುವುದು ವೀರನ ಕರ್ತವ್ಯವಾಗಿರುತ್ತಿತ್ತು. ಊರೊಂದರ ರಕ್ಷಣೆಗಾಗಿ ಹೋರಾಡಿದರ ಕುರುಹೇ ಊರಳಿವು. ಊರನ್ನು ಇತರ ಶತ್ರುಸೈನ್ಯದಿಂದ ಹಾಗೂ ಕಳ್ಳಕಾಕರಿಂದ ರಕ್ಷಿಸಿಕೊಳ್ಳಲು ಊರನ್ನು ಕಾಯಲು ವೀರರನ್ನು ನೇಮಿಸುತ್ತಿದ್ದರು. ಗಂಗರಸ ಶ್ರೀಪುರುಷನ ಕಾಲಕ್ಕೆ ಸೇರಿರುವ ಶಾಸನವೊಂದು ಕೃಷ್ಣರಾಜಪುರದಲ್ಲಿ ದೊರೆತಿದೆ. ಮೂರೇ ಸಾಲಿನ ಈ ಶಾಸನವು ಹೀಗಿದೆ,

> **"ಶ್ರೀ ಪುರುಷ ಮಹಾರಾಜರರಸುಗೆಯ ಕನ್ನರ...ರಡು.**
> **ವೊರ್ಬಾಕರು ರಾಳಿವೊಸಲೂರ**
> **ರಲ್ಯೊಯನು ಮಾರೆಯನು**
> **ಉರಮಿಶಿ...ವಿಜಿದು ಬಿಟ್ಟ"[37]**

ಊರನ್ನು ಕಾಯಲು ನೇಮಿಸಿದ್ದ ಮಾರಯ್ಯನು ಶತ್ರುಗಳು ಊರನ್ನು ನಾಶಮಾಡಲು ಬಂದಾಗ ಅವರೊಂದಿಗೆ ಕಾದಾಡಿ ಸಾವನಪ್ಪಿದ ವಿಷಯವನ್ನು ತಿಳಿಸುತ್ತದೆ. ಬೆಂಗಳೂರಿನಲ್ಲಿ ದೊರೆಯುವ ಮೊದಲ ಊರಳಿವಿನ ಶಾಸನವಿದು.

ಕ್ರಿ.ಶ.1156ರ ಕುಕ್ಕಲ ನಾಡಳ್ವರ್ ರಾಜ್ಯದ ಪೆರ್ಗಡಿ(ಅಧಿಕಾರಿ)ಯಾದ ಅಚ್ಚಲಯ್ಯನ್ ಎಂಬಾತನು ತಿಪ್ಪೂರು ಪಟ್ಟಣದ ಮೇಲೆ ಶತ್ರುಗಳು ದಾಳಿಮಾಡಿದಾಗ ಹೋರಾಡಿ ಪಟ್ಟಣವನ್ನು ರಕ್ಷಿಸಿ ಹಲವರನ್ನು ಕೊಂದ ವಿಷಯ ತಿಳಿಯುತ್ತದೆ.[38] 'ಬಾಡಣದ ಊರಳಿವಿನಲ್ಲಿ ತೋಟಮಸೆಟ್ಟಿ' ಎಂಬುವನು ವೀರಸ್ವರ್ಗ ಪಡೆದಿದ್ದಾನೆ.[39] ಈ ಶಾಸನಗಳಲ್ಲಿ ಉಲ್ಲೇಖಿತ ಮಾರಯ್ಯ ಮತ್ತು ಅಚ್ಚಲಯ್ಯನ್, ತೋಟಮ ಸೆಟ್ಟಿ ಎಂಬುವರು ತಮ್ಮ-ತಮ್ಮ ಊರಿನ ರಕ್ಷಣೆಗಾಗಿ ಹೋರಾಡಿ ವೀರಮರಣ ಹೊಂದಿದ ವ್ಯಕ್ತಿಗಳಾಗಿದ್ದಾರೆ.

## ಮಹಾಸತಿ ಆಚರಣೆ

ಪ್ರಾಚೀನ ಜನರಲ್ಲಿ ಸಾವಿನ ನಂತರವು ಜೀವನವಿರುತ್ತದೆ ಎಂಬ ನಂಬಿಕೆಯಿತ್ತು. ಹಾಗಾಗಿ ಸತ್ತ ವ್ಯಕ್ತಿಗೆ ಪ್ರಿಯವಾದ ವಸ್ತುಗಳನ್ನು ಆತನೊಂದಿಗೆ ಸಮಾಧಿ ಮಾಡುತ್ತಿದ್ದರು. ಸಾವಿನ ನಂತರವು ಆ ವ್ಯಕ್ತಿ ಎಲ್ಲಾ ಸವಲತ್ತುಗಳನ್ನು ಅನುಭವಿಸಲಿ ಎಂಬ ಆಶೋತ್ತರಗಳೊಂದಿಗೆ ಆತನ ಅಂತ್ಯಸಂಸ್ಕಾರ

ನಡೆಯುತ್ತಿತ್ತು. ಈ ಹಿನ್ನೆಲೆಯಲ್ಲಿ ಯೋಚಿಸುವುದಾದರೆ ಆತನ ಪತ್ನಿಯು ಅವನೊಂದಿಗೆ ಹೋಗಲಿ ಎಂಬ ಉದ್ದೇಶದಿಂದ ಈ ಸತಿಹೋಗುವ ಪದ್ಧತಿ ಹುಟ್ಟಿಕೊಂಡಿರಬಹುದು. ಮತ್ತೂ ಒಂದು ಸಾಧ್ಯತೆಗಳನ್ನು ಗುರುತಿಸುವುದಾದರೆ, ಗಂಡನ ಮರಣದ ನಂತರ ಅವಳು ಕಾಮುಕರ ಕಣ್ಣಿನಿಂದ ಮುಕ್ತಿಹೊಂದಲಿ ಎಂಬ ಉದ್ದೇಶವೂ ಇರಬಹುದು. ಇನ್ನೂ ಕೆಲವು ಹೆಣ್ಣುಮಕ್ಕಳು ತಾವು ದೈವೀಸ್ವರೂಪಕ್ಕೆ ಏರುತ್ತೀವಿ ಎಂಬ ನಂಬಿಕೆಯಿಂದ ಆಕೆ ಸತಿಹೋಗುವುದನ್ನು ಮೌಲ್ಯವೆಂಬಂತೆ ಭಾವಿಸಿ ಒಪ್ಪಿಕೊಂಡಿರಲೂ ಬಹುದು. ಈ ಮಹಾಸತಿ ಆಚರಣೆಯ ಹಿಂದಿರುವ ಕಾರಣವನ್ನು ವಿದ್ವಾಂಸರು ಈ ರೀತಿ ಪಟ್ಟಿ ಮಾಡಿದ್ದಾರೆ.[40]

1. ಅಂದಿನ ಕಾಲದಲ್ಲಿ ಮರಣ ಹೊಂದಿದ ವ್ಯಕ್ತಿಯೊಂದಿಗೆ ಅವನ ಪ್ರಿಯ ವಸ್ತುಗಳನ್ನು ಹೂಳಬೇಕೆಂಬ ಇಲ್ಲವೆ ಸುಡಬೇಕೆಂಬ ಭಾವನೆಯಿತ್ತು.
2. ಹೀಗೆ ಸಾಯುವುದರಿಂದ ಗಂಡನಿಗೆ ಸ್ವರ್ಗ ಪ್ರಾಪ್ತಿಯಾಗುವುದಲ್ಲದೆ ತಾನೂ ಸ್ವರ್ಗ ಪಡೆದು ಮುಂದಿನ ಜನ್ಮದಲ್ಲಿ ಮತ್ತೆ ಪತಿಪತ್ನಿಯರಾಗಿ ಹುಟ್ಟುತ್ತಾರೆಂಬ ನಂಬಿಕೆ.
3. ತಾನು ಮಡಿದ ನಂತರ ತನ್ನ ಮಡದಿ ಪರಪುರುಷನ ವಶವಾಗಬಾರದು ಅಥವಾ ತನ್ನಿಂದ ಅಗಲಿರಬಾರದೆಂಬ ಪುರುಷನ ಸ್ವಾರ್ಥ ಭಾವನೆ.
4. ಗಂಡನ ಮರಣದ ತರುವಾಯ ಸ್ತ್ರೀ ಬದುಕಿನಲ್ಲಿ ಎದುರಿಸಬಹುದಾದ ಜೀವರಕ್ಷಣೆ, ಮಾನರಕ್ಷಣೆಗಳ ಭಯ.
5. ಸತ್ತ ಪತಿಯೊಂದಿಗೆ ಪತ್ನಿಯನ್ನು ಮರಣಕ್ಕೆ ನೂಕಿ ಅವಳ ಆಸ್ತಿಯನ್ನು ಅಪಹರಿಸುವ ಪಿತೂರಿ.

ಮೊದಲಾದವು ಮಹಾಸತಿ ಆಚರಣೆಗೆ ಕಾರಣಗಳಾಗಿದ್ದರೂ, ಅವಳಿಗೆ ಇಷ್ಟವಿರಲಿ, ಇಲ್ಲದಿರಲಿ ಸತಿಹೋಗುವ ಪದ್ಧತಿ ಪ್ರಾಚೀನ ಸಂದರ್ಭದಲ್ಲಿ ಅಸ್ತಿತ್ವದಲ್ಲಿತ್ತು. ಸತಿ ಎಂಬ ಪದವು 'ಸ್ತ್ರೀ' ಸೂಚಕ ಪದವಾಗಿದೆ. ಈ ಪದ್ಧತಿಯನ್ನು ಸತಿ ಎಂಬ ಪದದಿಂದ ಗುರುತಿಸಲಾಗುತ್ತದೆ. "ಬಹುಶಃ ಶಿವನ ಪತ್ನಿ ದಾಕ್ಷಾಯಣಿ ಅಥವಾ ಸತೀದೇವಿ ಪತಿಯ ಪರವಾಗಿ ನಿಂತು, ದಕ್ಷ ಬ್ರಹ್ಮನ ಯಜ್ಞದಲ್ಲಿ ಪ್ರಾಣಾರ್ಪಣೆ ಮಾಡಿದ ಘಟನೆಯೇ ಗಂಡನಿಗಾಗಿ ಹೆಂಡತಿ ಚಿತಾಪ್ರವೇಶ ಮಾಡುವ ಈ 'ಸತಿ' ಪದ್ಧತಿಗೆ ಮೂಲವಾಗಿರಬೇಕು. ಈ ಪದ್ಧತಿಯ ಗೌರವಸೂಚಿ ಪದ 'ಮಹಾಸತಿ', ಇದರ ತದ್ಭವ ರೂಪ ಮಾಸ್ತಿ" ಎಂದು ಎಂ.ಎಂ.ಕಲಬುರ್ಗಿಯವರು ಅಭಿಪ್ರಾಯ ಪಟ್ಟಿದ್ದಾರೆ. ಈ ರೀತಿ ಸಹಗಮನ ಮಾಡಿ 'ಮಹಾಸತಿ'ಯಾದವರ ಸ್ಮಾರಕವಾಗಿ ನಿಲ್ಲಿಸಿದ ಕಲ್ಲುಗಳೇ 'ಮಾಸ್ತಿಗಲ್ಲು'ಗಳು.

ಮಾಸ್ತಿಯಾಗುವುದರಲ್ಲಿಯೂ ಅನುಗಮನ ಮತ್ತು ಸಹಗಮನ ಎಂಬ ಎರಡು ರೀತಿಯ ಪದ್ಧತಿ ಇತ್ತು. ಗಂಡ ಯುದ್ಧದಲ್ಲಿ ಮರಣ ಹೊಂದಿದರೆ ಆ ಸುದ್ದಿ ಕೇಳಿ ಪತ್ನಿ ತಾನಿರುವ ಸ್ಥಳದಲ್ಲಿ ಚಿತೆ ಏರುತ್ತಿದ್ದಳು. ಇದೇ ಅನುಗಮನ ಪದ್ಧತಿ. ಗಂಡನ ಶವದೊಂದಿಗೆ ತಾನು ಚಿತೆ ಏರುವುದು ಸಹಗಮನ ಪದ್ಧತಿಯಾಗಿದೆ.

ಕರ್ನಾಟಕದಲ್ಲಿ ಮಹಾಸತಿಯ ಪ್ರಾಚೀನತೆಯನ್ನು ಗುರುತಿಸುವುದಾದರೆ ಐದು ಅಥವಾ ಆರನೆ ಶತಮಾನಕ್ಕೆ ಕರೆದೊಯ್ಯುತ್ತದೆ. ಕವಡಿ ಶಾಸನ ಬಹುಶಃ ಕದಂಬ ರವಿವರ್ಮನ ರಾಣಿಯ ಸಹಗಮನವನ್ನು ಸೂಚಿಸುತ್ತಿದ್ದು, ಇದು ನಮ್ಮ ನಾಡಿನಲ್ಲಿಯ ಸತಿ ಪದ್ಧತಿಯನ್ನು ಕುರಿತ ಪ್ರಥಮ ದಾಖಲೆಯಾಗಿದೆ. ಆನಂತರ ಕ್ರಿ.ಶ.908ರಲ್ಲಿ ಹೆಗ್ಗಡೆ ತೊಮ್ಮನೆಂಬುವನು ಯುದ್ಧದಲ್ಲಿ ಮಡಿಯಲು ಅವನ ಮಡದಿ ಬಳಕ್ಕ ಕೈಕೊಂಡ ಸಹಗಮನದ ಉಲ್ಲೇಖ ಸಿಗುತ್ತದೆ. ಕ್ರಿ.ಶ.972ರಲ್ಲಿ ಬಿದಿಯಣ್ಣನ ಮಡದಿ ಜಕ್ಕಬ್ಬೆ ಮಹಾಸತಿಯಾಗಲು ಅವಳ ತಂಗಿ ಜಾಬೆ ಮಾಸ್ತಿ ಶಿಲೆ ನಿಲ್ಲಿಸಿದಳೆಂಬ ಉಲ್ಲೇಖ. ಹತ್ತನೆಯ ಶತಮಾನದಿಂದ ಈಚೆಗೆ ಬಂದರೆ ಕ್ರಿ.ಶ.1051ರ ಉತ್ತರಾಣಿಹಳ್ಳಿ ಶಾಸನವು ಬೋಗಾರ ಕರಡಿಸೆಟ್ಟಿಯ ಮಡದಿ ನಾಗಮ್ಮನ ಚಿತಾಪ್ರವೇಶವನ್ನು ಹೇಳುತ್ತದೆ. ಬಹಳ ಮುಖ್ಯವಾದ ಮಾಸ್ತಿ ಶಾಸನವೊಂದು ಕ್ರಿ.ಶ.1057ರ ಬೆಳತೂರಿನಲ್ಲಿ ದೊರೆತಿದೆ. ಇದು ದೇಕಬ್ಬೆಯ ಅನುಗಮನವನ್ನು ತಿಳಿಸುತ್ತದೆ.[41] ಹೀಗೆ ಮಾಹಾಸತಿ ಪದ್ಧತಿಯು ಕರ್ನಾಟಕದಲ್ಲಿ ಪ್ರಾಚೀನ ಸಂದರ್ಭದಿಂದಲೂ ಅಸ್ತಿತ್ವದಲ್ಲಿತ್ತು. ಈ ಮಾಸ್ತಿಕಲ್ಲುಗಳು ಶಿಲ್ಪಗಳ ರೂಪದಲ್ಲಿ, ಬರಹ(ಶಾಸನ), ಶಿಲ್ಪ–ಬರಹ, ಮಾಸ್ತಿಗುಡಿಗಳ ರೂಪದಲ್ಲಿ ದೊರೆಯುತ್ತವೆ. ಬೆಂಗಳೂರು ಜಿಲ್ಲೆಯಲ್ಲಿ ಶಿಲ್ಪರೂಪದ ಮಾಸ್ತಿಕಲ್ಲುಗಳು ದೊರೆತಿವೆಯೇ ಹೊರತು ಶಾಸನರೂಪದಲ್ಲಿರುವ ಮಾಸ್ತಿಕಲ್ಲುಗಳು ದೊರೆತಿಲ್ಲ.

ಮಾಸ್ತಿಕಲ್ಲುಗಳಲ್ಲಿ ನೋಡಲು ಸ್ತ್ರೀಯೋರ್ವಳು ತೋಳನ್ನು ಎತ್ತಿರುವ ಚಿತ್ರಣವಿರುತ್ತದೆ. ಇದನ್ನು ವ್ಯಾಸನ ತೋಳು ಎಂದು ಕರೆಯಲಾಗುತ್ತದೆ. ಇನ್ನೂ ಕೆಲವು ಮಾಸ್ತಿಕಲ್ಲುಗಳಲ್ಲಿ ಸ್ತ್ರೀ ಎರಡೂ ತೋಳುಗಳನ್ನು ಎತ್ತಿರುತ್ತಾಳೆ. ಇದನ್ನು ಇಕ್ಕೈ ಮಾಸ್ತಿ ಎಂದು ಕರೆಯಲಾಗುತ್ತದೆ. ಮಹಾಸತಿಯ ಬಲಗೈ ಶುಭದ ಸಂಕೇತ ಎಂಬ ನಂಬಿಕೆ ಜನರಲ್ಲಿತ್ತು. ಇನ್ನೂ ಕೆಲವು ಶಿಲ್ಪಗಳಲ್ಲಿ ಮರಣ ಹೊಂದಿದ ಪತಿ ಆತನನ್ನು ಹಿಂಬಾಲಿಸುತ್ತಿರುವ ಸತಿ ಇರುತ್ತಾರೆ. ಸತಿಯ ತಲೆಯ ಹಿಂದೆ ಹೂವಿನ ದಂಡೆ ಮತ್ತು ಕಟ್ಟಿರುವ ಮುಡಿಯನ್ನು ಹಾಗೂ ಸತಿಯ ಕೈಯಲ್ಲಿ ನಿಂಬೆಹಣ್ಣು, ಕನ್ನಡಿಯನ್ನು ಹಿಡಿದಿರುವಂತೆ ಚಿತ್ರಿಸಲಾಗಿರುತ್ತದೆ. ಬೆಂಗಳೂರು ನಗರದಲ್ಲಿ ದೊರೆತ ಮಾಸ್ತಿಕಲ್ಲುಗಳ ವಿವರ ಈ ಮುಂದಿನಂತಿದೆ,

ದೊಡ್ಡನೆಕ್ಕುಂದಿಯಲ್ಲಿ ದೊರೆತ ಮಾಸ್ತಿಕಲ್ಲಿನಲ್ಲಿ ಯುದ್ಧವೊಂದರಲ್ಲಿ ಮಡಿದ ವೀರನು ಧ್ಯಾನನಿರತನಾಗಿದ್ದಾನೆ. ಅವನೊಟ್ಟಿಗೆ ಸತಿಯ ಚಿತ್ರಣವಿದೆ. ವಾದ್ಯಗಾರರು, ಕಳಸ, ಕರಡಿಗೆ ಕನ್ನಡಿಯ ಚಿತ್ರವೂ ಇದೆ. ಹಾಗೂ ಕುದುರೆಯ ಚಿತ್ರಣವಿದೆ. ವೀರನು ಯುದ್ಧಕ್ಕೆ ಹೋಗಿದ್ದನ್ನು ಈ ಕುದುರೆಗಳು ಸೂಚಿಸುತ್ತಿರಬಹುದು. ಈ ವೀರ–ಮಾಸ್ತಿಕಲ್ಲು ಕ್ರಿ.ಶ. ಸುಮಾರು 14ನೇ ಶತಮಾನಕ್ಕೆ ಸೇರಿದೆ ಎಂದು ಗುರುತಿಸಲಾಗಿದೆ.

ದೊಡ್ಡನೆಕ್ಕುಂದಿಯಲ್ಲೇ ಇರುವ ಮತ್ತೊಂದು ಮಾಸ್ತಿಕಲ್ಲಿನಲ್ಲಿ ಬೇಡನೊಬ್ಬನ ಚಿತ್ರಣವಿದೆ. ಅವನೊಟ್ಟಿಗೆ ಇಬ್ಬರು ಸತಿಯರ ಚಿತ್ರಣವಿದೆ. ಈ ಬೇಡನು ಬೇಟೆಗೆ ಹೋದ ಸಂದರ್ಭದಲ್ಲಿ ಮರಣ ಹೊಂದಿದ್ದಾನೆ. ಈತನಿಗಿದ್ದ ಇಬ್ಬರು ಪತ್ನಿಯರು ಮಾಸ್ತಿಯರಾಗಿದ್ದಾರೆ. ಸತ್ತ ಗಂಡನನ್ನು ಹಿಂಬಾಲಿಸುತ್ತಿರುವ ಚಿತ್ರಣ ಮಹಾಸತಿಯರಾದದ್ದನ್ನು ಸೂಚಿಸುತ್ತಿದೆ. ಈ ವೀರಮಾಸ್ತಿ ಸುಮಾರು ಕ್ರಿ.ಶ.12ನೇ ಶತಮಾನಕ್ಕೆ ಸೇರಿದೆ ಎಂದು ಗುರುತಿಸಲಾಗಿದೆ.

ಲಾಲ್‌ಬಾಗ್‌ನಲ್ಲಿ ಕೆಂಪೇಗೌಡರ ಕಾವಲು ಗೋಪುರದ ಬಂಡೆಯ ಮೇಲೆ ವೀರ–ಮಾಸ್ತಿಗಲ್ಲೊಂದು ಇದೆ. ಕ್ರಿ.ಶ.13ನೇ ಶತಮಾನಕ್ಕೆ ಸೇರಿರುವ ಈ ವೀರಮಾಸ್ತಿಯಲ್ಲಿ ವೀರನೊಬ್ಬನು ಈಟಿಯನ್ನು ಹಿಡಿದು ಶತ್ರುಗಳೊಂದಿಗೆ ಹೋರಾಡುತ್ತಿರುವಂತೆ ಚಿತ್ರಿಸಲಾಗಿದೆ. ಸ್ತ್ರೀಯೊಬ್ಬಳು ವೀರನಿಗೆ ಛತ್ರಿಯನ್ನು ಹಿಡಿದು ನಿಂತಿದ್ದಾಳೆ. ಮತ್ತಿಬ್ಬರು ಸ್ತ್ರೀಯರು ಚಾಮರವನ್ನು ಬೀಸುತ್ತಿದ್ದಾರೆ. ಪಕ್ಕದಲ್ಲೇ ಸತಿಯು ನಿಂತಿದ್ದಾಳೆ. ಈ ಯುದ್ಧದಲ್ಲಿ ಮಡಿದ ವೀರನೊಂದಿಗೆ ಸತಿಯು ಸಹಗಮನಮಾಡಿದ್ದಾಳೆ.

ಜವಹಾರ್‌ಲಾಲ್ ನೆಹರು ತಾರಾಲಯಕ್ಕೆ ಹೋಗುವ ದಾರಿಯಲ್ಲೊಂದು ಮಾಸ್ತಿಗಲ್ಲಿದೆ. ಇದು ಸಹ ಒಂದು ವೀರ–ಮಾಸ್ತಿಗಲ್ಲು. ಪುರುಷ ಮತ್ತು ಸ್ತ್ರೀಯ ಚಿತ್ರಣವಿರುವ ಈ ಶಿಲ್ಪದಲ್ಲಿ ಗಾಯನ ಮತ್ತು ನರ್ತನ ಮಾಡುವ ಕುಬ್ಜರ ಚಿತ್ರಣಗಳೂ ಇವೆ. ಈ ಮಾಸ್ತಿಕಲ್ಲು ಸುಮಾರು ಕ್ರಿ.ಶ.15ನೇ ಶತಮಾನಕ್ಕೆ ಸೇರಿದೆ ಎಂದು ಗುರ್ತಿಸಲಾಗಿದೆ.

ಓಣಿಮುನೇಶ್ವರ ದೇವಾಲಯದ ಹಿಂಭಾಗದಲ್ಲಿ ಎರಡು ವೀರಮಾಸ್ತಿಗಲ್ಲುಗಳು ದೊರೆತಿವೆ. ಈ ವೀರಗಲ್ಲುಗಳು ಕ್ರಿ.ಶ. ಸುಮಾರು 15ನೇ ಶತಮಾನಕ್ಕೆ ಸೇರಿದೆ ಎಂದು ಗುರ್ತಿಸಲಾಗಿದೆ.ಈ ಎರಡು ಶಿಲ್ಪಗಳಲ್ಲಿಯು ವೀರ ಆತನನ್ನು ಹಿಂಬಾಲಿಸುತ್ತಿರುವ ಸತಿಯ ಚಿತ್ರಣವಿದೆ. ಸತಿಯು ಕೈಯಲ್ಲಿ ಕನ್ನಡಿ ಮತ್ತು ನಿಂಬೆಹಣ್ಣುಗಳನ್ನು ಹಿಡಿದಿದ್ದಾಳೆ.

ರೇಸ್‌ಕೋರ್ಸ್ ರಸ್ತೆಯ ಬದಿಯಲ್ಲಿ ಒಂದು ವೀರಗಲ್ಲಿದೆ. ಇದು ಕ್ರಿ.ಶ. ಸುಮಾರು 16ನೇ ಶತಮಾನಕ್ಕೆ ಸೇರಿದ್ದಾಗಿದೆ. ಯುದ್ಧಕ್ಕೆ ಹೊರಟ ವೀರನ ಚಿತ್ರಣ ಅವನನ್ನು ಹಿಂಬಾಲಿಸುತ್ತಿರುವ ಸತಿಯ ಚಿತ್ರಣವಿರುವ ವೀರ–ಮಾಸ್ತಿಗಲ್ಲು.

ಚಾಮರಾಜಪೇಟೆಯ ಅಪ್ಪುರಾವ್ ರಸ್ತೆಯಲ್ಲಿರುವ ಅರಳಿಮರದ ಕಟ್ಟೆಯ ಮೇಲೆ ಒಂದು ವೀರ–ಮಾಸ್ತಿಗಲ್ಲಿದೆ. ಈ ವೀರಗಲ್ಲು ಕ್ರಿ.ಶ. ಸುಮಾರು 15ನೇ ಶತಮಾನಕ್ಕೆ ಸೇರಿದ್ದಾಗಿದೆ. ವೀರನೊಂದಿಗೆ ಇಬ್ಬರು ಸತಿಯರು ನಿಂತಿದ್ದಾರೆ. ವೀರನ ಕೈಯಲ್ಲಿ ಈಟಿ ಇದೆ. ಈತ ಹೋರಾಟದಲ್ಲಿ ಮಡಿದಿದ್ದಾನೆ. ಈತನಿಗಿದ್ದ ಇಬ್ಬರು ಪತ್ನಿಯರು ಮಹಾಸತಿಯರಾಗಿದ್ದಾರೆ.

ಕೃಷ್ಣರಾಜಪುರದ ಲಕ್ಷ್ಮೀ ದೇವಾಲಯದ ಮುಂದುಗಡೆ ಐದು ವೀರಗಲ್ಲುಗಳ ಸ್ಮಾರಕಗಳು ಒಂದೇ ಕಡೆ ಇವೆ. ಈ ವೀರಮಾಸ್ತಿ ಕ್ರಿ.ಶ. 13ನೇ ಶತಮಾನಕ್ಕೆ ಸೇರಿದ್ದಿರಬಹುದು. ಅದರಲ್ಲಿ ಒಂದು ವೀರಮಾಸ್ತಿಗಲ್ಲು. ಈ ಶಿಲ್ಪದಲ್ಲಿಯೂ ಒಬ್ಬ ವೀರ ಹೋರಾಟದಲ್ಲಿ ಮಡಿದಿದ್ದಾನೆ. ವೀರನ ಬಲಗೈಯಲ್ಲಿ ಖಡ್ಗವಿದೆ. ಸತಿಯು ಸರ್ವಾಲಂಕಾರ ಭೂಷಿತಳಾಗಿ ಪತಿಗೆ ಕೈ ಜೋಡಿಸಿ ನಿಂತಿದ್ದಾಳೆ.

ಟೌನ್ ಹಾಲ್ ಬಳಿ ಇರುವ ಮದ್ದೂರಮ್ಮ ದೇವಾಲಯದ ಆವರಣದಲ್ಲಿ ವೀರಮಾಸ್ತಿಗಲ್ಲೊಂದಿದೆ. ವಿಜಯನಗರ ಕಾಲದ ಈ ಮಾಸ್ತಿಗಲ್ಲಿನಲ್ಲಿ ಹೋರಾಡುತ್ತಿರುವ ಚಿತ್ರಣ, ಸತಿ ವೀರನನ್ನು ಹಿಂಬಾಲಿಸುತ್ತಿರುವಂತೆ ಚಿತ್ರಿಸಲಾಗಿದೆ. ವೀರನು ಯುದ್ಧಾಸ್ತ್ರಗಳಾದ ಕತ್ತಿ ಗುರಾಣಿಯನ್ನು ಹಿಡಿದು ವೀರಗಚ್ಚೆ ಹಾಕಿ ನಿಂತಿದ್ದಾನೆ. ಸತಿಯು ಬಲಗೈಯನ್ನು ಇಳಿಬಿಟ್ಟಿದ್ದಾಳೆ. ಎಡಗೈನಿಂದ ಅಭಯಹಸ್ತವನ್ನು ಮಾಡಿ ನಿಂತಿದ್ದಾಳೆ. ಸಾಮಾನ್ಯವಾಗಿ ಬಲಗೈನಿಂದ ಅಭಯವನ್ನು ನೀಡುವ ಸತಿಯರ ಚಿತ್ರಣದ ಕಲ್ಲುಗಳು ಕಾಣಸಿಗುತ್ತವೆ. ಆದರೆ ಇಲ್ಲಿ ಸತಿ ತನ್ನ ಎಡಗೈನಿಂದ ಅಭಯವನ್ನು ನೀಡುತ್ತಿರುವಂತೆ ಚಿತ್ರಿಸಿರುವುದು ವಿಶೇಷವಾಗಿದೆ.

ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಕೆಲವು ವೀರ–ಮಾಸ್ತಿಗಲ್ಲುಗಳು ನಮಗೆ ದೊರೆಯುತ್ತವೆ. ಆದರೆ ಈ ವೀರಮಾಸ್ತಿಗಲ್ಲುಗಳು ಯಾವ ಪ್ರದೇಶದಿಂದ ತಂದು ಇಲ್ಲಿ ಇಟ್ಟಿರುವುದು ಎಂದು ತಿಳಿದುಬರುವುದಿಲ್ಲ ಆದರೆ ಚಿದಾನಂದಮೂರ್ತಿಗಳು ವಿಶ್ವವಿದ್ಯಾನಿಲಯದ ಸುತ್ತಮುತ್ತಲ ಪ್ರದೇಶಗಳು ಹಾಗೂ ಮಾಗಡಿ, ಕೆಂಗೇರಿ ಮೊದಲಾದ ಕಡೆ ಇದ್ದ ಈ ಶಿಲ್ಪಗಳನ್ನು ತಂದು ಇಲ್ಲಿ ಸಂರಕ್ಷಿಸಿಟ್ಟಿದ್ದಾರೆ ಎಂಬ ಮಾಹಿತಿ ಇದ್ದು, ಇಲ್ಲಿ ವೀರ–ಮಾಸ್ತಿಗಲ್ಲುಗಳೇ ಹೆಚ್ಚಾಗಿವೆ.

ಮೇಲೆ ತಿಳಿಸಿದ ಎಲ್ಲಾ ಸ್ಮಾರಕಗಳು ಮಾಸ್ತಿ ಪದ್ಧತಿಯ ಆಚರಣೆ ಬೆಂಗಳೂರಿನ ಪ್ರದೇಶದಲ್ಲಿ ಪ್ರಾಚೀನ ಸಂದರ್ಭದಲ್ಲಿ ಜೀವಂತವಾಗಿತ್ತು ಎಂಬುದಕ್ಕೆ ಸಾಕ್ಷಿಗಳಾಗಿ ನಿಲ್ಲುತ್ತವೆ.

## ಆತ್ಮ ಬಲಿದಾನ ಪದ್ಧತಿ

ಹುಟ್ಟಿದ ಮೇಲೆ ಮರಣ ಖಚಿತ. ಆದರೆ ಆ ಮರಣವನ್ನು ಕೆಲವು ಉದ್ದೇಶಗಳ ಈಡೇರಿಕೆಗಾಗಿ ತಾವೇ ತಂದು ಕೊಳ್ಳುವುದು ಆತ್ಮಬಲಿದಾನವಾಗಿರುತ್ತದೆ. ಪ್ರಾಚೀನ ಸಂದರ್ಭದಲ್ಲಿ ಆತ್ಮಬಲಿದಾನವು ಧಾರ್ಮಿಕ ಮತ್ತು ಸಾಮಾಜಿಕ(ಲೌಕಿಕ)ಕಾರಣಗಳಿಗಾಗಿ ನಡೆಯುತ್ತಿತ್ತು.

**ಧಾರ್ಮಿಕ ಬಲಿದಾನ :** ಈ ರೀತಿ ಬಲಿಯಾದವರು ಯಾವುದೇ ಯುದ್ಧದಲ್ಲಿ ಹೋರಾಡಿ ಮರಣ ಪಡೆದವರಲ್ಲ. ದೇವರ ಹೆಸರಿನಲ್ಲಿ ವೈಯಕ್ತಿಕ ಅಥವಾ ಸಮಾಜದ ಒಳಿತಿಗಾಗಿ ತಮ್ಮ ಪ್ರಾಣವನ್ನು ತಮ್ಮ ಕೈಯಾರೆ ತೆಗೆದುಕೊಂಡು ತಮ್ಮ ಪ್ರಾಣವನ್ನು ಅರ್ಪಣೆ ಮಾಡುತ್ತಿದ್ದರು. ಧಾರ್ಮಿಕ ಬಲಿದಾನವು ಹೆಚ್ಚಾಗಿ ಜೈನಧರ್ಮದಲ್ಲಿ ಗುರುತಿಸಬಹುದು. ಜೈನ ಸನ್ಯಾಸಿಗಳು ಮತ್ತು ಗೃಹಸ್ಥರು ಸನ್ಯಾಸತ್ವವನ್ನು ಪಡೆದು ಸಲ್ಲೇಖನ ವ್ರತದಿಂದ ಆಹಾರಾದಿಯನ್ನು ತೊರೆದು ಪ್ರಾಣ ಬಿಡುವುದು ಸಾಮಾನ್ಯ ವಾಡಿಕೆ. ಇಂತಹ ವಿಷಯವನ್ನು ತಿಳಿಸುವ ಶಾಸನವೇ ನಿಷಿಧಿ ಸ್ಮಾರಕಗಳು. ಈಗಾಗಲೇ ಧಾರ್ಮಿಕ ಅಧ್ಯಯನದಲ್ಲಿನ 'ಜೈನಧರ್ಮ'ದ ವಿಭಾಗದಲ್ಲಿ ನಿಷಧಿ ಶಾಸನಗಳ ಬಗ್ಗೆ ವಿಶ್ಲೇಷಿಸಿರುತ್ತೇನೆ. ಪ್ರಸ್ತುತ ಅಧ್ಯಯನದಲ್ಲಿ ಸ್ಮಾರಕ ಶಿಲ್ಪದ ಹಿನ್ನೆಲೆಯಲ್ಲಿ ನಿಷಿಧಿ ಶಾಸನಗಳು ಮುಖ್ಯ ಪಾತ್ರವಹಿಸುವುದರಿಂದ ಇಲ್ಲಿಯೂ ಇದರ ಚರ್ಚೆಯ ಅವಶ್ಯಕತೆ ಇದೆ.

ಬಾಣವಂಶದ ಸಾಮಂತದೊರೆ ನಾಗತ್ತರನ ಪುತ್ರಿಯಾದ ರೊಂಡಬ್ಬೆಯು ಸಲ್ಲೇಖನ ವ್ರತ ಸ್ವೀಕರಿಸಿ ಮರಣ ಹೊಂದಿರುವ ವಿಷಯವನ್ನು ಹೇಳಿರುವ ಶಾಸನವು ಬೇಗೂರಿನಲ್ಲಿದೆ. ಈ ಶಾಸನವನ್ನು ಮಂಟಪವೊಂದನ್ನು ನಿರ್ಮಿಸಿ ಅದರ ಒಳಗೋಡೆಯ ಮೇಲೆ ಕೆತ್ತಲಾಗಿದೆ. ಶಾಸನದ ಮೇಲ್ಭಾಗದಲ್ಲಿ ಹೆಣ್ಣೊಬ್ಬಳು(ರೊಂಡಬ್ಬೆ) ಧ್ಯಾನಸ್ಥಳಾಗಿ ಕುಳಿತ ಚಿತ್ರವನ್ನು ಬಿಡಿಸಲಾಗಿದೆ. ಸಾಮಾನ್ಯವಾಗಿ ನಿಷಿಧಿ ಸ್ಮಾರಕಗಳನ್ನು ಹಲವು ಪ್ರಕಾರಗಳಲ್ಲಿ ನಿರ್ಮಿಸಲಾಗುತ್ತದೆ. ಅವುಗಳಲ್ಲಿ ಪ್ರಮುಖವಾದವುಗಳೆಂದರೆ ಸಮಾಧಿಮರಣ ಹೊಂದಿದ ವ್ಯಕ್ತಿಯ ನಿಷಿದಿ ಸ್ಮಾರಕವಾಗಿ ಚರಣ ಚಿಹ್ನೆಗಳನ್ನು(ಪಾದಗಳ ಚಿತ್ರ) ಕೊರೆಸುವುದು, ಶಾಸನಗಳನ್ನು ಬರೆಸುವುದು, ಸ್ತಂಭವನ್ನು ನಿರ್ಮಿಸಿ ಸ್ತಂಭದ ಕೆಳಭಾಗದಲ್ಲಿ ಶಾಸನ, ಮೇಲ್ಭಾಗದಲ್ಲಿ ಶಿಲ್ಪವನ್ನು ಕೊರೆಸುವುದು, ಸ್ತೂಪದ ಆಕಾರದಲ್ಲಿ ಸ್ಮಾರಕ ನಿರ್ಮಿಸುವುದು, ಸ್ಥಳೀಯವಾಗಿ ದೊರೆಯುವ ಕಲ್ಲುಗುಂಡುಗಳ ಗುಡ್ಡೆಯನ್ನು ನಿರ್ಮಿಸುವುದು, ಮಂಟಪವನ್ನು ನಿರ್ಮಿಸುವುದು.[42] ಹೀಗೆ ಆರು ಬಗೆಗಳಲ್ಲಿ ನಿಷಿಧಿ ಸ್ಮಾರಕಗಳು ದೊರೆಯುತ್ತವೆ.

ರೊಂಡಬ್ಬೆಯ ಶಾಸನವು ಮಂಟಪವನ್ನು ನಿರ್ಮಿಸಿ ಅದರ ಒಳಗೋಡೆಯ ಒಳಗೆ ಹಾಕಿಸಿರುವುದನ್ನು ಗಮನಿಸಬಹುದು. ಮತ್ತೊಂದು ನಿಷಿಧಿ ಶಾಸನವು ದೊಡ್ಡ ಬಿದರುಕಲ್ಲಿನಲ್ಲಿ ದೊರೆತಿದೆ.[43] ಈ ಶಾಸನದ ಪ್ರಕಾರ ಗೌತುಬಜೀಯನ ಹೆಸರಿನಲ್ಲಿ ನಿಲ್ಲಿಸಿರುವ ನಿಷಿದಿ ಕಲ್ಲು ಇದು. ಆದರೆ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಈ ಶಾಸನದ ಸ್ಮಾರಕ ದೊರೆತಿಲ್ಲ. ಬಹುಶಃ ಅದು ನಾಶವಾಗಿದೆ.

**ಲೌಕಿಕ ಬಲಿದಾನ :** ತಮ್ಮ ಪ್ರಿಯ ವ್ಯಕ್ತಿಯ ಹೆಸರಿನಲ್ಲಿ ಪ್ರಾಣತ್ಯಾಗ ಮಾಡಿಕೊಳ್ಳುವುದೇ ಲೌಕಿಕ ಬಲಿದಾನ. ಲೌಕಿಕ ಬಲಿದಾನದಲ್ಲಿ ಸತಿಹೋಗುವುದು ಒಂದು ವಿಧಾನವಾದರೆ, ಮತ್ತೊಂದು ವಿಧಾನ ವೇಳವಾಳಿ. ತಮ್ಮ ಪ್ರಿಯವ್ಯಕ್ತಿಗಾಗಿ ಬಲಿ ಆಗುವ ಪದ್ಧತಿಯೇ ವೇಳೆವಾಳಿ. ಹೆಚ್ಚಾಗಿ ರಾಜನಿಗಾಗಿ ಈ ರೀತಿಯ ಬಲಿಗಳು ನಡೆಯುತ್ತಿದ್ದವು. ಸಹಗಮನ ಹೆಣ್ಣಿಗಾಗಿ ಮೀಸಲಿದ್ದರೆ, 'ವೇಳವಾಳಿ' ಪ್ರಧಾನವಾಗಿ ಪುರುಷವರ್ಗಕ್ಕೆ(ಕ್ವಚಿತ್ತಾಗಿ ಸ್ತ್ರೀವರ್ಗಕ್ಕೆ) ಸಂಬಂಧಿಸುತ್ತಿರುತ್ತಿತ್ತು. ಈ ರೀತಿ ತಮ್ಮ ಪ್ರಾಣಾರ್ಪಣೆ ಮಾಡಿಕೊಳ್ಳುವವರನ್ನು ಜೋಳವಾಟಿ, ಕಿಟಿಗ್ಗಂಟೆ, ಲೆಂಕವಾಳಿ, ಗರುಡ ಎಂದೆಲ್ಲಾ ಕರೆಯಲಾಗುತ್ತಿತ್ತು. ವೇಳೆವಾಳಿಮರಣಗಳು ನಡೆಯುತ್ತಿದ್ದದ್ದು ಒಡೆಯನ ಯುದ್ಧಪ್ರಸಂಗದಲ್ಲಿ, ಒಡೆಯನ ಶುಭಪ್ರಸಂಗ, ಒಡೆಯನ ಮರಣ ಪ್ರಸಂಗಗಳಲ್ಲಿ ನಡೆಯುತ್ತಿತ್ತು. ವೇಳೆವಾಳಿಗಳ ವಿವರ ನಮಗೆ ಮೊದಲು ಸಿಗುವುದು ಮೇವುಂಡಿ ಶಾಸನದಲ್ಲಿ ರಟ್ಟಿಯಣ್ಣನೆಂಬ 'ಬೆಳಾವಡಿಚ' ಮಡಿದ ಒಡೆಯನ ಅಗ್ನಿಸಂಸ್ಕಾರದೆದುರು ಆತ್ಮಹತ್ಯೆ ಮಾಡಿಕೊಂಡು 'ಕಿಟಿಗ್ಗಂಟ್ಟೆ'ಯಾದ ಪ್ರಥಮ ಉದಾಹರಣೆಯಾಗಿದೆ.[44] ಆನಂತರ ನಮಗೆ ದೊರೆಯುವ ಶಾಸನವೇ ಬೆಂಗಳೂರು ನಗರ ಜಿಲ್ಲೆಗೆ ಸೇರಿದ ಕ್ರಿ.ಶ.900ರ ಬೇಗೂರು ಶಾಸನದಲ್ಲಿ "ನಾಗತ್ತರನಿಗಾಗಿ ಮನೆಮಗನ್ ಪೆಗೂರನು ಸತ್ತ"[45] ಎಂಬ ವಿಷಯವಿದೆ. 'ಪೇಗೂರ' ಎಂಬುವನು ಗಂಗರ ಕಾಲದಲ್ಲಿ ನಾಗತ್ತರನ ಮನೆಮಗ. ಬಹುಶಃ ಈ ಶಾಸನದಲ್ಲಿ ಉಲ್ಲೇಖಿತ 'ಮನೆಮಗನ್' ವೇಳೆವಾಳಿತನವನ್ನು ಸೂಚಿಸುತ್ತಿದೆ.

ಯುದ್ಧದಲ್ಲಿ ಹೋರಾಡಿ ನಾಗತ್ತರನ ಮಗಳು ಕೊಂಡಬ್ಬೆಯು 'ಕತ್ತವ್ಯವೆಳೆಗೊಂಡು ಸತ್ತಂ' ಎಂಬ ಉಲ್ಲೇಖವಿರುವ ಶಾಸನ ಬೇಗೂರಿನಲ್ಲೇ ದೊರೆತಿದೆ.[46] ಈಕೆ 'ಕರ್ತವ್ಯ ವೇಳೆಗೊಂಡು ಸತ್ತಳ್' ಅಂದರೆ ಕರ್ತವ್ಯವನ್ನು ನಿರ್ವಹಿಸಿ ಅಥವಾ ತಂದೆ ಮಡಿದಾಗ ಮಗಳು ತಂದೆಗೆ ವೇಳೆವಾಳಿಯಾಗಿ ಮಡಿದಳು ಎಂದೂ ಭಾವಿಸಲೂಬಹುದು. ವೇಳೆವಾಳಿಯ ಬಗ್ಗೆ ಹೇಳುವ ಮತ್ತೊಂದು ಶಾಸನ ಬೇಗೂರಿನಲ್ಲಿಯೇ ದೊರೆತಿದೆ. ಗಂಗರ ಕಾಲದ ಈ ಶಾಸನ "ಮಱುತಲೆ ಆಗಿ ವಿಜ್ಞೋರ್ ಮೇಲವಸನ್ತಿಯುಂ ದೇವನಾಗನುಂ" ಎಂದಿದೆ. ಕದಮ್ಬ ಕುಮಾರಮ್ಮರಸ ಸತ್ತಾಗ ವೇಲವಸನ್ತಿ ಮತ್ತು ದೇವನಾಗರು ಮಱುತಲೆ ಆಗಿ ಬೀಳುತ್ತಾರೆ. ಅಂದರೆ ವೇಳೆವಾಳಿಗಳಾಗಿ ಸಾಯುತ್ತಾರೆ. ಇಲ್ಲಿ ಬರುವ

ಕದಬ್ಬು ಕಮ್ಮಾರಸ ಯಾರು ಎಂಬುದು ಶಾಸನದಲ್ಲಿ ಸ್ಪಷ್ಟವಾಗಿಲ್ಲ. ಈ ಶಾಸನವನ್ನು ಸಂಶೋಧಿಸಿರುವ ಸ್ಮಿತಾರೆಡ್ಡಿಯವರೇ ಹೇಳುವಂತೆ 'ಮಱುತಲೆ' ಎಂಬ ಪದ ಹತ್ತನೇ ಶತಮಾನದ ಶಾಸನಗಳವರೆಗೆ ಎಲ್ಲಿಯೂ ಕಂಡು ಬರುವುದಿಲ್ಲ. ತಲೆಗೆ ಮುಂದಲೆಯಾಗಿ ಪ್ರತಿ ತಲೆಯಾಗಿ ಎಂದು ಬಳಕೆಯಾಗಿದೆ. ಆದರೆ ಇದೇ ಅರ್ಥವನ್ನುಳ್ಳಂತಹ ಮಱುತಲೆ ಎಂಬ ಪದ ಇಲ್ಲಿ ಉಲ್ಲೇಖಿತವಾಗಿದೆ. ಕದಮ್ಬ ವಂಶದ ಮಾರಮ್ಮರಸ ಸತ್ತಾಗ ಅವನಿಗೆ ವೇಲವಸನ್ತಿ ಮತ್ತು ದೇವನಾಗ ಇಬ್ಬರೂ ಮರುತಲೆಯಾಗಿ ಆತ್ಮಾಹುತಿ ಮಾಡಿಕೊಳ್ಳುತ್ತಾರೆ.[47]

ವೇಳೆವಾಳಿಯ ಉಲ್ಲೇಖವಿರುವ ಮತ್ತೊಂದು ಶಾಸನವು ದೊಡ್ಡ ಬೆಳವಂಗಲ ಹೋಬಳಿಯ ಅಕ್ಕತಮ್ಮನಹಳ್ಳಿಯ ಸಿದ್ಧಲಿಂಗಯ್ಯನವರ ಹೊಲದಲ್ಲಿ ದೊರೆತಿದೆ. ಈ ಶಾಸನದಲ್ಲಿ 'ತಲೆಗಡಿಯಿಸಿ ಸತಂ' ಎಂಬ ಪದದ ಉಲ್ಲೇಖವಿದೆ. ಆದರೆ ಶಾಸನದ ಎರಡು ಸಾಲು ತ್ರುಟಿತವಾಗಿರುವುದರಿಂದ ಯಾವ ವ್ಯಕ್ತಿ ತಲೆಗಡಿಯಿಸಿ ಕೊಂಡು ಸತ್ತ ಎಂಬ ವಿಷಯ ತಿಳಿದು ಬರುವುದಿಲ್ಲ. ಹಾಗಾಗಿ ಸತ್ತವ್ಯಕ್ತಿ ವೇಳೆವಾಳಿಯೇ ಆಗಿದ್ದಾನೆ. ಈ ಶಾಸನದ ಸಂಶೋಧಕರಾದ ಡಾ.ಎಂ.ಜಿ.ಮಂಜುನಾಥರವರ ಪ್ರಕಾರ, ಈ ಶಾಸನದ ಕಾಲ ಶಕವರ್ಷ 902ನೆಯ ವಿಷ್ಣು ಸಂವತ್ಸರದ ಕಾರ್ತಿಕ ಬಹುಳ ತ್ರಯೋದಶಿ ಆದಿತ್ಯವಾರ ಅಂದರೆ ಕ್ರಿ.ಶ.980ರ ವಿಷ್ಣು ಸಂವತ್ಸರ, ನವೆಂಬರ್ 27 ಭಾನುವಾರಕ್ಕೆ ಸರಿಹೊಂದುತ್ತದೆ. ಈ ಶಾಸನ ಹಾಕಿಸಿದ ಕಾಲದಲ್ಲಿ ಗಂಗರ ದೊರೆಯಾದ ರಾಚಮಲ್ಲನು ರಾಜ್ಯವಾಳುತ್ತಿದ್ದನು. ಬಹುಶಃ ಪ್ರಸ್ತುತ ಶಾಸನದ ವೇಳೆವಾಳಿ ನಾಟ್ಗಾಮುಂಡನು ರಾಚಮಲ್ಲನ ವೇಳೆವಾಳಿಯಾಗಿರಬಹುದು. ಆದರೆ ಇದು ಕೇವಲ ಊಹೆ ಮಾತ್ರ. ಶಾಸನದಲ್ಲಿನ ಎರಡು ಸಾಲುಗಳು ತೀರಾ ಸವೆದಿರುವುದರಿಂದ ಈ ಬಗ್ಗೆ ಖಚಿತವಿಲ್ಲ ಎಂದು ಅಭಿಪ್ರಾಯ ಪಟ್ಟಿದ್ದಾರೆ.[48]

ಒಡೆಯನಿಗಾಗಿ ಪ್ರಾಣವನ್ನು ಮುಡುಪಿಟ್ಟ ಇಂತಹ ವ್ಯಕ್ತಿಗಳನ್ನು ಪ್ರಾಚೀನ ಶಾಸನಗಳಲ್ಲಿ ವೇಳವಡಿಚ ಎಂಬ ಪದವನ್ನು ಬಳಸಲಾಗಿದೆ. ಪ್ರೇಮಾಲಯಸುತನ್, ಮನೆಮಗತಿನ್, ಪ್ರಿಯಪುತ್ರನ್, ಪೊರೆದಮಗನ್ ಎಂಬಿವು ಇದರ ಪರ್ಯಾಯ ಪದಗಳಾಗಿವೆ. ಕನ್ನಡ ಶಾಸನೋಕ್ತ ಮನೆಮುದ್ದ, ಕುಲಮುದ್ದ ಎಂಬಿವೂ ಬಾಣನ ಹರ್ಷಚರಿತೆಯ ಪುತ್ರನ್, ಪಾಂಡ್ಯರ ಶಾಸನೋಕ್ತ 'ಆಪತ್ತುದವಿ' ಎಂಬಿವೂ ಇದೇ ಸಂಪದ್ರದಾಯವನ್ನು ಸೂಚಿಸುತ್ತವೆ.[49] ಹಾಗೆಯೇ ಬೇಗೂರು ಶಾಸನೋಕ್ತ 'ಮಱುತಲೆ'ಯೂ ಇದೇ ಅರ್ಥವನ್ನು ನೀಡುತ್ತದೆ. ಪೇಗೂರ, ಕೊಂಡಬ್ಬೆ, ವೇಲವಸ್ತನಿ, ದೇವನಾಗ ಇವರು ಬೆಂಗಳೂರು ನಗರದ ಶಾಸನೋಕ್ತ ವೇಳೆವಾಳಿಗಳಾಗಿದ್ದಾರೆ. ಈ ವೇಳೆವಾಳಿಗಳು ತಮ್ಮ

ಒಡೆಯನ ಪ್ರೀತಿಯ, ಸೇವೆಯ, ನಂಬಿಕೆಯ ಪ್ರತೀಕವೆಂಬಂತೆ ನಡೆದುಕೊಳ್ಳುತ್ತಿದ್ದರು. ಈ ರೀತಿಯಾಗಿ ಅರಸೊತ್ತಿಗೆಯು ಅವರನ್ನು ತಯಾರು ಮಾಡುತ್ತಿದ್ದುದು ವಿಶೇಷವಾಗಿದೆ.

**ಸಿಡಿದಲೆ:–** ಸಿಡಿದಲೆ ಎಂಬುದು ರುಂಡ ಕತ್ತರಿಸಿಕೊಳ್ಳುವ ಒಂದು ವಿಧಾನ. ಬಲಿದಾನದ ಮತ್ತೊಂದು ರೂಪ. ಬಗ್ಗಿಸಿದ ಗಿಡದ ಟೊಂಗೆ ಅಥವಾ ಬಗ್ಗಿಸಿದ ಗಳದ ತುದಿಗೆ ವೇಳೆವಾಳಿಯ ಕೂದಲನ್ನು ಕಟ್ಟಿ, ಒಬ್ಬನು ಖಡ್ಗದಿಂದ ಹೊಡೆದರೆ ರುಂಡ ಬೇರೆಯಾಗುತ್ತದೆ. ವೇಳೆವಾಳಿ ವಿಧಾನದಲ್ಲಿ ಸಿಡಿದೆಲೆಯೂ ಒಂದು. ಬೇಗೂರಿನಲ್ಲಿ ಸಿಡಿದಲೆಯ ಬಗ್ಗೆ ತಿಳಿಸುವ ಶಿಲ್ಪವೊಂದು ದೊರೆತಿದೆ. ಗಂಗರ ಕಾಲಕ್ಕೆ ಸೇರಿರುವ ಈ ಶಿಲಾಫಲಕದಲ್ಲಿ ವೀರನೊಬ್ಬನು ಪದ್ಮಾಸನ ಹಾಕಿ ಕೈಮುಗಿದ ಭಂಗಿಯಲ್ಲಿ ಶಾಂತವಾಗಿ ಕುಳಿತಿದ್ದಾನೆ. ವೀರಮುಡಿಯನ್ನು ಕಟ್ಟಿದ್ದಾನೆ. ಆತನ ಪಕ್ಕದಲ್ಲೇ ಚಿಕ್ಕಗಾತ್ರದಲ್ಲಿ ಒಬ್ಬ ವ್ಯಕ್ತಿಯ ಚಿತ್ರಣವಿದೆ. ಆತನ ಕೈಯಲ್ಲಿ ದೊಡ್ಡದಾದ ಚಂದ್ರಾಯುಧವನ್ನು ಹಿಡಿದು ಕುಳಿತಿರುವ ವೀರನ ಕತ್ತನ್ನು ಕತ್ತರಿಸಲು ಸಿದ್ಧನಾಗಿರುವ ರೀತಿಯಲ್ಲಿ ಚಿತ್ರಿಸಲಾಗಿದೆ. ಪ್ರಾಚೀನ ಕಾಲದಲ್ಲಿದ್ದ ಬಲಿ ಪದ್ಧತಿಯಲ್ಲಿ ಸಿಡಿದೆಲೆಯೂ ಒಂದು. ಈ ರೀತಿಯಾಗಿ ಆತ್ಮ ಬಲಿದಾನ ಮಾಡಿಕೊಳ್ಳುವ ವೀರರ ಹಿಂದೆ ಇರುವ ಮನೋಧರ್ಮ ಧಾರ್ಮಿಕ ಹಾಗೂ ಸಾಮಾಜಿಕವಾದ ನಂಬಿಕೆ.

ಶಿಲಾಫಲಕದಲ್ಲಿ ಧ್ಯಾನಸ್ಥನಾಗಿ ಕುಳಿತ ವ್ಯಕ್ತಿಯ ಕತ್ತನ್ನು ಮತ್ತೊಬ್ಬ ವ್ಯಕ್ತಿಯು ಕತ್ತರಿಸುವಂತೆ ಬಿಡಿಸಿರುವ ಚಿತ್ರವನ್ನು ನೋಡಿದಾಗ, ಮಡಿದಿರುವ ವ್ಯಕ್ತಿಯು ಸ್ವಇಚ್ಛೆಯಿಂದಲೇ ಈ ರೀತಿಯ ಬಲಿಗೆ ಸಿದ್ಧನಾಗಿದ್ದ ಎಂಬುದು ಸ್ಪಷ್ಟವಾಗಿದೆ. ಈ ರೀತಿಯಾಗಿ ಮಡಿದ ವ್ಯಕ್ತಿಯು ಅರಸನ ವೇಳೆವಾಟಿಯೋ, ಕೀಟುಗ್ಗಂಟೆಯೋ ಅಥವಾ ವೀರಲೆಂಕನೋ ಆಗಿರುತ್ತಾನೆ. ಅಥವಾ ತನ್ನ ನಾಡಿಗೆ ಒಳ್ಳೆಯದಾಗಲಿ ಎಂಬ ಧಾರ್ಮಿಕ ಉದ್ದೇಶಕ್ಕೂ ಬಲಿಯಾದ ವೀರನಾಗಿದ್ದಿರಲೂಬಹುದು.

## ಆತ್ಮಾಹುತಿ ಸ್ಮಾರಕ ಶಿಲ್ಪಗಳು

ರಾಜನಿಗಾಗಿ, ರಾಜ್ಯಕ್ಕಾಗಿ ಯುದ್ಧದಲ್ಲಿ ಧೈರ್ಯವಾಗಿ ಹೋರಾಡಿ ರಣರಂಗದಲ್ಲಿ ಪ್ರಾಣವನ್ನು ಬಿಡುತ್ತಿದ್ದದ್ದು ಶತ್ರುಗಳ ಕೈಯಿಂದ ಆದರೆ ಇನ್ನೂ ಕೆಲವ್ಯಕ್ತಿಗಳು ತಮ್ಮ ಒಡೆಯನಿಗಾಗಿ ತಮ್ಮ ಪ್ರಾಣವನ್ನು ತಾವೇ ತೆಗೆದುಕೊಳ್ಳುತ್ತಿದ್ದರು ಇದನ್ನೇ ಆತ್ಮಬಲಿ(ಆತ್ಮಾಹುತಿ) ಎಂದು ಕರೆಯುವುದು. ಬೆಂಗಳೂರು ನಗರದಲ್ಲಿ ಹಲವಾರು ಆತ್ಮಾಹುತಿ ಶಿಲ್ಪಗಳು ದೊರೆತಿವೆ.

ಬೇಗೂರಿನ ನಾಗೇಶ್ವರ ದೇವಾಲಯದಲ್ಲಿ ಆತ್ಮಾಹುತಿಯನ್ನು ತಿಳಿಸುವ ಶಿಲ್ಪವಿದೆ. ಗಂಗರ ಕಾಲಕ್ಕೆ ಸೇರುವ ಈ ಆತ್ಮಾಹುತಿಶಿಲ್ಪದಲ್ಲಿ ವೀರನು ನಿಂತ ಭಂಗಿಯಲ್ಲಿದ್ದಾನೆ ಎರಡು ಕೈಗಳಿಂದ ತನ್ನ

ಕುತ್ತಿಗೆಯನ್ನು ಕತ್ತರಿಸಿಕೊಳ್ಳುತ್ತಿದ್ದಾನೆ. ಆತನ ಬಲಭಾಗದಲ್ಲಿ ಸತಿಯೂ ಇದ್ದಾಳೆ. ಸರ್ವಾಲಂಕಾರಗಳಿಂದ ಆಕೆಯನ್ನು ಚಿತ್ರಿಸಲಾಗಿದೆ. ಆತನ ಮರಣದೊಂದಿಗೆ ಆಕೆಯೂ ಸತಿಯಾಗಿರಬಹುದು.

ಬೇಗೂರಿನಲ್ಲೇ ಚೌಡೇಶ್ವರಿ ದೇವಾಲಯದ ಮುಂಭಾಗದಲ್ಲಿ ಎರಡು ಆತ್ಮಾಹುತಿಯ ಕಲ್ಲುಗಳಿವೆ. ಎರಡೂ ಶಿಲ್ಪಗಳು ಒಂದೇ ರೀತಿಯಲ್ಲಿವೆ. ವೀರರು ಸ್ವತಃ ತಮ್ಮ ಕತ್ತುಗಳನ್ನು ತಾವೇ ಕತ್ತರಿಸಿಕೊಳ್ಳುತ್ತಿದ್ದಾರೆ. ಬಹುಶಃ ವೀರರಿಬ್ಬರು ಒಟ್ಟಿಗೆ ಆತ್ಮಾಹುತಿಯಾಗಿದ್ದಾರೆ.

ಬನ್ನೇರುಘಟ್ಟದಲ್ಲಿ ವಿಶೇಷವಾದ ಆತ್ಮಾಹುತಿ ಶಿಲ್ಪಗಳನ್ನು ಕಾಣಬಹುದು. ಏಳು ಶಿಲಾಫಲಕಗಳನ್ನು ಒಂದೇ ಸಾಲಿನಲ್ಲಿ ನಿಲ್ಲಿಸಲಾಗಿದೆ. ಹೊಯ್ಸಳರ ಕಾಲಕ್ಕೆ ಸೇರಿರುವ ಆತ್ಮಾಹುತಿ ಶಿಲ್ಪಗಳಿವು. ಹೊಯ್ಸಳರ ಕಾಲದಲ್ಲಿ ಒಟ್ಟೊಟ್ಟಿಗೆ ಆತ್ಮಾಹುತಿಯಾಗುತ್ತಿದ್ದವರ ಸಂಖ್ಯೆ ಹೆಚ್ಚಿರುತ್ತಿತ್ತು. ಇವರನ್ನು ಗರುಡರು ಎಂತಲೂ ಕರೆಯಲಾಗುತ್ತಿತ್ತು. ಇಲ್ಲಿರುವ ಏಳು ಶಿಲಾಫಲಕದಲ್ಲಿರುವ ವೀರರು ತಮ್ಮ ಕತ್ತುಗಳನ್ನು ತಾವೇ ಕತ್ತರಿಸಿಕೊಳ್ಳುತ್ತಿರುವ ಚಿತ್ರಣವಿದೆ.

## ಶಾಸನ ಶಿಲ್ಪಗಳು

ಮಾನವ ಸಂಸ್ಕೃತಿಯ ವಿಕಾಸವನ್ನು ವಿದ್ವಾಂಸರು ಶಿಲಾಯುಗ, ಲೋಹಯುಗ ಎಂದು ಮುಂತಾಗಿ ಅಭ್ಯಸಿಸುವುದನ್ನು ಗಮನಿಸಿದರೆ, ಮನುಷ್ಯನ ಜೀವನದಲ್ಲಿ ಶಿಲೆ ವಹಿಸಿದ್ದ, ವಹಿಸುತ್ತಲಿರುವ ಪಾತ್ರ ಸ್ಪಷ್ಟವಾಗುತ್ತದೆ. ಮೊದಮೊದಲು ಬಿಸಿಲು ಮಳೆಯ ರಕ್ಷಣೆಗಾಗಿ, ಬರಬರುತ್ತ ಬದುಕಿನ ಮೌಲ್ಯಪ್ರಸಾರಕ್ಕಾಗಿ ಬಳಕೆಗೊಂಡ ವಸ್ತು, ಈ ಶಿಲೆಯನ್ನು ಕೊರೆದು ಕಲೆಯಾಗಿಸಿದ, ಬರೆದು ಕೃತಿಯಾಗಿಸಿದ ಈ ಮಾಧ್ಯಮವನ್ನು ಕ್ರಮವಾಗಿ ಶಿಲ್ಪ ಮತ್ತು ಶಾಸನವೆಂದು ವರ್ಗೀಕರಿಸಬಹುದು. ಇವುಗಳಲ್ಲಿ ಶಿಲ್ಪಗಳು ನಿರಕ್ಷರರಿಗೆ, ಶಾಸನಗಳು ಸಾಕ್ಷರರಿಗೆ ಆಯಾ ಜನಾಂಗಗಳ ಮೌಲ್ಯವನ್ನು ಬೋಧಿಸುವ ಪ್ರಸಾರಫಲಕಗಳಾಗಿ ಅಲ್ಲಲ್ಲಿ ನಿಂತಿವೆ.[50] ಶಾಸನ ಶಿಲ್ಪದ ಮುಖ್ಯ ಉದ್ದೇಶ ಅನಕ್ಷರಸ್ಥರಿಗೂ ವಿಷಯ ತಿಳಿಯಲಿ ಎಂಬುದೇ ಆಗಿತ್ತು. ದಾನಶಾಸನಗಳು, ವೀರಗಲ್ಲು ಶಾಸನಗಳಲ್ಲಿ ಲಿಪಿಯೊಂದಿಗೆ ಉಬ್ಬುಶಿಲ್ಪಗಳನ್ನು ಬಿಡಿಸಲಾಗುತ್ತಿತ್ತು. ಸಾಂಸ್ಕೃತಿಕ ಚರಿತ್ರೆಯ ಎಳೆಗಳ ಬೇರನ್ನು ಹುಡುಕಲು ಇಂತಹ ಶಾಸನಶಿಲ್ಪಗಳು ನೆರವಾಗುತ್ತವೆ.

ಈಗಾಗಲೇ ಸ್ಮಾರಕಶಿಲ್ಪ ಹಾಗೂ ಮಹಾಸತಿ ಶಿಲ್ಪಗಳನ್ನು ಹಿಂದಿನ ಭಾಗದಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಹಾಗಾಗಿ ಇವುಗಳನ್ನು ಹೊರತು ಪಡಿಸಿ ಶಾಸನ ಶಿಲ್ಪವನ್ನು ಈ ಭಾಗದಲ್ಲಿ

ವಿಶ್ಲೇಷಿಸಲಾಗಿದೆ. ಜಾಗತೀಕರಣದ ಅಬ್ಬರದಲ್ಲಿ ಬಹುತೇಕ ಶಾಸನಕಲ್ಲುಗಳು ನಶಿಸಿಹೋಗಿವೆ. ಪ್ರಸ್ತುತ ಕಾಣಸಿಗುವ ಶಾಸನಗಳು ಮತ್ತು ಶಾಸನ ಸಹಿತ ಶಿಲ್ಪಗಳು ಬೆರಳೆಣಿಕೆಯಷ್ಟೇ ಮಾತ್ರ. ಈಗಾಗಲೇ ಚರ್ಚಿಸಿರುವ ಬೇಗೂರಿನಲ್ಲಿರುವ ನಾಗತ್ತರನ ಶಾಸನವು ಅದ್ಭುತವಾದ ಶಾಸನ ಶಿಲ್ಪವೊಂದಕ್ಕೆ ಉದಾಹರಣೆಯಾಗಿದೆ. ಶಿಲಾಫಲಕದ ಮೇಲುಭಾಗದಲ್ಲಿ ಶಾಸನವನ್ನು ಕಂಡರಿಸಿ ಆನಂತರ ಶಿಲ್ಪವನ್ನು ಬಿಡಿಸಲಾಗಿದೆ. ಬೇಗೂರಿನ ವೀರಗಲ್ಲನ್ನು ಕೆತ್ತಿರುವ ರೀತಿ ಯುದ್ಧದ ಭೀಕರತೆಯನ್ನು ತಿಳಿಸುತ್ತದೆ. ಆನೆ, ಕುದುರೆ, ಸೈನಿಕರನ್ನು ಚಿತ್ರಿಸುವುದರ ಜೊತೆಯಲ್ಲಿ, ಮಾಂಸದ ಆಸೆಗಾಗಿ ರಣರಂಗಕ್ಕೆ ಬರುತ್ತಿದ್ದ ಹದ್ದುಗಳನ್ನು ಚಿತ್ರಿಸುವುದರ ಮೂಲಕ ಯುದ್ಧಾನಂತರದ ಭೀಕರತೆಯನ್ನು ತಿಳಿಸುತ್ತದೆ.

ದೊಮ್ಮಲೂರಿನ ಚೊಕ್ಕನಾಥದೇವಾಲಯದ ಆವರಣದಲ್ಲಿ ಶಾಸನವೊಂದು ಕಾಣಸಿಗುತ್ತದೆ. ನಾಲ್ಕು ಅಡಿ ಎತ್ತರ, ಎರಡು ಅಡಿ ಅಗಲವಿರುವ ಈ ಶಾಸನವು ಕ್ರಿ.ಶ.1440ರ ದೇವರಾಯನ ಕಾಲದ ಶಾಸನವಾಗಿದೆ. ಶಾಸನದ ಕೆಳಭಾಗದಲ್ಲಿ ಹಸು ಮತ್ತು ಕರುವಿನ ಚಿತ್ರಣವಿದೆ. ಈ ಶಾಸನವು ಶೈವಧರ್ಮಕ್ಕೆ ಸೇರಿದೆ. ಸಾಮಾನ್ಯವಾಗಿ ದಾನಶಾಸನ ಶಿಲ್ಪವನ್ನು ಶೈವ, ವೈಷ್ಣವ, ಹಾಗೂ ಜೈನ ಧರ್ಮದ ಶಾಸನ ಶಿಲ್ಪಗಳೆಂದು ವಿಂಗಡಿಸಬಹುದು. ಈ ಶಾಸನದಲ್ಲಿರುವ ಕರು ಮತ್ತು ಆಕಳಿನ ಆಧಾರದ ಮೇಲೆ ಈ ಶಾಸನ ಶೈವ ಧರ್ಮಕ್ಕೆ ಸೇರಿದೆ ಎನ್ನಬಹುದು. ಶಾಸನದಲ್ಲಿರುವ ಸೂರ್ಯ ಚಂದ್ರರ ಚಿತ್ರಣವು ಶಾಸನದ ಶಾಶ್ವತೆಯನ್ನು ಸಂಕೇತಿಸುತ್ತದೆ.

ಹಲಸೂರಿನ ಸೋಮೇಶ್ವರ ದೇವಾಲಯದ ಆವರಣದಲ್ಲಿ ಒಂದು ತಮಿಳು ಶಾಸನವಿದೆ. ಈ ಶಾಸನವು ಸುಮಾರು ಮೂರು ಅಡಿ ಎತ್ತರ, ಎರಡು ಅಡಿ ಅಗಲವಿದೆ. ಶಾಸನದ ಮೇಲ್ಭಾಗದಲ್ಲಿ ಉಬ್ಬುಶಿಲ್ಪವಾಗಿ ಶಿವಲಿಂಗವನ್ನು ಬಿಡಿಸಲಾಗಿದೆ. ಲಿಂಗದ ಅಕ್ಕಪಕ್ಕದಲ್ಲಿ ಸೂರ್ಯ, ಚಂದ್ರ ಚಿತ್ರಣವಿದೆ. ಇದರ ಕೆಳಭಾಗದಲ್ಲಿ ಶಾಸನವನ್ನು ಕೆತ್ತಲಾಗಿದೆ.

ಒಟ್ಟಾರೆ ಈ ಅಧ್ಯಾಯದಲ್ಲಿ ಬೆಂಗಳೂರಿನಲ್ಲಿ ದೊರೆಯುವ ಸ್ಮಾರಕ ಶಿಲ್ಪಗಳಾದ ವೀರಗಲ್ಲುಗಳು, ಮಾಸ್ತಿಕಲ್ಲುಗಳು, ಆತ್ಮಾಹುತಿ ಸ್ಮಾರಕಗಳ ಮೂಲಕ ಪ್ರಾಚೀನ ಕಾಲದಲ್ಲಿದ್ದ ವೀರಪರಂಪರೆ, ಯುದ್ಧಗಳು, ಮಹಾಸತಿ ಆಚರಣೆ, ಬಲಿದಾನದಂತಹ ಪದ್ಧತಿಯನ್ನು ಶಾಸನಗಳು ಮತ್ತು ಶಿಲ್ಪಗಳ ಮೂಲಕ ಗುರುತಿಸಲಾಗಿದೆ.

# ಕೊನೆ ಟಿಪ್ಪಣಿಗಳು

1. ಆರ್.ಶೇಷಶಾಸ್ತ್ರಿ–ಕರ್ನಾಟಕದ ವೀರಗಲ್ಲುಗಳು, ಪು.13
2. ಡಾ.ಎಂ.ಚಿದಾನಂದಮೂರ್ತಿ–ವೀರಗಲ್ಲುಗಳು ಮತ್ತು ಮಾಸ್ತಿಕಲ್ಲುಗಳು, ಪು.7
3. ಆರ್.ಶೇಷಶಾಸ್ತ್ರಿ–ಕರ್ನಾಟಕದ ವೀರಗಲ್ಲುಗಳು, ಪು.41
4. ಡಿ.ವಿ.ಪರಶಿಮಮೂರ್ತಿ–ತುಱುಗೋಳ್ ಸಂಕಥನ, ಪು.7
5. ಡಾ.ಆರ್.ಶೇಷಶಾಸ್ತ್ರಿ–ಕರ್ನಾಟಕದ ವೀರಗಲ್ಲುಗಳು, ಪು.191
6. ಎಂ.ಚಿದಾನಂದಮೂರ್ತಿ–ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.313
7. ಬಿ.ಎಲ್.ರೈಸ್(ಸಂ)–EC IX ಆನೇಕಲ್ಲು–73, ಬೊಂಮೊಂಡಹಳ್ಳಿ, ಪು.253
8. ಪೂರ್ವೋಕ್ತ, ಬೆಂಗಳೂರು–89, ಬೇಗೂರು, ಪು.31
9. ಪೂರ್ವೋಕ್ತ, ಹೊಸಕೋಟೆ–84 ಪು.217
10. ಆದಪ್ಪ ಪಾಸೋಡಿ–ಮೇಡಹಳ್ಳಿಯ ವೀರರ ಗುಡಿಗಳು ಮತ್ತು ಅಪ್ರಕಟಿತ ಶಾಸನಗಳು, ಎಂ.ಜಿ.ನಾಗರಾಜ, ಪಿ.ವಿ.ಕೃಷ್ಣಮೂರ್ತಿ (ಸಂ), ಇತಿಹಾಸ ದರ್ಶನ, ಸಂಪುಟ–19 ಪು.364–365
11. ಬಿ.ಎಲ್.ರೈಸ್(ಸಂ)–EC IX ಬೆಂಗಳೂರು–38, ದಾಸರಹಳ್ಳಿ, ಪು.19
12. ಪೂರ್ವೋಕ್ತ, ಬೆಂಗಳೂರು–39, ದಾಸರಹಳ್ಳಿ, ಪು.19
13. ಬಿ.ಎಲ್.ರೈಸ್(ಸಂ)–EC IX ಬೆಂಗಳೂರು–10, ಜಕ್ಕಸಂದ್ರ, ಪು.136
14. ಪೂರ್ವೋಕ್ತ, ಬೆಂಗಳೂರು–36, ದಾಸರಹಳ್ಳಿ, ಪು.18
15. ಪೂರ್ವೋಕ್ತ, ಬೆಂಗಳೂರು–83, ಬೇಗೂರು, ಪು.30
16. EC IX ಬೆಂಗಳೂರು ಅನುಬಂಧ ಸಂಪುಟ, ಬೇಗೂರು–175, ಪು.27
17. ಬಿ.ಎಲ್.ರೈಸ್(ಸಂ)–EC IX ಬೆಂಗಳೂರು–37, ದಾಸರಹಳ್ಳಿ, ಪು.18
18. ಪೂರ್ವೋಕ್ತ, ದೊಡ್ಡಬಳ್ಳಾಪುರ–3, ದೊಡ್ಡಬೆಳವಂಗಳ, ಪು.134
19. ಪೂರ್ವೋಕ್ತ, ಹೊಸಕೋಟೆ–13, ಸಿದ್ಧನಹಳ್ಳಿ, ಪು.198
20. ಪೂರ್ವೋಕ್ತ, ಮಾಗಡಿ–75, ಮೂಡಲಪಾಳ್ಯ, ಪು.129
21. ಪೂರ್ವೋಕ್ತ, ಬೆಂಗಳೂರು–25, ಚಿಕ್ಕಬಾಣಾವರ, ಪು.14

22. ಡಾ.ಎಂ.ಜಿ.ಮಂಜುನಾಥ ದೊಡ್ಡೇರಿಯ ಅಪ್ರಕಟಿತ ವೀರಗಲ್ಲು ಶಾಸನ, ಎಂ.ಜಿ.ನಾಗರಾಜ್, ಡಾ.ಪಿ.ವಿ.ಕೃಷ್ಣಮೂರ್ತಿ(ಸಂ), ಇತಿಹಾಸ ದರ್ಶನ, ಸಂಪುಟ–16, ಪು.24
23. ಎಂ.ಚಿದಾನಂದಮೂರ್ತಿ–ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.293–294
24. ಆರ್.ಶೇಷಶಾಸ್ತ್ರಿ–ಕರ್ನಾಟಕದ ವೀರಗಲ್ಲುಗಳು, ಪು.141
25. ಬಿ.ಎಲ್.ರೈಸ್(ಸಂ)–EC IX ಆನೇಕಲ್ಲು–58, ಕಾಮನಾಯಕನಹಳ್ಳಿ, ಪು.249
26. ಪೂರ್ವೋಕ್ತ, ಹೊಸಕೋಟೆ–54, ಸೂಲಿಬೆಲೆ, ಪು.208
27. ಪೂರ್ವೋಕ್ತ, ದೊಡ್ಡಬಳ್ಳಾಪುರ–47 ಕಸಾಗಟ್ಟ ಗ್ರಾಮ, ಪು.151
28. ಪೂರ್ವೋಕ್ತ, ಆನೇಕಲ್ಲು–12, ಪು.136
29. ಡಾ.ಆರ್.ಶೇಷಶಾಸ್ತ್ರಿ–ಕರ್ನಾಟಕದ ವೀರಗಲ್ಲುಗಳು, ಪು.92
30. ಡಾ.ಎಂ.ಚಿದಾನಂದಮೂರ್ತಿ–ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.273–274
31. EC IX ಅನುಬಂಧ ಸಂಪುಟ, ಬೆಂಗಳೂರು–174, ಬೇಗೂರು, ಪು.37
32. ಬಿ.ಎಲ್.ರೈಸ್(ಸಂ)–EC IX ನೆಲಮಂಗಲ–34, ತೋಟಗೆರೆ, ಪು.66
33. ಕರ್ನಾಟಕದ ವೀರಗಲ್ಲುಗಳು–ಆರ್.ಶೇಷಶಾಸ್ತ್ರಿ, ಪು.173
34. ಬಿ.ಎಲ್.ರೈಸ್(ಸಂ)–EC IX ಬೆಂಗಳೂರು–36, ಕೆಂಪಾಪುರ, ಪು.17
35. ಪೂರ್ವೋಕ್ತ, ಬೆಂಗಳೂರು–32, ಕೆಂಪಾಪುರ, ಪು.17
36. ಡಾ.ಎಂ.ಚಿದಾನಂದಮೂರ್ತಿ–ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.278
37. ಬಿ.ಎಲ್.ರೈಸ್(ಸಂ)–EC IX ಬೆಂಗಳೂರು–55, ಕೃಷ್ಣರಾಜಪುರ, ಪು.23
38. ಪೂರ್ವೋಕ್ತ, ಬೆಂಗಳೂರು–112, ವಸಂತಹಳ್ಳಿ, ಪು.41
39. ಪೂರ್ವೋಕ್ತ, ದೊಡ್ಡಬಳ್ಳಾಪುರ–23, ರಾಜಘಟ್ಟ, ಪು.140
40. ಡಾ.ಚೆನ್ನಕ್ಕ ಪಾವಟೆ–ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ, ಪು.233
41. ಎಂ.ಎಂ.ಕಲಬುರ್ಗಿ–ಸಮಾಧಿ–ಬಲಿದಾನ–ವೀರಮರಣ ಸ್ಮಾರಕಗಳು, ಪು.29
42. ಡಾ.ಎಂ.ಜಿ.ಮಂಜುನಾಥ–ಮಾಸ್ತಿಕಲ್ಲು ವೀರಗಲ್ಲು ಮತ್ತು ನಿಸಿದಿ ಶಾಸನಗಳು, ಪು–73,74
43. ಬಿ.ಎಲ್.ರೈಸ್(ಸಂ)–EC IX ಬೆಂಗಳೂರು–35, ದೊಡ್ಡಬಿದರುಕಲ್ಲು, ಪು.18
44. ಎಂ.ಎಂ.ಕಲಬುರ್ಗಿ–ಸಮಾಧಿ–ಬಲಿದಾನ–ವೀರಮರಣ ಸ್ಮಾರಕಗಳು, ಪು.57
45. ಬಿ.ಎಲ್.ರೈಸ್(ಸಂ)–EC IX ಬೆಂಗಳೂರು–87, ಬೇಗೂರು, ಪು.31

46. ಪೂರ್ವೋಕ್ತ, ಬೆಂಗಳೂರು–88, ಬೇಗೂರು, ಪು.31

47. ಡಾ.ಸ್ಮಿತಾರೆಡ್ಡಿ–ದೊಡ್ಡ ನಾಗಮಂಗಲದ ಗಂಗರ ಶಾಸನ, ಎಂ.ಜಿ.ನಾಗರಾಜ್, ಪಿ.ವಿ.ಕೃಷ್ಣಮೂರ್ತಿ(ಸಂ), ಇತಿಹಾಸ ದರ್ಶನ, ಸಂಪುಟ–14, ಪು.27

48. ಡಾ.ಎಂ.ಜಿ.ಮಂಜುನಾಥ–ಐದು ಅಪ್ರಕಟಿತ ಶಾಸನಗಳು, ಎಂ.ಜಿ.ನಾಗರಾಜ್, ಪಿ.ವಿ.ಕೃಷ್ಣಮೂರ್ತಿ(ಸಂ)–ಇತಿಹಾಸ ದರ್ಶನ, ಸಂಪುಟ–13, ಪು.31

49. ಎಂ.ಎಂ.ಕಲಬುರ್ಗಿ–ಸಮಾಧಿ–ಬಲಿದಾನ–ವೀರಮರಣ ಸ್ಮಾರಕಗಳು, ಪು.52

50. ಪೂರ್ವೋಕ್ತ, ಪು.1

# ಅಧ್ಯಾಯ–ಆರು
# ರಾಚನಿಕ ಅಧ್ಯಯನ

ಈ ಅಧ್ಯಾಯದಲ್ಲಿ ಬೆಂಗಳೂರು ನಗರ ಜಿಲ್ಲೆಯಲ್ಲಿ ಉಲ್ಲೇಖವಾಗಿರುವ ಶಾಸನೋಕ್ತ ಸ್ಥಳನಾಮಗಳು, ಪ್ರಾರ್ಥನಾ ಶ್ಲೋಕಗಳು, ಫಲಶ್ರುತಿ ಶ್ಲೋಕಗಳು, ಶಾಸನಗಳ ಭಾಷೆ, ಪರಿಭಾಷೆ, ಶಾಪಾಶಯ, ಲಿಪಿಕಾರರು, ರೂವಾರಿಗಳು, ಶಾಸನಗಳ ಶಿಲ್ಪ ಹಾಗೂ ಶಾಸನ ಸಾಹಿತ್ಯವನ್ನು ಕುರಿತಂತೆ ವಿಶ್ಲೇಷಣೆ ಮಾಡಲಾಗಿದೆ.

## ಶಾಸನೋಕ್ತ ಸ್ಥಳನಾಮಗಳು

ಸ್ಥಳನಾಮವೆಂದರೆ ಒಂದು ಸ್ಥಳದ ಹೆಸರು, ಊರಿನ ಹೆಸರು. ಈ ಸ್ಥಳನಾಮಗಳ ಹುಟ್ಟು ನಿನ್ನೆ ಮೊನ್ನೆಯದಲ್ಲ. ಪುರಾತನ ಕಾಲದ ಜೀವ ಸೃಷ್ಟಿಯೊಂದಿಗೆ ಬೆಳೆದು ಬಂದದ್ದು ವಾಸಕ್ಕೆ ನಿರ್ದಿಷ್ಟವಾದ ನೆಲೆ ಇಲ್ಲದೆ ಅಲೆಮಾರಿಯಾಗಿದ್ದ ಆದಿಮಾನವ ನೆಲೆನಿಂತ ಕಡೆ ಊರಾಯಿತು. ತಾನು ತಳವೂರಿದ ಸ್ಥಳಕ್ಕೆ ಹೆಸರಿಟ್ಟುಕೊಂಡ ಅದು ಸ್ಥಳವಾಯಿತು. ಹೀಗೆ ಪ್ರಾಚೀನ ಕಾಲದಲ್ಲೇ ಹುಟ್ಟಿಕೊಂಡ ಸ್ಥಳನಾಮಗಳು ಇಂದು ಕೇವಲ ಹೆಸರುಗಳಾಗಿ ಉಳಿದಿಲ್ಲ. ಮಾನವನ ಸಾಂಸ್ಕೃತಿಕ ಪರಂಪರೆಯ ಕುರುಹುಗಳಾಗಿವೆ.

ಊರುಗಳಿಗೆ ಆಯಾ ಹೆಸರುಗಳು ಬರಬೇಕಾದರೆ ನಿಸರ್ಗವಾಚಿ, ಜನಾಂಗವಾಚಿ, ವ್ಯಕ್ತಿವಾಚಿ, ಪುರಾಣ, ಕಥೆ, ಐತಿಹ್ಯ, ದಂತಕಥೆ, ಕಾರಣವಾಗಿರಬಹುದು. ಕೆಲವು ಊರುಗಳಿಗೆ ಹೆಸರುಬರಲು ಇರುವ ಕಾರಣವನ್ನು ಖಚಿತವಾಗಿ ಗುರುತು ಮಾಡಲು ಈ ಸ್ಥಳನಾಮಗಳ ಅಧ್ಯಯನದಿಂದ ಸಾಧ್ಯವಾಗುತ್ತದೆ. ಇಂತಹ ಸ್ಥಳನಾಮಗಳಲ್ಲಿ ಭೌಗೋಳಿಕ, ಚಾರಿತ್ರಿಕ, ಧಾರ್ಮಿಕ, ನಂಬಿಕೆ, ಆಚರಣೆಯ ಅಂಶಗಳೂ ಇರುತ್ತವೆ. ಪ್ರಾಚೀನ ಕಾಲದ ಜನಜೀವನ, ಕಟ್ಟುಪಾಡು, ಸಂಸ್ಕೃತಿಗಳನ್ನು ತಿಳಿಸುತ್ತವೆ. ಮನುಕುಲದ ಪುರಾತನ ವಿಕಾಸ, ಭಾಷಾ ವಿಶೇಷ, ಶಬ್ದನಿಷ್ಪತ್ತಿ ಮೊದಲಾದವುಗಳ ಅರಿವಿನ ಆಕರಗಳಾಗಿರುತ್ತವೆ. ಮಾನವ ಸಂಸ್ಕೃತಿಯ ಅಧ್ಯಯನಕ್ಕೆ ಪೂರಕವಾಗುತ್ತವೆ. ಇತಿಹಾಸದ ಬೆಳವಣಿಗೆಯ ತಿಳಿವಳಿಕೆಗೆ ಪೂರಕವಾಗಿದೆ.

ಇತ್ತೀಚಿನ ದಿನಗಳಲ್ಲಿ ಸ್ಥಳನಾಮ ಅಧ್ಯಯನ ವಿಜ್ಞಾನವಾಗಿ ಬೆಳೆಯುತ್ತಿದೆ. ಸ್ಥಳನಾಮ ವಿಜ್ಞಾನಕ್ಕೂ, ಭಾಷಾವಿಜ್ಞಾನ, ಸಮಾಜ ವಿಜ್ಞಾನ, ಇತಿಹಾಸ, ಮನಃಶಾಸ್ತ್ರ, ಮಾನವಶಾಸ್ತ್ರ, ಭೂಗೋಳ, ಜಾನಪದ ಮೊದಲಾದ ಅಧ್ಯಯನ ಶಿಸ್ತುಗಳೊಂದಿಗೆ ಕೊಳುಕೊಡುಗೆ ಉಂಟು. ಇಂತಹ

ಅಂತರಶಿಸ್ತೀಯ ಅಧ್ಯಯನದ ಉತ್ತೇಜನಕ್ಕಾಗಿ ಮೈಸೂರಿನಲ್ಲಿ 1978ರಲ್ಲಿ Place-name society of India ಎಂಬ ಸಂಸ್ಥೆಯನ್ನು ಪ್ರಾರಂಭಿಸಲಾಯಿತು ಕನ್ನಡದ ವಿದ್ವಾಂಸರುಗಳೂ ಸಹ ಸ್ಥಳನಾಮಗಳ ಅಧ್ಯಯನವನ್ನು ಕೈಗೊಂಡರು. ಈ ಹಿನ್ನೆಲೆಯಲ್ಲಿ ಪ್ರಾರಂಭದ ಹಂತದಲ್ಲಿ ಕೆಲವು ಗ್ರಂಥಗಳೂ ಮಹಾಪ್ರಬಂಧಗಳೂ ಹೊರಬಂದವು. ಸಿ.ಹಯವದನರಾವ್ – The Place-Names of Mysore, 1915, ಶಂಬಾ ಜೋಷಿ – ಎಡೆಗಳು ಹೇಳುವ ಕಂನಾಡ ಕತೆ 1947, ಆರ್.ಸಿ.ಹಿರೇಮಠ – Place-Names in Karnataka 1961, ಕೆಮ್ತೂರು ರಘುನಾಥ ಭಟ್ಟ – ತುಳುನಾಡ ಸ್ಥಳನಾಮಗಳು 1979, ಹೆಸರಲ್ಲೇನಿದೆ 1989, A glossory of place-names elements in Tulu and Kannada, 1989, ದೇಜಗೌ– ಸ್ಥಳನಾಮ ವ್ಯಾಸಂಗ, ವಿ.ಗೋಪಾಲಕೃಷ್ಣ–ಸ್ಥಳನಾಮ ಅಧ್ಯಯನಗಳು 1987 ಹೀಗೆ ಎಂ.ಚಿದಾನಂದಮೂರ್ತಿ, ಎಂ.ಎಂ.ಕಲಬುರ್ಗಿ, ಕೆ.ಆರ್.ಮೋಹನ್, ಬಿ.ಎನ್.ಚಂದ್ರಯ್ಯ ಮುಂತಾದವರು ಕರ್ನಾಟಕ ಸ್ಥಳನಾಮ ಅಧ್ಯಯನದಲ್ಲಿ ಗಮನಾರ್ಹರಾಗಿದ್ದಾರೆ.

ಸ್ಥಳನಾಮಗಳ ಅಧ್ಯಯನದಲ್ಲಿ ಶಾಸನಗಳು ಬಹುಮುಖ್ಯ ಪಾತ್ರ ವಹಿಸುತ್ತವೆ. ಸ್ಥಳದ ಇತಿಹಾಸವನ್ನು ಹೇಳುವಲ್ಲಿ ಶಾಸನಗಳು ನೆರವಾಗುತ್ತವೆ. ಶಾಸನಗಳು ಪ್ರಮುಖ ಚಾರಿತ್ರಿಕ ದಾಖಲೆಗಳನ್ನು ಪೂರೈಸುತ್ತವೆ. ಇವನ್ನು ಇನ್ನಷ್ಟು ಸಮರ್ಥನೀಯಗೊಳಿಸುವಲ್ಲಿ ಶಾಸನಗಳಲ್ಲಿ ಉಲ್ಲೇಖಿತ ಸ್ಥಳನಾಮಗಳು ಉಪಯುಕ್ತವಾಗಿವೆ. ಪ್ರಸ್ತುತ ಈ ಅಧ್ಯಯನದಲ್ಲಿ ಬೆಂಗಳೂರು ನಗರ ಜಿಲ್ಲೆಯ ಶಾಸನೋಕ್ತ ಸ್ಥಳನಾಮಗಳನ್ನು ಕುರಿತ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಶಾಸನದಲ್ಲಿ ಉಲ್ಲೇಖಗೊಂಡಿರುವ ಸ್ಥಳನಾಮಗಳು ಆ ಸ್ಥಳದ ಪ್ರಾಚೀನತೆಯನ್ನು, ಐತಿಹಾಸಿಕ ಕುರುಹುಗಳನ್ನು ತಿಳಿಸುವಲ್ಲಿ ಮುಖ್ಯವಾಗುತ್ತವೆ. ಈ ಹಿನ್ನೆಲೆಯಲ್ಲಿ ಸ್ಥಳನಾಮವನ್ನು ಹೆಚ್ಚು ಅಧ್ಯಯನ ಮಾಡಿದಷ್ಟು ಸಾಂಸ್ಕೃತಿಕ ಚರಿತ್ರೆಯನ್ನು ದಾಖಲು ಮಾಡಲು ಸಾಧ್ಯವಾಗುತ್ತದೆ.

ಪ್ರಾದೇಶಿಕ ಚರಿತ್ರೆಯ ಪುನಾರಚನೆಯ ಸಂದರ್ಭದಲ್ಲಿ ಸ್ಥಳನಾಮಗಳ ವೈಜ್ಞಾನಿಕ ಅಧ್ಯಯನದ ಫಲಗಳು ಅತ್ಯಂತ ಉಪಯುಕ್ತವಾಗುತ್ತವೆ. ಚಿದಾನಂದಮೂರ್ತಿಗಳು ಹೇಳುವಂತೆ, "ಸ್ಥಳನಾಮಗಳು ಕಾಲದಿಂದ ಕಾಲಕ್ಕೆ, ದೇಶದಿಂದ ದೇಶಕ್ಕೆ ಹಾಗೂ ಪ್ರದೇಶದಿಂದ ಪ್ರದೇಶಕ್ಕೆ ವ್ಯತ್ಯಾಸವಾಗುತ್ತ ಹೋಗುತ್ತವೆ."[1]

ಪ್ರೊ.ಹಂಪನಾಗರಾಜಯ್ಯರವರು ಹೇಳುವಂತೆ, "ಸೃಷ್ಟಿಯ ಪ್ರತಿಯೊಂದು ಪದಾರ್ಥಕ್ಕೂ ಒಂದೊಂದು ಹಿನ್ನೆಲೆ, ಇತಿಹಾಸವಿರುತ್ತದೆ. ಪ್ರತಿಯೊಬ್ಬ ವ್ಯಕ್ತಿಗೂ, ಪ್ರತಿಯೊಂದು ಊರಿಗೂ ಚರಿತ್ರೆ

ಇರುತ್ತದೆ. ವ್ಯಕ್ತಿಯ ಹೆಸರು, ಊರಿನ ಹೆಸರು ಬರಿಯ ಹೆಸರುಗಳಲ್ಲ. ಈ ಹೆಸರುಗಳ ಉಸಿರಲ್ಲಿ, ಬಸಿರಲ್ಲಿ ಆತ್ಮಚರಿತ್ರೆ ಇರುತ್ತದೆ. ಕನ್ನಡ ಶಾಸನಗಳಲ್ಲಿ ಸಾವಿರಾರು ಊರುಗಳ ಹೆಸರುಗಳು ಸಿಗುತ್ತವೆ. ಅಂತಹ ಹೆಸರುಗಳಲ್ಲಿ ಅಡಗಿರುವ ನಾನಾ ಅಂಶಗಳನ್ನು ಅಧ್ಯಯನ ಮಾಡುವ ಪ್ರಯತ್ನಗಳು ನಡೆದಿವೆ."[2]

ಪ್ರಸ್ತುತ ದಿನಗಳಲ್ಲಿ ಬಹುತೇಕ ಸ್ಥಳನಾಮಗಳು ಸವೆದು ಹೋಗಿವೆ. ಎಂದರೆ ಕಳೆದು ಹೋಗಿವೆ. ಹೊಸರೂಪಗಳು ಸೃಷ್ಟಿಯಾಗಿವೆ ಎಂದರ್ಥ. ಸ್ಥಳನಾಮಗಳು ಹೆಚ್ಚು ಸಂದರ್ಭಗಳಲ್ಲಿ ಸಾಂಸ್ಕೃತಿಕ, ಧಾರ್ಮಿಕ, ರಾಜಕೀಯ ಮತ್ತು ಸಾಮಾಜಿಕ ಸಂದರ್ಭದಲ್ಲಿ ಬದಲಾವಣೆಗಳಾಗುತ್ತವೆ. ಈ ರೀತಿಯ ಬದಲಾವಣೆಗಳೇ ಆಯಾ ಕಾಲಘಟ್ಟದಲ್ಲಿ ನಡೆದ ಚಾರಿತ್ರಿಕ ಘಟನೆಗಳನ್ನು, ಜನಪದ ಕತೆಗಳನ್ನು, ಐತಿಹ್ಯ, ಪುರಾಣಗಳನ್ನು ತಿಳಿಸುತ್ತವೆ.

**ಅಗರ:–** 'ಅಗರ'ದ ಮೂಲ ರೂಪ ಅಗ್ರಹಾರ. ಅಗ್ರ ಎಂದರೆ ಶ್ರೇಷ್ಠ, ಆಹಾರ ಎಂದರೆ ದೇಶ ಅಥವಾ ಸ್ಥಳ. ಅಗ್ರಹಾರವೆಂದರೆ ಶ್ರೇಷ್ಠರು(ಬ್ರಾಹ್ಮಣರು) ವಾಸಮಾಡುವ ಕೇರಿ ಅಥವಾ ಬೀದಿ. ರಾಜರು ಮೊದಲಾದವರು ಬ್ರಾಹ್ಮಣರಿಗೆ ದತ್ತಿಯಾಗಿ ಕೊಟ್ಟಿರುವ ಗ್ರಾಮಗಳನ್ನು ಪ್ರಾಚೀನ ಕಾಲದಲ್ಲಿ ಅಗ್ರಹಾರವೆಂದು ಸೂಚಿಸಲಾಗುತ್ತಿತ್ತು. ಅಗ್ರಹಾರವೇ ಅಗರವೆಂದಾಗಿದೆ. ಶಾಸನಗಳಲ್ಲಿ ಅಗರ ಎಂಬುದರ ಉಲ್ಲೇಖ ಕ್ರಿ.ಶ. 1515ರಲ್ಲಿ ಮೊದಲು ಕಾಣಸಿಗುತ್ತದೆ. ಆದರೆ ಗಂಗರ ಕಾಲದ ಕ್ರಿ.ಶ.870ರ ಶಾಸನವೊಂದು ಅಗರ ಕೆರೆಕಟ್ಟೆಯ ಬಳಿ ದೊರೆತಿದೆ. 'ಇರ್ವ್ವೊಲಿಯೂರಿನ ಒಡೆಯ ಇರುಗಮಯ್ಯನ ಮಗ ಸಿರಿಯಮಯ್ಯನು ಎರಡು ಕೆರೆಯನ್ನು, ಕಟ್ಟಿಸಿದನೆಂದು ತಿಳಿದು ಬರುತ್ತದೆ.[3] ಹಾಗೂ ವಿಜಯನಗರದ ಕೃಷ್ಣದೇವರಾಯನ ಕಾಲದಲ್ಲಿ ಕ್ರಿ.ಶ.1515ರ ಶಾಸನದಲ್ಲಿ ಸಿವನಪನಾಯಕನು ತಮ್ಮ ತಂದೆಗೆ ಧರ್ಮವಾಗಬೇಕೆಂದು ಅಗರದ ಕೆರೆಗೆ ಹೂಳನ್ನು ತೆಗೆಯ ಬೇಕು ಎಂದಿದೆ.[4] ಇಂದು ಈ ಪ್ರದೇಶವು ಹೊಸೂರು ಸರ್ಜಾಪುರ ರಸ್ತೆಯಲ್ಲಿದೆ. ಇಂದಿಗೂ ಈ ಪ್ರದೇಶವನ್ನು ಅಗರವೆಂದೇ ಕರೆಯಲಾಗುತ್ತಿದೆ.

**ಅಲ್ಲಾಳಸಂದ್ರ:–** "ಕ್ರಿ.ಶ.1544ರ ಶಾಸನದಲ್ಲಿ ಅಲ್ಲಳನಾಥದೇವರ ಅಮೃತಪಡಿ ನೈವೇದ್ಯಕ್ಕೆ ಎಲಹಂಕನಾಡ ಸಿವನಸಮುದ್ರ ಸೀಮೆ ಒಳಗಡೆ ಅಲ್ಲಾಳ ಸಂದ್ರ ಗ್ರಾಮ....."ಎಂದಿದೆ.[5] ಎಂದರೆ ಅಲ್ಲಾಳ ಸಂದ್ರವು ಎಲಹಂಕನಾಡಿನಲ್ಲಿರುವ ಸಿವನಸಮುದ್ರದ ಒಂದು ಗ್ರಾಮವಾಗಿತ್ತು ಎಂದು ತಿಳಿಯುತ್ತದೆ. ಪ್ರಸ್ತುತ ಅಲ್ಲಾಳಸಂದ್ರವು ಯಲಹಂಕಕ್ಕೆಸೇರಿಕೊಂಡಿದೆ. ಅಲ್ಲಾಳನಾಥನೆಂಬುದು ವಿಷ್ಣುವಿನ

ಮತ್ತೊಂದು ಹೆಸರು. ಈ ಹೆಸರಿನಲ್ಲಿ ಕೆರೆಯೊಂದನ್ನು ಕಟ್ಟಿಸಿದ್ದಿರಬೇಕು. ಹಾಗಾಗಿ ಈ ಪ್ರದೇಶಕ್ಕೆ ಅಲ್ಲಾಳಸಂದ್ರ ಎಂಬ ಹೆಸರು ಬಂದಿದೆ.

**ಆನೇಕಲ್ಲು:–** ಕ್ರಿ.ಶ.1402ರ ಕಾಲದ ಬೇಗೂರಿನಲ್ಲಿ ದೊರೆತ ಶಾಸನದಲ್ಲಿ 'ಆನೆಕಲ್ಲು' ಎಂಬ ಸ್ಥಳನಾಮದ ಉಲ್ಲೇಖವಿದೆ.[6] ಈ ಆನೇಕಲ್ಲು ಎಂಬ ಹೆಸರು ಹೇಗೆ ಬಂತು ಎಂಬ ವಿವರಣೆ ನಮಗೆ ಶಾಸನದಲ್ಲಿ ದೊರೆಯುವುದಿಲ್ಲ. ಆದರೆ ಜನರ ಮಾತಿನಲ್ಲಿ ಆನೇಕಲ್ಲು ಸ್ಥಳನಾಮದ ನಿಷ್ಪತ್ತಿಯ ಬಗ್ಗೆ ಹಲವು ಅಭಿಪ್ರಾಯವಿದೆ. ಭೌಗೋಳಿಕವಾಗಿ ಹೇಳುವುದಾದರೆ "ಈ ಪ್ರದೇಶದಲ್ಲಿ ಆನೆಯ ಆಕಾರದ ಕಲ್ಲು ಬಂಡೆಗಳಿದ್ದು ಅದಕ್ಕೆ ಆನೆಯ ಕಲ್ಲು–ಆನೇಕಲ್ಲು ಎಂಬ ಹೆಸರನ್ನು ಪಡೆದಿರಬಹುದು." ಇನ್ನು ಕೆಲವರು  ಜಾನಪದೀಯ ನೆಲೆಯಲ್ಲಿ  ದೊಡ್ಡ ದೊಡ್ಡ ಆಲಿಕಲ್ಲುಗಳು ಈ ಪ್ರದೇಶದಲ್ಲಿ ಬೀಳುತ್ತಿದ್ದವು. ಈ ಆಲಿಕಲ್ಲುಗಳು ಕರಗಲು ಬಹಳ ಸಮಯ ಹಿಡಿಯುತ್ತಿತ್ತು. ಈ ಕಾರಣದಿಂದ ಆಲಿಕಲ್ಲು–ಆನೇಕಲ್ಲು ಎಂದಾಗಿರಬಹುದು ಎಂದು ಅಭಿಪ್ರಾಯಪಡುತ್ತಾರೆ.

ಸ್ಥಳ ಪುರಾಣವನ್ನು ಆಧರಿಸಿ ಹೇಳುವುದಾದರೆ 'ಶಾಪದಿಂದ ಆನೆಯೊಂದು ಕಲ್ಲಾಗಿರುವ ಬಗ್ಗೆ ಐತಿಹ್ಯವಿದ್ದು ಈ ಕಾರಣದಿಂದ ಆನೇಕಲ್ಲು ಎಂಬ ಹೆಸರಾಯಿತು ಎಂದು ಹೇಳುತ್ತಾರೆ.' ನಂತರ ಇದಕ್ಕೆ ಗಜಶಿಲಾಪುರಿಯೆಂಬ ಹೆಸರು ಬಂತು. ಗಜ–ಆನೆ, ಶಿಲಾ–ಕಲ್ಲು, ಪುರ–ಪಟ್ಟಣ ಆನೇಕಲ್ ಪಟ್ಟಣ ಎಂದಾಗಿರಬಹುದು ಎಂದು ಆನೇಕಲ್ಲು ಪ್ರದೇಶದ ಬಗ್ಗೆ ಐತಿಹ್ಯವಿದೆ. ಪ್ರಸ್ತುತ ಆನೇಕಲ್ಲು ಬೆಂಗಳೂರು ನಗರ ಜಿಲ್ಲೆಗೆ ಸೇರುವ ತಾಲೂಕಾಗಿದೆ.

**ಇರ್ವ್ಬುಲಿಯೂರು:–** ಕ್ರಿ.ಶ.870ರ ಗಂಗರ ಶಾಸನದಲ್ಲಿ ಇರ್ವ್ಬುಲಿಯೂರಿನ ಹೆಸರು ದೊರೆಯುತ್ತದೆ. ಇರ್ವ್ಬುಲಿಯೂರನ್ನು ಇರುಗಮಯ್ಯನ ಮಗ ಸಿರಿಯಮಯ್ಯನು ಆಳುತ್ತಿದ್ದ ವಿಷಯ ಹೇಳುತ್ತದೆ.[7] ಕ್ರಿ.ಶ.1346ರ ಹೊಯ್ಸಳರ ಕಾಲದ ಶಾಸನದಲ್ಲಿ ಈ ಊರನ್ನು 'ಇರುಂಬಲಿಯೂರು' ಎಂದು ಹೆಸರಿಸಲಾಗಿದೆ. ಇರ್ವ್ಬುಲಿಯೂರು ಪದವನ್ನು ಬಿಡಿಸಿ ನೋಡಿದರೆ, ಇರ್+(ಹುಲಿ)ಉಲಿಯೂರು, ಎರಡು ಹುಲಿಯೂರು ಎಂದಾಗುತ್ತದೆ. ಬಹುಶಃ ಈ ಪ್ರದೇಶವು ಇಂದಿನ ಕೃಷ್ಣರಾಜಪುರದ ಸುತ್ತಮುತ್ತಲ ಪ್ರದೇಶವಾಗಿದ್ದಿರಬಹುದು.

**ಎಱೆಯಪ್ಪಮಂಗಲ:–** ಕ್ರಿ.ಶ.820ರ ಗಂಗರ ಶಾಸನವು ವರ್ತೂರಿನಲ್ಲಿ ದೊರೆತಿದೆ. ಎಱೆಯಪ್ಪಮಂಗಲದ ಮಹಾಜನರನ್ನು ಸಾಕ್ಷಿಯಾಗಿಟ್ಟು ಕೊಂಡು ದಾನ ನೀಡಿದ ಅಪರೂಪದ ಚಾರಿತ್ರಿಕ ಮಾಹಿತಿಯನ್ನು ನೀಡುವ ಶಾಸನ.[8] ಈ ಪ್ರದೇಶಕ್ಕೆ ಪ್ರಸಿದ್ದನಾದ ಗಂಗದೊರೆ ಎಱೆಯಪ್ಪನ ಹಿನ್ನೆಲೆಯಲ್ಲಿ ಈ ಹೆಸರು ಬಂದಿರುವ ಸಾಧ್ಯತೆ ಇದೆ. ಬಹುಶಃ ಈ ಸ್ಥಳ ವರ್ತೂರಿನ ಸುತ್ತಮುತ್ತಲ ಸ್ಥಳವೇ ಆಗಿದ್ದಿರಬಹುದು.

**ಉದೈಯ್ಯನಪಳ್ಳಿ:–** ಕ್ರಿ.ಶ.1346ರ ಹೊಯ್ಸಳರ ತಮಿಳು ಶಾಸನದಲ್ಲಿ[9] ಉದ್ಯೈಯಪಳ್ಳಿ ಎಂಬ ಹಳ್ಳಿಯ ಉಲ್ಲೇಖವಿದೆ. ಈ ಪ್ರದೇಶ ಇರುಂಬಲಿಯೂರು ಅಂದರೆ ಇರ್ವ್ವಾಲಿವೂರಿನ ಸುತ್ತಲ ಪ್ರದೇಶವಾಗಿದ್ದಿರಬಹುದು.

**ಕಾಡುಗೋಡಿ:–** ಕ್ರಿ.ಶ.1343ರ ಈ ಶಾಸನವು ಹೊಯ್ಸಳ ವೀರಬಲ್ಲಾಳನ ಕಾಲಕ್ಕೆ ಸೇರಿರುವ ಈ ಶಾಸನದಲ್ಲಿ ಕಾಡುಗೋಡಿಯನ್ನು 'ಕಾಡಗೋಡಿ'[10] ಎಂದು ಉಲ್ಲೇಖಿಸಲಾಗಿದೆ. ಕರ್ನಾಟಕ ಸ್ಟೇಟ್ ಗ್ಯಾಸೆಟಿಯರ್‌ನಲ್ಲಿ 'ಕಾಡಮಂಗಲಂ' ಎಂದಿದ್ದಾರೆ.[11] 'ಗೋಡು' ಇದು ಒಂದು ಬಗೆಯ ಮಣ್ಣು. ಕೆರೆ, ಬಾವಿ, ಕೊಳ ಮುಂತಾದವುಗಳಿಂದ ತೆಗೆದುಹಾಕಿರುವ ಸಾರವತ್ತಾದ ಹೂಳು ಮಣ್ಣು,[12] 'ಗೋಡುನೆಲ'ವೂ ಮೆಕ್ಕಲು ಮಣ್ಣಿನಿಂದ ಕೂಡಿದ ಫಲವತ್ತಾದ ಭೂಮಿಯಾಗಿರುತ್ತದೆ. ಬಹುಶಃ ಕಾಡಿನ ಅಂಚಿನಲ್ಲಿರುವ ಫಲವತ್ತಾದ ಗೋಡು ಪ್ರದೇಶದಿಂದಾಗಿ 'ಕಾಡುಗೋಡು' ಎಂದು ಕರೆಯಲ್ಪಟ್ಟು 'ಕಾಡುಗೋಡಿ' ಆಗಿರುವ ಸಾಧ್ಯತೆಗಳಿವೆ ಅಥವಾ ಕಾಡಿನಲ್ಲಿರುವ ದೇವಸ್ಥಾನವನ್ನು ಉಚ್ಚರಿಸುವ ಸಂದರ್ಭದಲ್ಲಿ ಕಾಡುಗುಡಿ ಎಂಬ ಹೆಸರು ಬಂದಿರಲೂಬಹುದು.

**ಕಾಟುನಾಯಕನಹಳ್ಳಿ:–** ಕ್ರಿ.ಶ.1346ರ ಹೊಯ್ಸಳರ ಕಾಲದ ಶಾಸನದಲ್ಲಿ ಕಾರ್ಜುರಾಯಪುರದ ಉಲ್ಲೇಖವಿದೆ.[13] ಪ್ರಸ್ತುತ ಈ ಪುರ ಕಾಟುನಾಯಕನಹಳ್ಳಿಯಾಗಿದೆ. ಇಲ್ಲಿನ ಜನರ ಹೇಳಿಕೆಯ ಪ್ರಕಾರ, ಈ ಪ್ರದೇಶವನ್ನು ಕಾಟುನಾಯಕನು ಆಳುತ್ತಿದ್ದನು ಹಾಗಾಗಿ ಕಾಟುನಾಯಕನಹಳ್ಳಿ ಎಂದು ಕರೆಯಲಾಗುತ್ತಿದೆ ಎನ್ನುತ್ತಾರೆ. ಕಾಟುನಾಯಕನ ಆಳ್ವಿಕೆಗೆ ಕಾರ್ಜುರಾಯನ ಪುರ ಅಥವಾ ಮಲ್ಲಿಕಾರ್ಜುನರಾಯಪುರ ಸೇರಿದ್ದಿರಬಹುದು. ಈತನ ಪ್ರಭಾವದಿಂದ ಮಲ್ಲಿಕಾರ್ಜುನರಾಯಪುರವು ಕಾಟುನಾಯಕನಹಳ್ಳಿ ಎಂದಾಗಿದೆ. ವ್ಯಕ್ತಿ(ನಾಯಕನ) ಹಿನ್ನೆಲೆಯಲ್ಲಿ ಕಾಟುನಾಯಕನ ಹಳ್ಳಿ ಎಂಬ ಹೆಸರು ಬಂದಿದೆ. ವೀರರಾಗಿದ್ದು ಸ್ಥಳನಾಮಗಳಲ್ಲಿ ಉಳಿದು ಬಂದು ಅವರ ಹೆಸರಿಂದಲೇ ಊರುಗಳನ್ನು ಕರೆಯುವ ರೂಢಿ ಇದೆ.

**ಕೆಂಗೇರಿ:–** ಬೆಂಗಳೂರಿನ ಉಪನಗರವಾಗಿರುವ ಕೆಂಗೇರಿಯ ಉಲ್ಲೇಖವು ಕ್ರಿ.ಶ.1738ರ ಶಾಸನದಲ್ಲಿ ಉಲ್ಲೇಖವಿದೆ.[14] ಇತ್ತೀಚೆಗೆ ಪರಿಶೋಧಿತವಾಗಿ ಪ್ರಕಟವಾಗಿರುವ ಬೆಂಗಳೂರಿನ ಐತಿಹಾಸಿಕ ಬಖೈರಿನಲ್ಲಿ ತೆಂಗೇರಿ ಎಂದೇ ಉಲ್ಲೇಖಿಸಲ್ಪಟ್ಟಿದೆ. ತೆಂಗೇರಿಯು ಕ್ರಿ.ಶ. ಸಾವಿರದ ಏಳುನೂರ ಮೂವತ್ತೆಂಟರ ವೇಳೆಗೆ ಕೆಂಗೇರಿ ಎಂದು ಬದಲಾವಣೆ ಹೊಂದಿದುದಾಗಿ ಇದೇ ಬಖೈರಿನಿಂದ ತಿಳಿದುಬರುತ್ತದೆ.[15]

ಭೌಗೋಳಿಕ ಹಿನ್ನೆಲೆಯಲ್ಲಿ ಹೇಳುವುದಾದರೆ, ಕೆಂಪು ಮಣ್ಣಿನ ಪ್ರದೇಶದಿಂದಾಗಿ ಇದು ಕೆಂಪಾದ ಕೇರಿ ಕೆಂಗೇರಿ ಎಂಬ ಹೆಸರಾಗಿರಬಹುದು. ಇನ್ನೂ ಕೆಲವು ಸ್ಥಳೀಯರ ಅಭಿಪ್ರಾಯದಲ್ಲಿ

‘ತೆಂಗೇರಿ’ ಎಂಬ ಸ್ಥಳನಾಮವು ‘ತೆಂಕಣ ಕೇರಿ’ ಅಂದರೆ ‘ತೆಂಕಣ’ ದಕ್ಷಿಣ ದಿಕ್ಕಿನಲ್ಲಿರುವ ಪ್ರದೇಶವಾದ್ದರಿಂದ ತೆಂಗೇರಿ ಆಗಿರಬಹುದು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.

ಎಂ.ಜಿ.ಮಂಜುನಾಥರವರು ಹೇಳುವಂತೆ, ‘ತೆಂಗಿನ+ಕೇರಿ ಅಂದರೆ ತೆಂಗು ಬೆಳೆಯುವ ಪ್ರದೇಶ ಎಂಬ ಅರ್ಥದಲ್ಲಿ ತೆಂಗೇರಿ ಎಂಬ ಹೆಸರು ರೂಪುಗೊಂಡಿರಬಹುದು. ಸಾವಿರಾರು ವರ್ಷಗಳಿಂದಲೂ ಈ ಪ್ರದೇಶವು ತೆಂಗಿನ ಮರಗಳಿಂದ ಕೂಡಿರುವುದು ಗಮನಾರ್ಹ. ವೃಷಭಾವತಿ ನದಿಯ ದಂಡೆಯಲ್ಲಿರುವ ಈ ಊರಿನಲ್ಲಿ ಹಿಂದಿನಿಂದಲೂ ತೆಂಗಿನ ತೋಟಗಳು ಹೇರಳವಾಗಿದ್ದವು ಕಳೆದ ಹದಿನೈದಿಪ್ಪತ್ತು ವರ್ಷಗಳ ಹಿಂದಿನವರೆಗೂ ತೆಂಗಿನ ಮರಗಳು ಈ ಊರಿನ ಸುತ್ತ ಮುತ್ತಲಿನ ತೋಟಗಳಲ್ಲಿ ಸಮೃದ್ಧವಾಗಿದ್ದವು. ಬೆಂಗಳೂರಿನ ಕೊಳಚೆನೀರು ವೃಷಭಾವತಿ ನದಿಯನ್ನು ಮಲಿನಗೊಳಿಸಿದಂತೆ ಆ ಕೊಳಚೆ ನೀರು ಈ ಪ್ರದೇಶದ ತೆಂಗಿನ ಮರಗಳನ್ನು ಬಲಿತೆಗೆದುಕೊಂಡಿತು. ತೆಂಗಿನ ತೋಟಗಳೂ ಕಣ್ಮರೆಯಾದವು. ಬತ್ತದ ಗದ್ದೆಗಳೂ ಮಾಯವಾದವು.’[16] ಒಟ್ಟಾರೆ ಈ ಪ್ರದೇಶದಲ್ಲಿನ ತೆಂಗಿನ ಮರಗಳಿಂದಾಗಿ ಈ ಊರಿಗೆ ‘ತೆಂಗೇರಿ’ ಎಂಬ ಹೆಸರು ಪ್ರಾಪ್ತವಾಗಿರಬಹುದೆಂದು ಹೇಳಬಹುದು. ಕಾಲಕ್ರಮೇಣ ತೆಂಗೇರಿಯು ಕೆಂಗೇರಿ ಎಂಬ ಹೆಸರನ್ನು ಪಡೆದಿದೆ. ಇಲ್ಲಿ ನಡೆದಿರುವ ಉತ್ಖನನದಿಂದ ಕೆಂಗೇರಿ ಹಾಗೂ ಸುತ್ತಲ ಪ್ರದೇಶದಲ್ಲಿ ಬೃಹತ್ ಶಿಲಾಯುಗದ ಅವಶೇಷಗಳು ದೊರಕಿವೆ. ಹಾಗಾಗಿ ಈ ಪ್ರದೇಶ ಬೃಹತ್ ಶಿಲಾಯುಗದಿಂದಲೂ ಜನವಸತಿಯಿಂದ ಕೂಡಿತ್ತು ಎಂಬುದು ವಿಶೇಷ.

**ಕೊಡಿಗೆಹಳ್ಳಿ:–** ಕ್ರಿ.ಶ.1348ರ ಕಾಲಕ್ಕಾಗಲೇ ಈ ಗ್ರಾಮದ ಉಲ್ಲೇಖವಿದೆ.[17] ಪ್ರಾಚೀನ ಕಾಲದ ಯಲಹಂಕ ನಾಡಿಗೆ ಕೊಡಿಗೆ ಹಳ್ಳಿ ಸೇರಿತ್ತು. ಕೆಲವರ ಅಭಿಪ್ರಾಯದಂತೆ ಈ ಪ್ರದೇಶವೇ ಹಳೇ ಬೆಂಗಳೂರು ಆಗಿತ್ತು. ಕೆಂಪೇಗೌಡರ ತಾಯಿಯ ತವರು ಮನೆಯೆಂದು ಜನಪ್ರಿಯವಾಗಿತ್ತು ಎನ್ನುತ್ತಾರೆ. ಸ್ಥಳೀಯರ ಅಭಿಪ್ರಾಯದಂತೆ, ಅರಸನೊಬ್ಬನು ಈ ಪ್ರದೇಶವನ್ನು ನಾಡಪ್ರಭುಗಳಿಗೆ ಕೊಡಿಗೆಯಾಗಿ ನೀಡಿದ್ದರಿಂದ ಈ ಗ್ರಾಮಕ್ಕೆ ಕೊಡಿಗೆಹಳ್ಳಿ ಎಂಬ ಹೆಸರು ಶಾಶ್ವತವಾಗಿ ನಿಂತಿತು ಎನ್ನುತ್ತಾರೆ. ಪ್ರಾಚೀನ ಸಂದರ್ಭದಲ್ಲಿ ರಾಜರು ತಮ್ಮ ಅಧಿಕಾರಿಗಳಿಗೆ ವಿಶೇಷ ಸಂದರ್ಭಗಳಲ್ಲಿ ಹಳ್ಳಿ/ಗ್ರಾಮವನ್ನು ಕೊಡುಗೆಯಾಗಿ ನೀಡುವ ಪದ್ಧತಿ ಇತ್ತು. ಹೀಗೆ ಯಾವುದೋ ಸಂದರ್ಭದಲ್ಲಿ ಕೊಡುಗೆ ನೀಡಿದ ಹಳ್ಳಿಯೇ ಕೊಡುಗೆಹಳ್ಳಿ ಎಂಬ ಹೆಸರಾಗಿ ಉಳಿದಿದೆ.

**ಕೂತನಿಡುನಲ್ಲೂರು:–** ಕ್ರಿ.ಶ.890ರ ಗಂಗರ ಶಾಸನದಲ್ಲಿ ಗಂಗರ ಅಧಿಕಾರಿ ನಾಗತ್ತರನ ಹೆಸರಿನಲ್ಲಿ ಬೆಂಪೂರಿನ 12 ಗ್ರಾಮಗಳನ್ನು ಕಲ್ನಾಡಾಗಿ ನೀಡಿರುವ ವಿಷಯ ತಿಳಿಯುತ್ತದೆ. ಅದರಲ್ಲಿ ಕೂತನಿಡುನಲ್ಲೂರು ಒಂದು.[18] ಬಹುಶಃ ಇಂದಿನ ನಲ್ಲೂರೇ ಈ ಸ್ಥಳವಿರಬಹುದೆಂದು ತೋರುತ್ತದೆ.

**ಕೊಮರಜ್ಜನ್ಡು(ಕೋರಮಂಗಲ):–** ಕೋರಮಂಗಲ ಪ್ರದೇಶವು ಬೆಂಗಳೂರಿನ ದಕ್ಷಿಣ ಆಗ್ನೇಯ ಭಾಗದಲ್ಲಿದೆ. ಇಂದು ಬೆಂಗಳೂರಿನ ದೊಡ್ಡ ಸ್ಥಳಗಳಲ್ಲಿ ಒಂದಾಗಿದೆ. ಇಂದು ಐಷಾರಾಮಿ ಬಂಗಲೆಗಳು, ವಾಣಿಜ್ಯ ಕೇಂದ್ರವಾಗಿರುವ ಈ ಪ್ರದೇಶವು ಬೆಂಪೂರು–12ರ ಒಂದು ಗ್ರಾಮ. ಕ್ರಿ.ಶ.890ರ ಗಂಗರ ಶಾಸನವು 'ಕೊಮರಜ್ಜನ್ಡು' ಎಂದು ಉಲ್ಲೇಖಿಸಿದೆ.[19] ನಂತರದಲ್ಲಿ 'ಕೊವರುಂಗುಂದ' ಎಂದೂ ಕರೆಯಲಾಗುತ್ತಿತ್ತು. ಇಂದು ಕೋರಮಂಗಲವಾಗಿದೆ. ಕೊವರು–ಕುಂಬಾರ, ಕುಮ್ಮಾರ, ಮಗ[20] ಗುಂದವೆಂದರೆ ಬೆಟ್ಟ, ಗುಡ್ಡ, ಮರಳು, ದಿಣ್ಣೆ ಎಂಬ ಅರ್ಥವಿದೆ.[21] ಕುಮಾರಬೆಟ್ಟ ಎಂಬ ಹೆಸರು ಕೊವರುಗುಂದವಾಗಿ ಕೊಮಾರಗುಂದವಾಗಿರಬಹುದು ಮುಂದೆ ಕೋರಮಂಗಲವಾಗಿದೆ. ಕೊಮರಂಗುಂಡು > ಕುಮಾರಮಂಗಳ > ಕೋರಮಂಗಲವಾಗಿದೆ.

**ಕೊತ್ತನೂರು:–** ಈ ಪ್ರದೇಶ ನರಸರಾಜ ಒಡೆಯರ್‌ರವರ ಅಧೀನಕ್ಕೆ ಒಳಪಟ್ಟಿತ್ತು. ಕ್ರಿ.ಶ.1705ರ ಶಾಸನದಲ್ಲಿ ಬೆಂಗಳೂರು ಕೋಟೆಗೆ ಸೇರುವ ಗೊಟ್ಟಿಗೆರೆ ವಳಿತವಾದಂಥ ಕೊತ್ತನೂರು ಗ್ರಾಮ ಎಂದಿದೆ.[22] ಚಿಕ್ಕದೇವರಾಜ ಒಡೆಯರವರು ಕಟ್ಟಿಸಿದ ವೆಂಕಟೇಶ್ವರ ದೇವಾಲಯದ ದೀಪಾರಾಧನೆಗೆ ಎಂದು ಚಿಕ್ಕದೇವರಾಜ ಒಡೆಯರವರ ಮಗ ನರಸರಾಜ ಒಡೆಯರವರು ಬೆಂಗಳೂರು ಕೋಟೆಗೆ ಸೇರುವ ಗೊಟ್ಟಿಗೆರೆ ವಳಿತವಾದ ಕೊತ್ತನೂರು ಗ್ರಾಮವನ್ನು ದೇವಾಲಯಕ್ಕೆ ನೀಡಿರುವ ಉಲ್ಲೇಖವಿದೆ. ಕೊತ್ತನೂರು ಎಂದರೆ ತೆಲುಗು ಭಾಷೆಯಲ್ಲಿ ಹೊಸೂರು ಎಂಬರ್ಥವಿದೆ.

**ಕುಂಜಿಯೂರು:–** ಹೊಯ್ಸಳರ ಕಾಲದ ಕ್ರಿ.ಶ.1301ರ ತಮಿಳು ಶಾಸನವೊಂದು ವರ್ತೂರು ಹೋಬಳಿಯ ಗುಂಜೂರು ಗ್ರಾಮದಲ್ಲಿ ದೊರೆತಿದೆ.[23] ಈ ಗುಂಜೂರೇ ತಮಿಳು ಶಾಸನದಲ್ಲಿ ಕುಂಜಿಯೂರಾಗಿರ ಬೇಕು. ಈ ಪ್ರದೇಶವು ವರ್ತೂರು ಸುತ್ತಮುತ್ತಲ ಹತ್ತಿರದಲ್ಲಿದೆ.

**ಕಲ್ಲುಕೆರೆ:–** ಕ್ರಿ.ಶ.1336ರ ಮೂರನೆ ಬಲ್ಲಾಳನ ಕಾಲದ ಶಾಸನವೊಂದರಲ್ಲಿ ಕಲ್ಲುಕೆರೆಯ ಉಲ್ಲೇಖವಿದೆ.[24] ಇಂದಿನ ಕೃಷ್ಣರಾಜಪುರ ಹೋಬಳಿಯ ಕಲ್ಲುಗೆರೆ ಗ್ರಾಮವನ್ನು ಇಂದು ಸಹ ಇದೇ ಹೆಸರಿನಿಂದ ಕರೆಯಲಾಗುತ್ತಿದೆ. ಒಮ್ಮೆ ಕಲ್ಲುಕೆರೆಯು ಅತಿವೃಷ್ಟಿಯಾಗಿ ಒಡೆದು ಹೋಗುತ್ತದೆ. ಆ ಸಂದರ್ಭದಲ್ಲಿ ಒಂದು ಭಾಗಕ್ಕೆ ಒಡ್ಡನ್ನು ನಿರ್ಮಿಸಲಾಗುತ್ತದೆ. ಆ ಭಾಗವೇ ಕಲ್ಲುಕೆರೆ ಎಂಬ ಅಂಶ ಶಾಸನದಿಂದ ತಿಳಿಯುತ್ತದೆ.

**ಕಾಡುಜಕ್ಕನಹಳ್ಳಿ:–** ಕ್ರಿ.ಶ.1700ರ ಕಾಲದ ಶಾಸನದ ಪ್ರಕಾರ ಮುಮ್ಮಡಿ ಚಿಕ್ಕರಾಯ ತಮ್ಮೇಗೌಡರು ಕಾಡಜಕ್ಕನಹಳ್ಳಿಯನ್ನು ತಿಮ್ಮ ಎಂಬುವನ ಹೆಸರಿನಲ್ಲಿ ನೆತ್ತರುಕೊಡುಗೆಯಾಗಿ ನೀಡಿದ್ದಾರೆ.[25]

**ಕಾಮನಾಯಕನಹಳ್ಳಿ:–** ಕ್ರಿ.ಶ.1624ರ ಸುಗುಟೂರು ಅರಸರಾದ ಮುಮ್ಮಡಿ ತಮ್ಮೇಗೌಡರ ಆಳ್ವಿಕೆಯಲ್ಲಿ ಕಾಳಿನಾಯಕನ ಹಳ್ಳಿಯನ್ನು ಶಿಂಗಸೇನನಾಯಕನ ಹೆಸರಿನಲ್ಲಿ ನೆತ್ತರು ಕೊಡುಗೆಯಾಗಿ ನೀಡಲಾಗಿದೆ.[26] ಪ್ರಸ್ತುತ ಕಾಳಿನಾಯಕನ ಹಳ್ಳಿಯೇ ಕಾಮನಾಯಕನಹಳ್ಳಿಯಾಗಿದೆ. ಈ ಹಳ್ಳಿ ಆನೇಕಲ್ಲು ತಾಲೂಕಿಗೆ ಒಳಪಡುತ್ತದೆ.

**ಕಂನ್ನೆಲ್ಲಿ:–** ಕಂನ್ನೆಲ್ಲಿ ಎಂಬ ಸ್ಥಳ ಕುಕ್ಕಲನಾಡಿಗೆ ಸೇರಿತ್ತು. ಕುಕ್ಕಲನಾಡ ಪಾಳೇಗಾರರ ಶಾಸನದಿಂದ ಈ ವಿಷಯ ಸ್ಪಷ್ಟವಾಗುತ್ತದೆ.[27] ಕ್ರಿ.ಶ. 1408ಕ್ಕೆ ಸೇರಿದ ಕನ್ನೆಲ್ಲಿಯ ಶಾಸನವು ಗ್ರಾಮದ ಹೆಸರನ್ನು 'ಕಂಣ್ನೆಲ್ಲಿ' ಎಂದು ದಾಖಲಿಸಿದೆ. ಕ್ರಿ.ಶ.1495ಕ್ಕೆ ಸೇರಿದ ಗೊಂಗಡಿಪುರದ ಶಾಸನವು[28] ಈ ಕನ್ನೆಲ್ಲಿಯು ಕುಕ್ಕಲನಾಡಿನ ಅರ್ಧಭಾಗವಾಗಿತ್ತು ಎಂದು ತಿಳಿಸುತ್ತದೆ. ಈ ಪ್ರದೇಶವು ಕುಕ್ಕಲನಾಡ ಪ್ರಭುಗಳ ಆಳ್ವಿಕೆಗೆ ಒಳಪಟ್ಟಿತ್ತು ಎಂಬುದು ಸ್ಪಷ್ಟವಾಗುತ್ತದೆ. ಈ ಕನ್ನೆಲ್ಲಿ ಗ್ರಾಮವು ಕೆಂಪಬಸವಯ್ಯನ ಹಳ್ಳಿ, ಕಾಚೂಹಳ್ಳಿ, ಹೇರೊಹಳ್ಳಿಗಳಿಂದ ಸುತ್ತುವರೆದಿತ್ತು.

**ಕಸವನಹಳ್ಳಿ:–** ಕ್ರಿ.ಶ.1846ರ ಕಾಲದ ಶಾಸನದಲ್ಲಿ ಕಸವನಹಳ್ಳಿಯ ಉಲ್ಲೇಖವಿದೆ.[29] ಆನೇಕಲ್ಲು ತಾಲೂಕಿನ ಬನ್ನೇರುಘಟ್ಟದ ನೈರುತ್ಯದಲ್ಲಿ ಕಸವನಹಳ್ಳಿ ಇದೆ. ದೇವರಕೊಂಡಾರೆಡ್ಡಿಯವರು ಬನ್ನೇರುಘಟ್ಟದ ಪ್ರಾಗೈತಿಹಾಸವನ್ನು ಹೇಳುವ ಸಂದರ್ಭದಲ್ಲಿ, ಈ ಕಸವನಹಳ್ಳಿ ಪ್ರಾಚೀನ ಸಂದರ್ಭದಲ್ಲಿ ಚಿನ್ನದ ಸಂಬಂಧವನ್ನು ಹೊಂದಿತ್ತು ಎನ್ನುತ್ತಾರೆ. ಲೋಹಕರ್ಮಿಗಳ ಹಿನ್ನೆಲೆಯಲ್ಲಿ ಈ ಹೆಸರು ಬಂದಿದೆ ಎಂದು ಅಭಿಪ್ರಾಯಿಸುತ್ತಾರೆ. ಆದರೆ ಸ್ಥಳೀಯರು ಹೇಳುವಂತೆ ಈ ಪ್ರದೇಶದಲ್ಲಿ ಕಸವನ ಗೆಡ್ಡೆಯನ್ನು ಅತಿ ಹೆಚ್ಚು ಬೆಳೆಯಲಾಗುತ್ತಿತ್ತು ಹಾಗಾಗಿ ನೈಸರ್ಗಿಕವಾಗಿ ಈ ಪ್ರದೇಶಕ್ಕೆ ಕಸವನಹಳ್ಳಿ ಎಂಬ ಹೆಸರು ಬಂದಿದೆ.

**ಗಳಂಜವಾಗಿಲು:–** ಕ್ರಿ.ಶ.890ರ ಗಂಗರ[30] ಶಾಸನದಲ್ಲಿ ಉಲ್ಲೇಖವಾಗಿರುವ ಬೆಂಪೂರು 12 ಗ್ರಾಮಗಳಲ್ಲಿ ಗಳಂಜವಾಗಿಲು ಒಂದು. ಹಾಗೂ ಗಟಿಂಜವಾಗಿಲು[31] ಎಂದು ಉಲ್ಲೇಖಿಸುವ ತುರುಗೋಳಿನ ವೀರಗಲ್ಲು ದೊರೆಯುತ್ತದೆ.

**ಗೊಂಗಡಿಪುರ:–** ಕ್ರಿ.ಶ.1495ರ ಕಾಲದ ಶಾಸನದಲ್ಲಿ ಗೊಂಗಡಿಹಳ್ಳಿಯ ಉಲ್ಲೇಖವಿದೆ.[32] ಇದೇ ಕಾಲಘಟ್ಟದ ಮತ್ತೊಂದು ಶಾಸನ ಜಕ್ಕಸಂದ್ರದಲ್ಲಿ ದೊರಕಿದೆ. ಈ ಶಾಸನದಲ್ಲಿ 'ಗಡೆಪುರ' ಎಂಬ ಸ್ಥಳದ ಉಲ್ಲೇಖವಿದೆ.[33] ಬಹುಶಃ ಗೊಗಂಡಿಹಳ್ಳಿಯೇ ಗಡೆಪುರವಾಗಿದ್ದಿರಬೇಕು. ಈ ಶಾಸನದ ಹಿಂಭಾಗದಲ್ಲಿ ಗೊಂಗಡಿಹಳ್ಳಿ ಎಂಬ ಗ್ರಾಮನಾಮಕ್ಕೆ ಮತ್ತೊಂದು ಹೆಸರು ತಿಂಮಂಣರಾಜಪುರವನ್ನು....... ಎಂದಿದೆ. ಗೊಂಗಡಿಹಳ್ಳಿಗೆ ವಿಜಯನಗರ ಕಾಲದಲ್ಲಿ

ತಿಂಮಂಣರಾಜಪುರ ಎಂಬ ಪ್ರತಿನಾಮವನ್ನು ನೀಡಲಾಗಿದೆ. ಆದರೆ ಈ ಹೆಸರು ಹೆಚ್ಚು ಚಲಾವಣೆಗೆ ಇಲ್ಲದೆ ಗೊಂಗಡಿಪುರವಾಗಿ ಉಳಿದುಕೊಂಡಿದೆ.

**ಗೊಲ್ಲಹಳ್ಳಿ(ತುರಹಳ್ಳಿ):–** ಕ್ರಿ.ಶ.1578ರ ಶಾಸನವೊಂದು 'ತುಱುವರಹಳ್ಳಿ' ಎಂದು ಉಲ್ಲೇಖಿಸುತ್ತದೆ.[34] ತುರು ಎಂದರೆ ಹಸು ಎಂಬರ್ಥವಿದೆ. ಹಸುಗಳ ಸಾಕಾಣಿಕೆ ಮಾಡುವ ಗೊಲ್ಲ ಸಮುದಾಯ ಈ ಪ್ರದೇಶದಲ್ಲಿ ವಾಸವಾಗಿದ್ದಿರಬಹುದು. ಹಾಗಾಗಿ ತುಱವರಹಳ್ಳಿ ಎಂದು ಹೆಸರಾಗಿದೆ. ಈ ಹಳ್ಳಿ ಇಂದಿನ ಗೊಲ್ಲಹಳ್ಳಿ ಎಂದು ಗುರ್ತಿಸಲಾಗಿದೆ.

**ಗೊಟ್ಟಿಗೆರೆ:–** ಕ್ರಿ.ಶ.1705ರ ಮೈಸೂರು ಅರಸರ ಶಾಸನದಲ್ಲಿ 'ಗೊಟ್ಟಿಗೆರೆ' ಸ್ಥಳದ ಉಲ್ಲೇಖವಿದೆ. ಈ ಶಾಸನದ ಪ್ರಕಾರ ಬೆಂಗಳೂರು ಕೋಟೆಗೆ ಗೊಟ್ಟಿಗೆರೆ ವಳಿತ ಸೇರುತ್ತದೆ.[35] ಕೆರೆಯೊಂದರ ಹಿನ್ನೆಲೆಯಲ್ಲಿ ನಿರ್ಮಾಣವಾಗಿರುವ ಜಲವಾಚಿ ಸ್ಥಳನಾಮವಾಗಿದೆ. ಕೊತ್ತನೂರಿನ ಸಮೀಪ ಈ ಪ್ರದೇಶವಿದ್ದು ಇಂದಿಗೂ ಇದೇ ಹೆಸರಿನಿಂದ ಕರೆಯಲಾಗುತ್ತದೆ.

**ಚಿಕ್ಕಬೆಟ್ಟಹಳ್ಳಿ(ಚಿಗಬೆಟ್ಟಹಳ್ಳಿ):–** ಕ್ರಿ.ಶ.1524ರ ಶಾಸನವು 'ಚಿಗಬೆತಹಳ್ಳಿ' ಎಂದು ಉಲ್ಲೇಖಿಸುತ್ತದೆ. ಇಂದಿನ ಬೆಟ್ಟದಾಸನ ಪುರವೇ ಈ ಚಿಗಬೆತಹಳ್ಳಿ ಇರಬಹುದು. ಈ ಶಾಸನ ದೊರೆತಿರುವುದು ಚಿಕ್ಕಬೆಟ್ಟಹಳ್ಳಿಯಲ್ಲೇ.[36] ಈ ಊರು ಎತ್ತರದ ಸ್ಥಳದಲ್ಲಿ ಇದ್ದು ಗುಡ್ಡಪ್ರದೇಶವಾಗಿದೆ. ಹಾಗಾಗಿ ಈ ಪ್ರದೇಶಕ್ಕೆ ಬೆಟ್ಟಹಳ್ಳಿ ಎಂಬ ಹೆಸರು ಬಂದಿದೆ.

**ಜಾಲಹಳ್ಳಿ:–** ಚಿಕ್ಕಜಾಲಹಳ್ಳಿಯನ್ನು ಶಾಸನದಲ್ಲಿ ಜಾಲಮಾಚಿಹಳ್ಳಿ, ಜಾಲಪ್ಪಳ್ಳಿ ಎಂದು ಕರೆಯಲಾಗಿದೆ. ಕ್ರಿ.ಶ.1341ರ[37] ಶಾಸನದ ಪ್ರಕಾರ ಯಲಹಂಕ ನಾಡಪ್ರಭು ಭೈರೇಗೌಡ, ತಾಮಿಯಪ್ಪ, ಮಾಚೀದೇವ ಕನ್ನೇಗೌಡರು, ಮಾರಗೌಡನ ಮಕ್ಕಳು ನಾಗವಾರದ ಮಾರಪ್ಪನಿಗೆ ನಾಗಶೆಟ್ಟಿಹಳ್ಳಿ ಮತ್ತು ಜಾಲಮಾಚಿಹಳ್ಳಿಯ ಪ್ರದೇಶವನ್ನು ಕೊಡುಗೆಯಾಗಿ ನೀಡಿರುತ್ತಾರೆ. ಹಾಗೂ ಕ್ರಿ.ಶ.1366ರ[38] ತಮಿಳು ಶಾಸನದಲ್ಲಿ ಉಲ್ಲೇಖವಾಗಿರುವ 'ಜಾಲಪ್ಪಳ್ಳಿ'ಯೇ ಈ ಜಾಲಮಾಚಿಹಳ್ಳಿ/ಜಾಲಹಳ್ಳಿ ಆಗಿರಬಹುದು. ನವಶಿಲಾಯುಗ ಸಂಸ್ಕೃತಿಯ ನೆಲೆಗಳು ಜಾಲಹಳ್ಳಿಯಲ್ಲಿ ಕಂಡುಬಂದಿವೆ. ಹಾಗಾಗಿ ಶಿಲಾಯುಗದಿಂದಲೂ ಈ ಸ್ಥಳ ಜನವಸತಿಯಿಂದ ಕೂಡಿತ್ತು ಎಂಬುದು ವಿಶೇಷ.

**ಜಕ್ಕಸಂದ್ರ:–** ಕ್ರಿ.ಶ.1343ರ ಹೊಯ್ಸಳರ ವೀರಬಲ್ಲಾಳನ ಕಾಲದ ಶಾಸನ[39] ಹಾಗೂ ಕ್ರಿ.ಶ.1544ರ ವಿಜಯನಗರದ ಅರಸ ಸದಾಶಿವನ[40] ಕಾಲದ ಶಾಸನದಲ್ಲಿ ಜಕ್ಕೂರು ಎಂಬ ಸ್ಥಳದ ಉಲ್ಲೇಖವಿದೆ. ಕ್ರಿ.ಶ.1495ರ ಶಾಸನವೊಂದು 'ಜಕ್ಕಸಂದ್ರ' ಎಂಬ ಗ್ರಾಮವನ್ನು ಉಲ್ಲೇಖಿಸುತ್ತದೆ. ಈ ಪ್ರದೇಶಕ್ಕೆ

ಸೇರುವ ಗಡೆಪುರ(ಬಹುಶಃ ಗೊಂಗಡಿಪುರ)ವನ್ನು ಬೇಲೂರು ನಾಗನಾಥದೇವರಿಗೆ ಎರಡು ಭಾಗ ಹಾಗೂ ಚನ್ನಕೇಶವ ದೇವರಿಗೆ ಒಂದು ಭಾಗ ನೀಡಿರುವಂತೆ ತಿಳಿಸುತ್ತದೆ. ಹೊಯ್ಸಳರ ಕಾಲದಲ್ಲಿ ವಿಶಾಲ ಕೆರೆಯನ್ನು ಸಂದ್ರ, ಸಮುದ್ರ ಎಂದು ಕರೆಯಲಾಗುತ್ತಿತ್ತು. ಜಕ್ಕ ಎಂಬುವವನು ಕೆರೆಯೊಂದನ್ನು ಕಟ್ಟಿಸಿದ್ದರಿಂದ ಕೆರೆಯ/ಸಂದ್ರದ ಸುತ್ತಲ ಪ್ರದೇಶಕ್ಕೆ ಜಕ್ಕಸಂದ್ರ ಎಂಬ ನಾಮ ಸ್ಥಿರವಾಗಿದೆ. ಹೊಯ್ಸಳರ ಕಾಲದಲ್ಲಿ ಯಾರು ಕೆರೆಯನ್ನು ಕಟ್ಟಿಸುತ್ತಿದ್ದರೋ ಅವರ ಹೆಸರಿನಲ್ಲಿ ಕರೆಯುವುದು ವಿಶೇಷವಾಗಿತ್ತು. ಸರ್ಜಾಪುರ ರಸ್ತೆಯಲ್ಲಿ ಜಕ್ಕಸಂದ್ರ ಎಂಬ ಸ್ಥಳವಿದೆ. ಇಂದಿಗೂ ಇದೇ ಹೆಸರನ್ನು ಉಳಿಸಿಕೊಂಡಿದೆ. ಇಂದಿನ ಕನಕಪುರ ಮುಖ್ಯರಸ್ತೆಯಲ್ಲಿ ಜಕ್ಕಸಂದ್ರ ಎನ್ನುವ ಸ್ಥಳವಿದ್ದು, ಇದನ್ನು ರಸ್ತೆಜಕ್ಕಸಂದ್ರ ಎಂದು ಕರಯಲಾಗುತ್ತಿದೆ.

**ಜಿಗಣಿ:–** ವಾಜರಹಳ್ಳಿಗೆ ದಕ್ಷಿಣ ಉಪ್ಪಾರ ಬಂಡೆಯ ಪೂರ್ವ ದಿಕ್ಕಿನ ಇಳಿಜಾರಿನಲ್ಲಿ ದೊರೆತ ಕ್ರಿ.ಶ.1764ರ[41] ಮೈಸೂರು ಅರಸರ ಶಾಸನದಲ್ಲಿ ಜಿಗಣಿ ಸ್ಥಳದ ಉಲ್ಲೇಖವಿದೆ. ಆ ಕಾಲಕ್ಕೆ ಇದು ಹೋಬಳಿಯಾಗಿತ್ತು. ಬೆಂಗಳೂರು ವಳಿತಕ್ಕೆ ಸೇರಿದ್ದ ಪ್ರದೇಶ. ಹೊಯ್ಸಳರ ತಮಿಳುಶಾಸನದಲ್ಲಿ 'ಸುಗುನಿ' ಎಂಬ ಉಲ್ಲೇಖ ದೊರೆಯುತ್ತದೆ.[42] ಈ ಬದಲಾವಣೆ ಭಾಷೆಯಿಂದಾಗಿರುವುದು ಎಂಬುದು ಗಮನಾರ್ಹ. ಇಂದಿಗೂ ಈ ಪ್ರದೇಶವನ್ನು ಜಿಗಣಿ ಎಂದೇ ಕರೆಯಲಾಗುತ್ತದೆ.

**ತಲೈಗಟ್ಟಪುರ:–** ಕ್ರಿ.ಶ.1262ರ ಕಾಲದ ಶಾಸನದಲ್ಲಿ 'ತಲೆಗಟೂರ ಸಿವಪುರ ಚತುಸ್ಸೀಮೆ' ಎಂಬ ಉಲ್ಲೇಖವಿದೆ. ಇದೇ ಮುಂದೆ ತಲೈಗಟ್ಟಪುರವಾಗಿದೆ. ಈ ಊರು ಶಿವಪುರದ ಚತುಸ್ಸೀಮೆಯನ್ನು ಒಳಗೊಂಡಿದೆ. ಈ ಶಾಸನದ ವಿಶೇಷತೆ ಎಂದರೆ, ಶಾಸನದ ಮುಂಭಾಗ ತಮಿಳುಭಾಷೆಯಲ್ಲಿದೆ. ಹಿಂಭಾಗ ಕನ್ನಡ ಭಾಷೆಯಲ್ಲಿದೆ. ವಿಷಯ ಒಂದೇ ಆಗಿದೆ.[43] ತಮಿಳು ಭಾಷೆಯಲ್ಲಿ ತಲೈವ ಎಂದರೆ ನಾಯಕ ಎಂಬ ಅರ್ಥವಿದೆ. ಗಟ್ಟ ಎಂದರೆ ಎತ್ತರವಾದ ಪ್ರದೇಶ. ಈ ಪ್ರದೇಶ ರಾಜ ಕಕಡ ಮಾರಾಯನ ಆಳ್ವಿಕೆಗೆ ಒಳಪಟ್ಟಿತ್ತು. ಇಂದು ಈ ಪ್ರದೇಶ ಬೆಂಗಳೂರು ಹಾರೋಹಳ್ಳಿ ಮಾರ್ಗದ ಮಧ್ಯದಲ್ಲಿದೆ. ಇಂದಿಗೂ ತಲಗಟ್ಟಪುರ ಎಂದೇ ತನ್ನ ಹೆಸರನ್ನು ಉಳಿಸಿಕೊಂಡಿದೆ.

**ತಾವರೆಕೆರೆ:–** ಹೊಯ್ಸಳರ ಕಾಲದ ತಮಿಳು ಶಾಸನದಲ್ಲಿ ತಾವರೆಕೆರೆಯನ್ನು 'ತಮರೈಕ್ಕಿರೆ' ಎಂದು ಉಲ್ಲೇಖಿಸಿದೆ. ಕ್ರಿ.ಶ.1247ರ[44] ಕಾಲದ ಶಾಸನದಲ್ಲಿ ತಮರೈಕ್ಕಿರೈನ ಭೂಮಿಯನ್ನು ದೇವಾಲಯಗಳಲ್ಲಿ ವೇದಪಠಣ ಮಾಡುವವರಿಗೆ ಸರ್ವಮಾನ್ಯ ಕೊಡುಗೆಯಾಗಿ ನೀಡಲಾಗಿರುವ ವಿಷಯ ತಿಳಿಯುತ್ತದೆ. ಹಾಗೂ ಕ್ರಿ.ಶ. 1301ರ ಹೊಯ್ಸಳ ವೀರ–ಬಲ್ಲಾಳ ದೇವನ ಕಾಲದ[45] ಶಾಸನದಲ್ಲಿ ಕ್ರಿ.ಶ.1365ರ ತಮಿಳುಶಾಸನದಲ್ಲೂ 'ತಮರೈಕ್ಕಿರೆ' ಎಂಬ ಉಲ್ಲೇಖವಿದೆ.[46] ಈ ತಮರೈಕ್ಕಿರೆ ಎಂಬುದೇ ತಾವರೆಕೆರೆ

ಎಂಬುದು ಸ್ಪಷ್ಟ. ಇಂದು ಈ ತಾವರೆಕೆರೆಯನ್ನು ಒಳಗೊಂಡಂತೆ ಭೈರಸಂದ್ರ ಮತ್ತು ಮಡಿವಾಳ ಪ್ರದೇಶಗಳು ಸೇರಿ ಬಿ.ಟಿ.ಎಂ. ಲೇಔಟ್ ಆಗಿದೆ.(ಭೈರಸಂದ್ರ, ತಾವರೆಕೆರೆ ಮಡಿವಾಳ ಲೇಔಟ್) ಹೀಗೆ ಮೂಲ ಹೆಸರಿನ ಗುರುತೇ ಸಿಗದಂತೆ ಆಧುನೀಕರಣಗೊಂಡಿರುವುದನ್ನು ಕಾಣಬಹುದು.

**ತೋಗೂರು(ತೊವಗೂರು):–** ಇಂದಿನ ದೊಡ್ಡ ತೋಗೂರು ಕ್ರಿ.ಶ.ಸುಮಾರು 9ನೇ ಶತಮಾನದಲ್ಲಿ ತೊವಗೂರು ಎಂಬ ನಾಮಧೇಯವನ್ನು ಹೊಂದಿತ್ತು. 'ವ' ಕಾರ ಲೋಪವಾಗಿ ತೋಗೂರಾಗಿದೆ. ಕ್ರಿ.ಶ.13ನೇ ಶತಮಾನದೊತ್ತಿಗೆ ಈ ಪ್ರದೇಶವನ್ನು ತೋಗೂರು ಎಂದು ಕರೆಯುತ್ತಿದ್ದದ್ದು ಶಾಸನದ ಮೂಲಕ ತಿಳಿಯಬಹುದು. ಬೇಗೂರು ಗ್ರಾಮದ ವೀರಭದ್ರ ದೇವಾಲಯದ ಹೊರಗಡೆ ಗೋಡೆಯ ಬಲಭಾಗದ ಮೇಲೆ ಕ್ರಿ.ಶ.1300ರ ಕಾಲಘಟ್ಟಕ್ಕೆ ಸರಿಹೊಂದುವ ಈ ಶಾಸನದಲ್ಲಿ 'ತೋಗೂರ ತಿಪ್ಪೊಡೆಯರ ಮಗ ಮಲ್ಲವೊಡೇರು ನೀಡಿದ ದಾನ ಎಂದಿದೆ', ಅಂದರೆ, ತೋಗೂರು ಗ್ರಾಮಕ್ಕೆ ತಿಪ್ಪೊಡೆಯರ ಮಗ. ಮಲ್ಲವೊಡೆಯರು ಸೇರಿದ್ದರು ಎಂದು ತಿಳಿದು ಬರುತ್ತದೆ.[47]

**ತಿಪ್ಪೂರು:–** ಕ್ರಿ.ಶ.1156ರ ಹೊಯ್ಸಳರ ತಮಿಳು ಶಾಸನವು ತಿಪ್ಪೂರನ್ನು ಉಲ್ಲೇಖಿಸುತ್ತದೆ. ಹೊಯ್ಸಳ ದೊರೆ ನರಸಿಂಹನು ಆಳುತ್ತಿದ್ದಾಗ ಕುಕ್ಕಲ ನಾಡಿನ ಅಚಲಯ್ಯನು ತಿಪ್ಪೂರಿನ ಮೇಲೆ ದಾಳಿ ಮಾಡುತ್ತಾನೆ. ಮುರಸಾಡಿ ಎಂಬಾತ ತಿಪ್ಪೂರನ್ನು ಉಳಿಸಿಕೊಳ್ಳಲು ಹೋರಾಡಿ ಸಾವನ್ನಪ್ಪುವ ವಿಷಯವನ್ನು ಈ ಶಾಸನ ತಿಳಿಸುತ್ತದೆ.[48] ಕ್ರಿ.ಶ.1879ರ ಕಾಲದ ಶಾಸನದಲ್ಲಿ ಉಲ್ಲೇಖವಾಗಿರುವ ತಿರುಪಳ್ಳಿಯೇ ಈ ತಿಪ್ಪೂರು ಆಗಿರಬಹುದು.[49]

**ದೊಮ್ಮಲೂರು:–** ಕ್ರಿ.ಶ.1200ರ ತಮಿಳು ಶಾಸನ ದೊಮ್ಮಲೂರು ಎಂಬ ಹೆಸರನ್ನು ತೊಬಲೂರು ಎಂದು ಉಲ್ಲೇಖಿಸುತ್ತದೆ.[50] ಕ್ರಿ.ಶ.1440ರ ಕನ್ನಡ ಶಾಸನ ಒಂದು 'ಡೊಂಬಲೂರು'[51] ಎಂದೇ ಉಲ್ಲೇಖಿಸುತ್ತದೆ. ಇಲ್ಲಿರುವ ಚೊಕ್ಕನಾಥ ಸ್ವಾಮಿ ದೇವಾಲಯಕ್ಕೆ ಸಂಬಂಧ ಪಟ್ಟಂತೆಯೇ ಈ ಗ್ರಾಮದ ಹೆಸರು ಶಾಸನಗಳಲ್ಲಿ ಉಲ್ಲೇಖವಾಗಿದೆ. ಈ ಊರಿಗೆ ದೇಶಿಮಾಣಿಕ್ಯ ಪಟ್ಟಣಮ್ ಎಂಬ ಪರ್ಯಾಯ ಹೆಸರು ಇತ್ತು ಎಂದು ಶಾಸನಗಳಿಂದ ತಿಳಿಯುತ್ತದೆ.

**ದೇವಸಮುದ್ರ:–** ಕ್ರಿ.ಶ.1431ರ ವಿಜಯನಗರ ಕಾಲದ ಶಾಸನದಲ್ಲಿ ದೇವಸಮುದ್ರದ ಉಲ್ಲೇಖವಿದೆ.[52] ಈ ದೇವಸಮುದ್ರವು ಶಿವನಸಮುದ್ರಕ್ಕೆ ಸೇರುವ ಯಲಹಂಕನಾಡಿನ ಒಂದು ಭಾಗ. ದೇವಸಮುದ್ರ ಗ್ರಾಮದ ಹುಟ್ಟುವಳಿ, ಆ ಗ್ರಾಮಕ್ಕೆ ಬರುವ ಅಂದಿನ ಆದಾಯವನ್ನು ಗುತ್ತಿಗೆಯ ಪ್ರಮಾಣವನ್ನು ವಿರೂಪಾಕ್ಷಪುರಕ್ಕೆ ಬಿಟ್ಟು ಕೊಟ್ಟ ವಿಷಯ ಶಾಸನದಿಂದ ತಿಳಿಯುತ್ತದೆ. ಹಾಗೂ ಆ ಗ್ರಾಮವನ್ನು ವಿಜಯದೇವ ರಾಯಪುರವೆಂಬ ಪ್ರತಿನಾಮದೇಯವನ್ನಿಟ್ಟು ಗ್ರಾಮವನ್ನು ಮಾಡಿರುವುದಾಗಿ ತಿಳಿಯುತ್ತದೆ.

**ನಾಗಶೆಟ್ಟಿಹಳ್ಳಿ:–** ಕ್ರಿ.ಶ.1342ರ ಹೊಯ್ಸಳರ ಶಾಸನದಲ್ಲಿ ನಾಗಶೆಟ್ಟಿಹಳ್ಳಿಯ ಉಲ್ಲೇಖವಿದೆ.[53] ವ್ಯಕ್ತಿ ವಾಚಿ ನೆಲೆಯಲ್ಲಿ ಈ ಹಳ್ಳಿಗೆ ನಾಗಶೆಟ್ಟಿಹಳ್ಳಿ ಎಂಬ ಹೆಸರು ಬಂದಿರಬಹುದು. ಯಾವುದೋ ಸಂದರ್ಭದಲ್ಲಿ ನಾಗಶೆಟ್ಟಿ ಎಂಬ ವರ್ತಕ ಈ ಪ್ರದೇಶಕ್ಕೆ ಪ್ರಮುಖ ಅಧಿಕಾರಿಯಾಗಿದ್ದಿರಬಹುದು ಹಾಗಾಗಿ ಈತನ ಪ್ರಭಾವದಿಂದ ಈ ಹೆಸರು ಉಳಿದುಕೊಂಡುಬಂದಿದೆ. ಪ್ರಸ್ತುತ ಈ ಶಾಸನ ದೊರೆತಿರುವುದು ಸಹ ನಾಗಶೆಟ್ಟಿಹಳ್ಳಿಯಲ್ಲಿ ಎಂಬುದು ಗಮನಾರ್ಹ.

**ನೇರ್ಕುಂದಿ:–** ಕ್ರಿ.ಶ.1304ರ ಕಾಲದ ಹೊಯ್ಸಳ ವೀರಬಲ್ಲಾಳನ ಕಾಲದ ತಮಿಳು ಶಾಸನದಲ್ಲಿ ನೇರ್ಕುಂದಿಯನ್ನು 'ನಕ್ಕಿಗುಂಡಿ' ಎಂದು ಉಲ್ಲೇಖಿಸಲಾಗಿದೆ.[54] ಈ ಬಲ್ಲಾಳನು ದೋರಸಮುದ್ರದಲ್ಲಿ ಆಳ್ವಿಕೆ ನಡೆಸುತ್ತಿದ್ದಾಗ ವೈರಿ ಪಡೆಯನ್ನು ಸೋಲಿಸಿ 'ನಕ್ಕಿಗುಂಡಿ' ಕೋಟೆಯನ್ನು ವಶಪಡಿಸಿಕೊಂಡ ವಿಷಯವಿದೆ. ಹಾಗಾದರೆ ಈ ನೇರ್ಕುಂದಿ ಪ್ರದೇಶದಲ್ಲಿ ಕೋಟೆಯಿದ್ದಿರಬೇಕು ಎಂಬುದು ತಿಳಿಯುತ್ತದೆ. ಪ್ರಸ್ತುತ ಈ ಸ್ಥಳದಲ್ಲಿ ಕೋಟೆ ಉಳಿದಿಲ್ಲ. ಈ ನಕ್ಕಿಗುಂಡಿಯೇ ನೇರ್ಕುಂದಿಯಾಗಿ ಇಂದು ಮಾರತ್ತಹಳ್ಳಿಯ ಸಮೀಪವಿರುವ ದೊಡ್ಡನೆಕ್ಕುಂದಿಯಾಗಿದೆ.

**ಪಟ್ಟಂದೂರು:–** ಕ್ರಿ.ಶ.1343ರ ಹೊಯ್ಸಳರ ಶಾಸನವು ಪಟ್ಟಂದೂರಿನಲ್ಲಿ ದೊರೆಯುತ್ತದೆ. ಈ ಸ್ಥಳವನ್ನು ಶಾಸನವು 'ಹಟ್ಟಂದೂರು' ಎಂದು ಉಲ್ಲೇಖಿಸಿದೆ.[55] ಗ್ರಾಮೀಣ ವಸತಿ ನೆಲೆಯಲ್ಲಿ ಹಟ್ಟಿಗಳಿಂದ ಕೂಡಿರುವ ಮನೆಗಳಿದ್ದರಿಂದ ಆ ಗ್ರಾಮ ಹಟ್ಟಂದೂರು ಆಗಿದ್ದಿರಬಹುದು. ಅಥವಾ ಪಟ್ಟಣದ ಊರು ಆಗಿದ್ದಿರುವ ಸಾಧ್ಯತೆಯೂ ಇದೆ. ಪಟ್ಟಂದೂರು>ಹಟ್ಟಂದೂರು>ಪಟ್ಟಂದೂರು ಆಗಿದೆ. 'ಪ' ಕಾರ 'ಹ' ಕಾರವಾಗಿ ಮತ್ತೆ 'ಪ' ಕಾರವಾಗಿದೆ.

**ಬನ್ನೇರುಘಟ್ಟ:–** ಬೆಂಗಳೂರಿನಿಂದ ದಕ್ಷಿಣಕ್ಕೆ 16 ಕಿ.ಮೀ ದೂರದಲ್ಲಿ ಬನ್ನೇರುಘಟ್ಟ ಎಂಬ ಸ್ಥಳವಿದೆ. ಈ ಪ್ರದೇಶದಲ್ಲಿ ಚಂಪಕಧಾಮ ಅಥವಾ ಶಾಸನಗಳಲ್ಲಿ ಹೆಸರಿಸಿರುವ ಪೆರುಮಾಳು ದೇವಾಲಯವಿದೆ. ಈ ದೇವಾಲಯವು ವಿಜಯನಗರದ ಆರಂಭ ಕಾಲದಲ್ಲಿ ನಿರ್ಮಾಣವಾಗಿದೆ. ಶಾಸನಗಳಲ್ಲಿ ಬನ್ನೇರುಘಟ್ಟವನ್ನು ಬನ್ನೂರುಘಟ್ಟವೆಂದು ಕರೆಯಲಾಗಿದೆ. ತಮಿಳು ಶಾಸನಗಳಲ್ಲಿ ವಹ್ನಿರಾರ ಘಟ್ಟವೆಂದು ಕರೆದಿರುವ ದಾಖಲೆಗಳಿವೆ.

ಕ.ವೆಂ.ರಾಜಗೋಪಾಲರು, ಈ ಸ್ಥಳದ ನಿಷ್ಪತ್ತಿಯು ವಹ್ನಿಯೂರು ಘಟ್ಟವೆಂದು ಇದರಿಂದಲೇ ಬನ್ನೂರು ಬನ್ನೇರು ಆಯಿತೆಂದು ಹೇಳಿ ಈ ಕ್ಷೇತ್ರವನ್ನು ತಿಗಳರಿಗೆ ಅಥವಾ ವಹ್ನಿಕುಲ ಕ್ಷತ್ರಿಯರ ಕ್ಷೇತ್ರವೆಂಬುದಾಗಿ ತಿಳಿಸಿರುತ್ತಾರೆ.

ಡಾ.ದೇವರಕೊಂಡರೆಡ್ಡಿಯವರು 'ಪ್ರಾಗೈತಿಹಾಸಿಕ ಕಾಲದಿಂದ ಇಂದಿನವರೆಗೆ ಬನ್ನೇರುಘಟ್ಟ' ಎಂಬ ತಮ್ಮ ಲೇಖನದಲ್ಲಿ ಹೇಳಿರುವಂತೆ, ಬನ್ನೇರುಘಟ್ಟದ ಸುವರ್ಣಮುಖಿ ತೀರ್ಥವನ್ನು ಕೇಂದ್ರವಾಗಿಟ್ಟುಕೊಂಡಲ್ಲಿ ಇದರ ಪಶ್ಚಿಮಕ್ಕೆ ಬೂತೇನಹಳ್ಳಿಯೂ, ಉತ್ತರಕ್ಕೆ ಕ್ಯಾಸರ ಗುಪ್ಪೆಯೂ, ವಾಯುವ್ಯಕ್ಕೆ ಶಾನುಬೋಗನ ಹಳ್ಳಿ, ಕುಲುಮೆ ಪಾಳ್ಯಗಳೂ, ಆಗ್ನೇಯಕ್ಕೆ ಕಸವರಹಳ್ಳಿಯೂ ನೈರುತ್ಯಕ್ಕೆ ವಾಜರಹಳ್ಳಿ, ಇದರ ದಕ್ಷಿಣಕ್ಕೆ ಕಾಳೇಶ್ವರಿ ಎಂಬ ಸ್ಥಳ, ದಕ್ಷಿಣಕ್ಕೆ ರಾಗಿಹಳ್ಳಿ ಬೆಟ್ಟ ಮುಂತಾದ ಊರುಗಳು ಕಾಣಬರುತ್ತವೆ. ಈ ಊರುಗಳ ಸ್ಥಳನಾಮಗಳು ಒಂದಲ್ಲ ಒಂದು ಲೋಹದ ಸಂಬಂಧವನ್ನು ಹೊಂದಿರುವುದು ಗಮನಾರ್ಹ. ಬೂತೇನ ಹಳ್ಳಿಯು ಹಳೆಯ, ಮಧ್ಯಕಾಲದ, ಹಾಗೂ ಈಗಿನ ನಿವೇಶನದ ಮೂರು ಸ್ಥಳಗಳನ್ನು ಹೊಂದಿದ್ದು ಮೂರು ಸ್ಥಳಗಳಲ್ಲಿಯೂ ಲೋಹವನ್ನು ಕರಗಿಸಿದ ಕಿಟ್ಟದ ಕಲ್ಲುಗಳು ದೊರೆಯುತ್ತವೆ.(ಈಗ ಇಲ್ಲಿ ಯಾರು ಲೋಹಗಾರರಿಲ್ಲವೆಂಬುದು ಗಮನಾರ್ಹ) ಕಾಸರಗುಪ್ಪೆ ಕಂಚಿನ ಸಂಬಂಧವನ್ನು, ಕುಲುಮೆ ಪಾಳ್ಯ ಲೋಹವನ್ನು ಕರಗಿಸುವ ಸಂಬಂಧವನ್ನೂ, ಕಸವರಹಳ್ಳಿ ಚಿನ್ನದ ಸಂಬಂಧವನ್ನೂ, ವಾಜರಹಳ್ಳಿ ಲೋಹಗಾರರ ನೆಲೆಯನ್ನೂ, ಕಾಳೇಶ್ವರಿ ಲೋಹಗಾರರ ದೈವದ ನೆಲೆಯನ್ನೂ, ರಾಗಿಹಳ್ಳಿ ತಾಮ್ರದ ಸಂಬಂದವನ್ನೂ ಹೊಂದಿವೆ. ಇವೆಲ್ಲದರ ಕೇಂದ್ರವಾಗಿ ಈ ಬನ್ನೇರುಘಟ್ಟವಿತ್ತು. ಹೀಗಾಗಿ ಗಣಿಗಾರರು ಇಲ್ಲಿ ನೆಲೆಸಿದ್ದು ಮುಂದೆ ಬೇರೆ ಬೇರೆ ಕಡೆ ಚದುರಿರಬಹುದು. ಇದು ಮುಖ್ಯವಾಗಿ ಚಿನ್ನದ ಗಣಿಗಾರಿಕೆಯ ಕೇಂದ್ರವಾಗಿತ್ತು ಎಂದು ಅಭಿಪ್ರಾಯ ಪಡುತ್ತಾರೆ.[56]

ಬನ್ನೇರು–ಪೊನ್ನೂರು ಸುವರ್ಣಾವತಿ ಎಂಬುದಾಗಿರಬೇಕು. ಪೊನ್ನೂರು ಎಂಬುದು ಸ್ಪಷ್ಟವಾಗಿ ಚಿನ್ನವನ್ನು ನಿರ್ದೇಶಿಸುತ್ತದೆ. ಸ್ಥಳೀಯರು ಹೇಳುವ ಪ್ರಕಾರ, ಬೆಟ್ಟದ ತಪ್ಪಲಿಗೆ ಹರಿಯುತ್ತಿರುವ ಸುವರ್ಣಾವತಿ ತೀರ್ಥದ ಸುತ್ತಲಿನ ಪ್ರದೇಶದಲ್ಲಿ ಚಿನ್ನದ ಕೆಲಸ ಮಾಡುತ್ತಿದ್ದ ಜನರು ವಾಸವಾಗಿದ್ದು ಈ ಹಳ್ಳೀ/ಊರು ಮುಂಚೆ ಪೊನ್ನೂರು ಎಂದು ಕರೆಯಲ್ಪಡುತ್ತಿತ್ತು. ಜನರು ತಮ್ಮ ಆಡುಮಾತಿನಲ್ಲಿ ಬನ್ನೇರುಘಟ್ಟವಾಗಿಸಿಕೊಂಡಿದ್ದಾರೆ.

ಬನ್ನೇರುಘಟ್ಟವನ್ನು ಬನ್ನಿಯಗಟ್ಟ, ವನ್ನಿಯಗಟ್ಟ, ವರದಾರಾಜ ಪಟ್ಟಣ, ವಹ್ನಿಗಿರಿ, ಬನ್ನೇರುಘಟ್ಟ, ಬನ್ನೂರ ಗಟ್ಟ ಮುಂತಾದ ಹೆಸರುಗಳಿಂದ ಈ ಗ್ರಾಮವು ಪ್ರಸಿದ್ಧವಾಗಿದೆ.

**ಬಿದರುಗೆರೆ:–** ಕ್ರಿ.ಶ.1624ರ ಕಾಲದ ಸುಗುಟೂರು ಅರಸನಾದ ಮುಮ್ಮಡಿ ಚಿಕ್ಕರಾಯ ತಂಮೇಗೌಡನು 'ಬಿದುರುಗೆಱೆ'ಯನ್ನು ಊರಿನ ಗೌಡನಿಗೆ ನೀಡಿದ ಉಲ್ಲೇಖವಿದೆ.[57] ಬಿದರುಗೆರೆ ಹಾಗೂ ಇದರ ಸುತ್ತಮುತ್ತಲ ಪ್ರದೇಶವು ಸುಗುಟೂರು ಅರಸರ ಆಳ್ವಿಕೆಗೆ ಒಳಪಟ್ಟ ಪ್ರದೇಶವಾಗಿತ್ತು. ಇಂದಿನ

ಆನೇಕಲ್ಲು ತಾಲ್ಲೂಕಿಗೆ ಸೇರುವ ಬಿದಿರುಗುಪ್ಪೆಯೇ ಶಾಸನದಲ್ಲಿ 'ಬಿದುರುಗೆರೆ' ಎಂದು ಉಲ್ಲೇಖವಾಗಿದೆ. ನೈಸರ್ಗಿಕ ಹಿನ್ನೆಲೆಯಲ್ಲಿ ಈ ಊರಿಗೆ ಈ ಹೆಸರು ಬಂದಿದೆ. ಸ್ಥಳೀಯರು ಹೇಳುವ ಪ್ರಕಾರ, ಇಲ್ಲಿ ಬಿದುರನ್ನು ಯಥೇಚ್ಚವಾಗಿ ಬೆಳೆಯುತ್ತಿದ್ದು ಇದರ ಮೂಲಕ ಕೊಳಲನ್ನು ತಯಾರಿಸಲಾಗುತ್ತಿತ್ತು. ಹಾಗಾಗಿ ಇದಕ್ಕೆ ಮೊದಲು ವೇಣುಕಾಪುರಿ ಎಂಬ ಹೆಸರಿತ್ತು. ಬಿದರೂರು ಎಂಬುದರ ಸಂಸ್ಕೃತ ರೂಪವೇ ವೇಣುಕಾಪುರಿಯಾಗಿದೆ. ನಂತರ ಕೊಳಲಿನ ತಯಾರಿಕೆ ನಿಂತು ಹೋದದ್ದರಿಂದ ಬಿದುರುಗಳು ಯಥೇಚ್ಚವಾಗಿದ್ದವು ಜನರು ಈ ಪ್ರದೇಶವನ್ನು ಬಿದುರುಗುಪ್ಪೆ ಎನ್ನಲು ಪ್ರಾರಂಭಿಸಿದರು. ಜನರು ವಾಸಮಾಡಲು ಪ್ರಾರಂಭ ಮಾಡಿದ್ದರಿಂದ ಬಿದುರುಗಳು ನಾಶವಾಗಿ ಹೋದವು ಎಂಬ ಅಭಿಪ್ರಾಯವಿದೆ.

**ಬಿದಿರ್ಕ್ಕಲ್:–** ಈ ಬಿದಿರ್ಕ್ಕಲ್ ಗ್ರಾಮವು ಇಂದಿನ ಬೆಂಗಳೂರು–ನೆಲಮಂಗಲ ದಾರಿಯಲ್ಲಿರುವ ದೊಡ್ಡಬಿದರ್ ಕಲ್ಲು ಗ್ರಾಮವೇ ಆಗಿದ್ದು, ಈಗ ಈ ಬಿದಿರ್ಕ್ಕಲ್ ಗ್ರಾಮವು ದೊಡ್ಡಬಿದಿರಕಲ್ಲು ಹಾಗೂ ಚಿಕ್ಕ ಬಿದರಕಲ್ ಎಂದು ಎರಡಾಗಿ ಒಡೆದುಕೊಂಡಿದೆ. ಕ್ರಿ.ಶ.750 ಗಂಗರ ದೊರೆ ಶ್ರೀ ಪುರುಷನ ಕಾಲದ ದಾಸರಹಳ್ಳಿಯ ವೀರಗಲ್ಲಿನ ಶಾಸನವೊಂದರಲ್ಲಿ[58] ಕರಿಕನಾಡಿನಲ್ಲಿರುವ ಬಿದಿರ್ಕ್ಕಲ್ಲನ್ನು ಕುಕ್ಕರ ಎಂಬುವನು ಆಳುತ್ತಿದ್ದು ಈತ 'ಪೊಲೆತ್ತಾಳ್ವೊರೆನ್ನ' ಎಂಬ ಪಾಳೆಗಾರರೊಂದಿಗಿನ ಹೋರಾಟದಲ್ಲಿ ಸಾವನ್ನಪ್ಪುತ್ತಾನೆ ಎಂಬ ವಿಷಯ ಈ ಶಾಸನದಿಂದ ತಿಳಿಯುತ್ತದೆ.

**ಬೊಮ್ಮನಹಳ್ಳಿ:–** ಕ್ರಿ.ಶ.1430ರ ಶಾಸನದ ಪ್ರಕಾರ ಕುಕ್ಕಲ ನಾಡಿನ ರಾಜ ಬುಕ್ಕನಾಯಕನು ಬೊಂಮಹಳ್ಳಿಯನ್ನು ಕೊಡುಗೆಯಾಗಿ ಅಗ್ರಹಾರಕ್ಕೆ ನೀಡಿದ್ದಾನೆ.[59] ಬೊಂಮ>ಬೊಮ್ಮವಾಗಿ ಮಾರ್ಪಟ್ಟಿದೆ. ಈ ಊರಿಗೆ ಕೆಲವು ಆಂಧ್ರದ ನಿವಾಸಿಗಳು ವಲಸೆ ಬಂದರು. ಇವರು ಮೂಲತಃ ಬೊಂಬೆ ತಯಾರಿ ಮಾಡುವ ವೃತ್ತಿಯವರು. ಈ ಪ್ರದೇಶದಲ್ಲಿ ಬೊಂಬೆ ವ್ಯಾಪಾರವನ್ನು ಪ್ರಾರಂಭಿಸಿದರು. ತೆಲುಗಿನಲ್ಲಿ ಬೊಂಬೆ ಎಂದರೆ ಗೊಂಬೆ ಎಂಬ ಅರ್ಥವಿದೆ. ಹೀಗೆ ಈ ಊರಿಗೆ ಬೊಮ್ಮನ ಹಳ್ಳಿ ಎಂಬ ಹೆಸರಾಯಿತು ಎಂದು ಸ್ಥಳೀಯರ ಅಭಿಪ್ರಾಯ. ಬ್ರಹ್ಮಸಮುದ್ರ>ಬೊಮ್ಮಸಂದ್ರ ಆಗಿರುವ ಸಾಧ್ಯತೆಯಿದೆ. ಜೈನಧರ್ಮದ ಬ್ರಹ್ಮಯಕ್ಷನ ಹೆಸರಿನಲ್ಲಿ ಬ್ರಹ್ಮಸಮುದ್ರ ಎಂಬ ಕೆರೆ ನಿರ್ಮಾಣ ಆಗಿರಬಹುದು. ಈ ಶಾಸನ ಸಿಕ್ಕ ಸ್ಥಳವಾದ ದೊಡ್ಡಬೊಮ್ಮಸಂದ್ರವೇ ಈ ಶಾಸನೋಕ್ತ ಬೊಮ್ಮನ ಹಳ್ಳಿಯಾಗಿದೆ.

**ಬೇಗೂರು:–** ಗಂಗರ ಕಾಲಕ್ಕಾಗಲೇ ಆಡಳಿತ ಕೇಂದ್ರವಾಗಿದ್ದ ಬೇಗೂರು ಎಂಬ ಸ್ಥಳವು ಶಾಸನಗಳಲ್ಲಿ 'ಬೆಂಪೂರು',[60] 'ಬೇಹೂರು',[61] 'ವೆಪ್ಪೂರು'[62] ಎಂಬ ಹಲವಾರು ಹೆಸರುಗಳಿಂದ ಕಾಲದಿಂದ ಕಾಲಕ್ಕೆ

ಬದಲಾಗುತ್ತಾ ಬಂದಿದೆ. ತಮಿಳು ಶಾಸನಗಳು ವೆಪ್ಪೂರು, ವೇಯೂರು[63] ಎಂದು ಉಲ್ಲೇಖಿಸುತ್ತವೆ. ತಮಿಳು ಭಾಷಿಕರು 'ಬ' ಕಾರವನ್ನು 'ವ' ಕಾರವಾಗಿಸಿಕೊಂಡಿದ್ದಾರೆ. ಸ್ಥಳೀಯರು ಹೇಳುವ ಪ್ರಕಾರ ಈ ಪ್ರದೇಶವು ಹೆಚ್ಚಾಗಿ ಬೇವಿನ ಮರಗಳಿಂದ ಕೂಡಿದ್ದರ ಪರಿಣಾಮ ಈ ಊರಿಗೆ ಬೇವೂರು ಎಂದು ಕರೆಯಲಾಗುತ್ತಿತ್ತು ಎಂಬ ಪ್ರತೀತಿಯೂ ಇದೆ. ಬೆಂಪೂರು>ವೆಪ್ಪೂರು>ವೇಹೂರು ಭಾಷಾವಿಜ್ಞಾನದ ಹಿನ್ನೆಲೆಯಲ್ಲಿ ಕ್ರಮೇಣ ಬೇಗೂರು ಆಗಿದೆ.

**ಬೆಂಗಳೂರು:–** ಬೆಂಗಳೂರಿನ ಸ್ಥಳನಾಮದ ನಿಷ್ಪತ್ತಿಯನ್ನು ಮೊದಲ ಅಧ್ಯಾಯವಾದ 'ಚಾರಿತ್ರಿಕ ಅಧ್ಯಯನ'ದ 'ಬೆಂಗಳೂರಿನ ಪ್ರಾಚೀನತೆ' ಎಂಬ ಉಪವಿಭಾಗದಲ್ಲಿ ಇದಾಗಲೇ ಚರ್ಚಿಸಿರುತ್ತೇನೆ. ಆದ್ದರಿಂದ ಈ ಅಧ್ಯಾಯದಲ್ಲಿ ಬೆಂಗಳೂರು ಸ್ಥಳನಾಮವನ್ನು ವಿವರಿಸಿಲ್ಲ.

**ಮಲ್ಲೇಶ್ವರಂ:–** ಬೆಂಗಳೂರು ನಗರದ ಪ್ರತಿಷ್ಠಿತ ಬಡಾವಣೆಯಲ್ಲಿ ಒಂದಾದ ಮಲ್ಲೇಶ್ವರಂ ಪ್ರಾಚೀನ ಕಾಡುಮಲ್ಲಿಕಾರ್ಜುನ ದೇವಾಲಯಕ್ಕೆ ಪ್ರಸಿದ್ಧವಾಗಿದೆ. ಈ ಬಡಾವಣೆ ರೂಪುಗೊಳ್ಳುವುದಕ್ಕೂ ಮೊದಲೇ ಮಲ್ಲಪುರ ಎಂಬ ಸ್ಥಳವಿತ್ತು. ಮರಾಠ ದೊರೆ ಷಹಜಿಯ ಮಗನಾದ ವೆಂಕೋಜಿಯು ಬೆಂಗಳೂರು ಮಹಾನಾಡಿನ ಒಳಗಿರುವ ಮಲ್ಲಪುರದ ಮಲ್ಲಿಕಾರ್ಜುನದೇವರ ದೇವಮಾನ್ಯಕ್ಕೆಂದು ಮೇದರನಿಂಗನ ಹಳ್ಳಿಯನ್ನು ದಾನವಾಗಿ ನೀಡಿದನು ಎಂಬ ವಿಷಯ ಕಾಡುಮಲ್ಲಿಕಾರ್ಜುನ ಗುಡಿಯಲ್ಲಿನ ಬಂಡೆಯ ಮೇಲೆ ದೊರೆತ ಶಾಸನದಿಂದ ತಿಳಿದು ಬರುತ್ತದೆ.[64] ಈ ಮೇದಾರನಿಂಗನ ಹಳ್ಳಿಯು ಮಲ್ಲಪುರದ ಒಂದು ಭಾಗವಾಗಿದ್ದಿರಬಹುದು. ಮಲ್ಲಿಕಾರ್ಜುನ ದೇವಾಲಯವಿದ್ದ ಪ್ರದೇಶ ಮಲ್ಲಪುರ ಎಂದಾಗಿದ್ದು ಕ್ರಮೇಣ ಅದೇ ಮಲ್ಲೇಶ್ವರವಾಗಿದೆ.

**ಮುತ್ಯಾಲ ಪೇಟೆ:–** ಚಿಕ್ಕಪೇಟೆಯಲ್ಲಿರುವ ರಂಗನಾಥಸ್ವಾಮಿ ಗುಡಿ ಬೀದಿಯನ್ನು ಶಾಸನದಲ್ಲಿ 'ಮುತ್ಯಾಲಪೇಟೆ' ಎಂದು ಕರೆಯಲಾಗಿದೆ.[65] ಮುತ್ಯಾಲಪೇಟೆ–ಮುತ್ತು+ಯಾಲ? (ಮುತ್ತುರತ್ನ). ಈ ಪ್ರದೇಶವು ವ್ಯಾಪರ ಕೇಂದ್ರವಾಗಿತ್ತು. ಇಂದಿಗೂ ಈ ಪ್ರದೇಶವು ಸದಾ ವ್ಯಾಪಾರ ವಹಿವಾಟಿನಿಂದ ಕೂಡಿರುವ ಸ್ಥಳವಾಗಿದೆ.

**ಮೇಡನಹಳ್ಳಿ:–** ಮೇಡಿಹಳ್ಳಿಯಲ್ಲಿ ಶಾಸನ ಮತ್ತು ವೀರಗಲ್ಲುಗಳು ದೊರಕಿವೆ.[66] ಈ ಮೇಡಿಹಳ್ಳಿ ಬೆಂಗಳೂರು ಪೂರ್ವ ತಾಲ್ಲೂಕು ಕೃಷ್ಣರಾಜಪುರದಿಂದ ಹೊಸಕೋಟೆ ಮಾರ್ಗದಲ್ಲಿ ಕಾಣಸಿಗುತ್ತದೆ. 'ಮೇಡಹಳ್ಳಿ' ಸಸ್ಯಸಂಬಂಧಿ ಸ್ಥಳನಾಮವಾಗಿದೆ. 'ಮೇದೆ' ಔಷಧಕ್ಕೆ ಬಳಕೆಯಾಗುವ ಶುಂಠಿಯನ್ನು ಹೋಲುವ ಒಂದು ಬಗೆಯ ಬೇರು. 'ಮೇದೆ ಗಿಡಗಳು' ಈ ಪ್ರದೇಶದಲ್ಲಿ ಹೆಚ್ಚಾಗಿರುವುದರಿಂದ ಮೇದಹಳ್ಳಿ ಎಂತಲೂ ಕ್ರಮೇಣವಾಗಿ ಮೇಡೆಹಳ್ಳಿ ಆಗಿರುವ ಸಾಧ್ಯತೆಗಳಿವೆ.

**ಯಲಹಂಕ:–** ಪ್ರಸ್ತುತ ಯಲಹಂಕ ಪ್ರದೇಶವು ಬೆಂಗಳೂರು ಉತ್ತರ ತಾಲ್ಲೂಕಿನ ಮುಖ್ಯ ಸ್ಥಳವಾಗಿದೆ. ಬೆಂಗಳೂರಿನಿಂದ 14 ಕಿ.ಮೀ. ಅಂತರದಲ್ಲಿರುವ ಹೋಬಳಿ ಕೇಂದ್ರವಾಗಿದೆ. ಸುಮಾರು 65ಕ್ಕೂ ಹೆಚ್ಚಿನ ಶಾಸನಗಳಲ್ಲಿ ಯಲಹಂಕನಾಡಿನ ಉಲ್ಲೇಖಗಳಿವೆ. ಇಂದಿನ ಯಲಹಂಕವು ಮೊದಲು ಚೋಳರ ಆಳ್ವಿಕೆಗೂ, ನಂತರ ಹೊಯ್ಸಳರ ತೆಕ್ಕೆಗೂ, ಮುಂದೆ ವಿಜಯನಗರ ಅರಸರ ಆಡಳಿತಕ್ಕೆ ಒಳಪಟ್ಟಿತ್ತು ಎಂದು ಶಾಸನಗಳಿಂದ ಧೃಡಪಡುತ್ತದೆ. ವಿಜಯನಗರ ಅರಸರ ಸಾಮಂತ ಅಧಿಕಾರಿಯಾದ ನಾಡಪ್ರಭುಗಳ ಹೆಸರಿನೊಂದಿಗೆ ಯಲಹಂಕ ಎಂಬ ನಾಮ ಸೇರಿ 'ಯಲಹಂಕ ನಾಡಪ್ರಭು'ಗಳೆಂದೇ ಪ್ರಸಿದ್ಧಿಯನ್ನು ಪಡೆದಿದ್ದಾರೆ.

ಚೋಳರ ಆಳ್ವಿಕೆಯ ಕಾಲದಲ್ಲಿ 'ಇಲೈಪಾಕ್ಕನಾಡು'[67] ಎಂದೂ, ಕ್ರಿ.ಶ.1328ರ ದೊಮ್ಮಲೂರು ಶಾಸನದಲ್ಲಿ 'ಎಲಹಕ್ಕನಾಡು'[68] ಎಂಬ ಉಲ್ಲೇಖವಿದೆ. 'ಯಲಹಂಕ ಪ್ರದೇಶವು 'ನಾಡು' ಎಂಬ ಆಡಳಿತ ಘಟಕವಾಗಿ ಸುಮಾರು 12ನೇ ಶತಮಾನಕ್ಕಾಗಲೇ ಅಸ್ತಿತ್ವದಲ್ಲಿತ್ತು. ಮುಂದೆ ಅದನ್ನು ಆಳ್ವಿಕೆ ನಡೆಸಿದ ಕೆಂಪೇಗೌಡನ ವಂಶಸ್ಥರು ಯಲಹಂಕ ನಾಡಪ್ರಭುಗಳೆಂದೇ ಪ್ರಖ್ಯಾತಿಯನ್ನು ಹೊಂದಿದ್ದರು.

ಪ್ರಾರಂಭದ ಶಾಸನಗಳಲ್ಲಿ 'ಎಲವಂಕನಾಡು', 'ಎಲಹಕ್ಕನಾಡು' ಎಂಬ ಉಲ್ಲೇಖವಿದೆ. ಆನಂತರದ ಶಾಸನಗಳಲ್ಲಿ 'ಎ' ಕಾರವು 'ಯ' ಕಾರವಾಗಿ ಯಲಹಂಕನಾಡಾಗಿ ಬದಲಾಗಿದೆ.

ಕನ್ನಡ ಶಾಸನಗಳಲ್ಲಿ ಎಲಹಕ, ಎಲವಕ, ಎಲಹಕ್ಕ, ಯಲಹಕ್ಕ, ಯೆಲಹಕ, ಎಲಹ್ಕ, ಎಲಹಂಕ, ಯಲಹಂಕ ಯಲವಂಕ ಇತ್ಯಾದಿ ರೂಪಗಳು ಕಂಡುಬರುತ್ತದೆ.

ಎಲವ–ಬೂರಗದ ಮರ(ಶಾಲ್ಮಲೀ ವೃಕ್ಷ), ಹಕ್ಕೆ–ವಿಶ್ರಾಂತಿ ಸ್ಥಾನ, ಹಟ್ಟಿ, ಆಶ್ರಯ ಎಂಬ ಅರ್ಥವಿದೆ. ಹಾಗಾಗಿ ಬೂರುಗದ ಮರದ ಸಾಮೀಪ್ಯದ ಹಿನ್ನೆಲೆಯಲ್ಲಿ ಈ ಊರಿನ ಹೆಸರು ಹುಟ್ಟಿರಬೇಕೆಂದು ಕೆಲವು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.

ಇಲೈ ಎಂದರೆ 'ಎಲೆ' ಎಂದರ್ಥ. 'ಪಾಕ್ಕ' ಎಂದರೆ 'ಅಡಿಕೆ' ಎಂದರ್ಥ. ಎಲೆ ಅಡಿಕೆ ಹೆಚ್ಚಾಗಿ ಬೆಳೆಯುತ್ತಿದ್ದ ಪ್ರದೇಶವೇ 'ಇಲೈಪಾಕ್ಕ ನಾಡು' ಎಂಬ ಹೆಸರನ್ನು ಪಡೆದುಕೊಂಡು ಮುಂದೆ ಯಲಹಂಕ ನಾಡು ಎಂಬ ರೂಪವನ್ನು ಹೊಂದಿದೆ.

**ರಾಜಪುರ:–** ಇಂದಿನ ಆನೇಕಲ್ಲು ತಾಲೂಕಿಗೆ ಸೇರುವ ರಾಜಪುರ ಎಂಬ ಗ್ರಾಮದಲ್ಲಿ ದೊರೆತ ಶಾಸನವು ರಾಜಪುರ ಎಂಬ ಸ್ಥಳವನ್ನು ಉಲ್ಲೇಖಿಸಿದೆ. ಶಾಸನದಲ್ಲಿ 'ಚಂನಪಹಳ್ಳಿಯನು ಯಿಂಮಡಿರಾಜಾಪುರದ ದೇವರ ಸಿವಜೆಯ ಮಾಡಿಕೊಂಡು' ಎಂಬ ಉಲ್ಲೇಖವಿದೆ.[69] ಈ

ಪ್ರದೇಶವನ್ನು ಮೊದಲು ರಾಜನ ಹೆಸರಿನ ಹಿನ್ನೆಲೆಯಲ್ಲಿ 'ಇಮ್ಮಡಿ ರಾಜಪುರ' ಎಂದು ಕರೆಯಲಾಗುತ್ತಿರಬಹುದು. ನಂತರ ಇಮ್ಮಡಿ ಬಿಟ್ಟು ಹೋಗಿ ರಾಜಪುರ ಮಾತ್ರ ಜನರ ಬಾಯಲ್ಲಿ ಈಗಲೂ ಉಳಿದುಕೊಂಡು ಬಂದಿದೆ.

ಸ್ಥಳೀಯರು ಹೇಳುವ ಪ್ರಕಾರ, ಶ್ರೀ ರಾಜೇಶ್ವರ ಶಿವಾಚಾರ್ಯರು ತಮಿಳುನಾಡಿನ ಹೊಸೂರು ಬಳಿಯ ಶ್ರೀ ಚೂಡೇಶ್ವರ ಸ್ವಾಮಿ ಬೆಟ್ಟದ ಕ್ಷೇತ್ರದಲ್ಲಿ ತಪಸ್ಸು ಆಚರಿಸುತ್ತಿದ್ದರು. ಅಲ್ಲಿನ ರಾಜ ಚೂಡೇಶ್ವರ ದೇವಾಲಯದ ರಾಜ ಗೋಪುರವನ್ನು ನಿರ್ಮಾಣ ಮಾಡುವಾಗ ಅದು ಪದೇ ಪದೇ ಬೀಳತೊಡಗಿತ್ತು. ಆಗ ರಾಜನು ಶ್ರೀಗಳ ಮಾರ್ಗದರ್ಶನದಂತೆ ರಾಜಪುರ ವೀರಧರ್ಮ ಸಿಂಹಾಸನ ಮಠದಲ್ಲಿ ವಿಶಾಲವಾದ ಹಜಾರವನ್ನು ಒಂದೇ ರಾತ್ರಿ ಕಟ್ಟಿಸಿದಾಗ ಗೋಪುರ ಬೀಳಲಿಲ್ಲ. ಅಂದಿನಿಂದ ಶ್ರೀಗಳು ಮಠದ ಶಿಷ್ಯರಾಗಿ ನಡೆದುಕೊಂಡ ಕಾರಣ ಈ ಗ್ರಾಮ ರಾಜೇಶ್ವರಪುರ> ರಾಜಪುರವಾಯಿತೆಂಬ ಅಭಿಪ್ರಾಯವಿದೆ.

**ವರ್ತೂರು:–** ಕ್ರಿ.ಶ.1578ರ ಕೆಂಪೇಗೌಡರ ಮಾಸ್ತಿ ತಾಮ್ರಶಾಸನವು 'ವೊರತೂರು' ಎಂದು ಉಲ್ಲೇಖಿಸುತ್ತದೆ. ಈ ವೊರತೂರು ಇಂದಿನ ವರ್ತೂರೇ ಆಗಿದೆ. ಬೆಂಗಳೂರು ಸೀಮೆಗೆ ಸೇರಿದ ವೊರತೂರು ಹೋಬಳಿಯನ್ನು ಹಿರಿಯ ಕೆಂಪೇಗೌಡರು ಶಿವಗಂಗೆಯ ದೇವಾಲಯಕ್ಕೆ ನೀಡಿದ ಗ್ರಾಮಗಳಲ್ಲಿ ಒಂದಾಗಿದೆ. ಇದರ ಜೊತೆ ಸೋರುಹುಣಿಸೆ ಮತ್ತು ಹಾರೋಹಳ್ಳಿಯನ್ನು ದಾನ ನೀಡಿದ ಉಲ್ಲೇಖ ಸಿಗುತ್ತದೆ.[70]

**ವಿಭೂತಿಪುರ:–** 'ಪುರ' ಎಂದು ಅಂತ್ಯವಾಗಿ ಹೆಸರುಳ್ಳ ಗ್ರಾಮಗಳ ಸಂಖ್ಯೆ ಬೆಂಗಳೂರಿನ ಸುತ್ತಮುತ್ತ ಬಹುಹಿಂದೆ ಅಪಾರವಾಗಿದ್ದವು. ಇಪ್ಪತ್ತನೆಯ ಶತಮಾನದ ಆರಂಭದ ವೇಳೆಗೆ ಬೆಂಗಳೂರು ತಾಲ್ಲೂಕು ಒಂದರಲ್ಲೆ ಎಪ್ಪತ್ತನಾಲ್ಕು ಪುರಗಳಿದ್ದವು.[71] ವಿಭೂತಿಪುರದ ಮಠದ ಆವರಣಕ್ಕೆ ಹೊಂದಿಕೊಂಡಂತೆ ಒಂದು ತಮಿಳು ಶಾಸನವಿದೆ.[72] ಈ ಶಾಸನ ಭಾಗದ ಮುಖ್ಯ ಅಂಶಗಳೆಂದರೆ "ಹೊಯ್ಸಳ ವೀರಬಲ್ಲಾಳನ ಆಳ್ವಿಕೆಯಲ್ಲಿ ಮಾಸಂದಿನಾಡಿಗೆ ಒಳಪಟ್ಟ ಚಂಬಿದೇವರು, ವಿಲ್ಲಗಾಮುಂಡರ್, ಚಂದಗಾಮುಂಡರ್, ವೆಪ್ಪುರನ್ ಇವರುಗಳೆಲ್ಲಾ ಸೇರಿ ಪ್ಲಮಗ ಸಂವತ್ಸರ(ಕ್ರಿ.ಶ.1187) ದಲ್ಲಿ ವಾಚ್ಚಿದೇವರ ಪುರವೆಂಬ ಊರನ್ನು ಕಟ್ಟಿ ಆ ಊರಿನ ಸುತ್ತಮುತ್ತಲೂ ಇದ್ದ ತೋಟ, ಗದ್ದೆ, ಹೊಲಗಳನ್ನೆಲ್ಲಾ ವಾಚ್ಚಿದೇವರು ಎಂಬುವರಿಗೆ ಸರ್ವಮಾನ್ಯವಾಗಿ ನೀಡಿದ್ದರು" ಎಂದಿದೆ. ಈ ಶಾಸನದಲ್ಲಿ ಉಲ್ಲೇಖವಾಗಿರುವ ವಾಚ್ಚಿದೇವಪುರವೇ ವಿಭೂತಿಪುರವಾಗಿ ಬದಲಾಗಿರಬೇಕೆಂದು ಊಹಿಸಬಹುದು.

ಒಂದು ದಂತಕಥೆಯ ಪ್ರಕಾರ, ಒಮ್ಮೆ ಇಲ್ಲಿನ ಮಠಾಧಿಪತಿಗಳೊಬ್ಬರು ವಿಭೂತಿ ಕಾಯಕದವರಾಗಿದ್ದರಂತೆ. ಒಂದು ದಿನ ಅವರು ಮಧ್ಯಾಹ್ನದವರೆಗೂ ತಮ್ಮ ಕಾಯಕವನ್ನು ಮಾಡಿ ಅನಂತರ ಸ್ನಾನ ಪೂಜಾದಿಗಳಿಗೆ ನಿರ್ಗಮಿಸಿದ್ದರಂತೆ. ಹೊತ್ತಿಳಿಯುವ ಸಮಯವಾಗಿ ಪೂಜೆಯಿಂದ ಹೊರಬಂದಾಗ ಭಾರಿ ಮಳೆಯೇ ಬಂದು ಬಿಟ್ಟಿತಂತೆ. ಇತ್ತ ಮಾಡಿಟ್ಟಿದ್ದ ವಿಭೂತಿಯ ಗಟ್ಟಿಗಳೆಲ್ಲಾ ಕರಗಿ ಹೋಗಿರಬೇಕೆಂದು ಗುರುಗಳು ಬಂದು ನೋಡಿದಾಗ, ಅವು ತೊಳೆದ ಮುತ್ತಿನಂತೆ ಹಾಗೇ ಕಂಗೊಳಿಸುತ್ತಿದ್ದವಂತೆ. ಅಂದಿನಿಂದಲೂ ಈ ಸ್ಥಳಕ್ಕೆ 'ವಿಭೂತಿಪುರ'ವೆಂಬ ಹೆಸರು ಬಂದಿರುವುದಾಗಿ ಸ್ಥಳೀಯರ ಅಭಿಪ್ರಾಯ.

**ವೊಸವೂರು:–** ಗಂಗ ದೊರೆ ಶ್ರೀಪುರುಷನ ಕಾಲದ ಶಾಸನದಲ್ಲಿ 'ವೊಸಊರು' ಪ್ರದೇಶದ ಉಲ್ಲೇಖ ಸಿಗುತ್ತದೆ. ಇದು ವೊಸಊರಿನ ಕಾವಲುಗಾರ ಮಾರಯ್ಯನೆಂಬುವನು ಈ ಊರನ್ನು ಕಾಯುವ ಸಂದರ್ಭದಲ್ಲಿ ಸಾವನ್ನಪ್ಪುತ್ತಾನೆ ಎಂಬ ವಿಷಯವನ್ನು ತಿಳಿಸುವ ಊರಳಿವಿನ ಶಾಸನವಾಗಿದೆ.[73] ಶ್ರೀಪುರುಷನು ಹೊಸ ಊರೊಂದನ್ನು ನಿರ್ಮಿಸಿ ಆ ಊರಿಗೆ ಹೊಸೂರು ಎಂಬ ಹೆಸರು ಬಂದಿರಬಹುದು. ಹೊಯ್ಸಳರ ಕಾಲಕ್ಕಾಗಲೇ ಹೊಸೂರು ಆಗಿರುವುದು ತಿಳಿಯುತ್ತದೆ.[74]

**ವಾಜರಹಳ್ಳಿ:–** ಕ್ರಿ.ಶ.1764ರ ಮೈಸೂರು ಅರಸರ ಶಾಸನದಲ್ಲಿ ವಾಜರಹಳ್ಳಿಯ ಉಲ್ಲೇಖವಿದೆ.[75] ಆನೇಕಲ್ಲು ತಾಲ್ಲೂಕಿನ ಬನ್ನೇರುಘಟ್ಟದ ನೈರುತ್ಯಕ್ಕೆ ವಾಜರಹಳ್ಳಿ ಇದೆ. ಓಜರು(ವಾಜರು) ಕಬ್ಬಿಣ/ಚಿನ್ನದ ಕೆಲಸ ಮಾಡುವ ಆಚಾರಿಗಳು ವಾಸಿಸುವ ಹಳ್ಳಿಯೇ ವಾಜರಹಳ್ಳಿಯಾಗಿದೆ.

**ಸರ್ಜಾಪುರ:–** ಸುಗಟೂರು ಪಾಳೇಗಾರರು ಹೊಸಕೋಟೆಯನ್ನು ಆಡಳಿತಕ್ಕಾಗಿ ಸ್ಥಾಪಿಸಿಕೊಂಡಾಗ ಸರ್ಜಾಪುರವು ಇವರ ಅಧೀನದಲ್ಲಿತ್ತು. ಇಂದು ಈ ಸ್ಥಳ ಆನೇಕಲ್ಲು ತಾಲ್ಲೂಕಿಗೆ ಸೇರ್ಪಡೆಯಾಗಿದೆ. ಮೈಸೂರು ಕೃಷ್ಣರಾಜ ಒಡೆಯರು ಸರ್ಜಾಪುರದ ಪೇಟೆಯಲ್ಲಿರುವ ಶ್ರೀ ಕೋದಂಡ ರಾಮಸ್ವಾಮಿ ಶ್ರೀ ಪ್ರಸನ್ನ ಆಂಜನೇಯ ಸ್ವಾಮಿಯವರಿಗೆ ಸರ್ಜಾಪುರದಲ್ಲಿರುವ ಪದ್ಮಸಾಲೆಯವರು ಪಡಸಾಲೆಯವರು ರಂಗಯ್ಯಸಂಜೀವಯ್ಯ ಮುಂತಾದವರು ಬರೆಸಿಕೊಟ್ಟ ದಾನಶಾಸನದಲ್ಲಿ ಈ ಸ್ಥಳದ ಹೆಸರು ಬಂದಿದೆ.[76] ಸಜ್ಜಪ್ಪನಾಯಕನೆಂಬ ಪಾಳೇಗಾರ ಆಳುತ್ತಿದ್ದರಿಂದ ಸರ್ಜಾಪುರವೆಂದು ಹೆಸರು ಬಂತು ಎಂಬುದು ಇಲ್ಲಿನ ಸ್ಥಳೀಯರ ಅಭಿಪ್ರಾಯವಾಗಿದೆ. ಇಂದಿಗೂ ಈ ಪ್ರದೇಶವನ್ನು ಸರ್ಜಾಪುರವೆಂದೇ ಕರೆಯಲಾಗುತ್ತದೆ.

**ಸಾರಕ್ಕಿ:–** ಬೆಂಗಳೂರು ನಗರದ ಜೆ.ಪಿ.ನಗರ ಬಡಾವಣೆಯ ಹಿಂದಿನ ಹೆಸರು ಸಾರಕ್ಕಿ. ಗಂಗರ ಕಾಲದಲ್ಲಿ ಈ 'ಸಾರಕ್ಕಿ' ಪ್ರದೇಶವು ಬೆಂಪೂರು 12ರ ಒಂದು ಗ್ರಾಮವಾಗಿತ್ತು.[77] ಹಾಗಾಗಿ ಕ್ರಿ.ಶ.890ರ

ಹೊತ್ತಿಗಾಗಲೇ ಈ ಸ್ಥಳ ಅಸ್ತಿತ್ವದಲ್ಲಿತ್ತು. ಈ ಶಾಸನದಲ್ಲಿ ಸಾರಕ್ಕಿ ಎಂಬ ಸ್ಥಳನಾಮವನ್ನು ಸಾರಮು ಎಂದು ಹೆಸರಿಸಲಾಗಿದೆ. ಈ ಪ್ರದೇಶದಲ್ಲಿ ಹೇರಳವಾದ ಜಿಂಕೆಗಳಿದ್ದಿದ್ದರಿಂದ ಈ ಪ್ರದೇಶವನ್ನು ಪ್ರಾಚೀನ ಕಾಲದಲ್ಲಿ 'ಸಾರಂಗರಾಮ ಪಟ್ಟಣ' ಎಂದು ಕರೆಯಲಾಗುತ್ತಿತ್ತು. ಆನಂತರದಲ್ಲಿ ಜನರ ಮಾತಿನಲ್ಲಿ ಸಾರಮು ಆಗಿ ಇಂದು ಸಾರಕ್ಕಿಯಾಗಿ ರೂಪುಗೊಂಡಿದೆ.

**ಸಿಂಗಾಪುರ:–** ಕ್ರಿ.ಶ.1524ರ ಚಿಕ್ಕಬೆಟ್ಟಹಳ್ಳಿಯ ಶಾಸನದಲ್ಲಿ[78] ಸಿಂಗಾಪುರದ ಉಲ್ಲೇಖವಿದೆ. ಕ್ರಿ.ಶ.1530ರ ವಿಜಯನಗರ ಅರಸರ ಕಾಲಕ್ಕೆ ಸೇರುವ ಮತ್ತೊಂದು ಶಾಸನದಲ್ಲೂ 'ಸಿಂಗಾಪುರ' ಎಂಬ ಸ್ಥಳದ ಉಲ್ಲೇಖವಿದೆ.[79] ವಿಜಯನಗರದ ದೊರೆ ಕೃಷ್ಣದೇವರಾಯನ ಕಾಲದಲ್ಲಿ ಸಿಂಗಪ್ಪನಾಯಕನೆಂಬುವನು ಈ ಪ್ರದೇಶವನ್ನು ಆಳ್ವಿಕೆ ನಡೆಸುತ್ತಿದ್ದನು. ಹಾಗಾಗಿ ಈ ಪ್ರದೇಶವನ್ನು ಸಿಂಗಾಪುರ ಎಂದು ಕರೆದಿರಬಹುದು.

**ಸುಂಕೇನಹಳ್ಳಿ:–** ಬಸವನಗುಡಿಯ ಪ್ರಾಚೀನ ಹೆಸರು ಸುಂಕೇನಹಳ್ಳಿ. ಇದು ಕರಿಬೆಟ್ಟ ದಿಣ್ಣೆಗಳಿಂದ ಕೂಡಿರುವ ಚಿಕ್ಕ ಹಳ್ಳಿಯಾಗಿತ್ತು. ಗವಿಪುರದ ಪಕ್ಕದಲ್ಲಿ ಹಾಗೂ ಬೆಂಗಳೂರು ಕೋಟೆಯ ದಕ್ಷಿಣದ ದಿಕ್ಕಿನಲ್ಲಿದೆ. ಇಂದಿನ ಬಸವನಗುಡಿ ನರಸಿಂಹರಾಜ ಕಾಲೋನಿ ಪ್ರದೇಶವೆಲ್ಲಾ ಈ ಸುಂಕೇನಳ್ಳಿಯ ಒಳಗಡೆ ಸೇರಿತ್ತು. ಇದು ಸುಂಕವನ್ನು ವಸೂಲಿ ಮಾಡುತ್ತಿದ್ದ ಪ್ರದೇಶವಾಗಿದ್ದರಿಂದ ಈ ಹೆಸರು ಬಂದಿರಬಹದು. ತದನಂತರ ವಿಜಯನಗರ ಅರಸರ ಕಾಲದಲ್ಲಿ ನಿರ್ಮಾಣವಾದ ಬಸವನ ಬೃಹತ್ ವಿಗ್ರಹವು ಪ್ರಸಿದ್ಧಿಯನ್ನು ಪಡೆದು ಈ ಪ್ರದೇಶವು ಬಸವನಗುಡಿ ಪ್ರದೇಶವಾಗಿದೆ. ಪ್ರಸ್ತುತ ಆಂಗ್ಲೀಕರಣಗೊಂಡು ಬುಲ್‌ಟೆಂಪಲ್ ರೋಡ್ ಆಗಿರುವುದನ್ನು ಗಮನಿಸಬಹುದು. ಸುಂಕೇನಹಳ್ಳಿ>ಬಸವನಹಳ್ಳಿ>ಬಸವನಗುಡಿ>Bulltemple road ಆಗಿ ಆಂಗ್ಲೀಕರಣಕ್ಕೆ ಒಳಗಾಗಿದೆ.

**ಹಲಸೂರು:–** ಬೆಂಗಳೂರಿಗೆ ಸೇರಿರುವ ಹಲಸೂರು ಪ್ರದೇಶವು ಸೋಮೇಶ್ವರನ ದೇವಸ್ಥಾನಕ್ಕೆ ಪ್ರಸಿದ್ಧವಾಗಿದೆ. ಇಂದಿಗೂ ಹಲಸೂರು ಸೋಮೇಶ್ವರನ ಪಲ್ಲಕ್ಕಿ ಉತ್ಸವ ನಡೆಸಲಾಗುತ್ತದೆ. ಕ್ರಿ.ಶ.1327ರ ಮೂರನೇ ಬಲ್ಲಾಳನ ಕಾಲದ ಶಾಸನದಲ್ಲಿ 'ಹಲಸೂರು' ಹೆಸರಿನ ಉಲ್ಲೇಖ ದೊರೆಯುತ್ತದೆ.[80] ಮೂರನೇ ಬಲ್ಲಾಳನ ಆಳ್ವಿಕೆಯಲ್ಲಿ ಯಲಹಂಕನಾಡನ್ನು ಆಳುತ್ತಿದ್ದ ಮಯಿಲೇಗೌಡ ಸಹೋದರರಿಗೆ ಹಾಗೂ ಆ ನಾಡಿನ ಸೇನಬೋವ ಅಲ್ಲಾಳನೂ ಸೇರಿದಂತೆ ನೀಡಿದ ದೊಮ್ಮಲೂರಿನ ಸೋಮನಾಥ ದೇವಾಲಯಕ್ಕೆ ನೀಡಿದ ಎರಡು ಊರುಗಳಲ್ಲಿ ಈ ಹಲಸೂರು ಒಂದು. ಶಾಸನದಲ್ಲಿ 'ಹಲಸೂರು' ಎಂದೇ ಉಲ್ಲೇಖವಾಗಿದೆ. ಆನಂತರದಲ್ಲಿ 'ಅಲಸೂರು' ಎಂದಾಗಿದೆ. ಹ>ಅ ವಾಗಿದೆ. ಸಸ್ಯವಾಚಿ ಹಿನ್ನೆಲೆಯಲ್ಲಿ ಈ ಊರಿಗೆ ಹಲಸೂರು ಎಂಬ ಹೆಸರು ಬಂದಿರಬಹುದು. ಹಲಸಿನ ಮರ ಇಲ್ಲಿ

ಯಥೇಚ್ಚವಾಗಿ ಬೆಳೆಯುತ್ತಿದ್ದರಿಂದ ಈ ಊರಿಗೆ ಹಲಸುಗಳ ಊರು ಹಲಸೂರು ಆಗಿದ್ದಿರುವ ಸಾಧ್ಯತೆಗಳಿವೆ.

**ಹಾರೋಹಳ್ಳಿ:–** ಕ್ರಿ.ಶ.1530ರ ಶಾಸನದಲ್ಲಿ ಸಿವನಸಮುದ್ರದ ಸ್ಥಲಕ್ಕೆ ಸೇರುವ ಹಾರೋಹಳ್ಳಿ ಗ್ರಾಮ ಎಂದಿದೆ.[81] ಹಾರುವರು ಎಂದರೆ ಬ್ರಾಹ್ಮಣರು ಇದ್ದ ಊರು ಹಾರುವರೂರು. ಹೆಚ್ಚಾಗಿ ಬ್ರಾಹ್ಮಣರು ವಾಸವಾಗಿದ್ದರಿಂದ ಈ ಹೆಸರು ಬಂದಿರಬಹುದು. ಆದರೆ ಇಂದು ಎಲ್ಲಾ ವರ್ಗದ ಜನರು ವಾಸವಾಗಿದ್ದಾರೆ.

**ಹೆಬ್ಬಗೋಡಿ:–** ಆನೇಕಲ್ಲು ತಾಲೂಕಿನಲ್ಲಿರುವ ಹೆಬ್ಬಗೋಡಿಯು ಗಂಗರ ಕಾಲದ ಶಾಸನವೊಂದರಲ್ಲಿ ದೊರೆತಿದೆ. ಈ ಶಾಸನದಲ್ಲಿ ಉಲ್ಲೇಖವಾಗಿರುವ ಪೆಪ್ಪರವಾಯ್ ಸ್ಥಳವು ಶಾಸನ ದೊರೆತ ಹೆಬ್ಬಗೋಡಿ. ಪೆಪ್ಪರವಾಯ್>ಹಿರಿಯವಾಯ್, ಹಿರಿಯ ಕೋಡಿ>ಹೆಬ್ಬಗೋಡಿ ಆಗಿದೆ.[82] 'ಗೋಡು' ಎಂದರೆ ಎತ್ತರವಾದ ಪ್ರದೇಶ, ಹೆಬ್ಬ ಎಂದರೆ ಹಿರಿದಾದ್ದು ಎಂಬ ಅರ್ಥವಿದೆ. ಈ ಪ್ರದೇಶ ಪ್ರಕೃತಿವಾಚಿ ಸಂದರ್ಭವಾಗಿ ಹೆಬ್ಬಗೋಡಿ ಎಂದಾಗಿದೆ.

**ಹೆಬ್ಬಾಳ:–** ಕ್ರಿ.ಶ.1308ರ ಹೊಯ್ಸಳರ ಬಲ್ಲಾಳನ ಶಾಸನದಲ್ಲಿ 'ಹೆಬ್ಬಾಳ' ಸ್ಥಳದ ಉಲ್ಲೇಖವಿದೆ. ಎಲಹಂಕ ನಾಡನ್ನು ದೇವಣ್ಣನವರ ಮಗ ಮುದೆಯ ಅಲ್ಲವ ದಂಡ ನಾಯಕನು ಆಳುತ್ತಿದ್ದಾಗ ಈತನ ಸರ್ವಾಧಿಕಾರಿ ಉರಿಯಣ್ಣನು ಹೆಬ್ಬಾಳದ ಕೃಷಿಕರಿಗೆ ಭೂಮಿಯನ್ನು ನೀಡಿದನು ಎಂದಿದೆ. ಹೊಯ್ಸಳರ ಕಾಲದಲ್ಲಿ ಇದ್ದ 'ಹೆಬ್ಬಾಳ' ಎಂಬ ಹೆಸರು ಇಂದಿಗೂ ಅದೇ ರೂಪವನ್ನು ಉಳಿಸಿಕೊಂಡಿದೆ.[83] ಕ್ರಿ.ಶ.1226ರ ನಾಗಶೆಟ್ಟಿಹಳ್ಳಿಯಲ್ಲಿ ದೊರೆತ ಶಾಸನ ಹೆಬೊರಿಯ ಎಂದೂ, ಮತ್ತೊಂದು ಅದೇ ಸ್ಥಳದಲ್ಲಿ ದೊರೆತ ಶಾಸನದಲ್ಲಿ ಹೆಬ್ಬೊರಿಯ ವೀರೊಡೆಯರ ಪುರದ ಮೇರೆ' ಎಂದಿದೆ. ಬಹುಶಃ ಹಿರಿಯ(ದೊಡ್ಡ)+ಹೊಳಲು(ಊರು)–ಹೆಬ್ಬಾಳು(ದೊಡ್ಡಊರು) ಎಂದಾಗಿದೆ.

**ಹೆಸರುಘಟ್ಟ(ಶಿವನಸಮುದ್ರ):–** ಕ್ರಿ.ಶ.1431ರ ವಿಜಯನಗರ ಕಾಲದ ಶಾಸನದಲ್ಲಿ ಶಿವನಸಮುದ್ರ ಎಂಬ ಹೆಸರಿನ ಉಲ್ಲೇಖವಿದೆ.[84] ಕೆಂಪೇಗೌಡರ ಆಡಳಿತ ಕ್ಷೇತ್ರವಾದ ಯಲಹಂಕನಾಡು ಶಿವನಸಮುದ್ರದ ಒಂದು ಭಾಗವಾಗಿತ್ತು. ಅಂದಿನ ಶಿವನಸಮುದ್ರ ಇಂದಿನ ಹೆಸರುಘಟ್ಟವೇ ಆಗಿದೆ. ಕ್ರಿ.ಶ.1533ರ ವಿಜಯನಗರದ ಅರಸು ಅಚ್ಚುತರಾಯನ ಕಾಲದ ಶಾಸನದಲ್ಲಿ 'ಹೆಸರುಘಟ್ಟಕ್ಕೆ ಪ್ರತಿನಾಮ ಸಿವನಸಮುದ್ರ' ಎಂಬ ವಿಷಯ ತಿಳಿಯುತ್ತದೆ.[85] ಈ ಶಾಸನ ದೊರಕಿರುವುದು ಕೂಡ ಹೆಸರುಘಟ್ಟದ ಚಂದ್ರಮೌಳೇಶ್ವರ ದೇವಾಲಯದಲ್ಲಿ ಹಾಗಾಗಿ ಈ ಶಿವನಸಮುದ್ರವೇ ಹೆಸರುಘಟ್ಟ ಎಂಬುದು ಸ್ಪಷ್ಟವಾಗಿದೆ.

**ಹುಲಿಮಂಗಲ:–** ಬೆಂಪೂರು ಹನ್ನೆರಡರ ಒಂದು ಗ್ರಾಮ.[86] ಪೂವಿನ ಎಂದರೆ ಹೂವಿನ ಹುಲಿಮಂಗಲ, ಹೂವು ಬೆಳೆಯುವ ಹುಲಿಮಂಗಲವೇ ಶಾಸನದಲ್ಲಿ ಪೂವಿನಪುಲಿಮಂಗಲ ಎಂದಿದೆ. ಆನೇಕಲ್ಲು ತಾಲ್ಲೂಕಿಗೆ ಸೇರುವ ಇಂದಿನ ಹುಲಿಮಂಗಲ ಅಂದಿನ ಪೂವಿನಪುಲ್ಲಿ ಮಂಗಲವಾಗಿದೆ.

**ಹೂಡಿ:–** ಕ್ರಿ.ಶ.1332ರ ಹೊಯ್ಸಳರ ಕಾಲದ ಶಾಸನದಲ್ಲಿ ಹೂಡಿ ಗ್ರಾಮದ ಉಲ್ಲೇಖವಿದೆ.[87] ಇಂದಿನ ವೈಟ್‌ಫೀಲ್ಡ್ ರಸ್ತೆಯಲ್ಲಿ ಹೂಡಿಗ್ರಾಮವಿದೆ.

ಈ ಎಲ್ಲಾ ಸ್ಥಳನಾಮಗಳು ಬೆಂಗಳೂರು ನಗರದ ಶಾಸನೋಕ್ತ ಪ್ರದೇಶಗಳಾಗಿವೆ. ಪ್ರತಿಯೊಂದು ಗ್ರಾಮನಾಮವನ್ನು ಕುರಿತಂತೆ ಅನೇಕ ಕಟ್ಟುಕತೆಗಳು, ಪುರಾಣಕಥೆಗಳು, ಐತಿಹ್ಯಗಳು ಇರುತ್ತವೆ. ಈ ಕಟ್ಟುಕತೆಗಳು ಸತ್ಯವಲ್ಲದ ವಿವರಗಳಿಂದ ಕೂಡಿದ್ದರೂ ಕೆಲವೊಮ್ಮೆ ಐತಿಹ್ಯ ಮತ್ತು ಪುರಾಣಗಳ ಹಿಂದೆ ಸ್ವಾರ್ಥವಾಗಲೀ, ದುರುದ್ದೇಶವಾಗಲೀ ಇರುವುದಿಲ್ಲ. ಅಲ್ಲಿ ಸ್ಥಳೀಯ ಜನರ ಮುಗ್ಧ ಭಾವನೆಗಳಾಗಿರುತ್ತವೆ. ಹಾಗಾಗಿ ಸ್ಥಳನಾಮಗಳ ಅಧ್ಯಯನದ ಸಂದರ್ಭದಲ್ಲಿ ಸ್ಥಳವೊಂದರ ಪ್ರಾಚೀನವಾದ ರೂಪವನ್ನು ಹುಡುಕುವಾಗ ಶಾಸನಗಳು, ಸ್ಮಾರಕ, ನಾಣ್ಯ, ಆ ಪ್ರದೇಶದ ಐತಿಹ್ಯಗಳನ್ನು ಅವಲೋಕಿಸಲಾಗಿದೆ.

ನಗರೀಕರಣದ ಪ್ರಭಾವದಿಂದಾಗಿ ಈಗಾಗಲೆ ಇದ್ದ ಮೂಲ ಹೆಸರುಗಳು ಬದಲಾಗಿ ಹೊಸ ಹೆಸರುಗಳು ಸೃಷ್ಟಿಯಾಗಿ ಬಳಕೆಯೂ ಆಗುತ್ತಿವೆ. ಉದಾಹರಣೆಗೆ ಹೇಳುವುದಾದರೆ, ಕೃಷ್ಣರಾಜಪುರಂ>ಕೆ.ಆರ್.ಪುರಂ, ನರಸಿಂಹರಾಜ ಕಾಲೋನಿ>ಎನ್.ಆರ್.ಕಾಲೋನಿ, ಜಯಪ್ರಕಾಶ ನಾರಾಯಣನಗರ>ಜೆ.ಪಿ.ನಗರ, ಜಯಚಾಮರಾಜೆಂದ್ರನಗರ>ಜೆ.ಸಿ.ನಗರ, ಕೃಷ್ಣರಾಜೇಂದ್ರ ಮಾರುಕಟ್ಟೆ>ಕೆ.ಆರ್.ಮಾರ್ಕೆಟ್, ರವೀಂದ್ರನಾಥಟ್ಯಾಗೋರ್‌ನಗರ>ಆರ್.ಟಿ.ನಗರ, ವಿಶ್ವೇಶ್ವರಪುರಂ> ವಿವಿಪುರಂ ಹೀಗೆ ಆಧುನೀಕರಣದಲ್ಲಿ ಅರಿವಿಲ್ಲದೆಯೇ ಸ್ಥಳದ ಹೆಸರುಗಳು ಸಂಕ್ಷಿಪ್ತತೆಗೊಳಪಡಿಸಿ ಬಳಸಲಾಗುತ್ತಿದೆ. ಇದರ ಒಳ ಅರ್ಥ, ಹಿನ್ನೆಲೆಯನ್ನು ಬಿಡಿಸಿನೋಡಿದರೆ ತನ್ನದೇ ಆದ ಸಂಸ್ಕೃತಿಯೊಂದು ತೆರೆದು ನಿಲ್ಲುತ್ತದೆ. ಅಷ್ಟೇ ಏಕೆ ಬೆಂಗಳೂರು 'ಬ್ಯಾಂಗಲೂರ್' ಆಗಿ ಹೋಗಿದೆ. ಇತ್ತೀಚಿಗಷ್ಟೇ ಕರ್ನಾಟಕ ಸರ್ಕಾರ ಹನ್ನೆರಡು ನಗರಗಳನ್ನು ಕನ್ನಡೀಕರಿಸಿಕೊಂಡದ್ದರಲ್ಲಿ ಬೆಂಗಳೂರು ಒಂದು ಎಂಬುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

ಸ್ಥಳನಾಮದ ಅಧ್ಯಯನ ಸಂಸ್ಕೃತಿಯ ಪ್ರತಿಬಿಂಬವಾಗಿದೆ. ಇಲ್ಲಿ ಭಾಷೆಯ ಸೊಗಡಿದೆ. ಐತಿಹಾಸಿಕ, ವೈಚಾರಿಕ, ಮಾನವಿಕ ಮತ್ತು ಸಾಂಸ್ಕೃತಿಕ ವಿವರಗಳು ದೊರೆಯುತ್ತವೆ. ಇನ್ನೂ ಕೆಲವೊಮ್ಮೆ ವ್ಯಕ್ತಿ, ಧರ್ಮ ಮೊದಲಾದ ಸಂಗತಿಗಳೊಟ್ಟಿಗೆ ರಾಜರ, ನವಾಬರ, ಪಾಳೇಗಾರರ ಆಳ್ವಿಕೆಯ

ಸಂದರ್ಭದಲ್ಲಿ ಅಸ್ತಿತ್ವಕ್ಕೆ ಬಂದಿತು ಎಂಬುದನ್ನು ತಿಳಿಯಬಹುದು. ಪ್ರಸ್ತುತ ಬೆಂಗಳೂರು ನಗರದಲ್ಲೂ ಪ್ರಾಚೀನತೆಯ ಹೆಸರುಗಳು ಅಳಿಸಿಹೋಗಿ ಹೊಸನಾಮಗಳು ಸೃಷ್ಟಿಯಾಗುತ್ತಿವೆ. ಹಾಗಾಗಿ ಸ್ಥಳನಾಮಗಳು ಎಲ್ಲಾ ಗ್ರಾಮ ಪಟ್ಟಣ ನಗರಗಳಲ್ಲಿ ಕಾಲ ಕಳೆದಂತೆ ಸಾಂಸ್ಕೃತಿಕ ಬದಲಾವಣೆಯ ಕುರುಹುಗಳಿಗೆ ಸಾಕ್ಷಿಭೂತವಾಗಿ ನಿಲ್ಲುತ್ತವೆ.

## ಪ್ರಾರ್ಥನಾ ಶ್ಲೋಕಗಳು

ಯಾವುದೇ ಒಳ್ಳೆಯ ಕಾರ್ಯವನ್ನು ಪ್ರಾರಂಭಿಸುವ ಮೊದಲು ಪ್ರಾರ್ಥನೆಯನ್ನು ಮಾಡುವುದರಿಂದ ಒಳಿತು ಉಂಟಾಗುತ್ತದೆ ಎಂಬುದು ಸನಾತನ ಕಾಲದಿಂದಲೂ ಬಂದ ಜನರ ನಂಬಿಕೆ. ಇಂತಹ ಪ್ರಾರ್ಥನೆಗಳಿಂದ ಶಾಸನಗಳೇನು ಹೊರತಾಗಿಲ್ಲ. ದೇವರ ಸ್ತುತಿ ಮತ್ತು ರಾಜನ ಸ್ತುತಿಯನ್ನು ಶಾಸನದ ಪ್ರಾರಂಭದಲ್ಲಿ ಕಾಣಬಹುದು. 'ರಾಜ ಪ್ರತ್ಯಕ್ಷ ದೇವತಃ' ಎಂಬ ಕಲ್ಪನೆ ಅಂದಿನ ಸಮಾಜದಲ್ಲಿ ಬೇರೂರಿತ್ತು. ರಾಜ್ಯದ ಅಧಿಕಾರಿಗಳು ಹಾಗೂ ಜನಸಾಮಾನ್ಯರು ಶಾಸನಗಳನ್ನು ಹಾಕಿಸಿದ್ದೇ ಆದಲ್ಲಿ ತಮ್ಮ ರಾಜನನ್ನು ಸ್ತುತಿಸುತ್ತಿದ್ದರು. ರಾಜಾ ಪ್ರತ್ಯಕ್ಷ ದೈವ ಎಂಬ ನಂಬಿಕೆ ಇದ್ದರೂ ಸ್ವತಃ ರಾಜನೂ ಸಹ ದೇವತಾ ಸ್ತುತಿಯಿಂದಲೆ ಶಾಸನ ಆರಂಭಿಸುತ್ತಿದ್ದನು. ಧಾರ್ಮಿಕತೆ ಎನ್ನುವುದು ಭಾರತೀಯ ಸಮಾಜದಲ್ಲಿ ಅವಿಭಾಜ್ಯ ಅಂಗವಾಗಿತ್ತು. ತಾವು ಮಾಡುವ ಕಾರ್ಯ ನಿರ್ವಿಘ್ನವಾಗಿ ನಡೆಯಲಿ ಎಂಬ ಆಶಯವನ್ನು ಈ ಪ್ರಾರ್ಥನಾ ಶ್ಲೋಕಗಳು ಹೊಂದಿರುತ್ತಿದ್ದವು.

'ತರ್ಕಸಂಗ್ರಹ' ಎಂಬ ಕೃತಿಯಲ್ಲಿ ಪ್ರಾರ್ಥನೆಯ ವಿವರಣೆಯನ್ನು ಹೀಗೆ ವಿವರಿಸಲಾಗಿದೆ, "ಮಂಗಲಂ ನಾಮ ಅನಿಷ್ಟ ನಿವರ್ತಕಃ ಇಷ್ಟಪ್ರಾಪಕಃ ಕರ್ತವ್ಯ ಕರ್ಮ ವಿಶೇಷ"[87] ಎಂದಿದೆ. ಪ್ರಾರ್ಥನೆಯನ್ನು ಮಂಗಲಾಚರಣೆ ಎಂತಲೂ ಕರೆಯುತ್ತಾರೆ. "ಅನಿಷ್ಟಗಳನ್ನು ದೂರಮಾಡಿ, ಇಷ್ಟವನ್ನು ದೊರಕಿಸಿ ಕೊಡುವಂತಹ ಮಾಡಲೇಬೇಕಾದ ಕರ್ಮವಿಶೇಷವೇ ಪ್ರಾರ್ಥನೆ"ಯಾಗಿದೆ. ಬಹುಶಃ ಕರ್ನಾಟಕದಲ್ಲಿ ಶಾಸನವನ್ನು ಹೊರಡಿಸಿದಂತಹ ರಾಜರುಗಳ ಉದ್ದೇಶವು ಇದೇ ಆಗಿತ್ತು.

ಬೆಂಗಳೂರಿನ ಶಾಸನಗಳನ್ನು ಅವಲೋಕಿಸಿದಾಗ ಪ್ರಾಚೀನ ಕಾಲಘಟ್ಟದಲ್ಲಿ ದೊರೆಯುವ ಗಂಗರ ಮತ್ತು ಚೋಳರ ಶಾಸನಗಳ ಮತ್ತು ವೀರಗಲ್ಲುಗಳಲ್ಲಿ 'ಸ್ವಸ್ತಿ, ಸ್ವಸ್ತಿ ಶ್ರೀ' ಎಂಬ ಪ್ರಾರ್ಥನೆಗಳು ಕಾಣಸಿಗುತ್ತವೆ. ರಾಷ್ಟ್ರಕೂಟರ ಬಹುತೇಕ ಶಾಸನಗಳು ಶುಭಮಸ್ತು ಎಂದು ಪ್ರಾರಂಭವಾಗುತ್ತವೆ. ಕ್ರಿ.ಶ.802ರ ರಾಷ್ಟ್ರಕೂಟರ ಶಾಸನವೊಂದರ ಶ್ಲೋಕ ಈ ರೀತಿಯಲ್ಲಿದೆ,

**'ಸರ್ವೋರ್ವಲ್ಲದ್ವೇದಸಾಧಾಮ ಯನ್ನಾಭಿಕಮಲಂ ಕೃತಂ**
**ಹರಶ್ಚ ಯಸ್ಯ ಕಾಂತೇಂದು ಕಲಯಾ ಕಮಲಂಕೃತಂ॥'**[88]

ವೇದಗಳಿಗೆ ಧಾಮನಾದ ಬ್ರಹ್ಮನು ಯಾರ ನಾಭಿ ಕಮಲದಲ್ಲಿ ಆಲಂಕೃತನಾಗಿರುವನೋ ಅಂತಹ ಹರಿಯೂ ಮತ್ತು ಯಾರ ಕಾಂತೆಯು ಚಂದ್ರನ ಬೆಳದಿಂಗಳಿನಿಂದ ಆಲಂಕೃತನಾದ ಹರನೂ ನಿಮ್ಮನ್ನು ರಕ್ಷಿಸಲಿ ಎಂಬುದು ಈ ಶ್ಲೋಕದ ಅರ್ಥ.

ಹೊಯ್ಸಳರ ಕಾಲದ ಶಾಸನಗಳು ಸ್ವಸ್ತಿ ಶ್ರೀ, ಮತ್ತು ಸ್ವಸ್ತಿ ಶ್ರೀ ಭುವನಾಶ್ರಯಂ[89] ಎಂದು ಪ್ರಾರಂಭವಾಗಿ ರಾಜನ ವರ್ಣನೆ ಮಾಡಿದ್ದಾರೆ. ವಿಜಯನಗರ ಮತ್ತು ಮೈಸೂರು ಅರಸರ ಕಾಲದ ಶಾಸನಗಳು 'ಶುಭಮಸ್ತು, ಶ್ರೀಜಯಾಭ್ಯುದಯ ಶಾಲಿವಾಹನ ಶಕ'[90] ಎಂದು ಆರಂಭವಾಗಿ 'ಶ್ರೀಮನ್ಮಹಾಮಂಡಲೇಶ್ವರಂ' ಎಂದು ರಾಜನ ವರ್ಣನೆಯನ್ನು ಕಾಣುತ್ತೇವೆ. ಮೈಸೂರು ಅರಸರು ವಿಜಯನಗರ ಅರಸರ ಶೈಲಿಯನ್ನೇ ಅನುಸರಿಸಿದ್ದಾರೆ. ಆದರೆ ಕೆಲವು ಶಾಸನಗಳ ಪ್ರಾರಂಭವು 'ಶ್ರೀ ರಾಮಾನುಜಾಯ ನಮಃ'[91] ಎಂದು ಪ್ರಾರಂಭವಾಗುತ್ತವೆ. ಹೀಗೆ ಪ್ರಾರ್ಥನಾ ಶ್ಲೋಕಗಳನ್ನು ಸ್ತುತಿಸುವುದರಿಂದ ಮಾಡುವ ಒಳ್ಳೆಯ ಕಾರ್ಯಗಳು ದೇವರಿಗೆ ಸಮರ್ಪಿತ ಎಂಬ ನಂಬಿಕೆ ಒಂದು ಕಡೆಯಾದರೆ, ಈ ಶ್ಲೋಕಗಳು ಯಾವ ರಾಜ, ಯಾವ ಧರ್ಮವನ್ನು ಅನುಸರಿಸುತ್ತಿದ್ದ, ಪೋಷಿಸಿಕೊಂಡು ಬಂದಿದ್ದ ಹಾಗೂ ಆತನ ಆಳ್ವಿಕೆಯ ಧಾರ್ಮಿಕ ಸಮನ್ವಯತೆಯನ್ನು ತಿಳಿಯಲು ಆಕರವಾಗಿವೆ.

## ಜೈನಧರ್ಮದ ಪ್ರಾರ್ಥನಾ ಶ್ಲೋಕಗಳು

ಕರ್ನಾಟಕದಲ್ಲಿ ಜೈನ ಶಾಸನಗಳು ಹೆಚ್ಚಾಗಿ ಕಂಡುಬಂದಿದ್ದರೂ ಬೆಂಗಳೂರು ನಗರದಲ್ಲಿ ಜೈನಧರ್ಮಕ್ಕೆ ಸಂಬಂಧಿಸಿದ ಶಾಸನಗಳು ಬೆರಳೆಣಿಕೆಯಷ್ಟು ದೊರಕಿವೆ. ಬೇಗೂರಿನಲ್ಲಿ ದೊರೆತ ಕ್ರಿ.ಶ.900ರ ಶಾಸನದ ಪ್ರಾರಂಭ 'ಭದ್ರಮಸ್ತು ಜಿನಶಾಸನಾಯ' ಎಂಬ ವಾಕ್ಯವು ಗಂಗರ ಕಾಲದ ಶಾಸನಗಳಲ್ಲಿ ಸಾಮಾನ್ಯವಾಗಿ ಕಂಡುಬರುತ್ತವೆ.[92] ಜಿನನನ್ನು ಸ್ಮರಿಸುವ ಮಂಗಳ ಸೂಚಕ ವಾಕ್ಯವಿದಾಗಿದೆ. ಕ್ರಿ.ಶ.1426ರ ಬೇಗೂರಿನಲ್ಲಿ ದೊರೆತ ಮತ್ತೊಂದು ಶಾಸನದ[93] ಪ್ರಾರಂಭದ ಶ್ಲೋಕವೊಂದು ಈ ರೀತಿಯಾಗಿದೆ,

**'ಶ್ರೀಮತ್ಪರಮ ಗಂಭೀರ ಸ್ಯಾದ್ವಾದಾಮೋಘಲಾಂಛನಂ।**
**ಜೀಯಾತ್ತ್ರೈಲೋಕ್ಯನಾಥಸ್ಯ ಶಾಸನಂ ಜಿನಶಾಸನಂ॥'**

ಪರಮಗಂಭೀರವಾದ ಸ್ಯಾದ್ವಾದಕ್ಕೆ ಅಮೋಘವಾದ ಲಾಂಛನದಂತಿರುವ ತ್ರೈಲೋಕ್ಯನಾಥನ ಜಿನಶಾಸನವು ಜಯವನ್ನುಂಟು ಮಾಡಲಿ ಎಂದು ಜಿನನ ವರ್ಣನೆಯನ್ನು ಮಾಡಲಾಗಿದೆ. ಜೈನಧರ್ಮವನ್ನು ಆಚರಿಸುತ್ತಿದ್ದವರು ಈ ರೀತಿಯ ಶ್ಲೋಕಗಳನ್ನು ಶಾಸನಗಳಲ್ಲಿ ಬಳಸುತ್ತಿದ್ದರು.

## ಶೈವಧರ್ಮದ ಪ್ರಾರ್ಥನಾ ಶ್ಲೋಕಗಳು

ಸಾಮಾನ್ಯವಾಗಿ ಶಾಸನ ಹಾಕಿಸಿದಾತ ಶೈವ ಉಪಾಸಕನಾಗಿದ್ದರೆ ಶಿವನನ್ನು ಸ್ತುತಿಸುವ ಶ್ಲೋಕಗಳನ್ನು ಶಾಸನದ ಪ್ರಾರಂಭದಲ್ಲಿ ಕಾಣಬಹುದು. ಕ್ರಿ.ಶ.1253ರ ತಾಮ್ರ ಶಾಸನವೊಂದು ಬೆಂಗಳೂರು ಮ್ಯೂಸಿಯಂನಲ್ಲಿದೆ.[94] ಈ ಶಾಸನದ ಪ್ರಾರಂಭವು 'ಓಂ ನಮಃ ಶಿವಾಯ' ಎಂದು ಆರಂಭಗೊಂಡರೆ, ಬೇಗೂರಿನಲ್ಲಿ ದೊರೆತ ಕ್ರಿ.ಶ.1402ರ ಶಾಸನವು 'ಶ್ರೀಸಾಂಬ ಸದಾಶಿವಾಯ ನಮಃ' ಎಂದು ಪ್ರಾರಂಭವಾಗುತ್ತದೆ.[95] ಮುಂದುವರೆದು,

**'ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ।**
**ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ॥'**

'ಮೂರು ಉತ್ತುಂಗ ಲೋಕಗಳ ಸೃಷ್ಟಿಗೆ ಕಾರಣನಾಗಿ, ಜಗತ್ತಿಗೆ ಆಧಾರವಾಗಿ ಮೂಲಸ್ತಂಭದಂತಿರುವ ಯಾರ ಉತ್ತುಂಗ ಶಿರವು ಆಕಾಶದಲ್ಲಿದ್ದು, ಚಂದ್ರನ ಕಿರಣಗಳ ಚಾಮರವನ್ನು ಹೊಂದಿರುವುದೋ ಆ ಶಂಭುವಿಗೆ ನಮಸ್ಕಾರಗಳು' ಎಂಬ ಶಿವನ ಸ್ತುತಿಯನ್ನು ಹೇಳಲಾಗಿದೆ. ಬಾಣಭಟ್ಟನ 'ಹರ್ಷ ಚರಿತಮ್'ನಲ್ಲಿ ಮೊದಲಬಾರಿ ಈ ಶ್ಲೋಕವನ್ನು ಬಳಸಿರುವುದು.[96] ಶಾಸನಗಳಲ್ಲಿ ಅತಿ ಹೆಚ್ಚು ದೊರಕಿರುವ ಶ್ಲೋಕವಿದು. ಬೆಂಗಳೂರಿನಲ್ಲಿ ಇಂತಹ ಶ್ಲೋಕಗಳಿರುವ ಶಾಸನಗಳು ವಿಜಯನಗರದ ಅರಸರು ಮತ್ತು ಮೈಸೂರು ಒಡೆಯರ ಕಾಲದಲ್ಲಿ ಕಾಣಸಿಗುತ್ತವೆ.

## ವೈಷ್ಣವ ಧರ್ಮದ ಪ್ರಾರ್ಥನಾ ಶ್ಲೋಕಗಳು

ಕನ್ನಡ ಭಾಷೆಯಲ್ಲಿ ದೊರೆಯುವ ಮೊಟ್ಟಮೊದಲ ಶಾಸನ ಹಲ್ಮಿಡಿ ಶಾಸನದ ಪ್ರಾರಂಭದ ಶ್ಲೋಕ ವೈಷ್ಣವ ಧರ್ಮಕ್ಕೆ ಸಂಬಂಧಿಸಿದ್ದಾಗಿದೆ. ಈ ಶ್ಲೋಕ ಈ ಮುಂದಿನಂತಿದೆ.

**'ಜಯತಿ ಶ್ರೀಪರಿಷ್ವಂಙ್ಗ ಶ್ಯಾರ್ಙ್ಗ[ವ್ಯಾನತಿ] ರಚ್ಯುತಃ**
**ದಾನವಾಕ್ಷ್ಣೋರ್ಯುಗಾನ್ತಾಗ್ನಿಃ [ಶಿಷ್ಟಾನಾನ್ತು] ಸುದರ್ಶನಃ'**

'ಲಕ್ಷ್ಮಿಯಿಂದ ಆಲಂಗಿತವಾಗಿರುವವನೂ, ಶಾರ್ಙ್ಗವೆಂಬ ಧನಸ್ಸನ್ನೂ ಚೆನ್ನಾಗಿ ಬಗ್ಗಿಸಿ ಹಿಡಿದಿರುವವನು ಅರಸರ ಕಣ್ಣುಗಳಿಗೆ ಪ್ರಳಯಕಾಲದ ಬೆಂಕಿಯಾಗಿರುವವನೂ, ಸತ್ಪುರುಷರಿಗಾದರೋ

ಒಳ್ಳೆಯ ನೋಟ ನೀಡುವವನೂ ಸುದರ್ಶನ ಚಕ್ರವನ್ನು ಹಿಡಿದ ಅಚ್ಯುತನಿಗೆ ಜಯವಾಗಲಿ' ಎಂಬ ವಿಷ್ಣುವಿನ ಸ್ತುತಿಯನ್ನು ಕಾಣಬಹುದು. ಇಡೀ ಶಾಸನಪರಂಪರೆಯಲ್ಲಿ ದೊರೆಯುವ ಮೊದಲ ಶ್ಲೋಕವಿದು. ವಿಷ್ಣುವನ್ನು ಸ್ತುತಿಸಿರುವ ಶಾಸನಗಳು ಬೆಂಗಳೂರು ನಗರದಲ್ಲೂ ದೊರಕಿದೆ. ಕ್ರಿ.ಶ.900ರ ಗಂಗರ ಕಾಲದ ಶಾಸನವು "ಸ್ವಸ್ತಿ ಜಿತಂ ಭಗವತಾ ಗತ ಘನ ಗಗನಾಭೇನ ಪದ್ಮನಾಭೇನ' ಎಂದು ಪ್ರಾರಂಭವಾಗುತ್ತದೆ.[97] ಈ ಶಾಸನದಲ್ಲಿ ಜೈನಧರ್ಮದ ಸ್ತುತಿಯಷ್ಟೇ ಅಲ್ಲದೆ, ವಿಷ್ಣುವನ್ನು ಸ್ತುತಿಸಿರುವ ವಾಕ್ಯವನ್ನು ಕಾಣಬಹುದು. 'ಮೋಡಗಳಿಲ್ಲದ ನಿರ್ಮಲವಾದ ಆಕಾಶದಂತಿರುವ ಪದ್ಮನಾಭನಿಂದ ಜಯಿಸಲ್ಪಟ್ಟಿದೆ' ಎಂಬುದು ಈ ಶ್ಲೋಕದ ಅರ್ಥ. ಈ ಸ್ತುತಿಯಲ್ಲಿ 'ಭಗವತಾಗತ, ಗಗನಾಭೇನ, ಪದ್ಮನಾಭೇನ ಎಂದೆಲ್ಲಾ ವಿಷ್ಣುವನ್ನು ಹೆಸರಿಸಲಾಗಿದೆ. ಮತ್ತೂ ಕೆಲವು ಶಾಸನಗಳು 'ಶ್ರೀವೆಂಕಟೇಶಾಯ ನಮಃ'[98] ಎಂದೂ ಪ್ರಾರಂಭವಾಗುತ್ತವೆ. ಹಾಗೂ ಆನೇಕಲ್ಲು ತಾಲೂಕಿನ ಕ್ರಿ.ಶ.1650ರ ಶಾಸನ 'ಶ್ರೀ ರಾಮ' ಎಂದು ಆರಂಭಗೊಂಡಿದೆ.[99]

ಕ್ರಿ.ಶ.1440ರ ಕಾಲದ ದೊಮ್ಮಲೂರಿನಲ್ಲಿ ದೊರೆತ ಶಾಸನವು 'ಶುಭಮಸ್ತು ಮಂಗಳ ಮಹಾ ಶ್ರೀ'[100] ಎಂದು ಅಂತ್ಯಗೊಳ್ಳುತ್ತದೆ. ಹೀಗೆ ನಗರ ಜಿಲ್ಲೆಯ ಬಹುತೇಕ ಶಾಸನವು ಶ್ರೀ ಎಂದು ಶುಭಸೂಚಕವಾಗಿ ಕೊನೆಗೊಳ್ಳುತ್ತವೆ.

ಈ ಶ್ಲೋಕಗಳೇ ಎಲ್ಲಾ ಶಾಸನಗಳಲ್ಲಿ ಇರುತ್ತವೆ ಎಂದೇನಿಲ್ಲ. ಆದರೆ ಈ ಶ್ಲೋಕಗಳಿಂದ ಆಯಾ ಧರ್ಮದ ಅನುಯಾಯಿಗಳು ಹಾಗೂ ಆಯಾ ಧರ್ಮದ ಅಧಿದೇವತೆಗಳನ್ನು ಗುರುತಿಸಬಹುದು. ಮತ್ತೂ ಕೆಲವು ಶಾಸನಗಳು ರಾಜನ ವರ್ಣನೆ, ಕಾಲಗಣನೆಯೊಂದಿಗೆ ಮತ್ತು ದಾನನೀಡುವ ವ್ಯಕ್ತಿಯ ವಿವರಗಳೊಂದಿಗೆ ಪ್ರಾರಂಭವಾಗುತ್ತವೆ. ಇಂತಹ ಶಾಸನಗಳ ಅಧ್ಯಯನವನ್ನು ರಾಜಕೀಯ ಅಧ್ಯಯನದಲ್ಲಿ ವಿವರವಾಗಿ ವಿಶ್ಲೇಷಿಸಲಾಗಿದೆ.

**ಶಾಪಾಶಯಗಳು**

ಒಂದು ಪ್ರದೇಶದ ಜನರ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿ ಕೊಡುವಲ್ಲಿ ಶಾಸನಗಳು ಪ್ರಮುಖ ಆಕರವಾಗಿವೆ. ಶಾಸನಗಳು ಅಂದಿನ ಸಮಾಜದ ರಾಜಕೀಯ ಚರಿತ್ರೆ, ಧರ್ಮ, ಸಾಮಾಜಿಕ ಸ್ಥಿತಿಗತಿಗಳನ್ನು ತಿಳಿಯುವುದರ ಜೊತೆಗೆ ಜನರ ಮನಸ್ಸಿನಲ್ಲಿ ನೆಲೆಯೂರಿ ಅನುಸರಿಸಿ ಕೊಂಡು ಬಂದಿರುವ ನಂಬಿಕೆಗಳನ್ನು ತಿಳಿಯುವಲ್ಲಿ ಸಹಾಯಕವಾಗಿವೆ. ಶಾಸನಗಳು ಯಾರು ಯಾರಿಗೆ ದಾನ ನೀಡುತ್ತಿರುವುದು, ಏನನ್ನು ದಾನ ನೀಡುತ್ತಿರುವುದು, ದಾನ ನೀಡುತ್ತಿರುವ ಸಮಯ, ತೇದಿ, ವಿಷಯ ಕಾರಣ ಎಲ್ಲವನ್ನು ಹೇಳುವುದರ ಜೊತೆಗೆ ಶಾಸನದ ಕಡೆಯಲ್ಲಿ ಈ ಧರ್ಮಕ್ಕೆ ಧಕ್ಕೆ ಉಂಟುಮಾಡಿದರೆ

ಅವರಿಗೆ ಕೆಡುಕು ಉಂಟಾಗಲಿ ಎಂದು, ಯಾರು ಈ ಶಾಸನವನ್ನು ಸಂರಕ್ಷಿಸುವರೋ ಅವರಿಗೆ ಒಳ್ಳೆಯದಾಗಲಿ ಎಂಬ ಆಶಯವನ್ನು ಹಾಕಿಸಿರುತ್ತಾರೆ. ಹಾಗಾಗಿ ಶಾಸನದ ಕಡೆಯಲ್ಲಿ ಶಾಪಾಶಯಗಳನ್ನು ಕಾಣಬಹುದು.

ಈ ಧರ್ಮಕ್ಕೆ ಎಂಬಲ್ಲಿ ಮನುಷ್ಯ ಸಮಾಜದಲ್ಲಿ ನೈತಿಕ ಮೌಲ್ಯವನ್ನು ಮೀರದಂತೆ, ಸಮಾಜದ ಯಾವುದೇ ನೈತಿಕ ಅನಾಚಾರಗಳಿಗೆ ಎಡೆಮಾಡಿ ಕೊಡದಂತೆ ಸಾಮಾಜಿಕ ಮೌಲ್ಯಗಳಿಗೆ ಧಕ್ಕೆ ಉಂಟು ಮಾಡದಂತೆ ಜೀವಿಸುವುದನ್ನು 'ಧರ್ಮ' ಎಂದು ಕರೆಯಬಹುದು. ನೈತಿಕ ಮೌಲ್ಯಗಳಿಗೆ ಧಕ್ಕೆ ಉಂಟಾದರೆ ಅಥವಾ ಇತರರಿಗೆ ಕೆಡುಕಾದರೆ, ಅವರ ಮೌಲ್ಯವನ್ನು ಹಾಳು ಮಾಡಿದರೆ ಅವರಿಗೆ ಕೆಡುಕಾಗಲಿ ಎಂಬ ಅಂಶಗಳು ಜನರ ಮನಸ್ಸಲ್ಲಿ ಮನೆಮಾಡಿದೆ. ಹೀಗೆ ಕೆಡುಕು ಮತ್ತು ಒಳಿತು ಎಂಬ ಅವಳಿವೈರುಧ್ಯಗಳ ಮಧ್ಯೆ ಶಾಪಾಶಯಗಳು ಹುಟ್ಟಿಕೊಂಡಿವೆ.

ಶಾಪ ಎಂದರೆ ಕೆಡಕು. ಕ್ರೋದರಸದಲ್ಲಿ ಶಾಪ ಹುಟ್ಟುತ್ತದೆ. ಶಾಪ ಎಂದಕೂಡಲೇ ನೆನಪಾಗುವುದು ಋಷಿಮುನಿಗಳು ಕೋಪ ಬಂದಾಗ ಎದುರಿಗೆ ಇರುವ ಯಾರೇ ಆದರೂ ಸರಿ ಅವರಿಗೆ ಶಾಪನೀಡುತ್ತಿದ್ದರು. ಈ ರೀತಿಯ ಕಲ್ಪನೆಗಳು ನಮ್ಮಲ್ಲಿ ಅನಾದಿಕಾಲದಿಂದಲೂ ನಡೆದು ಕೊಂಡು ಬಂದಿವೆ. ಇದೆ ಮುಂದೆ ಜನರ ಜೀವನದಲ್ಲಿ ಒಂದು ನಂಬಿಕೆಯ ಚೌಕಟ್ಟಿನೊಳಗೆ ಅಚ್ಚಳಿಯದಂತೆ ಉಳಿದಿದೆ. ಈ ನಂಬಿಕೆಗಳೇ ಮುಂದೆ ಜನರಲ್ಲಿ ಶಾಪಗಳಾಗಿ ಕಾಲಿಟ್ಟವು. ಶಾಸನಗಳನ್ನು ಉಳಿಸಲು ಅನ್ಯಾಯ, ಅಧರ್ಮಗಳನ್ನು ತಡೆಯಲು ಶಾಪಗಳು ಹುಟ್ಟಿಕೊಂಡವು. ಹಾಗೆ ಶಾಸನಕ್ಕೆ ಯಾವುದೇ ರೀತಿಯ ಧಕ್ಕೆ ತರದೆ, ಮುಂದಿನ ತಲೆಮಾರಿಗೂ ಕಾಪಿಟ್ಟುಕೊಂಡು ಬಂದರೆ ಅಂತವರಿಗೆ ಒಳ್ಳೆಯದಾಗುತ್ತದೆ ಎಂಬ ಆಶಯವನ್ನು ಕಾಣಬಹುದು. ಒಂದು ಪ್ರದೇಶದಲ್ಲಿ ದೊರೆತ ಶಾಸನದಲ್ಲಿನ ಶಾಪ ಮತ್ತು ಆಶಯಗಳು ಅಲ್ಲಿನ ಜನರ ನಂಬಿಕೆ, ಧಾರ್ಮಿಕತೆ, ಅವರ ನ್ಯೂನತೆಗಳನ್ನು ವಿಶದಪಡಿಸುತ್ತವೆ. ಈ ಹಿನ್ನೆಲೆಯಲ್ಲಿ ಬೆಂಗಳೂರು ನಗರ ಜಿಲ್ಲೆಯ ಶಾಸನಗಳಲ್ಲಿ ಶಾಪಾಶಯಗಳನ್ನು ಗಮನಿಸಬಹುದು.

ಅನಾದಿ ಕಾಲದಿಂದಲೂ ಭಾರತೀಯರಲ್ಲಿ ಧಾರ್ಮಿಕ ನಂಬಿಕೆ ಎಂಬುದು ಮನೆಮಾಡಿದೆ. ಉತ್ತಮ ಕೆಲಸ ಏನೇ ಮಾಡಿದರು ಚಂದ್ರ ಸೂರ್ಯರಿರುವರೆಗೂ ಉಳಿಯುತ್ತದೆ ಎಂಬ ಅಚಲ ನಂಬಿಕೆ. ಹಾಗಾಗಿ ತಾವು ಹೊರಡಿಸುವ ಶಾಸನ ಅಥವಾ ನೀಡುವ ದಾನವು ಸೂರ್ಯ ಚಂದ್ರರಿರುವವರೆಗೂ ಉಳಿಯಲಿ ಎಂದು ಶಾಸನದಲ್ಲಿ ಮಂಗಳವಾಗಲಿ ಎಂದು ಆಶಿಸುತ್ತಾರೆ. ಈ ಹಿನ್ನೆಲೆಯಲ್ಲಿ ಮನುಷ್ಯನ ದೌರ್ಬಲ್ಯವನ್ನು ಗುರಿಮಾಡಿ ಶಾಪಗಳನ್ನು ಸೃಷ್ಟಿಸಲಾಯಿತು.

**"ವಾರಣಾಸಿಯಲಿ ಗೋ ಬ್ರಾಹ್ಮಣರ ಕೊಂದದೋಷಕೆ**
**ಮಾತೃಗಮನವ ಮಾಡಿದದೋಷಕೆ ಹೋಹರು"[101]**

**"ಆರುತಪಿದರು ಗಂಗೆಯ ತಡಿಯಲಿ ಕಪಿಲೆಯ**
**ಕೊಂದಪಾಪಕೆ ಹೋಹರು, ತಮ್ಮ ತಂದೆ-ತಾಯಿ**
**ಕೊಂದ ಪಾಪದಲಿ ಹೋಹರು"[102]**

ವಾರಣಾಸಿ ಧಾರ್ಮಿಕ ಕ್ಷೇತ್ರ, ಪವಿತ್ರವಾದದ್ದು, ಬ್ರಾಹ್ಮಣ ದೇವರಿಗೆ ಹತ್ತಿರವಾದವನು, ಪೂಜ್ಯ ಸ್ವರೂಪ ಎಂಬ ನಂಬಿಕೆ ಜನರಲ್ಲಿ ಇದ್ದಿದ್ದರಿಂದ ಅವರನ್ನು ಕೊಂದರೆ ಅನಾಹುತ ಸಂಭವಿಸುತ್ತದೆ. ಹಾಗೂ ಜನ್ಮ ನೀಡಿದ ತಂದೆ-ತಾಯಿ ದೇವರಿಗೆ ಸಮಾನರು. ಇವರನ್ನು ಕೊಲ್ಲುವ ಕೆಲಸ ಪಾಪವಾದದ್ದು, ಧರ್ಮಕ್ಕೆ ವಿರುದ್ಧವಾದದ್ದು. ಯಾರು ಈ ಶಾಸನವನ್ನು ಹಾಳು ಮಾಡುತ್ತಾರೋ ಅಂತಹವರು ಇಂತಹ ಹತ್ಯೆಗೆ ಗುರಿಯಾಗಬೇಕಾಗುತ್ತದೆ. ಎಂದು ಶಾಸನದ ಅಂತ್ಯದಲ್ಲಿ ಬರೆಸಲಾಗುತ್ತಿತ್ತು. ಜನರಲ್ಲಿದ್ದ ಧಾರ್ಮಿಕ ನಂಬಿಕೆ, ಬದುಕಿನ ಆಸೆ, ಭಯದಿಂದ ಯಾರು ಈ ಶಾಸನವನ್ನು ಹಾಳು ಮಾಡುತ್ತಿರಲಿಲ್ಲ.

**"ಹಿಂದೂಗಳಲ್ಲಿ ಯಾರು ಅಡ್ಡಿ ನಡೆಸಿದರು ಕಾಸಿಯಲ್ಲಿ ಗೋಹತ್ಯಾದಿ ಮಹಾಪಾತಕಾಮಾಡಿದ ದೋಷಕೆ ಹೋಗಲುಳ್ಳವರು/ ಮುಸಲ್ಮಾನರಲ್ಲಿ ಯಾರು ಅಡ್ಡಿ ಮಾಡಿದರು ಮೆಕ್ಕಾದಲ್ಲಿ ಹಂದಿ ಬಕ್ಷಣೆ ಮಾಡಿದ ದೋಷಕ್ಕೆ ಹೋಗಲುಳ್ಳವರು"**[103]

ನೆಲಮಂಗಲದಲ್ಲಿ ದೊರೆತಿರುವ ಈ ತಾಮ್ರಶಾಸನದಲ್ಲಿ ಹಿಂದೂ ಮತ್ತು ಮುಸಲ್ಮಾನರನ್ನು ಉದ್ದೇಶಿಸಿದ ಶಾಪವಿದೆ. ಶೈವರಿಗೆ ಕಾಶಿ ಪವಿತ್ರ ಸ್ಥಳ. ಅದು ದೇವಲೋಕ ಎಂಬ ಕಲ್ಪನೆ. ಹಾಗೂ ಗೋವು ಪೂಜ್ಯಭಾವನೆ ಇದೆ. ಇದನ್ನು ಕೊಂದ ಪಾಪಕ್ಕೆ ಗುರಿಯಾಗುವುದೆಂದರೆ ಸರ್ವನಾಶಹೊಂದುವುದು ಎಂದೇ ಅರ್ಥ. ಮುಸಲ್ಮಾನರಿಗೆ ಮೆಕ್ಕ ಪವಿತ್ರ ಸ್ಥಳ. ಅವರು ಹಂದಿ ತಿನ್ನುವುದು ಅವರ ಧರ್ಮಕ್ಕೆ ವಿರುದ್ಧವಾದದ್ದು ಹಾಗಾಗಿ ಮುಸಲ್ಮಾನರಿಂದ ಈ ಶಾಸನಕ್ಕೆ ಹಾನಿ ಉಂಟಾದರೆ ಅವರು ಇಂತಹ ಪಾಪ ಮಾಡಿದ ಶಾಪಕ್ಕೆ ಗುರಿಯಾಗಬೇಕಿತ್ತು.

**"ಕೊಡುಕುನು ತಾನೆ ವಾರಣಾಶಿನ ಚಂಪಿ ಆ ಮಾಂಸ ತಿನವಾಡು ಅನಿದೇವತುಲು, ಋಷುಲು ಬ್ರಾಹ್ಮಲು ಶಾಪಂಹರಿಹರಾದಲು ಸಾಕ್ಷಿ"[104]** ಬೆಂಗಳೂರಿನಲ್ಲಿ ದೊರೆತಿರುವ ತೆಲುಗು ಶಾಸನದಲ್ಲಿ ಶಾಪವು ಈ ರೀತಿಯಾಗಿದೆ, 'ಪುತ್ರ ಶೋಕಂ ನಿರಂತರಂ' ಎಂಬ ಮಾತಿದೆ. ಹೆತ್ತ ಮಕ್ಕಳ ಸಾವು ಶೋಚನಿಯವಾದದ್ದು. ಅಂತಹ ಮಗನನ್ನು ವಾರಣಾಸಿಯಲ್ಲಿ ತಾನೆ ಕೊಂದು ಆ ಮಾಂಸವನ್ನು

ತಿನ್ನುವಂತಾಗಲಿ. ಈ ಶಾಪಕ್ಕೆ ಅಶ್ವಿನಿದೇವತೆಗಳು, ಋಷಿಗಳು, ಬ್ರಹ್ಮ, ಹರಿಹರಾದಿಗಳ ಸಾಕ್ಷಿ ಎಂದಿದೆ. ಇಂತಹ ಶಾಪಗಳಿಗೆ ಗುರಿಯಾಗಲು ಯಾರೊಬ್ಬರು ಇಚ್ಚಿಸುವುದಿಲ್ಲ. ಹಾಗಾಗಿ ಅವರು/ರಾಜರು ಹೊರಡಿಸುವ ಆಜ್ಞೆಯನ್ನು ಯಾರು ಮೀರುವುದಿಲ್ಲ ಎಂಬ ನಂಬಿಕೆಯ ಹಿಂದೆ ಶಾಪ ಕೆಲಸಮಾಡಿದೆ.

ನಮ್ಮ ಸಮಾಜದಲ್ಲಿ ಹೆಣ್ಣಿಗೆ ವಿಶಿಷ್ಟ ಸ್ಥಾನವಿದೆ. ತಮ್ಮ ಮನೆಯ ಹೆಣ್ಣು ಮಕ್ಕಳನ್ನು ಉದ್ದೇಶಿಸಿ ಬೈದರೆ ಯಾರು ಸಹಿಸುವುದಿಲ್ಲ. ದೇವತೆಯಂತೆ ಪೂಜಿಸುವ ಹೆಣ್ಣನ್ನು ಉದ್ದೇಶಿಸಿ ಶಾಪಗಳು ಹುಟ್ಟಿವೆ. "ತಂಮ ತಾಯಿಗೆಉ ತಂಮ ಒಡಹುಟ್ಟಿದ ತಂಗಿಯಿಬರಿಗೆ ಅಳುಹಿದವರು",[105] "ತಂನಮಹಿಮಾನ್ನಿಕೆಯರ ಹೆಜಿರಿಗೆ........ತರು........ ತಂಮತಾಯ ವಾರಾಣಸಿಯಲಿ ಕೊಂದ ಪಾಪಕೆ ಹೋಹರು ಯಿ ಧರ್ಮವ ನಡಿಸುವನು ಬಾಮಣಗೆ ಉದ್ದಾಮ ಕೊಡಿಸಿದ ಧರ್ಮ್ಮ"[106] ಎಂದಿದೆ. ನಮ್ಮ ಸಮಾಜದಲ್ಲಿ ತಾಯಿ, ಹೆಂಡತಿಯನ್ನು ಕೊಲ್ಲುವುದು, ತಾಯಿ, ತಂಗಿಯೊಂದಿಗೆ ಲೈಂಗಿಕ ಸಂಬಂಧ ಹೊಂದುವುದು ಪೈಶಾಚಿಕ ಕೃತ್ಯ ಎಂದು ಭಾವಿಸಲಾಗಿದೆ. ಆದ್ದರಿಂದ ಜನರ ದೌರ್ಬಲ್ಯವನ್ನು ಗುರಿ ಮಾಡಿ ಅದನ್ನು ಶಾಪವಾಗಿಸಿ ಕೊಳ್ಳಲಾಗುತ್ತಿತ್ತು. ತಪ್ಪು ಮಾಡಲು ಹೋದವರು ಈ ಶಾಪದ ಭಯದಿಂದ ಕೇಡು ಉಂಟು ಮಾಡುವುದಿಲ್ಲ ಎಂಬ ನಂಬಿಕೆ ಇತ್ತು. ಈ ಶಾಸನದಲ್ಲಿರುವ ಶಾಪದೊಂದಿಗೆ ಪುಣ್ಯಾಶಯವನ್ನು ಗಮನಿಸಬಹುದು. ಈ ಶಾಸನದ ಧರ್ಮದಂತೆ ನಡೆದುಕೊಂಡರೆ ಬ್ರಾಹ್ಮಣರಿಗೆ ಉದ್ದಾಮವನ್ನು ನೀಡಿದ ಪುಣ್ಯಕ್ಕೆ ಹೋಗುವರು ಎಂದಿದೆ. ಆನೇಕಲ್ಲಿನಲ್ಲಿ ದೊರೆತಿರುವ ಶಾಸನದಲ್ಲಿ "ಮರಿಯಾದೆಯಲ್ಲಿ ಸುಖದಿಂದ ಭೋಗಿಸುವಂತಾಗಲಿ"[107] ಎಂಬ ಉಲ್ಲೇಖವಿದೆ. ಪುಣ್ಯ, ಸುಕೃತ, ಶ್ರೇಯಸ್ಸು ಸಿಗುತ್ತದೆ ಎಂಬ ನಂಬಿಕೆಯಿಂದ ಜನರು ಶಾಸನದ ಧರ್ಮಕ್ಕೆ ಚ್ಯುತಿ ಬಾರದಂತೆ ನೋಡಿಕೊಳ್ಳುತ್ತಾರೆ ಎಂಬ ಉದ್ದೇಶದಿಂದ ಶಾಪದ ಜೊತೆ–ಜೊತೆಗೆ ಪುಣ್ಯಾಶಯವನ್ನು ಬರೆಸುತ್ತಿದ್ದರು.

**"ಯಿ ಧರ್ಮವನು ಆರು ವಿರೋಧ ವೆಣಿಸಿದರೂ ಸಾವಿರದೇವರತುತ್ತ ತೆಗೆದ ಪಾಪಕ್ಕೆ ಹೋಹರೂ, ದೇವಲೋಕ ಮರ್ತ್ಯಲೋಕಕೆ ಹೊರಗೂ,"[108]** ಉತ್ತಮ ಕೆಲಸಮಾಡಿ ಒಳ್ಳೆಯ ರೀತಿ ಬದುಕಿದವರು ಸಾವಿನ ನಂತರ ದೇವ ಲೋಕ(ಸ್ವರ್ಗ)ಕ್ಕೂ, ಹೀನ ಕೃತ್ಯವನ್ನು ಮಾಡಿ ಜೀವನ ನಡೆಸಿದವರು ಸಾವಿನ ನಂತರ ಮರ್ತ್ಯಲೋಕ(ನರಕ)ಕ್ಕೆ ಹೋಗುತ್ತಾರೆ ಎಂಬ ಕಲ್ಪನೆ ಜನರಲ್ಲಿದೆ. ಆದರೆ ಈ ಧರ್ಮವನ್ನು ಮೀರಿದವರು ಎರಡು ಲೋಕದಿಂದಲೂ ಹೊರಗೆ ಇರುತ್ತಾರೆ. ಅಂದರೆ ಅಂತರಪಿಶಾಚಿಗಳಾಗಿ ಅಲೆದಾಡುವಂತಾಗಲಿ, ಮುಕ್ತಿದೊರಕದಿರಲಿ. ಹಾಗೂ ಸಾವಿರ ದೇವರ ತುತ್ತನ್ನು ಕಸಿದು ಕೊಂಡ ಪಾಪಕ್ಕೆ ಹೋಗಲಿ ಎಂಬ ಶಾಪವನ್ನು ಕಾಣಬಹುದು.

ಬಹಳ ವಿಶೇಷವಾದ ಶಾಸನವೊಂದು ಹೊಸಕೋಟೆ ತಾಲ್ಲೂಕಿನಲ್ಲಿರುವ ಹಲಸಿನ ಮರದ ಕೆಳಗೆ ಸಿಕ್ಕಿದೆ. **"ಶ್ರೀವೆಂಕ್ಟೇಶಪ್ರಸಂನ ಹಲಶಿನ ಮರಧರ್ಮಕೆ ಯೀಫಲಕ್ರಯಾ ಮಾಡಿದರೆ ಕಾಶೀಲಿ ಗೋಹತ್ಯೆ ಮಾಡಿದ ಪಾಪ ಮಕೇಲಿಮುರದಾರ ಪಾಪಕೆ ಹೋಗೋರು"**[109] ಈ ಶಾಸನದ ವಸ್ತು ಹಲಸಿನ ಮರ. ಈ ಹಲಸಿನ ಮರದಲ್ಲಿ ಬಿಡುವ ಫಲವನ್ನು ಯಾರು ಕದಿಯುತ್ತಾರೋ ಅಂತವರು ಕಾಶೀಲಿ ಗೋಹತ್ಯೆ ಮಾಡಿದಂತೆ ಎಂದಿದೆ. ತಮಗೆ ಸೇರಿದ ಯಾವುದೇ ವಸ್ತುವಾಗಿರಬಹುದು. ಅಂತಹವನ್ನು ಕಳ್ಳಕಾಕರಿಂದ, ಹಾದಿಹೋಕರಿಂದ ಸಂರಕ್ಷಿಸಿಡುವುದಕ್ಕಾಗಿ ಈ ರೀತಿಯ ಶಾಪಾಶಯಗಳು ಹುಟ್ಟಿಕೊಂಡಿರುವುದನ್ನು ಗುರುತಿಸಬಹುದು.

ರಾಜರ ಉದಾರ ಮನಸ್ಸನ್ನು ತಿಳಿಯಲು ದಾನ ಶಾಸನಗಳು ನೆರವಾದರೆ ಹೀಗೆ ಜನರ ಮನಸ್ಸಿನ ನಂಬಿಕೆಗಳನ್ನು ತಿಳಿಯಲು ಇದೇ ಶಾಸನಗಳು ನೆರವಾಗುತ್ತವೆ. ಶಾಪಾಶಯಗಳು ಹಾಗೂ ಪುಣ್ಯಾಶಯಗಳು ದಾನದ ಅಪಹರಣವನ್ನು ತಡೆದಿವೆ. ಮನುಷ್ಯ ಸುಖ ಜೀವನವನ್ನು ನಡೆಸಲು ಇಚ್ಛಿಸುವಂತವನು ಕೆಡುಕು ಸಂಭವಿಸಿಬಿಟ್ಟರೆ ಎಂಬ ಭಯ ಅವನನ್ನು ಕಾಡುತ್ತದೆ. ಆತನ ಮನಸ್ಸಿನ ದೌರ್ಬಲ್ಯತೆಯ ಕಾರಣವಾಗಿ ಈ ರೀತಿಯ ಆಶಯಗಳು ಶಾಸನದಲ್ಲಿ ಜನ್ಮತಾಳಿವೆ.

**ಕನ್ನಡ ಶಾಸನೋಕ್ತ ಶಾಪಾಶಯಗಳು**

- ಯೀ ಧರ್ಮ್ಮಕ್ಕೆ ಆರು ಅಳಿಪಿದವರು ಗಂಗೆಯ ತಡಿಯಲಿ ಕವಿಲೆಯ ವಧಿಸಿದ ಪಾಪಕ್ಕೆ ಹೋಹರು[110]
- ಯೀ ಧರ್ಮಕ್ಕೆ ತಪ್ಪಿದವರು ತಾಯಿ....[111]
- ತಮ್ಮ ತಾಯಿ....ಗಳಿಗೆ ತಪ್ಪಿದವರು[112]
- ವಾರಣಾಸಿಯಲಿ ಬ್ರಾಹ್ಮಣರ ಕೊಂದ ಪಾಪಕೆ ಹೋಹರು ಗಂಗೆಯ ತಡಿಯಲಿ ಕಪಿಲೆಯ ಕೊಂದ ಪಾಪಕ್ಕೆ ಹೋಹರು[113]
- ವಾರಣಾಸಿಯಲಿ ಗೋ ಬ್ರಾಹ್ಮಣರ ಕೊಂದ ದೋಶಕೆ ಮಾತೃಗಮನವ ಮಾಡಿದ ದೋಶಕೆ ಹೋಹರು[114]
- ಕಾಸೀಲಿ ಗೋಹತ್ಯೆ ಮಾಡಿದ ಪಾತಕಕ್ಕೆ ಹೋಗೋನು ಮಾತೃಗಮನ ಮಾಡಿದ ಪಾತಕಕ್ಕೆ.....[115]
- ಗೋವನ್ನೂ ಹಿರಿಯರನ್ನೂ ಬ್ರಾಹ್ಮಣರನ್ನೂ ಕೊಂದ ಪಾಪಕ್ಕೆ ಹೋಹರು[116]
- ಶಾಸನಕ್ಕೆ ತಪ್ಪಿದವರು ನಾಡಿಗೂ ಹಲವರಿಗೆಯೂ ತಪ್ಪಿದವರ[117]

- ಮೊಮ್ಮಗನ ತಿಂಬರು[118]
- ......ಯಂಜಲಿಗೆ ಆಶೆಮಾಡಿದಾಗೆ[119]
- ಯಿ ಧರ್ಮಕ್ಕೆ ಹಿಂದೂರಲ್ಲಿ ಯಾರು ಅಡ್ಡಿ ಮಾಡಿದಾಗ್ಯೂ ಕಾಶಿಯಲ್ಲಿ ಗೋಹತ್ಯಾ ಮಾಡಿದ ಹಾಗೆ। ಮಾತ್ರುಗಮನ ಮಾಡಿದ ಹಾಗೆ। ಮುಸಲಮಾನರಲ್ಲಿ ಯಿ ಧರ್ಮ ಪಟ್ಟಿನ್ಲಲಿ ಅಡ್ಡಿ ನಡೆಸಿದರೆ ಮಕ್ಕಾದಲ್ಲಿ ಹಂದಿ ಭಕ್ಷಣೆ ಮಾಡಿದ ಹಾಗೆಂದು ಬರೆಸಿಕೊಟ್ಟ ಧರ್ಮ[120]
- ಮುಸಲ್ಮಾನನಾದವನು ಮೆಕ್ಕಾದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಕಾಶಿಯಲ್ಲಿ ಗೋವ ಕೊಂದ ಪಾಪಕೆ ಹೋಹರು[121]
- ತಪ್ಪಿದವರ ಹೆಂಡತಿ[122]

## ಫಲಶ್ರುತಿ ಶ್ಲೋಕಗಳು

- ಈ ಧರ್ಮವನ್ನು ಪಾಲಿಸಿದವರು ಸಮಸ್ತ ಭೋಗ ಮೋಕ್ಷವಂಪಡೆವರು[123]
- ಪುತ್ರ ಪಾತ್ರ ಪಾರಂಪರ್ಯಂತ ಅನುಭವಿಸಿಕೊಂಡು ನಡಿಸಿದಂಥಾವರಿಗೆ ಕಲ್ಯಾಣ ಚಿಂತನೆ ಮಾಡಿ ಕೊಂಡು ಸುಖದಲ್ಲಿರುವರು.[124]
- ಯೀ ಮರ್ಯಾದೆಯಲ್ಲಿ ಸುಖದಿಂ ಭೋಗಿಸುವಂತಾಗಿ[125]

## ಸಂಸ್ಕೃತ ಶಾಪಾಶಯಗಳು

> **'ಸಾಮಾನ್ಯೋಯಂ ಧರ್ಮ ಸೇತು ರ್ನೃಪಣಾಂ। ಕಾಲೇ ಕಾಲೇ ಪಾಲನೀಯೋ ಭವದ್ಭಿಃ**
> **ಸರ್ವೇನೇತಾಂ ಭಾವಿನಃ ಪಾರ್ಥಿವೇಂದ್ರಾಂ। ಭೂಯೋಭಯೋೀಯಾಚತೇ ರಾಮಚಂದ್ರ।'**

(ಧರ್ಮನೆಂಬ ಸೇತು ಎಲ್ಲಾ ರಾಜರಿಗೂ ಒಂದೇ, ಇದನ್ನು ನೀವು ಕಾಲದಿಂದ ಕಾಲಕ್ಕೆ ಕಾಪಾಡಬೇಕು. ಹೀಗೆಂದು ಮುಂಬರುವ ರಾಜರಿಗೆ ರಾಮಚಂದ್ರನು ವಿನಂತಿಸಿ ಮತ್ತೆಮತ್ತೆ ನೆನಪಿಸುತ್ತಾನೆ.)

ಈ ಶಾಪಾಶಯ ಶ್ಲೋಕವು ಕ್ರಿ.ಶ.1253ರ ಹೊಯ್ಸಳರ ತಾಮ್ರಶಾಸನದಲ್ಲಿ ಈ ಶ್ಲೋಕವನ್ನು ಕಾಣಬಹುದು.[126]

> **'ಸ್ವದತ್ತಾಂ ಪರದತ್ತಾಂ ವಾ ಯೋ ಹರೇತಿ ವಸುಂಧರಾಂ।**
> **ಷಷ್ಟಿರ್ವರುಷ ಸಹಸ್ರಾಣಿ ವಿಷ್ಟಾಯಂ ಜಾಯತೇ ಕ್ರಿಮಿ॥'**

(ತಾನು ನೀಡಿದ ಭೂಮಿಯನ್ನಾಗಲೀ, ಪರರು ನೀಡಿದ ಭೂಮಿಯನ್ನಾಗಲೀ ಅಪಹರಿಸಿದರೆ ಅರವತ್ತು ಸಾವಿರ ವರ್ಷ ಸಗಣಿಯ ಹುಳುವಾಗಿ ಹುಟ್ಟುತ್ತಾನೆ) ಈ ಶಾಪವು ಹೊಯ್ಸಳರ ಶಾಸನದಲ್ಲಿ ಹಾಗೂ ವಿಜಯನಗರ ಅರಸರ ಕಾಲದ ದೊಮ್ಮಲೂರು,[127] ಬಳ್ಳಾಪುರಪೇಟೆ,[128] ಮೊದಲಾದ ಗ್ರಾಮಗಳಲ್ಲಿ ದೊರಕಿವೆ.

**'ಸ್ವದತ್ತಾ ದ್ವಿಗುಣಂ ಪುಣ್ಯಂ ಪರದತ್ತಾನುಪಾಲನಂ**
**ಪರದತ್ತಾಪಹಾರೇಣ ಸ್ವದತ್ತಂ ನಿಷ್ಫಲಂ ಭವೇತ್'**

(ತಾನು ದಾನ ನೀಡಿದ್ದಕ್ಕಿಂತ, ಬೇರೆಯವರು ನೀಡಿದ್ದನ್ನು ಕಾಪಾಡಿದರೆ ಎರಡರಷ್ಟು ಪುಣ್ಯ ಬರುತ್ತದೆ, ಬೇರೆಯವರ ದಾನವನ್ನು ಅಪಹರಿಸಿದರೆ ತಾನು ನೀಡಿದ ದಾನ ನಿಷ್ಫಲವಾಗುತ್ತದೆ.)

**'ಸ್ವದತ್ತಾ ಪುತ್ರಿಕಾ ಧಾತ್ರೀ ಪಿತೃದತ್ತಾ ಸಹೋದರೀ।**
**ಅನ್ಯದತ್ತಾ ಭವೇನ್ಮಾತಾ ವಿಪ್ರ(ದ)ದತ್ತಾ ವಸುಂಧರಾ ಮದ್ವಂಶಜಾಃ॥'**

(ತಾನು ನೀಡಿದ ಭೂಮಿ ತನ್ನ ಮಗಳಂತೆ, ತಂದೆ ನೀಡಿದ ಭೂಮಿ ಸೋದರಿಯಂತೆ, ಬೇರೆಯವರು ನೀಡಿದ್ದರೆ ಅದು ತಾಯಿಯಂತೆ, ಆದ್ದರಿಂದ ದಾನದ ಭೂಮಿಯನ್ನು ಬಿಟ್ಟುಬಿಡು)

**'ದಾನ ಪಾಲನಯೋರ್ಮಧ್ಯೇ ದಾನಾ ಶ್ರೇಯೋನು ಪಾಲನಂ**
**ದಾನಾತ್ಸ್ವರ್ಗ ಮವಾಪ್ನೋತಿ ಪಾಲನದಚ್ಚುತಂ ಪದಂ'**

(ದಾನ ನೀಡುವುದು ಅಥವಾ ಅದನ್ನು ಪಾಲಿಸುವುದು ಇವೆರಡರಲ್ಲಿ ದಾನವನ್ನು ಪಾಲಿಸುವುದೇ ಶ್ರೇಯಸ್ಸು, ದಾನದಿಂದ ಸ್ವರ್ಗ ಪ್ರಾಪ್ತಿಯಾದರೆ, ಅದರ ಪಾಲನೆಯಿಂದ ಅಚ್ಚುತ ಪದವಿ ಲಭಿಸುತ್ತದೆ.)

ಈ ಮೂರು ಶ್ಲೋಕಗಳು ಒಂದೇ ಶಾಸನಗಳಲ್ಲಿ ಕಾಣಸಿಗುತ್ತವೆ. ಬೆಂಗಳೂರು ನಗರ ಜಿಲ್ಲೆಯಲ್ಲಿ ದೊರೆತಿರುವ ವಿಜಯನಗರ ಅರಸರ ಕಾಲದ ಶಾಸನಗಳಲ್ಲಿ ಅತಿ ಹೆಚ್ಚು ಕಾಣಬಹುದು. ಕೊತ್ತನೂರು ಗ್ರಾಮ,[129] ಕನ್ನೆಲ್ಲಿ,[130] ಕೊಡಿಗೆಹಳ್ಳಿ,[131] ಸರ್ಜಾಪುರ,[132] ಮಾಯಿಸಂದ್ರ,[133] ಬಳ್ಳಾಪುರಪೇಟೆ[134] ಮೊದಲಾದ ಗ್ರಾಮಗಳ ಶಾಸನಗಳಲ್ಲಿ ಕಂಡುಬರುತ್ತವೆ.

## ಶಾಸನ ಕವಿಗಳು/ಲಿಪಿಕಾರರು/ರೂವಾರಿಗಳು

ಶಾಸನಗಳಲ್ಲಿ ಸಾಮಾನ್ಯವಾಗಿ ರಾಜರ ಹೆಸರುಗಳು, ದಾನ ನೀಡಿದವರ ಹೆಸರುಗಳು ಪ್ರಾರಂಭದಲ್ಲಿ ಕಾಣಸಿಗುತ್ತವೆ. ಇಂತಹ ಶಾಸನಗಳನ್ನು ಬರೆದ ಕವಿಗಳು ಹಾಗೂ ಅದರ ರೂವಾರಿಗಳು ಮತ್ತು ಆ ಶಾಸನವನ್ನು ರಚಿಸಿದ ಲಿಪಿಕಾರರ ಉಲ್ಲೇಖಗಳು ಸಾಮಾನ್ಯವಾಗಿ ಎಲ್ಲಾ ಶಾಸನಗಳಲ್ಲೂ

ಕಾಣಸಿಗುವುದಿಲ್ಲ. ಅಶೋಕನ ಬ್ರಹ್ಮಗಿರಿಯ ಶಾಸನದ ಅಂತ್ಯದಲ್ಲಿ "ಚಪಡೇನ ಲಿಖಿತಂ ಲಿಪಿಕರೇಣ" ಎಂದು ಖರೋಷ್ಠೀ ಅಕ್ಷರಗಳಲ್ಲಿ ಬರೆದಿದೆ.[135] ಶಾಸನಗಳಲ್ಲಿ ದೊರೆಯುವ ಪ್ರಥಮ ಲಿಪಿಕಾರ 'ಚಪಡ'ನೆಂಬ ವ್ಯಕ್ತಿ. ಕವಿಯೊಬ್ಬ ಹೇಳಿದ್ದನ್ನು ಬರೆದುಕೊಳ್ಳುವವನು ಲಿಪಿಕಾರನಾಗಿರುತ್ತಾನೆ. ಕೆಲವು ಶಾಸನಗಳಲ್ಲಿ ಕವಿ, ಲಿಪಿಕಾರ, ರೂವಾರಿಗಳ ಉಲ್ಲೇಖಗಳು ಸಿಗುತ್ತವೆ. ಶಾಸನ ಕವಿಗಳು ಉದ್ದೇಶಿತ ಕವಿಗಳಲ್ಲ. ಆದರೆ ರಾಜನ ಪ್ರಕಟಣೆಗಳನ್ನು ಜನಸಾಮಾನ್ಯರಿಗೆ ತಿಳಿಸುವ ಉದ್ದೇಶವಿರುತ್ತದೆ. ಇದು ಒಂದು ವೃತ್ತಿಯೂ ಹೌದು. ಸಾಮಾನ್ಯವಾಗಿ ಶಾಸನವನ್ನು ಬರೆದ ಕವಿಗಳು ತಮ್ಮ ಹೆಸರನ್ನು ಹೇಳಿಕೊಳ್ಳುವುದಿಲ್ಲ. ಶಾಸನದ ಕೊನೆಯಲ್ಲಿ 'ಶಾಸನ ಬರೆದಂ' ಎಂಬ ಉಲ್ಲೇಖವಿರುತ್ತದೆ ಅಷ್ಟೇ. ಬೆಂಗಳೂರು ಜಿಲ್ಲೆಯ ಶಾಸನಗಳಲ್ಲಿ ನಮಗೆ ಶಾಸನ ಕವಿಗಳ ನೇರ ಉಲ್ಲೇಖ ದೊರಕುವುದಿಲ್ಲ ಆದರೆ ಕಂಡರಣೆಕಾರ ಮತ್ತು ರೂವಾರಿಗಳ ಉಲ್ಲೇಖ ಸಿಗುತ್ತದೆ. ಇವರಲ್ಲಿ ಕೆಲವರು ಶ್ರೇಷ್ಠ ರೂವಾರಿಗಳೂ, ಪ್ರತಿಭಾನ್ವಿತರೂ ಆಗಿದ್ದರು ಎಂಬುದು ಅವರು ನೀಡಿರುವ ವಿವರಗಳಿಂದ ತಿಳಿಯಬಹುದು. ಮತ್ತೂ ಕೆಲವು ಲಿಪಿಕಾರರು ಅವರ ಪೂರ್ವಿಕರ ಹಾಗೂ ಬಿರುದುಗಳ ಬಗ್ಗೆಯೂ ಹೇಳಿಕೊಂಡಿರುತ್ತಾರೆ.

ಶಾಸನಗಳಲ್ಲಿ ಕವಿಗಳನ್ನು ರಚಿಸಿದಪಂ, ಪೇಳ್ದಪಂ, ವಿರಚಿಸಿದಪಂ ಎಂದರೆ ವ್ಯಕ್ತಿಯೊಬ್ಬ ಹೇಳಿದ್ದನ್ನು ಬರೆದು ಕೊಳ್ಳುವವನು ಲಿಪಿಕಾರನಾಗಿರುತ್ತಾನೆ. ಶಾಸನವನ್ನು ಕೆತ್ತುವವನನ್ನು ಕಂಡಿರಿಸಿದಪಂ, ಕಣ್ಡರಿಸಿದಂ, ಕಣ್ಡರಣೆ, ಕಲ್ಲುಕುಟಿಗ ಎಂದು ಹೇಳುವುದರ ಮೂಲಕ ಹೆಸರು, ಬಿರುದು, ಆರಾಧ್ಯ ದೇವರ ಹೆಸರು ಸ್ಥಳನಾಮಗಳನ್ನು ಉಲ್ಲೇಖಿಸಲಾಗಿರುತ್ತದೆ. ಕಲ್ಲಿನ ಫಲಕ ಸಿದ್ಧಮಾಡುವವರನ್ನು ರೂವಾರಿಗಳು ಅಥವಾ ಶಿಲಾಶಿಲ್ಪಿಗಳು ಅಥವಾ ತಾಮ್ರಶಾಸನ ಲೋಹ ಲಿಪಿಶಿಲ್ಪಗಳನ್ನು ರಚಿಸಿದವರನ್ನು ರೂವಾರಿ, ಸೂತ್ರಧಾರಿಗಳು ಎಂದು ಉಲ್ಲೇಖಿಸಲಾಗಿರುತ್ತದೆ. ಬೆಂಗಳೂರು ಜಿಲ್ಲೆಯ ಶಾಸನಗಳನ್ನು ಅವಲೋಕಿಸಿದಾಗ ದೊರೆಯುವ ಲಿಪಿಕಾರರು ಮತ್ತು ರೂವಾರಿಗಳನ್ನು ಈ ಮುಂದಿನಂತೆ ಹೆಸರಿಸಬಹುದು.

**ಕೈಲಾಸ ಪಂಡಿತ:–** 'ಈ ಶಾಸನವನ್ನು ಕೊರೆದವರು ಕೈಲಾಸ ಪಂಡಿತ' ಎಂದಿದೆ.[136] ಈತ ಬೆಂಗಳೂರು ಜಿಲ್ಲೆಯ ಶಾಸನದಲ್ಲಿ ದೊರೆಯುವ ಮೊದಲ ಕಂಡರಣೆಕಾರ ಹಾಗೂ ಗಂಗರ ಕಾಲಕ್ಕೆ ಸೇರಿವನು. ಕ್ರಿ.ಶ. 820ರ ವರ್ತೂರಿನ ಬಳಿ ದೊರೆತ ಗಂಗರ ದೊರೆ ಎರೆಯಪ್ಪನ ಕಾಲದ ಶಾಸನದಲ್ಲಿ ಉಲ್ಲೇಖಗೊಂಡಿದೆ.

**ನಾಗ:–** ಕ್ರಿ.ಶ.750ರ ದಾಸರಹಳ್ಳಿಯ ಶಾಸನವು[137] ಗಂಗದೊರೆ ಶ್ರೀ ಪುರುಷ ರಾಜನ ಕಾಲಕ್ಕೆ ಸೇರಿರುವುದು. ಇದೊಂದು ವೀರಗಲ್ಲು ಇದನ್ನು ಕೆತ್ತಿದವರು ಅಂಬಿ ಆಚಾರಿಯ ಮಗ ನಾಗ ಎಂಬ

ವಿವರವಿದೆ. ಈತನ ತಂದೆ 'ಅಂಬಿ' ಎಂಬುವನು ಆಚಾರಿ ವೃತ್ತಿಯನ್ನು ಮಾಡುತ್ತಿದ್ದು ಮಗ ಅದನ್ನು ಮುಂದುವರೆಸಿಕೊಂಡು ಬಂದಿದ್ದಾನೆ. ಶಾಸನವನ್ನು ಕೆತ್ತುವ ಕೆಲಸ ಮಾಡುವವರನ್ನು ಆಚಾರಿಗಳು ಎಂದು ಕರೆಯುತ್ತಿದ್ದಿರಬಹುದು. ಈ ವೃತ್ತಿ ವಂಶಪಾರಂಪರ್ಯವಾಗಿ ನಡೆದುಕೊಂಡು ಬಂದಿರುವುದನ್ನು ಕಾಣಬಹುದು.

**ಜಕ್ಕಣ್ಣ:–** ಕ್ರಿ.ಶ.1335ರ ಹೊಯ್ಸಳರ ಕಾಲದ ಈ ಶಾಸನವನ್ನು ಸೇನಬೋವ ಜಕ್ಕಣ್ಣ ಬರೆದದ್ದು ಎಂದು ತಿಳಿಯುತ್ತದೆ.[138] ಬಹುಶಃ ಈತ ಶಾಸನದ ಬರಹವನ್ನು ಬರೆದು ಕೊಟ್ಟಿದ್ದು ಇದನ್ನು ಕೆತ್ತಿದಾತ ಬೇರೆಯವರಿರಬಹುದು. ಅಂದರೆ ಸೇನಬೋವರು ಶಾಸನದ ಕರ್ತೃಗಳಾಗಿರುತ್ತಿದ್ದರು.

**ಬೈರೋಜ:–** ಕ್ರಿ.ಶ.1333ರ ಹೊಯ್ಸಳರ ಶಾಸನದಲ್ಲಿ 'ಜಕಣನ ಬರಹ ಈ ಸಾಸಾನವ ಹೊಯಿದತ ಎಂಗೋಜನ ಮಗ ಬೈರೋಜ' ಎಂದಿದೆ.[139] ಜಕ್ಕಣ ಶಾಸನದ ಕರ್ತೃವಾದರೆ ಬೈರೋಜ ಲಿಪಿಕಾರ ಅಥವಾ ಕಂಡರಣೆಕಾರ. ಈತನ ತಂದೆ ಎಂಗೋಜ ಎಂದು ಶಾಸನದಿಂದಲೇ ತಿಳಿಯುತ್ತದೆ. ಇವರನ್ನು 'ಓಜ'ರೆಂದು ಕರೆಯುತ್ತಿದ್ದರು ಎಂಬುದು ಸ್ಪಷ್ಟವಾಗುತ್ತದೆ. ಬೈರೋಜನ ತಂದೆ ಎಂಗೋಜನ ವೃತ್ತಿ ವಂಶಪಾರಂಪರ್ಯವಾಗಿ ಬಂದಿರಬಹುದು. ಈ ಶಾಸನದ ಬರಹಗಾರ ಮತ್ತು ಕಂಡರಿಸಿದಾತನ ಹೆಸರು ಒಂದೇ ಶಾಸನದಲ್ಲಿ ದೊರತಿರುವುದು ವಿಶೇಷವಾಗಿದೆ.

**ಅನಂತಣ್ಣ:–** ಈತನು ಹೊಯ್ಸಳರ ಕಾಲದಲ್ಲಿದ್ದ ಒಬ್ಬ ಲಿಪಿಕಾರ. ಕ್ರಿ.ಶ.1340ರ ಶಾಸನದಲ್ಲಿ 'ನಾಡ ಸೇನಬೋವ ಕೇಶವದೇವನ ಮಕ್ಕಳು. ಅನಂಚಂಣ್ಣನ ಬರಹ ಮಂಗಳ ಮಹಾಶ್ರೀ ಶ್ರೀ' ಎಂಬ ಉಲ್ಲೇಖವಿದೆ. ಈ ಉಲ್ಲೇಖದಿಂದ ಪ್ರಸ್ತುತ ಶಾಸನದ ಕರ್ತೃ ಅನಂತಣ್ಣ ಎಂಬುದು ಖಚಿತವಾಗುತ್ತದೆ. ಅಲ್ಲದೇ ಈತನ ತಂದೆ ಸೇನಬೋವ ಕೇಶವದೇವನ ಮಗ ಎಂಬುದು ಸಹ ಶಾಸನದಿಂದಲೇ ತಿಳಿದುಬರುತ್ತದೆ.[140]

**ಬಸವ ಓಜ:–** ಕ್ರಿ.ಶ.1346ರ ಹೊಯ್ಸಳರ ಮತ್ತೊಂದು ಶಾಸನದಲ್ಲಿ 'ಈ ಶಾಸನ ಕೆತ್ತಿದವರು ಅವರಿಗೆರೆಯ ನಳೋಜನ ಮಗ ಬಸವ ಓಜ' ಎಂದು ಉಲ್ಲೇಖವಾಗಿದೆ.[141] ಬಸವ ಓಜ ಹಾಗೂ ಆತನ ತಂದೆ ನಳೋಜ ಇಬ್ಬರು ಕಂಡರಣೆಕಾರರಾಗಿರಬೇಕು. ಇವರ ಊರು ಅವರಿಗೆರೆ ಎಂದು ಹೇಳಿಕೊಂಡಿದ್ದಾರೆ.

**ಗಂಗಪ್ಪ:–** ಕ್ರಿ.ಶ.1534ರ ವಿಜಯನಗರ ಕಾಲದ ಈ ಶಾಸನದಲ್ಲಿ[142] ಗಂಗಪನ ಬರಹ ಎಂದಿದ್ದು, ಈತ ಈ ಶಾಸನದ ಲಿಪಿಕಾರ ಎಂಬುದು ಸ್ಪಷ್ಟ.

**ಕಂಬಿಲಂಣ:–** ಕ್ರಿ.ಶ.1226ರ ಕಾಲದ ಈ ಶಾಸನವು[143] ತೆರಿಗೆಯ ಬಗ್ಗೆ ಹೇಳುತ್ತಿದ್ದು, ಇದರ ಬಹುಭಾಗ ತ್ರುಟಿವಾಗಿದೆ. ಈ ಶಾಸನದ ಕೊನೆಯ ಸಾಲು 'ಕಂಬಿಲಂಣನ ಬರಹ' ಎಂದಿದೆ. ಈ ಶಾಸನದ ರುವಾರಿ ಕಂಬಿಲಣ್ಣ ಎಂಬುವನು ಎಂದು ತಿಳಿಯುತ್ತದೆ.

**ಪ್ರಥಾಪರಾಯ:–** ಕ್ರಿ.ಶ.1431ರ ವಿಜಯನಗರ ಕಾಲದ ಈ ಶಾಸನವು ಯಶವಂತಪುರ ಹೋಬಳಿಯಲ್ಲಿ ದೊರೆತಿದ್ದು.[144] ಈ ಶಾಸನದ ಕಡೆಯ ಸಾಲು 'ಶ್ರೀಮತು ಪ್ರಥಾಪರಾಯರ ಬರಹ' ಎಂದಿದೆ. ಈ ಶಾಸನದ ಲಿಪಿಕಾರ ಪ್ರಥಾಪರಾಯ ಎಂಬುದು ಸ್ಪಷ್ಟವಾಗುತ್ತದೆ.

**ಲಿಂಗಣ ಮಾರೋಜ:–** ಕ್ರಿ.ಶ.1330ರ ಕಾಲದ ಹೊಯ್ಸಳರ ಶಾಸನದಲ್ಲಿ ಸೇನಬೋವ ಲಿಂಗಣ ಮಾರೋಜನ ಬರಹ' ಎಂದಿದೆ.[145] ಈತ ಹೊಯ್ಸಳರ ಕಾಲದಲ್ಲಿ ಸೇನಬೋವನಾಗಿದ್ದಿರಬೇಕು. ಹಾಗೂ ಈ ಶಾಸನದ ಲಿಪಿಕಾರನಾಗಿದ್ದಾನೆ.

**ಚಿನ್ನಣ್ಣ:–** ದೊಮ್ಮಲೂರಿನಲ್ಲಿ ದೊರೆತ ಶಾಸನವೊಂದರಲ್ಲಿ[146] 'ಚಿನ್ನಣ್ಣನ ಬರಹ ಸಾಕ್ಷಿಗಳೊಪ್ಪ ತಿಂಮಣ್ಣನ ಬರಹ ಗೂಳಿಯಪ್ಪನ ಬರಹ ಯಿಂತಿವರು ಭಯನ್ಮತದಿಂ ಸಂಬಕಿ ಬರಹ ಚೊಕ್ಕಪ್ಪ' ಎಂದಿದೆ. ಗೂಳಿಯಪ್ಪ ಮತ್ತು ಚೊಕ್ಕಪ್ಪನೆಂಬುವವರು ಲಿಪಿಕಾರರಾಗಿದ್ದಾರೆ.

ಹೀಗೆ ಶಾಸನಗಳ ಆಧಾರದಿಂದ ಬೆಂಗಳೂರು ಪ್ರದೇಶದಲ್ಲಿದ್ದ ಕೈಲಾಸ ಪಂಡಿತ, ನಾಗ, ಜಕ್ಕಣ್ಣ, ಬೈರೋಜ, ಅನಂತಣ್ಣ, ಬಸವ ಓಜ, ಗಂಗಪ್ಪ, ಕಂಬಿಲಂಣ, ಪ್ರಥಾಪರಾಯ, ಮಾರೋಜ, ಕಿಟ್ಟಪ್ಪ, ಚಿನ್ನಣ್ಣ ಮೊದಲಾದ ಲಿಪಿಕಾರರು, ಕಂಡರಣೆಕಾರರು ಮತ್ತು ರುವಾರಿಗಳನ್ನು ಗುರುತಿಸಲಾಗಿದೆ.

## ಶಾಸನಗಳ ಭಾಷೆ

ಶಾಸನಗಳಲ್ಲಿ ಆಯಾ ಕಾಲದ ಆಡುಭಾಷೆ ತನ್ನ ಸ್ವರೂಪದಲ್ಲಿ ಕಾಣಿಸಿಕೊಳ್ಳುವ ಸಾಧ್ಯತೆಗಳು ಹೆಚ್ಚು. ಕನ್ನಡ ಭಾಷೆಯ ಸ್ಥಿತ್ಯಂತರ ಅಥವಾ ಅವಸ್ಥಾಂತರವನ್ನು ಚಿತ್ರಿಸುವಲ್ಲಿ ಶಾಸನಗಳು ಮುಖ್ಯವಾಗುತ್ತವೆ. ಸುಮಾರು ಕ್ರಿ.ಶ.450ರ ಹಲ್ಮಿಡಿ ಶಾಸನದಿಂದ ಇತ್ತೀಚಿನವರೆಗೆ ದೊರಕುವ ಶಾಸನಗಳು ಬಹುತೇಕ ಆಯಾಕಾಲದ ಭಾಷೆಯನ್ನನುಸರಿಸುತ್ತವೆ. ಶಾಸನಗಳನ್ನು ಕಾಲಾನುಕ್ರಮವಾಗಿ ನೋಡಿದರೆ, ಸ್ಥೂಲವಾಗಿ ಕ್ರಿ.ಶ. ಸುಮಾರು 800ರವರೆಗೆ ಪೂರ್ವದ ಹಳಗನ್ನಡದ ಶಾಸನಗಳು, ಅಲ್ಲಿಂದ ಕ್ರಿ.ಶ. ಸುಮಾರು 950–1000ದವರೆಗೆ ಹಳಗನ್ನಡದ ಶಾಸನಗಳು, ಬಳಿಕ ಅನೇಕ ಶತಮಾನಗಳಾವರೆಗೆ, ನಡುಗನ್ನಡದ ಶಾಸನಗಳು ಮತ್ತು 19–20ನೇ ಶತಮಾನಗಳಲ್ಲಿ ಹೊಸಗನ್ನಡದ ಶಾಸನಗಳು ದೊರಕುತ್ತವೆ. ಹೀಗೆ ಭಾಷೆ ಬೆಳೆಯದೆ ಸಂಸ್ಕೃತಿ ಬೆಳೆಯಲು ಸಾಧ್ಯವಿಲ್ಲ. ಹಾಗಾಗಿ ಭಾಷೆಗೂ ಸಂಸ್ಕೃತಿಗೂ ನಿಕಟ ಸಂಬಂಧವಿದೆ.

ಬೆಂಗಳೂರು ನಗರ ಜಿಲ್ಲೆಯಲ್ಲಿ ಇದುವರೆಗೂ ಸುಮಾರು 280 ಕ್ಕಿಂತಲೂ ಹೆಚ್ಚು ಶಾಸನಗಳು ದೊರೆತಿವೆ. ದೊರೆತ ಶಾಸನಗಳು ಕನ್ನಡ, ಸಂಸ್ಕೃತ, ತೆಲುಗು, ತಮಿಳು, ಪಾರ್ಸಿ ಭಾಷೆಯ ಶಾಸನಗಳಾಗಿವೆ. ಕೆಲವು ಶಾಸನಗಳಲ್ಲಿನ ಪ್ರಾರ್ಥನಾ ಶ್ಲೋಕವು ಸಂಸ್ಕೃತ ಭಾಷೆಯಿಂದ ಕೂಡಿರುತ್ತಿತ್ತು. ಗಂಗರ ಕಾಲದಲ್ಲಿನ ಶಾಸನಗಳು ಹಳಗನ್ನಡದಲ್ಲಿದ್ದರೆ, ಚೋಳರು ಮತ್ತು ಹೊಯ್ಸಳರ ಶಾಸನಗಳು ಕನ್ನಡ ಭಾಷೆಯ ಜೊತೆಗೆ ತಮಿಳು ಭಾಷೆಯ ಶಾಸನಗಳು ಹೆಚ್ಚಾಗಿ ಕಾಣಿಸಿಕೊಂಡಿವೆ. ವಿಜಯನಗರದ ಕಾಲದಲ್ಲಿ ತೆಲುಗು ಮತ್ತು ಕನ್ನಡ ಭಾಷೆಯ ಶಾಸನಗಳು ದೊರೆಯುತ್ತವೆ. ಮೈಸೂರು ಒಡೆಯರ ಕಾಲಕ್ಕೆ ದೊರೆಯುವ ಶಾಸನಗಳು ಕನ್ನಡದ್ದಾಗಿವೆ.

ದೊಡ್ಡಬೇಗೂರಿನಲ್ಲಿ ದೊರೆತ ಶಾಸನವೊಂದು ಗಂಗರ ಕಾಲಕ್ಕೆ ಸೇರಿದೆ.[147] ಈ ಶಾಸನದ ಭಾಷೆ ಪೂರ್ವದ ಹಳಗನ್ನಡ. ಈ ಶಾಸನದಲ್ಲಿರುವ 'ಇದನ್ನಟಿವೋನ್', 'ಕಾಪ್ಪೋನ್', 'ಪಞ್ಚಮಹಾಪಾದಕನಕ್ಕುಂ' ಪೂರ್ವದ ಹಳಗನ್ನಡದ ಪದಗಳಾಗಿವೆ. ಇದೇ ಶಾಸನದಲ್ಲಿ ತಮಿಳು ಭಾಷಾ ಪ್ರಭಾವ ಸ್ವಲ್ಪ ಮಟ್ಟಿಗಾಗಿರುವುದನ್ನು ಗುರುತಿಸಬಹುದು. ಪಡೆತತು(ಪಡೆದದು), ಮಹಾಪಾದಕನಕ್ಕುಂ(ಮಹಾಪಾತಕನಕ್ಕುಂ) ಇಲ್ಲಿ 'ದ' ಕಾರಕ್ಕೆ ಬದಲಾಗಿ 'ತ'ಕಾರ ಬಳಸಿದ್ದಾರೆ. ಎಱೆಯಪ್ಪ,[148] ಪಟಿಕಾಱೆ,[149] ಗಂಗರ ಕಾಲದ ಶಾಸನದಲ್ಲಿ ಬಳಕೆಯಾಗಿದೆ. 'ಱ' ಮತ್ತು 'ಟ'ಕಾರ ಬಳಕೆಯಲ್ಲಿತ್ತು.

ಬೆಂಗಳೂರಿನಲ್ಲಿ ದೊರೆತಿರುವ ಚೋಳರ ಎಲ್ಲಾ ಶಾಸನಗಳು ತಮಿಳು ಭಾಷೆಯಲ್ಲಿವೆ. ಈ ಶಾಸನಗಳನ್ನು ಅವಲೋಕಿಸಿ ಮುಂದಿನ ಪದಗಳನ್ನು ಗುರುತಿಸಲಾಗಿದೆ. ಬೆಂಗಳೂರು>ವೆಂಗಳೂರು ಆಗಿದೆ.[150] ಕನ್ನಡದ 'ಬೆ' ಕಾರಕ್ಕೆ ಬದಲಾಗಿ 'ವೆ' ಕಾರವಾಗಿದೆ. ಹಾಗೆಯೇ ಯಲಹಂಕ>ಇಲೈಪಾಕ್ಕವಾದರೆ,[151] ತಾವರೆಕೆರೆ>ತಮಿರೈಕಿರವಾಗಿದೆ.[152]

ವಿಜಯನಗರ ಕಾಲದ ಶಾಸನಗಳಲ್ಲಿ ತೆಲುಗು ಭಾಷೆಯ ಪ್ರಭಾವವನ್ನು ಗುರುತಿಸಬಹುದು. ಕ್ರಿ.ಶ.1508ರ ಶಾಸನದಲ್ಲಿ "ಯೀ ಧರ್ಮ ಯವರು ನಾಗನಿಯನಿ ದೊರ ಪೆದ ಕೊಡುಕುನು ತಾನೆ ವಾರಣಾಶಿನಿ ಚಂಪಿ ಆ ಮಾಂಸ ತಿನವಾಡು ಅನಿದೇವತುಲು ಋಷುಲು ಬ್ರಾಹ್ಮಲು ಶಾಪಂ' ಎಂದಿದೆ.

ಕನ್ನಡ, ತಮಿಳು, ತೆಲುಗು ಭಾಷೆಗಳಷ್ಟೇ ಅಲ್ಲದೆ ಸಂಸ್ಕೃತ ಭಾಷೆಯಲ್ಲೂ ಶಾಸನಗಳು ದೊರೆಯುತ್ತವೆ. ತಾಮ್ರ ಶಾಸನಗಳಲ್ಲಿ ಸಂಸ್ಕೃತವು ಸರ್ವೇಸಾಮಾನ್ಯ. "ದಾನ ಪಾಲನಯೋರ್ಮಧ್ಯೇ ದಾನಾ ಶ್ರೇಯೋನು ಪಾಲನಂ ದಾನಾತ್ಸ್ವರ್ಗ ಮವಾಪ್ನೋತಿ ಪಾಲನದಚ್ಚುತಂ ಪದಂ" ಈ ರೀತಿಯ

ಮಂಗಳ ಶ್ಲೋಕಗಳು, ಕೊನೆಯಲ್ಲಿ ಬರುವ ಫಲಸ್ತುತಿ, ಶಾಪಾಶಯ, ಪ್ರಶಂಸನಾ ಪದ್ಯಗಳು ಸಾಮಾನ್ಯವಾಗಿ ಸಂಸ್ಕೃತ ಭಾಷೆಯಲ್ಲಿರುತ್ತವೆ.

ಹೀಗೆ ಬೆಂಗಳೂರು ನಗರದಲ್ಲಿ ಕನ್ನಡವಷ್ಟೇ ಅಲ್ಲದೆ ಬಹುಭಾಷೆಯ ಶಾಸನಗಳು ಕಾಣಸಿಗುತ್ತವೆ. ಒಂದು ಪ್ರದೇಶದಲ್ಲಿ ಬಹುಭಾಷಾ ಶಾಸನಗಳು ಕಾಣಿಸಿಕೊಳ್ಳಲು ಮುಖ್ಯ ಕಾರಣಗಳಲ್ಲಿ ವಲಸೆಯೂ ಒಂದು. ಹಾಗೂ ರಾಜಕೀಯ, ಧಾರ್ಮಿಕ, ಆರ್ಥಿಕ, ಸಾಮಾಜಿಕ ಅಂಶಗಳು ಕಾರಣವಾಗುತ್ತವೆ. ರಾಜರು ತಮ್ಮ ಅಧಿಕಾರ ಸ್ಥಾಪನೆಗಾಗಿ ಗೆದ್ದ ರಾಜ್ಯಗಳಲ್ಲಿ ಶಾಸನಗಳನ್ನು ಹೊರಡಿಸುವುದು, ನಾಣ್ಯಗಳನ್ನು ಟಂಕಿಸುವುದು ಸಾಮಾನ್ಯವಾಗಿ ಕಂಡು ಬರುತ್ತದೆ. ರಾಜರ ಅಧೀನದಲ್ಲಿರುವ ಇತರೆ ವರ್ಗದವರಾದ ಅಧಿಕಾರಿಗಳು, ವರ್ತಕರು, ಸೈನಿಕರು ಹೊಸ ಪ್ರದೇಶಗಳಲ್ಲಿ ನೆಲೆನಿಂತಾಗ ಸಹಜವಾಗಿ ಅವರ ಮೂಲ ನೆಲೆಯ ಭಾಷೆ ಸಂಸ್ಕೃತಿಗಳು ಆ ಪ್ರಾಂತ್ಯಗಳಲ್ಲೂ ವಿಸ್ತರಿಸುತ್ತವೆ. ಈ ಕಾರಣಗಳಿಂದಲೇ ಏಕಸಂಸ್ಕೃತಿ/ಏಕಭಾಷಾ ಪ್ರಾಂತ್ಯಗಳು ಬಹುಭಾಷಾ ಪ್ರಾಂತ್ಯಗಳಾಗಿ ಪರಿವರ್ತಿತವಾಗಲು ಸಾಧ್ಯವಾಗುತ್ತದೆ.

**ಸಾಹಿತ್ಯ**

ಶಾಸನದಲ್ಲಿನ ಸಾಹಿತ್ಯವು ಸಾಮಾನ್ಯವಾಗಿ ಗದ್ಯಾತ್ಮಕವಾಗಿದ್ದು, ವಿಷಯವನ್ನು ನೇರವಾಗಿ, ಸರಳವಾಗಿ ನಿರೂಪಿಸುವ ಕ್ರಮವೊಂದಿತ್ತು. ಗಂಗರ ಕಾಲದಲ್ಲಿನ ಶಾಸನಗಳು ಈ ರೀತಿಯ ಸರಳವಾದ ನಿರೂಪಣೆಯನ್ನು ಹೊಂದಿದ್ದವು. "ಸ್ವಸ್ತಿ ಸಮಸ್ತ ಭುವನ ವಿನೂತ ಗಙ್ಗ ಕುಳ ಗಗನ ನಿರ್ಮ್ಮಳ ತಾರಾಪತಿ ಜಳಧಿ ಜಳ ವಿಮುಳ ವೆಳೆಯ ಮೇಖಳ ಕಳಾಪಾಳಂ ತ್ರೈಳಾಧಿಪತ್ಯ ಲಕ್ಷ್ಮೀಶ್ವಯಂ ವೃತ ಪತಿತಾಳ್ವಾದ್ಯ ಗಣಿತ ಗುಣ ವಿಭೂಷಣ ವಿಭೂಷಿತ ವಿಭೂತಿ ಶ್ರೀ ಮದೆಱೆಯಪ್ಪರಸರ್"[153] ಕ್ರಿ.ಶ.890ರ ಗಂಗ ಎಱೆಯಪ್ಪರಸನ ಕಾಲದ ಬೇಗೂರು ಶಾಸನದಲ್ಲಿ ಎರೆಯಪ್ಪನ ಬಿರುದಾವಳಿಗಳು, ದಾನವಿವರವನ್ನು ನೀಡಲಾಗಿದೆ. ಇದು ಗಂಗರ ಕಾಲದ ಶಾಸನದ ನಿರೂಪಣಾ ಕ್ರಮವನ್ನು ತಿಳಿಸುವ ದಾಖಲೆಯಾಗಿದೆ.

ಹೊಯ್ಸಳರ ಕಾಲದ ಶಾಸನಗಳು ಸಹ ಬಹುತೇಕ ಗದ್ಯಾತ್ಮಕವಾಗಿಯೇ ಇವೆ. "ಸ್ವಸ್ತಿ ಸಮಸ್ತ ಭುವನಾಶ್ರಯಂ ಶ್ರೀ ಪೃಥುವೀ ವಲ್ಲಭಂ ಮಹಾರಾಜಾಧಿ ರಾಜ ರಾಜಪರಮೇಶ್ವರ ದ್ವಾರಾವತಿ ಪುರವರಾಧೀಶ್ವರಂ ಯಾದವ ಕುಲಾಂಬರದ್ಯುಮಣಿ ಸರ್ಬ್ಬಜ್ಞ ಚೂಡಾಮಣಿ ಮಲೆ ರಾಜ ರಾಜಮಲಪರೊಳುಗಂಡ ಭೇರುಂಡ ಕದನ ಪ್ರಚಂಡ ಅಸಹಾಯಸೂರ, ಏಕಾಂಗ ವೀರ ಸನಿವಾರಸಿದ್ಧಿ ಗಿರಿದುರ್ಗ್ಗಮಲ್ಲ ಚಲದಂಕ"[154] ಹೀಗೆ ಸುಧೀರ್ಘ ಬಿರುದುಗಳ ಮಾಲೆ ಕನ್ನಡ

ಶಾಸನದಲ್ಲಿ ಕಾಲೂರಿ ನಿಂತುದಕ್ಕೆ ಈ ಸಾಲುಗಳು ನಿದರ್ಶನವಾಗಿವೆ. ನಿರಾಡಂಬರವಾಗಿ ಬರುತ್ತಿದ್ದ ಅರಸನ ಹೆಸರನ್ನಷ್ಟೇ ಉಲ್ಲೇಖಿಸುತ್ತಿದ್ದ ಶಾಸನಕ್ಕೆ ಆಕರ್ಷಣಿಯ ಆರಂಭವನ್ನು ನೀಡುತ್ತಿದ್ದ ಪರಂಪರೆಯೊಂದು ಹೊಯ್ಸಳರ ಶಾಸನದಲ್ಲಿ ನೋಡಬಹುದು.

ಯಲಹಂಕ ನಾಡಪ್ರಭುಗಳ ಕಾಲಕ್ಕೆ ಸೇರಿರುವ ಕ್ರಿ.ಶ.1605ರಲ್ಲಿ ರಚಿತವಾದ ಇಮ್ಮಡಿ ಕೆಂಪೇಗೌಡರ ಕೆಂಪಾಪುರ ಅಗ್ರಹಾರದ ದಾನಶಾಸನವು ಸಂಪೂರ್ಣವಾಗಿ ಸಂಸ್ಕೃತ ಭಾಷೆಯ ಶ್ಲೋಕವನ್ನು ಒಳಗೊಂಡಿದೆ. "ಈ ಶಾಸನದಲ್ಲಿರುವ ಮಹತ್ವದ ಅಂಶವೆಂದರೆ 'ಮೇಘಪ್ರಸ್ತರ' ಎಂಬ ಕಾವ್ಯವನ್ನು ಕನ್ನಡ ಭಾಷೆಯಲ್ಲಿ ಬರೆದ ಕವಿಗಳಾದ ತಿರುಮಲಶಾಸ್ತ್ರಿ ಎಂಬುವರಿಗೆ ಇಮ್ಮಡಿ ಕೆಂಪೇಗೌಡರು ಒಂದು ವೃತ್ತಿಯನ್ನು ದಾನವಾಗಿ ಕೊಟ್ಟ ವಿವರಗಳಿವೆ. ಪ್ರಾಯಶಃ ಮೇಘಪ್ರಸ್ತರ ಕಾವ್ಯವು ಕಾಳಿದಾಸನ ಮೇಘದೂತದ ಪ್ರಭಾವದಿಂದ ರಚಿತವಾದ ಕೃತಿಯಿರಬಹುದು ಅಥವಾ ಮೇಘದೂತದ ಕನ್ನಡಾನುವಾದವೆಂದು ತೋರುತ್ತದೆ"[155] ಎಂದು ಡಾ.ಎಂ.ಜಿ.ಮಂಜುನಾಥರವರು ಅಭಿಪ್ರಾಯಪಟ್ಟಿದ್ದಾರೆ.

ಸಾಹಿತ್ಯದ ದೃಷ್ಟಿಯಿಂದ ಬೆಂಗಳೂರಿನಲ್ಲಿ ದೊರೆತ ಶಾಸನಗಳಲ್ಲಿ ಸಾಹಿತ್ಯದ ಅಂಶ ವಿರಳವೆಂದೇ ಹೇಳಬಹುದು. ಹಾಗೂ ಸಾಹಿತ್ಯದ ಹಿನ್ನಲೆಯಲ್ಲಿ ವಿಶೇಷವಾದ ಸ್ಥಾನವಿಲ್ಲ. ಶಾಸನಗಳಲ್ಲಿನ ಪ್ರಾರ್ಥನಾ ಶ್ಲೋಕಗಳು ಮತ್ತು ಶಾಪಾಶಯಗಳನ್ನು ಹೊರತುಪಡಿಸಿ ಮತ್ತೆಲ್ಲಿಯೂ ನಮಗೆ ಸಾಹಿತ್ಯಕ ಅಂಶಗಳು  ದೊರೆಯುವುದಿಲ್ಲ. ರೂವಾರಿ ಮತ್ತು ಲಿಪಿಕಾರರ ಉಲ್ಲೇಖಗಳು ದೊರೆತರೂ ಒಬ್ಬ ಶಾಸನಕವಿಯ ಉಲ್ಲೇಖ ನಮಗೆ ದೊರಕುವುದಿಲ್ಲ. ಈ ಕಾರಣದಿಂದಲೋ ಏನೋ ಬೆಂಗಳೂರಿನ ಶಾಸನಗಳಲ್ಲಿನ ಸಾಹಿತ್ಯ ಬರಡಾಗಿದೆ. ಶಾಸನಗಳೂ ಶ್ರೀಸಾಮಾನ್ಯರಿಗಾಗಿ ಹಾಕಿಸುತ್ತಿದ್ದರಿಂದ ಯಾವುದೇ ಪಾಂಡಿತ್ಯಪೂರ್ಣ ಬರವಣಿಗೆ ಇರುತ್ತಿರಲಿಲ್ಲ. ಹಾಗಾಗಿ ಸಾಹಿತ್ಯಕ ಅಂಶಗಳು ಕಡಿಮೆಯಾಗಿರಬಹುದು.

ಹೀಗೆ ಬೆಂಗಳೂರು ನಗರದ ಶಾಸನಗಳಲ್ಲಿ ಉಲ್ಲೇಖಗೊಂಡಿರುವ ಸ್ಥಳನಾಮಗಳು, ಲಿಪಿಕಾರರು, ಶಾಪ, ಆಶಯ, ಪ್ರಾರ್ಥನಾ ಶ್ಲೋಕಗಳು, ಫಲಶ್ರುತಿ ಶ್ಲೋಕಗಳು, ಶಾಸನಗಳ ಭಾಷೆ, ಶಾಸನ ಸಾಹಿತ್ಯವನ್ನು ವಿವರಣಾತ್ಮಕವಾಗಿ ವಿಶ್ಲೇಷಿಸಲಾಗಿದೆ.

## ಕೊನೆ ಟಿಪ್ಪಣಿಗಳು

1. ಡಾ.ಎಂ.ಚಿದಾನಂದಮೂರ್ತಿ–ವಾಗರ್ಥ, ಪು.22
2. ಡಾ.ಹಂಪನಾಗರಾಜಯ್ಯ–ಚಂದ್ರಕೊಡೆ, ಪು.2
3. ಬಿ.ಎಲ್.ರೈಸ್(ಸಂ)–EC IX ಬೆಂಗಳೂರು–79, ಅಗರ, ಪು.28
4. ಪೂರ್ವೋಕ್ತ, ಬೆಂಗಳೂರು–80, ಅಗರ, ಪು.29
5. ಪೂರ್ವೋಕ್ತ, ಬೆಂಗಳೂರು–30, ಅಲ್ಲಾಳಸಂದ್ರ, ಪು.16
6. ಪೂರ್ವೋಕ್ತ, ಬೆಂಗಳೂರು–96, ಬೇಗೂರು, ಪು.33
7. ಪೂರ್ವೋಕ್ತ, ಬೆಂಗಳೂರು–79, ಅಗರ, ಪು.28
8. ಪೂರ್ವೋಕ್ತ, ಬೆಂಗಳೂರು–40, ವರ್ತೂರು, ಪು.19
9. ಪೂರ್ವೋಕ್ತ, ಬೆಂಗಳೂರು–47, ದೊಡ್ಡಕನ್ನೆಲ್ಲಿ, ಪು.21
10. ಪೂರ್ವೋಕ್ತ, ಬೆಂಗಳೂರು–41, ಪಟ್ಟಂದೂರು, ಪು.19
11. ಕರ್ನಾಟಕ ಸ್ಟೇಟ್ ಗ್ಯಾಸೆಟಿಯರ್, ಬೆಂಗಳೂರು ಜಿಲ್ಲೆ, 1990, ಪು.960,961
12. ಕನ್ನಡ ನಿಘಂಟು, ಕ.ಸಾ.ಪ, ಸಂಪುಟ–7 ಪು.695
13. ಬಿ.ಎಲ್.ರೈಸ್(ಸಂ)–EC IX ಬೆಂಗಳೂರು–120, ಕಾಟನಾಯಕನಪುರ, ಪು.44
14. ಪೂರ್ವೋಕ್ತ, ಬೆಂಗಳೂರು–109, ಕೆಂಗೇರಿ, ಪು.89
15. ಎಂ.ಜಿ.ಮಂಜುನಾಥ–ಕೆಂಗೇರಿಯ ಸಾಂಸ್ಕೃತಿಕ ಪರಂಪರೆ, ಪು.9
16. ಪೂರ್ವೋಕ್ತ, ಪು.9
17. ಬಿ.ಎಲ್.ರೈಸ್(ಸಂ)–EC IX ದೇವನಹಳ್ಳಿ–50, ಕಟ್ಟೀಗೆನಹಳ್ಳಿ, ಪು.181
18. ಪೂರ್ವೋಕ್ತ, ಬೆಂಗಳೂರು–30, ಬೇಗೂರು, ಪು.30
19. ಪೂರ್ವೋಕ್ತ, ಬೆಂಗಳೂರು–83, ಬೇಗೂರು, ಪು.30
20. ಸಂಕ್ಷಿಪ್ತ ಕನ್ನಡ ಸಾಹಿತ್ಯ ನಿಘಂಟು, ಕನ್ನಡ ಸಾಹಿತ್ಯ ಪರಿಷತ್ತು, ಪು.253
21. ಪೋರ್ವೋಕ್ತ–ಪು.292
22. ಬಿ.ಎಲ್.ರೈಸ್(ಸಂ)–EC IX ಬೆಂಗಳೂರು–118, ಕೊತ್ತನೂರು, ಪು.43
23. ಪೂರ್ವೋಕ್ತ, ಬೆಂಗಳೂರು–51, ಗುಂಜೂರು, ಪು.22

24. EC IX ಅನುಬಂಧ ಸಂಪುಟ, ಬೆಂಗಳೂರು–166, ಕಲ್ಲುಕೆರೆ, ಪು.35

25. ಬಿ.ಎಲ್.ರೈಸ್(ಸಂ)–EC IX ಆನೇಕಲ್ಲು–71, ಕಾಡುಜಕ್ಕನಹಳ್ಳಿ, ಪು.252

26. ಪೂರ್ವೋಕ್ತ, ಆನೇಕಲ್ಲು–58, ಕಾಮನಾಯಕನಹಳ್ಳಿ, ಪು.249

27. ಪೂರ್ವೋಕ್ತ, ಬೆಂಗಳೂರು–122, ಕನ್ನೆಲ್ಲಿ, ಪು.44

28. ಪೂರ್ವೋಕ್ತ, ಬೆಂಗಳೂರು–123, ಗೊಗಂಡಿಪುರ, ಪು.45

29. ಪೂರ್ವೋಕ್ತ, ಬೆಂಗಳೂರು–49, ಕಸವನಹಳ್ಳಿ, ಪು.21

30. ಪೂರ್ವೋಕ್ತ, ಬೆಂಗಳೂರು–83, ಬೇಗೂರು, ಪು.30

31. ಪೂರ್ವೋಕ್ತ, ಬೆಂಗಳೂರು–89, ಬೇಗೂರು, ಪು.31

32. ಪೂರ್ವೋಕ್ತ, ಬೆಂಗಳೂರು–123, ಗೊಗಂಡಿಪುರ, ಪು.45

33. ಪೂರ್ವೋಕ್ತ, ಬೆಂಗಳೂರು–78, ಜಕ್ಕಸಂದ್ರ, ಪು.28

34. ಪೂರ್ವೋಕ್ತ, ಬೆಂಗಳೂರು–116, ತುರಹಳ್ಳಿ, ಪು.42

35. ಪೂರ್ವೋಕ್ತ, ಬೆಂಗಳೂರು–118, ಗೊಟ್ಟಿಗೆರೆ, ಪು.43

36. ಪೂರ್ವೋಕ್ತ, ಬೆಂಗಳೂರು–19, ಚಿಕ್ಕಬೆಟ್ಟಹಳ್ಳಿ, ಪು.12

37. ಪೂರ್ವೋಕ್ತ, ಬೆಂಗಳೂರು–129, ನಾಗಶೆಟ್ಟಿಹಳ್ಳಿ, ಪು.48

38. ಪೂರ್ವೋಕ್ತ, ಬೆಂಗಳೂರು–10, ದೊಮ್ಮಲೂರು, ಪು.11

39. ಪೂರ್ವೋಕ್ತ, ಬೆಂಗಳೂರು–21, ಜಕ್ಕೂರು, ಪು.13

40. ಪೂರ್ವೋಕ್ತ, ಬೆಂಗಳೂರು–30, ಅಲ್ಲಾಳಸಂದ್ರ, ಪು.16

41. ಪೂರ್ವೋಕ್ತ, ಆನೇಕಲ್ಲು–91, ವಾಜರಹಳ್ಳಿ, ಪು.237

42. ಪೂರ್ವೋಕ್ತ, ಆನೇಕಲ್ಲು–80, ಜಿಗಣಿ, ಪು.253

43. ಪೂರ್ವೋಕ್ತ, ಬೆಂಗಳೂರು–114, ತಲಗಟ್ಟಪುರ, ಪು.41

44. ಪೂರ್ವೋಕ್ತ, ಬೆಂಗಳೂರು–68, ಮಡಿವಾಳ, ಪು.26

45. ಪೂರ್ವೋಕ್ತ, ಬೆಂಗಳೂರು–65, ಮಡಿವಾಳ, ಪು.26

46. ಪೂರ್ವೋಕ್ತ, ಬೆಂಗಳೂರು–66, ಮಡಿವಾಳ, ಪು.26

47. ಪೂರ್ವೋಕ್ತ, ಬೆಂಗಳೂರು–92, ಬೇಗೂರು, ಪು.32

48. ಪೂರ್ವೋಕ್ತ, ಬೆಂಗಳೂರು–122, ಕನ್ನೆಲ್ಲಿ, ಪು.44

49. ಪೂರ್ವೋಕ್ತ, ಬೆಂಗಳೂರು–104, ಬಿಳಕನ ಹಳ್ಳಿ, ಪು.37

50. ಪೂರ್ವೋಕ್ತ, ಬೆಂಗಳೂರು–11, ದೊಮ್ಮಲೂರು, ಪು.10

51. ಪೂರ್ವೋಕ್ತ, ಬೆಂಗಳೂರು–8, ದೊಮ್ಮಲೂರು, ಪು.10

52. ಪೂರ್ವೋಕ್ತ, ಬೆಂಗಳೂರು–127, ಕೊಡಿಗೆಹಳ್ಳಿ, ಪು.47

53. ಪೂರ್ವೋಕ್ತ, ಬೆಂಗಳೂರು–129, ನಾಗಶೆಟ್ಟಿಹಳ್ಳಿ, ಪು.48

54. ಪೂರ್ವೋಕ್ತ, ಬೆಂಗಳೂರು–53 ದೊಡ್ಡನೆಕ್ಕುಂದಿ, ಪು.23

55. ಪೂರ್ವೋಕ್ತ, ಬೆಂಗಳೂರು–41, ಪಟ್ಟಂದೂರು, ಪು.19

56. ಆರ್.ಗೋಪಾಲ್–ಬೆಂಗಳೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪು.75

57. ಪೂರ್ವೋಕ್ತ, ಆನೇಕಲ್ಲು–60, ಬಿದುರುಗೆರೆ, ಪು.249

58. ಪೂರ್ವೋಕ್ತ, ಬೆಂಗಳೂರು–36, ದಾಸರಹಳ್ಳಿ, ಪು.18

59. ಪೂರ್ವೋಕ್ತ, ಬೆಂಗಳೂರು–26, ಬೊಮ್ಮಸಂದ್ರ, ಪು.15

60. ಪೂರ್ವೋಕ್ತ, ಬೆಂಗಳೂರು–83, ಬೇಗೂರು, ಪು.30

61. ಪೂರ್ವೋಕ್ತ, ಬೆಂಗಳೂರು–88, ಬೇಗೂರು, ಪು.31

62. ಬೆಂಗಳೂರು–101, ಕೋನಪ್ಪನ ಅಗ್ರಹಾರ, ಪು.36

63. ಪೂರ್ವೋಕ್ತ, ಬೆಂಗಳೂರು–47, ದೊಡ್ಡಕನ್ನೆಲ್ಲಿ, ಪು.21

64. EC IX ಅನುಬಂಧ ಸಂಪುಟ, ಬೆಂಗಳೂರು–159, ಪು.33

65. ಪೂರ್ವೋಕ್ತ, ಬೆಂಗಳೂರು–1, ಬಳ್ಳಾಪುರಪೇಟೆ, ಪು.1

66. ಪೂರ್ವೋಕ್ತ, ಆನೇಕಲ್ಲು–14, ಮೇಡಿಹಳ್ಳಿ, ಪು.239

67. ಪೂರ್ವೋಕ್ತ, ಬೆಂಗಳೂರು–65, ಮಡಿವಾಳ, ಪು.26

68. ಪೂರ್ವೋಕ್ತ, ಬೆಂಗಳೂರು–8, ದೊಮ್ಮಲೂರು, ಪು.11

69. ಪೂರ್ವೋಕ್ತ, ಆನೇಕಲ್ಲು–63, ರಾಜಪುರ, ಪು.250

70. ಎಂ.ಜಿ.ಮಂಜುನಾಥ(ಸಂ)–ಯಲಹಂಕ ನಾಡಪ್ರಭುಗಳ ಶಾಸನ ಸಂಪುಟ–ಮಾಸ್ತಿ–24, ಪು.43

71. ವೆಂಕಟಚಲಶಾಸ್ತ್ರೀ(ಸಂ)–ಕರ್ನಾಟಕ ಗ್ರಾಮಸೂಚಿ ಪು.190–194

72. ಬಿ.ಎಲ್.ರೈಸ್(ಸಂ)–EC IX ಬೆಂಗಳೂರು–133, ವಿಭೂತಿಪುರ, ಪು.50

73. ಪೂರ್ವೋಕ್ತ, ಬೆಂಗಳೂರು–55, ಕೃಷ್ಣರಾಜಪುರ, ಪು.23

74. ಪೂರ್ವೋಕ್ತ, ಬೆಂಗಳೂರು–51, ಗುಂಜೂರು, ಪು.22
75. ಪೂರ್ವೋಕ್ತ, ಬೆಂಗಳೂರು–91, ವಾಜರಹಳ್ಳಿ, ಪು.237
76. EC IX ಅನುಬಂಧ ಸಂಪುಟ, ಆನೇಕಲ್ಲು–103 ಪು.7
77. ಬಿ.ಎಲ್.ರೈಸ್(ಸಂ)–EC IX ಬೆಂಗಳೂರು–83, ಬೇಗೂರು, ಪು.30
78. ಪೂರ್ವೋಕ್ತ, ಬೆಂಗಳೂರು–19, ಚಿಕ್ಕಬೆಟ್ಟಹಳ್ಳಿ, ಪು.12
79. ಪೂರ್ವೋಕ್ತ, ಬೆಂಗಳೂರು–28, ಹಾರೋಹಳ್ಳಿ, ಪು.15
80. EC IX ಅನುಬಂಧ ಸಂಪುಟ, ಬೆಂಗಳೂರು–165, ಸರ್ಜಾಪುರ, ಪು.35
81. ಬಿ.ಎಲ್.ರೈಸ್(ಸಂ)–EC IX ಬೆಂಗಳೂರು–28, ಹಾರೋಹಳ್ಳಿ, ಪು.15
82. ಡಾ.ಸ್ಮಿತಾರೆಡ್ಡಿ–ಆನೇಕಲ್ಲು ತಾಲೂಕಿನ ಹೆಬ್ಬಗೋಡಿಯಲ್ಲಿ ದೊರೆತ ಗಂಗರ ಕಾಲದ ಅಪ್ರಕಟಿತ ಶಾಸನ, ಎಂ.ಜಿ.ನಾಗರಾಜ್, ಪಿ.ವಿ.ಕೃಷ್ಣಮೂರ್ತಿ(ಸಂ), ಇತಿಹಾಸ ದರ್ಶನ, ಸಂಪುಟ–19, ಪು.364, 365
83. ಬಿ.ಎಲ್.ರೈಸ್(ಸಂ)–EC IX ಬೆಂಗಳೂರು–130, ನಾಗಶೆಟ್ಟಿಹಳ್ಳಿ, ಪು.49
84. ಪೂರ್ವೋಕ್ತ, ಬೆಂಗಳೂರು–127, ಕೊಡಿಗೆಹಳ್ಳಿ, ಪು.47
85. ಪೂರ್ವೋಕ್ತ, ನೆಲಮಂಗಲ–31, ಹೆಸರುಘಟ್ಟ, ಪು.64
86. ಪೂರ್ವೋಕ್ತ, ಬೆಂಗಳೂರು–61, ಹೂಡಿ, ಪು.25
87. ಡಾ.ಪಿ.ವಿ.ಕೃಷ್ಣಮೂರ್ತಿ, ಡಿ.ಸ್ಮಿತಾರೆಡ್ಡಿ, ಡಾ.ತಮಿಳ್‌ಸೆಲ್ವಿ(ಸಂ)–ಗುಣಮಧುರ, ಪು.288
88. ಬಿ.ಎಲ್.ರೈಸ್(ಸಂ)–EC IX ನೆಲಮಂಗಲ–61, ಮಣ್ಣೆ, ಪು.80
89. ಪೂರ್ವೋಕ್ತ, ಬೆಂಗಳೂರು–110, ಬ್ಯಾಡರಹಳ್ಳಿ, ಪು.89
90. ಪೂರ್ವೋಕ್ತ, ಬೆಂಗಳೂರು–28, ಹಾರೋಹಳ್ಳಿ ಪು.15
91. ಪೂರ್ವೋಕ್ತ, ಬೆಂಗಳೂರು–104, ಬಿಳಕನಹಳ್ಳಿ, ಪು.37
92. ಪೂರ್ವೋಕ್ತ, ಬೆಂಗಳೂರು–94, ಬೇಗೂರು, ಪು.32
93. ಪೂರ್ವೋಕ್ತ, ಬೆಂಗಳೂರು–82, ಬೇಗೂರು, ಪು.29
94. ಪೂರ್ವೋಕ್ತ, ಬೆಂಗಳೂರು–6, ಪು.5
95. ಪೂರ್ವೋಕ್ತ, ಬೆಂಗಳೂರು–93, ಬೇಗೂರು, ಪು.33
96. ಕೆ.ಜಿ.ವೆಂಕಟೇಶ ಜೋಯಿಸ್–ಕೆಳದಿ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.34

97. ಬಿ.ಎಲ್.ರೈಸ್(ಸಂ)–EC IX ನೆಲಮಂಗಲ–60, ಮಣ್ಣೆ, ಪು.75

98. EC IX ಅನುಬಂಧ ಸಂಪುಟ, ಬೆಂಗಳೂರು–99, ಸರ್ಜಾಪುರ, ಪು.33

99. ಬಿ.ಎಲ್.ರೈಸ್(ಸಂ)–EC IX ಆನೇಕಲ್ಲು–7, ಮಾದಿಗೆರೆ, ಪು.237

100. ಪೂರ್ವೋಕ್ತ, ಬೆಂಗಳೂರು–8, ದೊಮ್ಮಲೂರು, ಪು.10

101. ಪೂರ್ವೋಕ್ತ, ಬೆಂಗಳೂರು–105, ಹುಳಿಮಾವು, ಪು.37

102. ಪೂರ್ವೋಕ್ತ–ಬೆಂಗಳೂರು–119, ಹೆಮ್ಮಿಗೆಪುರ, ಪು.44

103. ಪೂರ್ವೋಕ್ತ, ನೆಲಮಂಗಲ–8, ಸೊಂಡೆಕೊಪ್ಪ, ಪು.59

104. ಪೂರ್ವೋಕ್ತ, ಬೆಂಗಳೂರು–52, ಮಾರತ್ತಹಳ್ಳಿ, ಪು.22

105. ಪೂರ್ವೋಕ್ತ, ನೆಲಮಂಗಲ–53 ಮುದ್ದಲಿಂಗನಹಳ್ಳಿ, ಪು.73

106. ಪೂರ್ವೋಕ್ತ, ಮಾಗಡಿ–50, ಶ್ರೀಗಿರಿಪುರ, ಪು.120

107. ಪೂರ್ವೋಕ್ತ, ಆನೆಕಲ್ಲು–44, ಮಾಯಿಸಂದ್ರ, ಪು.245

108. ಪೂರ್ವೋಕ್ತ, ಮಾಗಡಿ–50, ಶ್ರೀಗಿರಿಪುರ, ಪು.120

109. ಪೂರ್ವೋಕ್ತ, ಹೊಸಕೋಟೆ–6, ಆವಲಕೊಂಡಪ್ಪನ ದೊಡ್ಡಿ, ಪು.196

110. ಪೂರ್ವೋಕ್ತ, ಬೆಂಗಳೂರು–19, ಚಿಕ್ಕಬೆಟ್ಟಹಳ್ಳಿ, ಪು.12

111. ಪೂರ್ವೋಕ್ತ, ಬೆಂಗಳೂರು–26, ದೊಡ್ಡಬೊಮ್ಮಸಂದ್ರ, ಪು.15

112. ಪೂರ್ವೋಕ್ತ, ಬೆಂಗಳೂರು–48, ಕಸವನಹಳ್ಳಿ, ಪು.21

113. ಪೂರ್ವೋಕ್ತ, ಬೆಂಗಳೂರು–54, ದೊಡ್ಡನೆಕ್ಕುಂದಿ, ಪು.23

114. ಪೂರ್ವೋಕ್ತ, ಬೆಂಗಳೂರು–105, ಹುಳಿಮಾವು, ಪು.38

115. ಪೂರ್ವೋಕ್ತ, ಬೆಂಗಳೂರು–188, ಕೊತ್ತನೂರು, ಪು.48

116. ಪೂರ್ವೋಕ್ತ, ಬೆಂಗಳೂರು–130, ನಾಗಶೆಟ್ಟಿಹಳ್ಳಿ, ಪು.49

117. ಪೂರ್ವೋಕ್ತ, ಆನೇಕಲ್ಲು–4, ಮಾದಿಗೇರಿ, ಪು.23

118. ಪೂರ್ವೋಕ್ತ, ಆನೇಕಲ್ಲು–14, ಸರ್ಜಾಪುರ, ಪು.239

119. ಪೂರ್ವೋಕ್ತ, ಆನೇಕಲ್ಲು–71 ಕಾಡಜಕ್ಕನಹಳ್ಳಿ, ಪು.252

120. ಪೂರ್ವೋಕ್ತ, ಆನೇಕಲ್ಲು–90, ಬಿಂಗೀಪುರ, ಪು.256

121. EC IX ಅನುಬಂಧ ಸಂಪುಟ, ಬೆಂಗಳೂರು–159, ಮಲ್ಲೇಶ್ವರಂ, ಪು.33

122. ಪೂರ್ವೋಕ್ತ, ಬೆಂಗಳೂರು–161, ಸುಲ್ತಾನ ಪಾಳ್ಯ, ಪು.33

123. ಬಿ.ಎಲ್.ರೈಸ್(ಸಂ)–EC IX ಬೆಂಗಳೂರು–111, ರಾಮಸಮುದ್ರ, ಪು.40

124. ಪೂರ್ವೋಕ್ತ, ಆನೇಕಲ್ಲು–12 ಸರ್ಜಾಪುರ, ಪು.238

125. ಪೂರ್ವೋಕ್ತ, ಆನೇಕಲ್ಲು–44 ಮಾಯಿಸಂದ್ರ, ಪು.245

126. ಪೂರ್ವೋಕ್ತ, ಬೆಂಗಳೂರು–6, ಪು.10

127. ಪೂರ್ವೋಕ್ತ, ಬೆಂಗಳೂರು–6, ದೊಮ್ಮಲೂರು, ಪು.10

128. ಪೂರ್ವೋಕ್ತ, ಬೆಂಗಳೂರು–1, ಬಳ್ಳಾಪುರಪೇಟೆ, ಪು.2

129. ಪೂರ್ವೋಕ್ತ, ಬೆಂಗಳೂರು–118 ಕೊತ್ತನೂರು, ಪು.48

130. ಪೂರ್ವೋಕ್ತ, ಬೆಂಗಳೂರು–122, ಕನ್ನೆಲ್ಲಿ, ಪು.45

131. ಪೂರ್ವೋಕ್ತ, ಬೆಂಗಳೂರು–127, ಕೊಡಿಗೆಹಳ್ಳಿ, ಪು.47

132. ಪೂರ್ವೋಕ್ತ, ಆನೇಕಲ್ಲು–12, ಸರ್ಜಾಪುರ, ಪು.238

133. ಪೂರ್ವೋಕ್ತ, ಬೆಂಗಳೂರು–47, ಮಾಯಿಸಂದ್ರ, ಪು.247

134. ಪೂರ್ವೋಕ್ತ, ಬೆಂಗಳೂರು–1, ಬಳ್ಳಾಪುರ, ಪು.2

135. ಡಿ.ಎಲ್.ನರಸಿಂಹಾಚಾರ್–ಗ್ರಂಥಸಂಪಾದನೆ, ಪು.45

136. ಬಿ.ಎಲ್.ರೈಸ್(ಸಂ)–EC IX ಬೆಂಗಳೂರು–40, ವರ್ತೂರು, ಪು.19

137. ಪೂರ್ವೋಕ್ತ, ಬೆಂಗಳೂರು–36, ದಾಸರಹಳ್ಳಿ, ಪು.18

138. ಪೂರ್ವೋಕ್ತ, ಬೆಂಗಳೂರು–110, ಬ್ಯಾಡರಹಳ್ಳಿ, ಪು.39

139. ಪೂರ್ವೋಕ್ತ, ಬೆಂಗಳೂರು–61, ಹೂಡಿ ಪು.25

140. ಪೂರ್ವೋಕ್ತ, ಬೆಂಗಳೂರು–111, ರಾಮಸಮುದ್ರ, ಪು.40

141. ಪೂರ್ವೋಕ್ತ, ಬೆಂಗಳೂರು–120, ಅವರಿಗೆರೆ, ಪು.44

142. ಪೂರ್ವೋಕ್ತ, ನೆಲಮಂಗಲ–2, ಬಿನ್ನಮಂಗಲ, ಪು.58

143. ಪೂರ್ವೋಕ್ತ, ಬೆಂಗಳೂರು–130, ನಾಗಶೆಟ್ಟಿಹಳ್ಳಿ, ಪು.49

144. ಪೂರ್ವೋಕ್ತ, ಬೆಂಗಳೂರು–127, ಯಶವಂತಪುರ, ಪು.48

145. ಪೂರ್ವೋಕ್ತ, ನೆಲಮಂಗಲ–12, ಕಿತ್ತನಲ್ಲಿ, ಪು.59

146. EC IX ಅನುಬಂಧ ಸಂಪುಟ, ಬೆಂಗಳೂರು–164, ಪು.34

147. ಡಾ.ಸ್ಮಿತಾರೆಡ್ಡಿ–ದೊಡ್ಡನಾಗಮಂಗಲದ ಗಂಗರ ಶಾಸನ, ಎಂ.ಜಿ.ನಾಗರಾಜ್, ಪಿ.ವಿ.ಕೃಷ್ಣಮೂರ್ತಿ(ಸಂ), ಇತಿಹಾಸ ದರ್ಶನ, ಸಂಪುಟ–14, ಪು.26, 27

148. ಬಿ.ಎಲ್.ರೈಸ್(ಸಂ)–EC IX ಬೆಂಗಳೂರು–40, ವರ್ತೂರು, ಪು.19

149. ಪೂರ್ವೋಕ್ತ, ಬೆಂಗಳೂರು–36, ದಾಸರಹಳ್ಳಿ, ಪು.18

150. ಪೂರ್ವೋಕ್ತ, ಬೆಂಗಳೂರು–68, ಮಡಿವಾಳ, ಪು.26

151. ಪೂರ್ವೋಕ್ತ, ಬೆಂಗಳೂರು–65, ಮಡಿವಾಳ, ಪು.26

152. ಪೂರ್ವೋಕ್ತ, ಬೆಂಗಳೂರು–68, ಮಡಿವಾಳ, ಪು.26

153. ಪೂರ್ವೋಕ್ತ, ಬೆಂಗಳೂರು–83, ಬೇಗೂರು, ಪು.80

154. ಪೂರ್ವೋಕ್ತ, ಬೆಂಗಳೂರು–110, ಬ್ಯಾಡರಹಳ್ಳಿ, ಪು.89

155. ಡಾ.ಎಂ.ಜಿ.ಮಂಜುನಾಥ–ಯಲಹಂಕ ನಾಡಪ್ರಭುಗಳ ಶಾಸನ ಸಂಪುಟ, ಪು.1

# ಸಮಾರೋಪ

ಕರ್ನಾಟಕದ ಪ್ರಾಚೀನ ಸಾಂಸ್ಕೃತಿಕ ಕೇಂದ್ರಗಳು ಎಂದೊಡನೆ ನಮಗೆ ನೆನಪಾಗುವುದು ಹಂಪಿ, ಬನವಾಸಿ, ಬೇಲೂರು, ತಲಕಾಡು, ಬಸವ ಕಲ್ಯಾಣ, ಶೃಂಗೇರಿ, ಬಿಜಾಪುರ, ಮೈಸೂರು ಮೊದಲಾದವು ಸುಪ್ರಸಿದ್ಧ ಸಾಂಸ್ಕೃತಿಕ ಕೇಂದ್ರಗಳು ಎಂದೆನಿಸಿಕೊಂಡಿವೆ. ಈ ಪಟ್ಟಿಗೆ ಬೆಂಗಳೂರನ್ನು ಸೇರಿಸಿದರೆ ತಪ್ಪಾಗಲಾರದು. ಇಂದಿನ ಆಧುನಿಕತೆಯ ಅಬ್ಬರಕ್ಕೆ ಸಿಕ್ಕಿಕೊಂಡು ಗ್ಲೋಬಲ್ ಸಿಟಿಯಾಗಿ ಸಾಂಸ್ಕೃತಿಕ ಸ್ಥಿತ್ಯಂತರಕ್ಕೆ ಒಳಗಾಗುತ್ತಿರುವ ಬೆಂಗಳೂರು ನಮ್ಮ ಪ್ರಾಚೀನ ಕರ್ನಾಟಕದ ಸಾಂಸ್ಕೃತಿಕ ಕೇಂದ್ರಗಳಲ್ಲಿ ಒಂದು ಎಂಬುದೇ ವಿಶೇಷ. ಪ್ರಗತಿಪಥದಲ್ಲಿರುವ ಭಾರತದ ಎಲ್ಲಾ ಹಳ್ಳಿ, ಗ್ರಾಮೀಣ ಪ್ರದೇಶಗಳು ಸಂಪೂರ್ಣ ಬದಲಾಗುತ್ತಿರುವ ಪ್ರಸ್ತುತ ಸನ್ನಿವೇಶಕ್ಕೆ ಪ್ರದೇಶವೊಂದರ ಕೂಲಂಕಷ ಮತ್ತು ಶಾಸ್ತ್ರೋಕ್ತ ಅಧ್ಯಯನವೊಂದರ ಅವಶ್ಯಕತೆ ಇದೆ. 'ಇತಿಹಾಸವನ್ನು ತಿಳಿಯದವರು ಇತಿಹಾಸವನ್ನು ಸೃಷ್ಟಿಸಲಾರರು' ಎಂಬ ಅಂಬೇಡ್ಕರ್ ಅವರ ಮಾತು ಸಾರ್ವಕಾಲಿಕ ಸತ್ಯ. ಈ ಹಿನ್ನೆಲೆಯಲ್ಲಿ ನಮ್ಮ ಸಾಂಸ್ಕೃತಿಕ ಪರಂಪರೆಯನ್ನು ತಿಳಿಯುವ ಪ್ರಯತ್ನ ಅಗತ್ಯವಾಗಿದೆ.

ಆಧುನಿಕತೆಯ ಭರಾಟೆಯಲ್ಲಿ ಅತೀ ವೇಗವಾಗಿ ಹೆಚ್ಚು ಪರಿವರ್ತನೆಯಾಗುತ್ತಿರುವ ನಗರವೆಂದರೆ ಬೆಂಗಳೂರು. ಈ ಪ್ರದೇಶವು ಕನ್ನಡ ನಾಡಿನ ಸಂಸ್ಕೃತಿಯೊಂದನ್ನು ತನ್ನಲ್ಲಿ ಗರ್ಭೀಕರಿಸಿಕೊಂಡಿದೆ. ಈ ಹಿನ್ನೆಲೆಯಲ್ಲಿ ಒಂದು ರಾಜ್ಯದ ಸಮಗ್ರ ಅಧ್ಯಯನವನ್ನು ಮಾಡುವುದು ಕಷ್ಟಸಾಧ್ಯವಾಗಿರುವುದರಿಂದ ಪ್ರದೇಶವೊಂದಕ್ಕೆ ಸೀಮಿತಗೊಳಿಸಿಕೊಂಡು ವಿವಿಧ ಕಾಲಘಟ್ಟಗಳಲ್ಲಿ, ವಿಭಿನ್ನ ಹಂತದಲ್ಲಿ, ವಿವಿಧ ದೃಷ್ಟಿಕೋನಗಳಿಂದ ವಿಶ್ಲೇಷಿಸುವ ತುಲನಾತ್ಮಕವಾದ ಅಧ್ಯಯನವೇ 'ಶಾಸನಗಳ ಹಿನ್ನೆಲೆಯಲ್ಲಿ ಬೆಂಗಳೂರು ನಗರ–ಸಾಂಸ್ಕೃತಿಕ ಅಧ್ಯಯನ' ಎಂಬ ಪ್ರಸ್ತುತ ಮಹಾಪ್ರಬಂಧದ ಮುಖ್ಯ ಉದ್ದೇಶವಾಗಿದೆ.

ಬೆಂಗಳೂರು ನಗರವು ಸುಮಾರು ಹನ್ನೆರಡು ಸಾವಿರ ವರ್ಷದ ಇತಿಹಾಸವನ್ನು ಹೊಂದಿದೆ. ಈ ಪ್ರದೇಶದ ಪೂರ್ವೇತಿಹಾಸದ ಕಾಲದ ತಾಣವೆಂದರೆ ಜಾಲಹಳ್ಳಿ, ಕೆಂಗೇರಿ, ಜ್ಞಾನಭಾರತಿ, ಆನೇಕಲ್ಲು ತಾಲೂಕಿನ ಬನ್ನೇರುಘಟ್ಟ, ಮೇಲೂರುದಿಣ್ಣೆ, ಕಾಳನಾಯಕನಹಳ್ಳಿ, ಮುತ್ಯಾಲಮಡು, ಮತ್ತು ಇಂದಿನ ರೇಸ್‌ಕೋರ್ಸ್ ರಸ್ತೆ ಮೊದಲಾದ ಪ್ರದೇಶಗಳಾಗಿವೆ. ಬೇಗೂರು, ಬನ್ನೇರುಘಟ್ಟ, ಕೃಷ್ಣರಾಜಪುರ, ಅಗರ, ಯಲಹಂಕ, ಯಶವಂತಪುರ ಮೊದಲಾದ ಬೆಂಗಳೂರು ನಗರದ

ಪ್ರದೇಶಗಳಲ್ಲಿ ದೊರಕಿರುವ ಶಾಸನಗಳನ್ನು ಕಾಲಾನುಕ್ರಮಣಿಕೆ ಹಾಗೂ ವಿಷಯಾನುಕ್ರಮದಿಂದ ವಿಂಗಡಿಸಿಕೊಂಡು ಸಮಗ್ರವಾಗಿ ಸೂಕ್ಷ್ಮವಾದ ವಸ್ತುನಿಷ್ಠ ಅಧ್ಯಯನವನ್ನು ಮಾಡಲಾಗಿದೆ.

ಬೆಂಗಳೂರಿನ ಪ್ರಾಚೀನತೆಯನ್ನು ಶಾಸನಗಳು ಕ್ರಿ.ಶ.900ಕ್ಕೆ ಕೊಂಡೊಯ್ಯುತ್ತವೆ. 'ಬೆಂದಕಾಳೂರು' ಬೆಂಗಳೂರು ಆಗಿದೆ ಎಂಬ ಪ್ರತೀತಿ ಜನರಲ್ಲಿದೆ. ಆದರೆ ಬೆಂದಕಾಳೂರು ಎಂಬ ಹೆಸರಿನ ಉಲ್ಲೇಖ ಬೇರೆ ಯಾವ ಪ್ರಾಚೀನ ಗ್ರಂಥಗಳಲ್ಲಾಗಲಿ, ಶಾಸನಗಳಲ್ಲಿಯಾಗಲಿ ಉಲ್ಲೇಖವಿಲ್ಲ. ವೀರಬಲ್ಲಾಳನ ಬೆಂದಕಾಳೂರಿನ ಕತೆ ಹುಟ್ಟಿಕೊಂಡಿರುವುದು ಇತ್ತೀಚಿನ ದಿನಗಳಲ್ಲಿ. ಬೆಣಚುಕಲ್ಲೂರೇ ಬೆಂಗಳೂರು ಆಯಿತು ಎಂಬುದು ನಿಸರ್ಗವಾಚಿ ಹಿನ್ನಲೆಯಲ್ಲಿ ಹುಟ್ಟಿಕೊಂಡಿದ್ದರೂ, ಬೆಂಗಳೂರು ಎಂಬ ಹೆಸರು ವೆಂಗಳನಾಥನ ಹೆಸರಿನಿಂದಲೇ ಬಂದಿರುವಂತದ್ದು. ವೆಂಗಳನಾಥ ಎಂದರೆ ಮಂಗಳಕರ, ಕಲ್ಯಾಣಕರ, ಶುಭಕರ ಎಂಬ ಅರ್ಥವಿದೆ. ವೆಂಗಳನಾಥನನ್ನು ಕಲ್ಯಾಣಾದ್ಭುತ ಗಾತ್ರ' ಎಂಬ ಹೆಸರಿನಲ್ಲಿ ಕರೆದಿರುವುದನ್ನು ಗಮನಿಸಬಹುದು. ಪ್ರಾಚೀನ ಗಂಗರ ಶಾಸನವು 'ಬೆಂಗಳೂರು' ಎಂದು ಉಲ್ಲೇಖಿಸಿದ್ದರೆ, ತಮಿಳು ಶಾಸನವೊಂದು 'ವೆಂಗಳೂರು' ಎಂದು ಉಲ್ಲೇಖಿಸುತ್ತದೆ. ಕ್ರಿ.ಶ.1880ರ ನಗರ್ತಪೇಟೆಯಲ್ಲಿ ದೊರೆತ ಶಾಸನವು ಬೆಂಗಳೂರನ್ನು ಕಲ್ಯಾಣನಗರಿ ಎಂದು ಕರೆದಿದೆ. ಹಾಗಾಗಿ ಬೆಂಗಳೂರು ಕಲ್ಯಾಣಾದ್ಭುತ ಗಾತ್ರ ವೆಂಗಳನಾಥನಿಂದ ಕಲ್ಯಾಣನಗರಿ ಎನಿಸಿಕೊಂಡಿದೆ.

ಹೀಗೆ ಬೆಂಗಳೂರಿನ ಸ್ಥಳನಾಮ ನಿಷ್ಪತ್ತಿಯ ಬಗ್ಗೆ ಸಮಗ್ರವಾಗಿ ವಿಶ್ಲೇಷಿಸಿ ವೆಂಗಳನಾಥ ಅಂದರೆ ತಿರುಪತಿಯ ವೆಂಕಟೇಶ್ವರನ ಹೆಸರಿನ ಹಿನ್ನೆಲೆಯಲ್ಲಿ 'ಬೆಂಗಳೂರು' ಎಂಬ ಹೆಸರು ರೂಪುಗೊಂಡಿದೆ ಎಂದು ಆಧಾರಸಹಿತ ನಿರೂಪಿಸಲಾಗಿದೆ. ಕ್ರಿ.ಶ. ಸುಮಾರು 7ನೆಯ ಶತಮಾನದ ವೇಳೆಗಾಗಲೇ ಬೆಂಗಳೂರಿನ ಸಮೀಪದ ಚಿಕ್ಕನಹಳ್ಳಿಯಲ್ಲಿ ವೆಂಕಟೇಶ್ವರನ ವಿಗ್ರಹ ಪ್ರತಿಷ್ಠಾಪನೆಯಾಗಿದ್ದುದನ್ನು ಗುರುತಿಸಿ ಆ ಕಾಲಘಟ್ಟಕ್ಕಾಗಲೇ ವೆಂಕಟೇಶ್ವರನ ಪರಿಚಯ ಬೆಂಗಳೂರಿನ ಪ್ರದೇಶಕ್ಕೆ ಇದ್ದುದನ್ನು ಸ್ಪಷ್ಟಪಡಿಸಲಾಗಿದೆ.

ಬೆಂಗಳೂರಿಗೆ ವೆಂಗಳೂರು, ಬೆಂಗುಳೂರು, ಬೆಂಗಳೂರು, ಕಲ್ಯಾಣನಗರ ಮುಂತಾದ ಹೆಸರುಗಳು ಶಾಸನಗಳಲ್ಲಿ ಉಲ್ಲೇಖಗೊಂಡಿರುವುದನ್ನು ಗುರುತಿಸಲಾಗಿದೆ. ಬೇಗೂರು ಶಾಸನೋಕ್ತ ಬೆಂಗಳೂರು ಕ್ರಿ.ಶ. ಸುಮಾರು 10-11ನೆಯ ಶತಮಾನದ ವೇಳೆಗೆ ಇಂದಿನ ಹಳೆಯ ಮಡಿವಾಳದ ಬಳಿ ಬಿ.ಟಿ.ಎಂ. ಲೇಔಟ್ ಅಂದರೆ ಬೇಗೂರು, ತಾವರೆಕೆರೆ ಮತ್ತು ಮಡಿವಾಳಗಳ ನಡುವಿನ ಪ್ರದೇಶದಲ್ಲಿತ್ತು ಎಂಬುದಾಗಿ ಆಧಾರ ಸಹಿತ ನಿರೂಪಿಸಲಾಗಿದೆ. ಮುಂದೆ ಕೆಂಪೇಗೌಡನು ಸಣ್ಣದಾಗಿದ್ದ ಬೆಂಗಳೂರನ್ನು ನಗರವನ್ನಾಗಿಸಿ ಅಭಿವೃದ್ಧಿ ಪಡಿಸಿದನು. ಒಂದು ಸಣ್ಣಹಳ್ಳಿಯಾಗಿದ್ದ ಬೆಂಗಳೂರು ತನ್ನ

ಸುತ್ತಲಿನ ಹಳ್ಳಿಗಳನ್ನೆಲ್ಲಾ ತನ್ನೊಡಲಲ್ಲಿ ಗರ್ಭೀಕರಿಸಿಕೊಂಡು ಇಂದು ಬೃಹತ್ ಬೆಂಗಳೂರಾಗಿ ಬೆಳೆದಿದೆ. ಹೊರಗೆ ನಿಂತು ನೋಡುವವರಿಗೆ ಸ್ವಪ್ನ ನಗರಿ ಆದರೆ ಕಂಡವರಿಗೆ ಬೆಂಗಳೂರು ಹಳ್ಳಿಗಳ ನಗರವೆಂದರೆ ಅತಿಶಯೋಕ್ತಿಯಲ್ಲ.

ಆಡಳಿತದ ದೃಷ್ಟಿಯಿಂದ ಆಗಸ್ಟ್ 15ನೇ 1986ರಲ್ಲಿ ಬೆಂಗಳೂರು ನಗರವನ್ನು ಬೆಂಗಳೂರು ದಕ್ಷಿಣ, ಉತ್ತರ, ಆನೇಕಲ್ಲು ತಾಲೂಕುಗಳಾಗಿ ವಿಂಗಡಿಸಲಾಯಿತು. 2001ರಲ್ಲಿ ಬೆಂಗಳೂರು ಪೂರ್ವ ತಾಲೂಕೊಂದು ಉದಯವಾಯಿತು. ಪ್ರಸ್ತುತ ಬೆಂಗಳೂರು ನಗರ ನಾಲ್ಕು ತಾಲೂಕುಗಳನ್ನು ಒಳಗೊಂಡಿದೆ. ಇಂತಹ ಬೆಂಗಳೂರು ಆದಿಶಿಲಾಯುಗದಿಂದ ನವಶಿಲಾಯುಗದವರೆಗೂ ಹಾಗೂ ಕ್ರಿ.ಶ.900ರಿಂದ ಇಂದಿನ ವರೆಗೂ ತನ್ನ ಪ್ರಾದೇಶಿಕತೆಯನ್ನು ವಿಸ್ತರಿಸಿಕೊಂಡು ಜನವಸತಿಯಿಂದ ಕೂಡಿದ್ದು ಸಾಂಸ್ಕೃತಿಕ ಚರಿತ್ರೆಯನ್ನು ತನ್ನೊಡಲಲ್ಲಿ ಗರ್ಭೀಕರಿಸಿಕೊಂಡಿದೆ. ಅಷ್ಟೇ ಅಲ್ಲದೆ ಒಂದನೇ ಶತಮಾನಕ್ಕೆ ಸೇರುವ ರೋಮನ್ ಸಾಮ್ರಾಜ್ಯದ ನಾಣ್ಯಗಳು ಯಶವಂತಪುರ ಮತ್ತು ಎಚ್.ಎ.ಎಲ್ ಪ್ರದೇಶದಲ್ಲಿ ದೊರೆತಿರುವುದರಿಂದ ಬೆಂಗಳೂರು ಕ್ರಿಸ್ತಶಕದ ಆರಂಭದ ಕಾಲಘಟ್ಟದಲ್ಲೇ ರೋಮನ್ನರೊಡನೆ ವಾಣಿಜ್ಯೋದ್ಯಮ ಸಂಪರ್ಕ ಹೊಂದಿತ್ತು. ಇಂತಹ ಸಾಂಸ್ಕೃತಿಕ ಚರಿತ್ರೆಯನ್ನು ಸಮಗ್ರವಾಗಿ ಹಿಡಿದಿಡುವ ಪ್ರಯತ್ನವನ್ನು ಈ ಮಹಾಪ್ರಬಂಧದಲ್ಲಿ ಮಾಡಲಾಗಿದೆ.

ಶಾಸನಗಳ ಹಿನ್ನಲೆಯಲ್ಲಿ ಬೆಂಗಳೂರು ನಗರ – ಸಾಂಸ್ಕೃತಿಕ ಅಧ್ಯಯನ ಎಂಬ ಈ ಮಹಾಪ್ರಬಂಧವನ್ನು ಬೆಂಗಳೂರು ನಗರ ಪ್ರದೇಶದ ಸಾಂಸ್ಕೃತಿಕ ಚರಿತ್ರೆಯನ್ನು ಈ ಪ್ರದೇಶದ ಶಾಸನಗಳು, ದೇವಾಲಯಗಳು ಮತ್ತು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ದೊರಕಿರುವ ಸ್ಮಾರಕಾವಶೇಷಗಳನ್ನು ಪ್ರಮುಖ ಆಕರಗಳನ್ನಾಗಿ ಬಳಸಿಕೊಂಡು ರಚಿಸಲಾಗಿದೆ. ಈಗಾಗಲೇ ಪ್ರಕಟವಾಗಿರುವ ಶಾಸನಗಳ ಜೊತೆಗೆ ಕ್ಷೇತ್ರಕಾರ್ಯದ ಮೂಲಕ ಹೊಸ ಶಾಸನಗಳನ್ನು ಶೋಧಿಸಿ ಚರ್ಚಿಸಲಾಗಿದೆ. ಈ ಪ್ರದೇಶದಲ್ಲಿ ದೊರೆತ ಅತೀ ಪ್ರಾಚೀನ ಶಾಸನವೆಂದರೆ ಕ್ರಿ.ಶ.750ರ ಗಂಗದೊರೆ ಶ್ರೀಪುರುಷನ ಕಾಲದ ಶಾಸನವಾಗಿದ್ದು, ಹಾಗೂ ಕ್ರಿ.ಶ.1880ರ ನಗರ್ತಪೇಟೆಯಲ್ಲಿ ದೊರೆತಿರುವ ಶಾಸನವು ಅರ್ವಾಚೀನ ಶಾಸನವಾಗಿದೆ.

ಈ ಮಹಾಪ್ರಬಂಧವನ್ನು ಅಧ್ಯಯನದ ಉದೇಶದಿಂದ ಒಟ್ಟು ಆರು ಅಧ್ಯಾಯಗಳನ್ನು ಮಾಡಿಕೊಳ್ಳಲಾಗಿದೆ.. ಪ್ರತಿಯೊಂದು ಅಧ್ಯಾಯದ ರಚನೆಯ ಸಂದರ್ಭದಲ್ಲೇ ನನ್ನ ಅಭಿಪ್ರಾಯವನ್ನು ಸಂದರ್ಭೋಚಿತವಾಗಿ ಹೇಳಲಾಗಿದೆ. ದೊರೆತಿರುವ ಒಟ್ಟು 308 ಶಾಸನಗಳನ್ನೂ ನನ್ನ ಮಹಾಪ್ರಬಂಧದ ರಚನೆಯಲ್ಲಿ ಬಳಸಿಕೊಳ್ಳಲಾಗಿದೆ. ಇವುಗಳು ದಾನಶಾಸನ, ಪ್ರಶಸ್ತಿಶಾಸನ, ಸ್ಮಾರಕ

ಶಾಸನ, ವೀರಶಾಸನ ಹೀಗೆ ಹಲವು ಪ್ರಕಾರದ ಶಾಸನಗಳಾಗಿವೆ. ಈ ಶಾಸನಗಳ ಹಿನ್ನೆಲೆಯಲ್ಲಿ ಬೆಂಗಳೂರು ನಗರದ ರಾಜಕೀಯ, ಆಡಳಿತ, ಧಾರ್ಮಿಕ, ಸಾಮಾಜಿಕ, ಆರ್ಥಿಕ ಅಂಶಗಳನ್ನು ಕುರಿತು ವಿಶ್ಲೇಷಿಸಲಾಗಿದೆ.

ಮೊದಲನೆಯ ಅಧ್ಯಾಯವಾದ 'ಚಾರಿತ್ರಿಕ ಅಧ್ಯಯನ'ದ ಮೊದಲ ಭಾಗದಲ್ಲಿ ಬೆಂಗಳೂರು ನಗರದ ಭೌಗೋಳಿಕ ಪರಿಚಯವನ್ನು ಸಂಕ್ಷಿಪ್ತವಾಗಿ ನೀಡಲಾಗಿದೆ. ಈ ಪ್ರದೇಶದ ಭೌಗೋಳಿಕ ವ್ಯಾಪ್ತಿ, ವಾಯುಗುಣ, ಜಲ, ಅರಣ್ಯ, ಬೆಟ್ಟಗುಡ್ಡಗಳು, ಕೃಷಿ, ಜನಸಂಖ್ಯೆ ಮೊದಲಾದ ವಿವರಗಳನ್ನು ಅಂಕಿಅಂಶಗಳ ಆಧಾರದಿಂದ ವಿಶ್ಲೇಷಿಸಲಾಗಿದೆ. ನಂತರದಲ್ಲಿ ಬೆಂಗಳೂರಿನಲ್ಲಿ ದೊರೆತ ಪ್ರಾಗಿತಿಹಾಸದ ನೆಲೆಗಳ ಪರಿಚಯವನ್ನು ಮಾಡಲಾಗಿದೆ. ಈ ಅಧ್ಯಾಯದ ಪ್ರಮುಖ ಭಾಗವಾದ ರಾಜಕೀಯ ಚರಿತ್ರೆಯಲ್ಲಿ ನಗರದ ಐತಿಹಾಸಿಕ ಮಹತ್ವವನ್ನು ಅರಿಯುವಲ್ಲಿ ಮುಖ್ಯ ಪಾತ್ರವಹಿಸಿರುವ ಈ ಪ್ರದೇಶದ ಶಾಸನಗಳ ಸಹಾಯದಿಂದ ಅನೇಕ ರಾಜವಂಶಗಳು ಸ್ಥಳೀಯ ಸಂಸ್ಕೃತಿ ಮತ್ತು ಸಮಾಜಕ್ಕೆ ನೀಡಿದ ಕೊಡುಗೆಗಳನ್ನು ವಿಶ್ಲೇಷಿಸಲಾಗಿದೆ. ಗಂಗರು, ರಾಷ್ಟ್ರಕೂಟರು, ನೊಳಂಬರು, ಚೋಳರು, ಹೊಯ್ಸಳರು, ವಿಜಯನಗರದ ಅರಸರು, ಯಲಹಂಕ ನಾಡಪ್ರಭುಗಳು ಮರಾಠರು, ಮೈಸೂರಿನ ಒಡೆಯರು ಮುಂತಾದ ಅರಸರು ಬೆಂಗಳೂರು ನಗರ ಜಿಲ್ಲೆಯೊಡನೆ ಹೊಂದಿದ್ದ ರಾಜಕೀಯ ಹಾಗೂ ಸಾಂಸ್ಕೃತಿಕ ಸಂಬಂಧದ ಸ್ವರೂಪವನ್ನು ಕುರಿತು ವಿಶ್ಲೇಷಿಸಲಾಗಿದೆ. ಬೆಂಗಳೂರಿನ ಪ್ರದೇಶಗಳು ಪಲ್ಲವರ ದೊರೆ ನರಸಿಂಹವರ್ಮನ ನೇರ ಆಳ್ವಿಕೆಗೊಳಪಟ್ಟಿದ್ದುದರ ಬಗ್ಗೆ ಮೊತ್ತಮೊದಲ ಬಾರಿಗೆ ಆಧಾರ ಸಹಿತ ಗುರುತಿಸಲಾಗಿದೆ. ರಾಷ್ಟ್ರಕೂಟ ದೊರೆ ಕಂಬ ಅಕಾಲವರ್ಷನು ಮಾನ್ಯಪುರ ಅಂದರೆ ನೆಲಮಂಗಲ ತಾಲ್ಲೂಕಿನ ಇಂದಿನ ಮಣ್ಣೆಯಿಂದ ರಾಜ್ಯಭಾರ ಮಾಡುತ್ತಿದ್ದುದನ್ನು ಶಾಸನಾಧಾರಗಳ ಹಿನ್ನೆಲೆಯಲ್ಲಿ ಗುರುತಿಸಲಾಗಿದೆ.

ಯಲಹಂಕನಾಡಪ್ರಭು ಕೆಂಪೇಗೌಡನ ತಂದೆಯಾದ ಕೆಂಪನಂಜೇಗೌಡನ ಕಾಲದಲ್ಲಿ ಬೆಂಗಳೂರು ಯಲಹಂಕ ನಾಡಪ್ರಭುಗಳ ರಾಜಧಾನಿಯಾಯಿತೆಂದು ಆಧಾರ ಸಹಿತ ನಿರೂಪಿಸಲಾಗಿದೆ. ಕೆಂಪೇಗೌಡನ ಆಳ್ವಿಕೆಯ ಕಾಲದಲ್ಲಿ ತಮಿಳುನಾಡಿನ ಧರ್ಮಪುರಿ ಜಿಲ್ಲೆಯ ಗುಮ್ಮಾಳಾಪುರವೂ ಸಹ ಬೆಂಗಳೂರು ವಳಿತಕ್ಕೆ ಸೇರಿದ್ದುದನ್ನು ಆಧಾರ ಸಹಿತ ನಿರೂಪಿಸಲಾಗಿದೆ. ಬಿಜಾಪುರದ ನವಾಬನ ಸೇನಾನಿ ರಣದುಲ್ಲಾಖಾನನೊಡನೆ ನಡೆದ ಯುದ್ಧದಲ್ಲಿ ಪರಾಜಿತನಾದ ಕೆಂಪೇಗೌಡ ಬೆಂಗಳೂರನ್ನು ಕಳೆದುಕೊಂಡರೂ ತದನಂತರದ ಕಾಲಘಟ್ಟದಲ್ಲಿ ಬೆಂಗಳೂರನ್ನು ಮತ್ತೆ ಗೆದ್ದುಕೊಂಡನೆಂದು ಕೆಲವು ಇತಿಹಾಸಕಾರರು ಅಭಿಪ್ರಾಯ ಪಟ್ಟಿದ್ದರು. ಆದರೆ ಬೆಂಗಳೂರಿನ

ಪ್ರದೇಶಗಳು ಮತ್ತೆ ಕೆಂಪೇಗೌಡನ ವಶವಾಗಲಿಲ್ಲ ಎಂದು ಆಧಾರ ಸಹಿತ ನಿರೂಪಿಸಲಾಗಿದೆ. ಹೀಗೆ ಮಧ್ಯಕಾಲೀನ ಸಂದರ್ಭದಲ್ಲಿ ಬೆಂಗಳೂರಿನ ಅಭಿವೃದ್ಧಿಗೆ ಕಾರಣರಾದ ಯಲಹಂಕ ನಾಡಪ್ರಭುಗಳ ಚರಿತ್ರೆ ಮತ್ತು ಕೆಂಪೇಗೌಡರ ಕಾಲಾವಧಿಯಲ್ಲಿ ಬೆಂಗಳೂರು ನಗರದೆಡೆಗೆ ಬೆಳೆಯುತ್ತಾ ಉಚ್ಛ್ರಾಯ ಸ್ಥಿತಿಗೇರಿತು ಎಂಬುದನ್ನು ಹಾಗೂ ಬೆಂಗಳೂರನ್ನು ಆಳಿದ ಸ್ಥಳೀಯ ನಾಯಕರಾದ ಜಿಗುಣಿ ನಾಯಕರನ್ನು ಕುರಿತು ಈ ಅಧ್ಯಾಯದಲ್ಲಿ ಸಮಗ್ರವಾಗಿ ವಿಶ್ಲೇಷಿಸಲಾಗಿದೆ.

ಎರಡನೆಯ ಅಧ್ಯಾಯವಾದ 'ಆಡಳಿತ ಪದ್ಧತಿ'ಯಲ್ಲಿ ಪ್ರಾಚೀನ ಬೆಂಗಳೂರಿನ ಆಡಳಿತದ ವಿಭಾಗ ಕ್ರಮವನ್ನು ಅವಲೋಕಿಸಿ, ಗಂಗರ ಆಡಳಿತ ಕ್ರಮದಿಂದ ಪ್ರಾರಂಭಿಸಿ ಮೈಸೂರು ಒಡೆಯರ ಆಡಳಿತ ಕ್ರಮದವರೆಗೂ ಆಯಾ ಕಾಲಘಟ್ಟದ ಆಳ್ವಿಕೆಯ ಮನೋಧರ್ಮ ಹಾಗೂ ಜನಜೀವನವು ಸುರಕ್ಷಿತವಾಗಿ ನಡೆಸಲು ಜಾರಿಗೆ ತಂದಿದ್ದ ಆಡಳಿತದ ನೀತಿ, ಒತ್ತಡರಹಿತ ಆಡಳಿತ ನಡೆಯಲು ಮಾಡಿಕೊಂಡಿದ್ದ ರಾಜ್ಯದ ವಿಭಾಗ ಕ್ರಮ ಹಾಗೂ ಆಡಳಿತ ವಿಭಾಗದ ಪ್ರದೇಶವನ್ನು ಗುರುತಿಸುವ ಪ್ರಯತ್ನವನ್ನು ಮಾಡಲಾಗಿದೆ.

ಮೂರನೆಯ ಅಧ್ಯಾಯವಾದ 'ಧಾರ್ಮಿಕ ಅಧ್ಯಯ'ನದಲ್ಲಿ ಪ್ರಾಚೀನ ಬೆಂಗಳೂರಿನಲ್ಲಿ ಅಸ್ತಿತ್ವದಲ್ಲಿದ್ದ ಬೌದ್ಧ, ಜೈನ, ಶೈವ, ವೈದಿಕ, ವೀರಶೈವ ಮೊದಲಾದ ಧರ್ಮವನ್ನು ಕುರಿತು ವಿಶ್ಲೇಷಿಸಲಾಗಿದೆ. ಈ ಪ್ರದೇಶದಲ್ಲಿ ಕ್ರಿ.ಶ.2–3ನೇ ಶತಮಾನದಲ್ಲೇ ಬೌದ್ಧಧರ್ಮ ಅಸ್ತಿತ್ವದಲ್ಲಿತ್ತು ಎಂಬುದನ್ನು ರಾಜಘಟ್ಟದಲ್ಲಿ ದೊರೆತ ಬೌದ್ಧಚೈತ್ಯಾಲಯದ ಆಧಾರದಿಂದ ಗುರ್ತಿಸಲಾಗಿದೆ. ಕ್ರಿ.ಶ.7–8ನೇ ಶತಮಾನಕ್ಕಾಗಲೇ ಜೈನಧರ್ಮವು ಈ ಪ್ರದೇಶದಲ್ಲಿ ಹರಡಿಕೊಂಡಿತ್ತು. 9–10ನೇ ಶತಮಾನದ ವೇಳೆಗೆ ಕಾಳಾಮುಖ ಶೈವಧರ್ಮವು, 12ನೇ ಶತಮಾನದ ವೇಳೆಗೆ ಶ್ರೀವೈಷ್ಣವ ಧರ್ಮ ಹಾಗೂ ವೀರಶೈವಧರ್ಮವು 14–15ನೇ ಶತಮಾನಕ್ಕಾಗಲೇ ಈ ಪ್ರದೇಶದಲ್ಲೆಲ್ಲಾ ಹರಡಿತ್ತು ಎಂಬುದನ್ನು ಆಧಾರ ಸಹಿತ ನಿರೂಪಿಸಲಾಗಿದೆ. ಪ್ರಸ್ತುತ ಬೆಂಗಳೂರು ನಗರವೊಂದರಲ್ಲೇ 75ಕ್ಕೂ ಹೆಚ್ಚಿನ ವೀರಶೈವ ಮಠಗಳಿವೆ. ಪ್ರಾಚೀನ ಕಾಲದ ಗಾಣಪತ್ಯ, ಸೌರಮತ, ಮಾತೃದೇವತಾರಾಧನೆ, ವೀರಭದ್ರಪರಂಪರೆಯನ್ನು ಕುರಿತು ಈ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

ಆಡಳಿತ ನಿರ್ವಹಿಸಿದ ರಾಜರು, ಅಧಿಕಾರಿಗಳು ಧಾರ್ಮಿಕ ಮನೋಭಾವವುಳ್ಳವರಾಗಿದ್ದು ಎಲ್ಲಾ ಧರ್ಮಕ್ಕೂ ಪ್ರೋತ್ಸಾಹ, ದೇವಾಲಯಗಳಿಗೆ ದಾನ–ದತ್ತಿಯನ್ನು ನೀಡಿ ಧಾರ್ಮಿಕ ಸಮನ್ವಯತೆ ಬೇರೂರಲು ಕಾರಣರಾದರು. ಈ ಪ್ರದೇಶದಲ್ಲಿ ಎಲ್ಲಾ ಧರ್ಮಗಳಿಗೂ ಆಶ್ರಯವನ್ನು ನೀಡಿ ಇಂದಿಗೂ ಧಾರ್ಮಿಕ ಸಮನ್ವಯತೆಯನ್ನು ಸ್ಥಾಪಿಸಿಕೊಂಡಿದೆ.

ಆದಿಮಾನವನಾಗಿದ್ದ ಮನುಷ್ಯ ನಾಗರಿಕನಾಗುತ್ತ ತನ್ನ ನಂಬಿಕೆಗಳಿಗೆ ಅನುಸಾರವಾಗಿ ತನ್ನದೇ ಆಚಾರ–ವಿಚಾರವನ್ನು ಅಳವಡಿಸಿಕೊಂಡು ಜೀವನ ಪದ್ಧತಿಯನ್ನು ರೂಪಿಸಿಕೊಂಡು, ತನ್ನದೇ ಸಂಸ್ಕೃತಿಯನ್ನು ಬೆಳಸಿಕೊಂಡನು. ಅವನ ಧಾರ್ಮಿಕ ಮನೋಭಾವಗಳಿಗೆ ತಕ್ಕಂತೆ ದೇವಾಲಯಗಳ ನಿರ್ಮಾಣ ಪ್ರಾರಂಭವಾಯಿತು. ದೇವಾಲಯವು ಅಂದು ಸಾಂಸ್ಕೃತಿಕ ಹಾಗೂ ಧಾರ್ಮಿಕ ಚಟುವಟಿಕೆಗಳ ಕೇಂದ್ರವಾಗಿಯೂ ಬೆಳವಣಿಗೆ ಹೊಂದಿತ್ತು. ಇವು ಪ್ರಾಚೀನ ಕಾಲದಲ್ಲಿ ವಿದ್ಯಾಕೇಂದ್ರಗಳಾಗಿ, ನ್ಯಾಯ ಕೇಂದ್ರಗಳಾಗಿ ಕಾರ್ಯನಿರ್ವಹಿಸುತ್ತಿದ್ದವು. ಇವು ಕೇವಲ ಧಾರ್ಮಿಕ ಚಟುವಟಿಕೆಗಳ ಕೇಂದ್ರಗಳಷ್ಟೇ ಆಗಿರದೆ ಸಾಮಾಜಿಕ ಚಟುವಟಿಕಗಳಲ್ಲಿಯೂ ತೊಡಗಿರುತ್ತಿದ್ದವು ಎಂಬುದನ್ನು ಗುರುತಿಸಲಾಗಿದೆ. ಈ ಎಲ್ಲ ಕಾರಣಗಳಿಂದ ದೇವಾಲಯಗಳು ಪ್ರಮುಖ ಕೇಂದ್ರಗಳಾಗಿ ರೂಪುಗೊಂಡಿದ್ದವು. ಬೆಂಗಳೂರಿನ ಶಾಸನಗಳನ್ನು ಈ ದಿಸೆಯಲ್ಲಿ ಗಮನಿಸಿದಾಗ ಬಹುತೇಕ ಶಾಸನಗಳು ದೇವಾಲಯಗಳಿಗೆ ನೀಡಿದ ದಾನಶಾಸನಗಳಾಗಿವೆ. ಈ ಅಧ್ಯಾಯದಲ್ಲಿ ಶಾಸನಗಳಲ್ಲಿ ಉಲ್ಲೇಖವಾಗಿರುವ ದೇವಾಲಯಗಳನ್ನು ಕುರಿತು ಸಮಗ್ರವಾಗಿ ವಿಶ್ಲೇಷಿಸಲಾಗಿದೆ.

ಪ್ರಾಚೀನ ಸಂದರ್ಭದಲ್ಲಿನ ರಾಜಕೀಯ ಚರಿತ್ರೆಯೊಂದೇ ಸಾಂಸ್ಕೃತಿಕ ಚರಿತ್ರೆಯಾಗುವುದಿಲ್ಲ. ಅಂದಿನ ಜನತೆಯ ಜೀವನ ಕ್ರಮವೊಂದನ್ನು ಕಟ್ಟಿಕೊಡುವುದು ಸಾಂಸ್ಕೃತಿಕ ಅಧ್ಯಯನದ ಅರ್ಥಪೂರ್ಣ ನೆಲೆಯಾಗಿದೆ. ಹಾಗಾಗಿ ಸಾಮಾಜಿಕ ಅಧ್ಯಯನ ಎಂಬ ನಾಲ್ಕನೇ ಅಧ್ಯಾಯದಲ್ಲಿ ಶ್ರೀಸಾಮಾನ್ಯನ ಜೀವನ ಕ್ರಮ, ಅನುಸರಿಸುತ್ತಿದ್ದ ವೃತ್ತಿ, ಕೈಗಾರಿಕೆಗಳು, ಭೂಒಡೆತನ ಹಾಗೂ ಅಂದಿನ ಪರಿಸರದಲ್ಲಿ ಅಸ್ತಿತ್ವದಲ್ಲಿದ್ದ ವರ್ಗವ್ಯವಸ್ಥೆ ಮತ್ತು ಸ್ತ್ರೀಯರ ಸ್ಥಿತಿ–ಗತಿಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಪ್ರಾಚೀನ ಸಂದರ್ಭದಲ್ಲಿ ಸ್ತೀಯರು ಧಾರ್ಮಿಕ ವಿಧಿವಿಧಾನಗಳಲ್ಲಿ, ಯುದ್ಧಗಳಲ್ಲಿ ಪಾಲ್ಗೊಳ್ಳುತ್ತಿದ್ದರು. ಆದರೆ ಇವರ ಸಂಖ್ಯೆ ಹೆಚ್ಚಿನ ಪ್ರಮಾಣದಲ್ಲಿರದೆ ಬೆರಳೆಣಿಕೆಯಷ್ಟು ಮಾತ್ರ ಆಗಿರುತ್ತಿತ್ತು. ಸಲ್ಲೇಖನ ವ್ರತವನ್ನು ಪಡೆದ ರೊಂಡಬ್ಬೆ, ಕಂತಿಯಾದ ಮಂಕಬ್ಬೆ, ವೀರಮರಣ ಹೊಂದಿದ ಕೊಂಡಬ್ಬೆ ಹಾಗೂ ಸಮಾಜದಲ್ಲಿ ಸೇವಾ ವೃತ್ತಿನಿರತ ಮಹಿಳೆಯರಾದ ಬಸವಿಯರು, ಪಾತ್ರದ ಸೂಳೆಯರ ಬಗೆಗೆ, ಯಲಹಂಕ ನಾಡಪ್ರಭುಗಳ ಕಾಲದಲ್ಲಿ ಅಸ್ತಿತ್ವದಲ್ಲಿದ್ದ ಬಹುಪತ್ನಿತ್ವ ಮತ್ತು ಸ್ತ್ರೀಯರ ಸ್ಥಾನವನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಕ್ರಿ.ಶ.820ರ ಗಂಗರ ಕಾಲದಿಂದ 1670ರ ವರಗಿನ ಅಗ್ರಹಾರಗಳಾದ ಕಲಿಯೂರುಅಗ್ರಹಾರ, ಬೈರಾಪುರಅಗ್ರಹಾರ, ತಿಮ್ಮರಾಜಪುರಅಗ್ರಹಾರ, ಪುಟ್ಟೈಯನಅಗ್ರಹಾರ, ಸಿಂಗಸಮುದ್ರಅಗ್ರಹಾರ, ಸಿವನಸಮುದ್ರ ಅಗ್ರಹಾರ, ರಾಮಪುರಅಗ್ರಹಾರ, ತಿಪ್ಪಸಮುದ್ರಅಗ್ರಹಾರ, ತುರಹಳ್ಳಿಅಗ್ರಹಾರ, ಮುತ್ತುಕೂರುಅಗ್ರಹಾರ, ಕಾಮಾಕ್ಷಿಪುರಅಗ್ರಹಾರ,

ಕೆಂಪಸಮುದ್ರಅಗ್ರಹಾರ ಹೀಗೆ ಮೊದಲಾದ ಅಗ್ರಹಾರಗಳನ್ನು ಸ್ಥಾಪಿಸಿ ಹಾಗೂ ಮೊದಲೇ ಅಸ್ತಿತ್ವದಲಿದ್ದ ಅಗ್ರಹಾರಗಳಿಗೆ ದಾನವನ್ನು ನೀಡುವುದರ ಮೂಲಕ ಪ್ರಾಚೀನ ಸಂದರ್ಭದಲ್ಲಿ ವಿದ್ಯಾಭ್ಯಾಸಕ್ಕೆ ಆದ್ಯತೆಯನ್ನು ನೀಡುತಿದ್ದರು. ಹೀಗೆ ಅಗ್ರಹಾರಗಳು ವೇದ ವಿದ್ಯೆಯನ್ನು ಕಲಿಸುವ ವಿದ್ಯಾಕೇಂದ್ರಗಳಾಗಿದ್ದುದನ್ನು ಈ ಅಧ್ಯಾಯದಲ್ಲಿ ಗುರುತಿಸಲಾಗಿದೆ.

ಗಂಗರ ಕಾಲದಿಂದ ವಿಜಯನಗರ ಕಾಲದವರೆಗಿನ ಕೆರೆ ನಿರ್ಮಾಣ, ಜೀರ್ಣೋದ್ಧಾರ ಕಾರ್ಯ, ನೀರಾವರಿ ವ್ಯವಸ್ಥೆಯ ಬಗ್ಗೆ ವಿಶ್ಲೇಷಿಸಲಾಗಿದೆ. ಹಾಗೂ ಪ್ರಾಚೀನ ಬೆಂಗಳೂರಿನಲ್ಲಿ ಅಸ್ತಿತ್ವದಲ್ಲಿದ್ದ ಹೊಗೆದೆರೆ, ಅಕ್ಕಸಾಲಿಗರ ತೆರಿಗೆ, ಮಗ್ಗದೆರೆ, ಹಾದರ, ಪಾಂಚಾಳವಳಕೆ ಕಟು, ಆನೆ ಹದಿಕೆ, ಕಿಱುಕುಳ, ಕುದುರೆ ಸುಂಕ, ಜಕಾತಿ ಸುಂಕ, ಗೇಣುವೊಡೆದ ತಲೆ, ಮನೆದೆರೆ, ಸುಂಕ ಕೊಮಾರ ಕಾಣಿಕೆ, ಹದಿಕೆ ಕರ, ಕಟ್ಟುಗೂಳು, ದಂಡ ಉಂಡುಗೆ/ತಪ್ಪು ತವಡಿ, ನೀರುನೇಣು, ಮದುವೆ ಸುಂಕ, ಕಾಡಾರಂಬ, ನೀರಾರಂಬ, ಕುರಿತೆರಿಗೆ ಮೊದಲಾದ ತೆರಿಗೆಯನ್ನು ಗುರುತಿಸಲಾಗಿದೆ. ಒಟ್ಟಾರೆ ಈ ಅಧ್ಯಾಯದಲ್ಲಿ ಪ್ರಾಚೀನ ಬೆಂಗಳೂರಿನ ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿಯನ್ನು ಅವಲೋಕಿಸಿ ವಿಶ್ಲೇಷಿಸಲಾಗಿದೆ.

ಸ್ಮಾರಕ ಶಿಲ್ಪಗಳು ಎಂಬ ಐದನೇ ಅಧ್ಯಾಯದಲ್ಲಿ ಎಪಿಗ್ರಾಫಿಯಾ ಕರ್ನಾಟಿಕ IX ರಲ್ಲಿ ಉಲ್ಲೇಖವಾಗಿರುವ ವೀರಗಲ್ಲು ಶಾಸನಗಳಷ್ಟೇ ಅಲ್ಲದೆ ಬೆಂಗಳೂರು ನಗರದಾದ್ಯಂತ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ದೊರೆತ ವೀರಗಲ್ಲು, ಮಾಸ್ತಿಗಲ್ಲು, ಸ್ಮಾರಕಶಿಲ್ಪಗಳು, ವಾಮನಮುದ್ರೆಕಲ್ಲು, ಲಿಂಗಮುದ್ರೆಕಲ್ಲು ಮೊದಲಾದವುಗಳನ್ನು ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸಿ ಅವುಗಳ ಮಹತ್ವ ಮತ್ತು ಶೈಲಿ, ಕಾಲವನ್ನು ಗುರುತಿಸಲಾಗಿದೆ. ವಿಶೇಷವೆಂದರೆ ಈ ಎಲ್ಲಾ ಸ್ಮಾರಕಶಿಲ್ಪಗಳು ಇಂದಿಗೂ ನಿತ್ಯಪೂಜೆಗೊಳ್ಳುತ್ತಿರುವುದನ್ನು ಗುರುತಿಸಲಾಗಿದೆ.

ಆರನೆಯ ಹಾಗೂ ಕೊನೆಯ ಅಧ್ಯಾಯವಾಗಿ ಶಾಸನಗಳ ರಾಚನಿಕ ಅಧ್ಯಾಯವನ್ನು ಮಾಡಲಾಗಿದೆ. ಶಾಸನೋಲ್ಲೇಖಿತ ಸ್ಥಳನಾಮಗಳು ಒಂದು ಪ್ರದೇಶದ ಭೌಗೋಳಿಕ, ಐತಿಹಾಸಿಕ ಹಾಗೂ ಸಾಮಾಜಿಕ ವಿಷಯವನ್ನೊಳಗೊಂಡ ಜೀವಂತ ಪಳೆಯುಳಿಕೆಗಳಾಗಿರುವುದರಿಂದ ಪ್ರದೇಶವೊಂದರ ಸಾಂಸ್ಕೃತಿಕ ಮಹತ್ವಕ್ಕೆ ಕಾರಣವಾದ ಅಂಶವನ್ನು ಈ ಅಧ್ಯಾಯದಲ್ಲಿ ಗುರುತಿಸಲಾಗಿದೆ. ಏಕಭಾಷಾ ಪ್ರಾಂತ್ಯಗಳು ಬಹುಭಾಷಾ ಪ್ರಾಂತ್ಯಗಳಾಗಿ ಪರಿವರ್ತಿತವಾಗಲು ಕಾರಣವಾದ ಅಂಶ. ಕನ್ನಡ, ತಮಿಳು, ತೆಲುಗು, ಸಂಸ್ಕೃತ ಭಾಷಾ ಪ್ರಯೋಗಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಹಾಗೂ ಪೂರ್ವದ ಹಳಗನ್ನಡ ಅವಸ್ಥೆಯು ಕಾಲದಿಂದ ಕಾಲಕ್ಕೆ ಹೊಸಗನ್ನಡದ

ವ್ಯಾಪ್ತಿಯವರೆಗೂ ಚಾಚಿಕೊಂಡ ರೀತಿಯನ್ನು ಕುರಿತು ವಿಶ್ಲೇಷಿಸಲಾಗಿದೆ. ಶಾಸನವನ್ನು ರಚಿಸಲು ಅವಶ್ಯಕವಾಗಿ ಬೇಕಾಗಿದ್ದ ಲಿಪಿಕಾರರು, ರೂವಾರಿಗಳು, ಕವಿಗಳನ್ನು ಗುರುತಿಸಲಾಗಿದೆ. ಶಾಸನದ ಪ್ರಾರಂಭದ ಮಂಗಳ ಶ್ಲೋಕಗಳು ಮತ್ತು ಕಡೆಯ ಭಾಗದ ಶಾಪ ಮತ್ತು ಪುಣ್ಯಾಶಯ ಜನರ ಮನಸ್ಥಿತಿಯನ್ನು ಉತ್ತಮ ಮಾರ್ಗದಲ್ಲಿ ಕಾಪಿಟ್ಟುಕೊಳ್ಳಲು ನೆರವಾಗುವ ಅಂಶವನ್ನು ಗುರುತಿಸಲಾಗಿದೆ.

ಒಟ್ಟಾರೆ ಈ ಮಹಾಪ್ರಬಂಧವು ಪ್ರಾಚೀನ ಬೆಂಗಳೂರಿನ ರಾಜಕೀಯ, ಧಾರ್ಮಿಕ, ಸಾಮಾಜಿಕ, ಆರ್ಥಿಕ ಪರಿಸ್ಥಿತಿಯನ್ನು ಹಾಗೂ ಕಾಲದಿಂದ ಕಾಲಕ್ಕೆ ಉಂಟಾದ ಪಲ್ಲಟಗಳು, ಅದರ ಹಿಂದಿನ ಸಾಂಸ್ಕೃತಿಕ ಒತ್ತಡವನ್ನು, ಸಮಾಜದ ಜನರ ಜೀವನ ಮೌಲ್ಯ, ಭಾಷೆ, ಸಾಹಿತ್ಯ, ಸ್ಥಳನಾಮಗಳನ್ನು ಕುರಿತ ಅಧ್ಯಯನವಾಗಿರುವುದರಿಂದ ಪ್ರಸ್ತುತ ಅಧ್ಯಯನದ ಸ್ವರೂಪವು ಬಹುಶಿಸ್ತೀಯ ಅಧ್ಯಯನದ ಮಾದರಿಯನ್ನು ಒಳಗೊಂಡಿದೆ.

**ಸಂಶೋಧನೆಯ ಹೊಸಸಾಧ್ಯತೆಗಳು,**

ಬೆಂಗಳೂರು ನಗರದ ಬಗ್ಗೆ ಇನ್ನೂ ನಡೆಯಬೇಕಾದ ಅಧ್ಯಯನ ಬೇಕಾದಷ್ಟಿದೆ. ಅವು ಪ್ರಸ್ತುತ ಮಹಾಪ್ರಬಂಧದ ವ್ಯಾಪ್ತಿಯಿಂದ ಹೊರಗಿರುವುದರಿಂದ ಮುಂದಿನ ಸಂಶೋಧನೆಯ ಹೊಸ ಹೊಳಹುಗಳನ್ನು ಸಂಕ್ಷಿಪ್ತವಾಗಿ ಈ ಭಾಗದಲ್ಲಿ ಸೂಚಿಸಲಾಗಿದೆ. ಬೆಂಗಳೂರಿನಲ್ಲಿನ ಪ್ರಾಗೈತಿಹಾಸಿಕ ನೆಲೆಗಳು ಎಲ್ಲವೂ ಇನ್ನೂ ಸಂಪೂರ್ಣವಾಗಿ ಬೆಳಕಿಗೆ ಬಂದಿಲ್ಲ. ಈ ಪ್ರದೇಶದ ಪ್ರಾಗೈತಿಹಾಸಿಕ ನೆಲೆಗಳ ಶೋಧವು ಪ್ರತ್ಯೇಕ ಮಹಾಪ್ರಬಂಧದ ರಚನೆಗೆ ವಸ್ತುವಾಗಬಲ್ಲದು.

ಅವಿಭಜಿತ ಬೆಂಗಳೂರು ಜಿಲ್ಲೆಯ ಭಾಗವಾಗಿದ್ದ, ಪ್ರಸ್ತುತ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ತಾಲ್ಲೂಕುಗಳಾದ ದೊಡ್ಡಬಳ್ಳಾಪುರ, ನೆಲಮಂಗಲ, ಹೊಸಕೋಟೆ, ದೇವನಹಳ್ಳಿ ತಾಲೂಕುಗಳ ಶಾಸನಗಳು ಹಾಗೂ ರಾಮನಗರ ಜಿಲ್ಲೆಯ ಶಾಸನಗಳ ಬಗ್ಗೆ ಪ್ರತ್ಯೇಕವಾಗಿ ಮಹಾಪ್ರಬಂಧ ರಚಿಸಬಹುದು. ಬೆಂಗಳೂರು ನಗರ ಜಿಲ್ಲೆಯ ಶಾಸನಗಳ ಭಾಷಿಕ ಅಧ್ಯಯನ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ರಾಮನಗರ ಜಿಲ್ಲೆಯ ದೇವಾಲಯಗಳು, ಬೆಂಗಳೂರು ಜಿಲ್ಲೆಯ ಸ್ಥಳನಾಮಗಳು, ರಾಮನಗರ ಜಿಲ್ಲೆಯ ಸ್ಥಳನಾಮಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಸ್ಥಳನಾಮಗಳು ಇವೆಲ್ಲವೂ ಒಂದೊಂದು ಪ್ರತ್ಯೇಕವಾದ ಪಿಎಚ್.ಡಿ. ಮಹಾಪ್ರಬಂಧದ ಸಂಶೋಧನಾ ವಿಷಯವಾಗಬಲ್ಲಂತಹದ್ದು ಆದ್ದರಿಂದ ಮುಂದಿನ ಸಂಶೋಧಕರು ಈ ಬಗ್ಗೆ ಗಮನಹರಿಸಬಹುದು.

ಕೊನೆಯದಾಗಿ, ಪ್ರಸ್ತುತ ಮಹಾಪ್ರಬಂಧವನ್ನು ಪ್ರಕಟಿತ ಶಾಸನಗಳ ಆಧಾರದ ಮೇಲೆ, ಪೂರಕ ಗ್ರಂಥಗಳನ್ನು ಅಭ್ಯಸಿಸಿ, ಕ್ಷೇತ್ರಕಾರ್ಯದ ಸಂದರ್ಭದಲ್ಲಿ ದೊರೆತ ಅಪ್ರಕಟಿತ ಶಾಸನಗಳನ್ನು ಪ್ರಕಟಿಸಿರುವುದರೊಂದಿಗೆ ಪ್ರಸ್ತುತ ಅಧ್ಯಯನದಲ್ಲೂ ಬಳಸಿಕೊಳ್ಳಲಾಗಿದೆ. ಬೆಂಗಳೂರು ನಗರದ ನಾಲ್ಕೂ ತಾಲ್ಲೂಕಿನ ಪ್ರತಿಯೊಂದು ಗ್ರಾಮ, ಪ್ರದೇಶವನ್ನೂ ಕ್ಷೇತ್ರಕಾರ್ಯ ಮಾಡಿ ದೊರೆತ ಮಾಹಿತಿಗಳನ್ನು ಅವಲೋಕಿಸಿ, ಬೆಂಗಳೂರು ನಗರದ ಸಾಂಸ್ಕೃತಿಕ ಚರಿತ್ರೆಯನ್ನು ಪುನಾರಚಿಸಲಾಗಿದೆ. ಈ ಮಹಾಪ್ರಬಂಧವನ್ನು ನನ್ನ ಇತಿಮಿತಿಯಲ್ಲಿ ತಕ್ಕಮಟ್ಟಿಗೆ ಪರಿಪೂರ್ಣವಾಗಿ ರಚಿಸುವ ಪ್ರಾಮಾಣಿಕ ಪ್ರಯತ್ನ ಮಾಡಲಾಗಿದೆ. ಈ ಮಹಾಪ್ರಬಂಧದ ಸರಿ ತಪ್ಪುಗಳನ್ನು ಪ್ರಾಜ್ಞರು ತಿಳಿಸಿದಲ್ಲಿ, ಅವುಗಳನ್ನು ವಿನಯಪೂರ್ವಕವಾಗಿ ಸ್ವೀಕರಿಸಲಾಗುವುದು.

# ಪರಾಮರ್ಶನ ಗ್ರಂಥಗಳು


1. ಅರುಣಿ.ಎಸ್.ಕೆ: ಯಲಹಂಕ ನಾಡಪ್ರಭುಗಳ ವಾಸ್ತುಶಿಲ್ಪ–ಶಿಲ್ಪಕಲೆ, ಬೆಂಗಳೂರು ವಿಶ್ವವಿದ್ಯಾಲಯ, ಪ್ರಸಾರಾಂಗ, 2007.
2. ಅಪರ್ಣ.ಕೂ.ಸ. : ದೇವಾಲಯ ವಾಸ್ತುಶಿಲ್ಪ ಪರಿಚಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 1999.
3. ಕನ್ನಡ ರತ್ನ ಕೋಶ: ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು, 1994.
4. ಕಲಬುರ್ಗಿ ಎಂ.ಎಂ : ಪ್ರಾಚೀನ ಕರ್ನಾಟಕದ ಆಡಳಿತ ವಿಭಾಗಗಳು, ಭಾಗ–1, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 1999.
5. ಕಲಬುರ್ಗಿ.ಎಂ.ಎಂ : ಕನ್ನಡ ಸಂಶೋಧನ ಶಾಸ್ತ್ರ, ಚೇತನ ಬುಕ್ ಹೌಸ್, ಬೆಂಗಳೂರು, 1992.
6. ಕಲಬುರ್ಗಿ.ಎಂ.ಎಂ : ಕರ್ನಾಟಕದ ಕೈಫಿಯತ್ತುಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 1994.
7. ಕಲಬುರ್ಗಿ.ಎಂ.ಎಂ. : ಸಮಾಧಿ–ಬಲಿದಾನ–ವೀರ ಮರಣಸ್ಮಾರಕಗಳು, ಐಬಿಎಚ್ ಪ್ರಕಾಶನ, ಬೆಂಗಳೂರು, 1980.
8. ಕವಿತಾಕೃಷ್ಣ : ಬೆಂಗಳೂರು ನಿರ್ಮಾಪಕ ಕೆಂಪೇಗೌಡ, ಅನ್ನಪೂರ್ಣ ಪಬ್ಲಿಷಿಂಗ್‌ಹೌಸ್, ಬೆಂಗಳೂರು.
9. ಕುಮಾರ ಕಕ್ಕಯ್ಯ ಪೋಳ: ಚಾತುರ್ವರ್ಣ ಧರ್ಮದರ್ಶನ, ಲೋಹಿಯಾ ಪ್ರಕಾಸನ, 2010
10. ಕರ್ಲಮಂಗಲಂ ಶ್ರೀಕಂಠಯ್ಯ : ಕೆಂಪೇಗೌಡರ ಜಯಪ್ರಶಸ್ತಿ, ಬೆಂಗಳೂರು
11. ಕುಮಾರಸ್ವಾಮಿ.ಕೆ.ಎಸ್ : ಪ್ರಾಚೀನ ಕರ್ನಾಟಕದಲ್ಲಿ ಶಿಲ್ಪಾಚಾರಿಯರು ಒಂದು ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 1996.
12. ಕೂಡ್ಲೂರು ವೆಂಕಟಪ್ಪ: ಸ್ಥಳನಾಮ ವೀರರು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 2007.
13. ಕೃಷ್ಣರಾವ್.ಎಂ.ವಿ : ಬೆಂಗಳೂರು ಕೆಂಪೇಗೌಡ, ಕಾರ್ಪೊರೇಷನ್ ಪ್ರಕಟಣೆ, ಬೆಂಗಳೂರು
14. ಕೃಷ್ಣರಾವ್.ಎಂ.ವಿ, ಎಂ.ಕೇಶವಭಟ್ಟ(ಸಂ): ಕರ್ನಾಟಕದ ಇತಿಹಾಸ ದರ್ಶನ, ಕರ್ನಾಟಕ ಸಹಕಾರೀ ಪ್ರಕಾಶನ ಮಂದಿರ, ಬೆಂಗಳೂರು, 1970.
15. ಕೃಷ್ಣಮೂರ್ತಿ.ಪಿ.ವಿ, ಡಿ.ಸ್ಮಿತಾರೆಡ್ಡಿ, ಡಾ.ತಮಿಳ್ ಸೆಲ್ವಿ (ಸಂ) : ಗುಣಮಧುರ, ಡಾ.ದೇವರಕೊಂಡಾರೆಡ್ಡಿ ಅಭಿನಂದನ ಸಮಿತಿ, 2010.

16. ಕೇಶವಶರ್ಮ.ಕೆ : ಸಾಂಸ್ಕೃತಿಕ ಪರಿಕಲ್ಪನೆಗಳು, ದೇಸಿ ಪುಸ್ತಕ ಪ್ರಕಾಶನ, ಬೆಂಗಳೂರು, 2013

17. ಕೋಟ್ರಯ್ಯ.ಸಿ.ಟಿ.ಎಂ : ವಿಜಯನಗರ ಸಾಮ್ರಾಜ್ಯದ ನೀರಾವರಿ ವ್ಯವಸ್ಥೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, 2005.

18. ಗೀತಾಚಾರ್ಯ.ನಾ : ಕನ್ನಡ ಶಾಸನಗಳ ಭಾಷೆ – ಒಂದು ಅಧ್ಯಯನ, ಇಳಾ ಮುದ್ರಣಾಲಯ, ಬೆಂಗಳೂರು, 2010.

19. ಗೋಪಾಲ್.ಬಾ.ರಾ : ಕರ್ನಾಟಕದಲ್ಲಿ ಶ್ರೀರಾಮಾನುಜಾಚಾರ್ಯರು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 1984

20. ಗೋಪಾಲ್.ಬಾ.ರಾ : ಕನ್ನಡ ಶಾಸನಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

21. ಗೋಪಾಲ್.ಆರ್(ಸಂ) : ನಾಡಪ್ರಭು ಕೆಂಪೇಗೌಡರ ಜೀವನ ಮತ್ತು ಸಾಧನೆಗಳು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, 2010

22. ಗೋಪಾಲ್.ಆರ್(ಸಂ) : ಮಂಡ್ಯ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪ್ರಾಚ್ಯ ವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, 2008

23. ಗೋಪಾಲ್.ಆರ್.(ಸಂ) : ಬೆಂಗಳೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪ್ರಾಚ್ಯ ವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, 2012.

24. ಚಂದ್ರಪೂಜಾರಿ.ಎಂ : ಸಂಶೋಧಕರು ಮತ್ತು ಕ್ಷೇತ್ರಕಾರ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, 2005.

25. ಚಿದಾನಂದಮೂರ್ತಿ.ಎಂ : ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಸ್ವಪ್ನ ಬುಕ್ ಹೌಸ್, ಬೆಂಗಳೂರು, 2008.

26. ಚಿದಾನಂದಮೂರ್ತಿ.ಎಂ : ಹೊಸತು ಹೊಸತು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, 1993.

27. ಚಿದಾನಂದಮೂರ್ತಿ.ಎಂ : ವೀರಗಲ್ಲು ಮತ್ತು ಮಾಸ್ತಿಗಲ್ಲು, ಐ.ಬಿ.ಹೆಚ್. ಪ್ರಕಾಶನ, ಬೆಂಗಳೂರು, 1984.

28. ಚಿದಾನಂದಮೂರ್ತಿ ಎಂ. : ಮಧ್ಯಕಾಲೀನ ಕರ್ನಾಟಕ ಮತ್ತು ಅಸ್ಪೃಶ್ಯತೆ, ಸಪ್ನ ಬುಕ್ ಹೌಸ್, 2011

29. ಚಿನ್ನಸ್ವಾಮಿ ಸೋಸಲೆ.ಎನ್ : ವಸಾಹತು ಕಾಲಘಟ್ಟದ ಮೈಸೂರು ಸಂಸ್ಥಾನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2010.

30. ಚೆನ್ನಕ್ಕ ಎಲಿಗಾರ : ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, 1990.
31. ಚೆನ್ನಕ್ಕ ಎಲಿಗಾರ : ಕರ್ನಾಟಕ ಶಾಸನೋಕ್ತ ಮಹಿಳೆ ಸಮೀಕ್ಷೆ– ಸಂಸ್ಕೃತಿ, ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ, 2008.
32. ಜಯಮ್ಮ ಕರಿಯಣ್ಣ.ಎಚ್ : ನೊಳಂಬರ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಕರ್ನಾಟಕದ ಇತಿಹಾಸ ಸಂಶೋಧನ ಮಂಡಲ, ಧಾರವಾಡ, 2008.
33. ಜೋಷಿ.ಶಂ.ಬಾ : ಕರ್ನಾಟಕ ಸಂಸ್ಕೃತಿಯ ಪೂರ್ವಪೀಠಿಕೆ, ಸಮಾಜ ಪುಸ್ತಕಾಲಯ, ಧಾರವಾಡ, 1966.
34. ತಮಿಳ್ ಸೆಲ್ವಿ : ಗಂಗರ ಶಾಸನಗಳು ಒಂದು ಅಧ್ಯಯನ, ಕನ್ನಡ ಅಧ್ಯಯನ ಕೇಂದ್ರ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, 2002. (ಪಿಎಚ್.ಡಿ ಅಪ್ರಕಟಿತ ಮಹಾಪ್ರಬಂಧ)
35. ತಿಪ್ಪೇರುದ್ರಸ್ವಾಮಿ.ಎಚ್ : ಕರ್ಣಾಟಕ ಸಂಸ್ಕೃತಿ ಸಮೀಕ್ಷೆ, ಡಿ.ವಿ.ಕೆ. ಮೂರ್ತಿ, ಮೈಸೂರು, 1968.
36. ಧನವಂತ ಹಾಜವಗೋಳ : ಮುಳಗುಂದನಾಡು ಒಂದು ಅಧ್ಯಯನ, ಮಹಾದೇವಿ ಪ್ರಕಾಶನ, 2004
37. ದೇಜಗೌ : ಸ್ಥಳನಾಮ ವ್ಯಾಸಂಗ, ಕನ್ನಡ ಅಧ್ಯಯನ ಮತ್ತು ಸಂಶೋಧನಾ ವಿಭಾಗ, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮೈಸೂರು, 2011.
38. ದೇವರಕೊಂಡಾರೆಡ್ಡಿ : ಗಂಗರ ಶಿಲ್ಪಕಲೆ, ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು, 2008.
39. ದೇವರಕೊಂಡಾರೆಡ್ಡಿ : ತಲಕಾಡಿನ ಗಂಗರ ದೇವಾಲಯಗಳು ಒಂದು ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 1994.
40. ದೇವರಕೊಂಡಾರೆಡ್ಡಿ : ಕರ್ನಾಟಕದ ಶಾಸನಗಳಲ್ಲಿ ಶಾಪಾಶಯಗಳು, ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ, 2008.
41. ನರಸಿಂಹಮೂರ್ತಿ.ಎ.ವಿ : ಕರ್ನಾಟಕ ಪುರಾತತ್ವ–ಕೆಲವು ಅಧ್ಯಯನಗಳು, ಪ್ರಸಾರಾಂಗ, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ, ಮೈಸೂರು
42. ನರಸಿಂಹಚಾರ್.ಆರ್ : ಶಾಸನ ಪದ್ಯ ಮಂಜರಿ, ಪ್ರಕಟನಾ ಮತ್ತು ಪ್ರಚಾರೋಪನ್ಯಾಸ ವಿಭಾಗ, ಬೆಂಗಳೂರು ವಿಶ್ವವಿದ್ಯಾನಿಲಯ, 1995

43. ನಂಜುಂಡಸ್ವಾಮಿ.ಎಸ್ : ಮಂಡ್ಯ ಜಿಲ್ಲೆಯ ಶಾಸನಗಳು–ಒಂದು ಅಧ್ಯಯನ, ಕನ್ನಡ ಅಧ್ಯಯನ ಮತ್ತು ಸಂಶೋಧನಾ ವಿಭಾಗ, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮೈಸೂರು, 20012.(ಪಿಎಚ್.ಡಿ ಅಪ್ರಕಟಿತ ಮಹಾಪ್ರಬಂಧ)
44. ನಾಯಕ ಹಾ.ಮಾ.(ಸಂ) : ಕನ್ನಡ ವಿಷಯ ವಿಶ್ವಕೋಶ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 1979.
45. ನಾಗರಾಜ್.ಡಿ.ಆರ್ : ಸಂಸ್ಕೃತಿ ಕಥನ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, 2002
46. ನೀಲತ್ತಹಳ್ಳಿ ಕಸ್ತೂರಿ(ಅನುವಾದ) : ಕರ್ನಾಟಕದ ಕೆರೆ ನೀರಾವರಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2000
47. ನೇಗಿನಹಾಳ.ಎಂ.ಬಿ : ಪ್ರಾಚೀನ ಕನ್ನಡ ಶಾಸನಗಳ ಭಾಷಿಕ ಮತ್ತು ಸಾಹಿತ್ಯಕ ಅಧ್ಯಯನ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾನಿಲಯ ಧಾರವಾಡ, 1982.
48. ಪರಮಶಿವಮೂರ್ತಿ.ಡಿ.ವಿ: ಪೆಣ್ಬುಯಲ್, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2010.
49. ಪರಮಶಿವಮೂರ್ತಿ.ಡಿ.ವಿ: ತುಱುಗೊಳ್ ಸಂಕಥನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2011.
50. ಪರಮಶಿವಮೂರ್ತಿ.ಡಿ.ವಿ: ಕನ್ನಡ ಶಾಸನಶಿಲ್ಪ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 1999.
51. ಪರಮಶಿವಮೂರ್ತಿ.ಡಿ.ವಿ: ಪ್ರೌಢದೇವರಾಯನ ಶಾಸನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2007.
52. ಪಂಚಮುಖಿ.ಆರ್.ಎಸ್: ಕರ್ನಾಟಕ ಇತಿಹಾಸ, ಸಂಪುಟ–1 ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 1967.
53. ಪ್ರಭಾಕರ್.ಎಂ.ಎನ್: ದೇವಾಲಯ ವಾಸ್ತು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2011.
54. ಪುಟ್ಟಸ್ವಾಮಿ.ಬಿ.ಎಸ್: ಯಲಹಂಕ ನಾಡಪ್ರಭು ಕೆಂಪೇಗೌಡ ಮತ್ತು ಆತನ ವಂಶಸ್ಥರು, ಬೆಂಗಳೂರು.
55. ಪುಟ್ಟರಾಜು.ಎಂ.ಪಿ: ಬೆಂಗಳೂರು ಜಿಲ್ಲೆಯ ಐತಿಹಾಸಿಕ ಪ್ರವಾಸಿ ತಾಣಗಳು, ಇತಿಹಾಸ ವಿಭಾಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, 2010.(ಪಿಎಚ್.ಡಿ. ಅಪ್ರಕಟಿತ ಮಹಾಪ್ರಬಂಧ)
56. ಪಳನಿಸ್ವಾಮಿ: ಗುಂಡ್ಲುಪೇಟೆ ತಾಲೂಕು ಒಂದು ಸಾಂಸ್ಕೃತಿಕ ಅಧ್ಯಯನ, ಸ್ಕಂದಶ್ರೀ ಪ್ರಕಾಶನ, 2011

57. ಬಸವರಾಜ ಕಲ್ಗುಡಿ : ಮಹಾಸತಿ ಆಚರಣೆ : ಒಂದು ಅಧ್ಯಯನ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, 1985.

58. ಬೆಟಗೇರಿ ಕೃಷ್ಣಶರ್ಮ : ಕರ್ನಾಟಕದ ಜನಜೀವನ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕರ್ನಾಟಕ ಸರ್ಕಾರ, ಬೆಂಗಳೂರು, 1983.

59. ಬೈರಮಂಗಲ ರಾಮೇಗೌಡ, ಚಂದ್ರಶೇಖರಯ್ಯ ಎಂ.ಜಿ. (ಸಂ): ಬೆಂಗಳೂರು ಬಾಗಿನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. 2011

60. ಬೈರೇಗೌಡ.ಎಂ, ತಾ.ಸಿ.ತಿಮ್ಮಯ್ಯ(ಸಂ) : ಅರ್ಕಾವತಿ (ಸ್ಮರಣ ಸಂಚಿಕೆ), ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 1999.

61. ಭಟ್‌ಸೂರಿ.ಕೆ.ಜಿ : ಕನ್ನಡ ಶಾಸನ ಸಂಶೋಧನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ.

62. ಮಂಜುನಾಥ.ಎಂ.ಜಿ: ಬೆಂಗಳೂರಿನ ಬಖೈರುಗಳು, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

63. ಮಂಜುನಾಥ.ಎಂ.ಜಿ : ಯಲಹಂಕ ನಾಡಪ್ರಭುಗಳು (ಶಾಸನ ಸಂಪುಟ), ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, 2006

64. ಮಂಜುನಾಥ.ಎಂ.ಜಿ : ನಿಷಿಧಿ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ವಿಜಯಲಕ್ಷ್ಮೀ ಪ್ರಕಾಶನ, ಮೈಸೂರು, 2010.

65. ಮಂಜುನಾಥ.ಎಂ.ಜಿ : ಶಾಸನ ಪರಿಶೋಧನೆ, ವಿಜಯಲಕ್ಷ್ಮೀ ಪ್ರಕಾಶನ, ಮೈಸೂರು, 2008.

66. ಮಂಜುನಾಥ.ಎಂ.ಜಿ, ದೇವರಾಜಸ್ವಾಮಿ.ಜಿ.ಕೆ. : ಕನ್ನಡ ಲಿಪಿ ವಿಕಾಸ, ಜಗದ್ಗುರು ಶ್ರೀ ಮನ್ಮಧ್ವಾಚಾರ್ಯ ಮೂಲ ಮಹಾಸಂಸ್ಥಾನ ಶ್ರೀ ರಾಘವೇಂದ್ರಸ್ವಾಮಿಗಳವರ ಮಠ, ಮಂತ್ರಾಲಯ, 2004

67. ಮಂಜುಶ್ರೀ.ಎಸ್.ಪಿ : ಮೈಸೂರು ಜಿಲ್ಲೆಯ ಶಾಸನಗಳು – ಸಾಂಸ್ಕೃತಿಕ ಅಧ್ಯಯನ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು (ಅಪ್ರಕಟಿತ) ಪಿಎಚ್.ಡಿ ಮಹಾಪ್ರಬಂಧ, 2016

68. ಮಂಜುನಾಥ.ಎಂ.ಕೆ : ಚನ್ನಪಟ್ಟಣ ತಾಲೂಕು –ಸಾಂಸ್ಕೃತಿಕ ಅಧ್ಯಯನ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು (ಅಪ್ರಕಟಿತ) ಪಿಎಚ್.ಡಿ ಮಹಾಪ್ರಬಂಧ, 2015.

69. ಮುನಿರಾಜಪ್ಪ : ಮಾಗಡಿ ಸೀಮೆ, ಇತಿಹಾಸ–ಸಂಸ್ಕೃತಿ, ಸ್ಫೂರ್ತಿ ಪ್ರಕಾಶನ ಮಾಗಡಿ, 2005.

70. ಮೂರ್ತಿ.ಕೆ.ಎಲ್.ಎನ್ : ಕರ್ನಾಟಕದ ಕಲೆ ಮತ್ತು ವಾಸ್ತುಶಿಲ್ಪ, ರಂಜಿತಾ ಪ್ರಕಾಶನ, ತುಮಕೂರು, 1998.

71. ರಾಜಣ್ಣ ಟಿ.ಡಿ. : ಕನ್ನಡ ಶಾಸನ ಮತ್ತು ಸಾಹಿತ್ಯದಲ್ಲಿ ಶಾಪ, ಬಂಡಾರ ಮಸ್ಕಿ ಪ್ರಕಾಶನ, 2010

72. ರಾಮರತನ್. ಜಿ : ಕನ್ನಡ ನಾಡಿನ ಅರಸು ಮನೆತನಗಳು, ಕನ್ನಡ ಅಧ್ಯಯನ ಮತ್ತು ಸಂಶೋಧನಾ ವಿಭಾಗ, ಕ.ರಾ.ಮು.ವಿ.ವಿ, ಮೈಸೂರು.

73. ರಹಮತ್ ತರೀಕೆರೆ : ಸಾಂಸ್ಕೃತಿಕ ಅಧ್ಯಯನ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, 2008.

74. ರಾಜೇಶ್ವರಿಗೌಡ.ಕೆ : ಆದಿಚುಂಚನಗಿರಿ – ಒಂದು ಸಾಂಸ್ಕೃತಿಕ ಅಧ್ಯಯನ, ಆದಿಚುಂಚನಗಿರಿ ಮಹಾಸಂಸ್ಥಾನ ಮಠ, ಆದಿಚುಂಚನಗಿರಿ, ಮಂಡ್ಯ ಜಿಲ್ಲೆ, 2001.

75. ರಾಮಚಂದ್ರರಾವ್.ಎಸ್.ಕೆ : ಕನ್ನಡ ನಾಡಿನ ಧಾರ್ಮಿಕ ಪರಂಪರೆ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, 1983.

76. ರಾಮಚಂದ್ರರಾವ್.ಎಸ್.ಕೆ. : ಮೂರ್ತಿಶಿಲ್ಪ ನೆಲೆ ಹಿನ್ನಲೆ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, 1975.

77. ಲಲಿತಾಂಬ.ಎನ್.ಆರ್ : ಮಧ್ಯಕಾಲೀನ ಕರ್ನಾಟಕದ ಸಾಮಾಜಿಕ ಸಂಚಲನ, ಕೆ.ಎಸ್.ಮುದ್ದಪ್ಪ ಸ್ಮಾರಕ ಟ್ರಸ್ಟ್, ಕೃಷ್ಣಾಪುರದೊಡ್ಡಿ, 2011.

78. ವಸು.ಎಂ.ವಿ(ಸಂ) : ದಕ್ಷಿಣ ಕರ್ನಾಟಕದ ಅರಸು ಮನೆತನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2001.

79. ವಿರೂಪಾಕ್ಷ ಕುಲಕರ್ಣಿ(ಕನ್ನಡಕ್ಕೆ ಅನುವಾದ), ಇಂಗ್ಲೀಷ್ ಮೂಲ–ಡೇವಿಡ್ ಎನ್, ಲಾರೆಂಜನ್, ಕಾಪಾಲಿಕರು ಮತ್ತು ಕಾಳಾಮುಖರು : ಕಣ್ಮರೆಯಾದ ಎರಡು ಶೈವ ಸಂಪ್ರದಾಯಗಳು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, 2005.

80. ವೆಂಕಟಸುಬ್ಬಯ್ಯ.ಜಿ.(ಪ್ರ.ಸಂ) : ಸಂಕ್ಷಿಪ್ತ ಕನ್ನಡ ನಿಘಂಟು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 1975.

81. ವೆಂಕಟಾಚಲಶಾಸ್ತ್ರೀ.ಟಿ.ವಿ : ಕರ್ನಾಟಕ ಗ್ರಾಮ ಸೂಚಿ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, 1985.

82. ವೆಂಕಟೇಶ ಜೋಯಿಸ್.ಕೆ.ಜಿ : ಕೆಳದಿ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, 1996.
83. ಶಿವರುದ್ರಸ್ವಾಮಿ.ಎಸ್.ಎನ್ : ಕರ್ನಾಟಕದ ಪ್ರೌಢ ಇತಿಹಾಸ ಮತ್ತು ಸಂಸ್ಕೃತಿ, ಪೌರಸ್ತ್ಯ ಪ್ರಕಾಶನ, ತಿಪಟೂರು, 2000.
84. ಶಿವತಾರಕ್.ಕೆ.ಬಿ : ಕರ್ನಾಟಕದ ಪುರಾತತ್ವ ನೆಲೆಗಳು, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ.
85. ಶ್ರೀಧರ.ಎಚ್.ಜಿ : ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಯುದ್ಧಕಲೆ(ಕ್ರಿ.ಶ.450 ರಿಂದ 1350), ಶಿವರಾಮಕಾರಂತ ಅಧ್ಯಯನ ಕೇಂದ್ರ, ವಿವೇಕಾನಂದ ಕಾಲೇಜು, ಪುತ್ತೂರು, 2002.
86. ಶ್ರೀಧರ.ಎಂ.ಕೆ : ಸಂಸ್ಕೃತ ಭಾಷೆ–ಸಾಹಿತ್ಯಕ್ಕೆ ಕರ್ನಾಟಕದ ರಾಜಮನೆತನಗಳ ಕೊಡುಗೆ, ಜಯರಾಮ ಸೇವಾ ಮಂಡಳಿ, 2012.
87. ಶ್ರೀನಿವಾಸ ರಿತ್ತಿ (ಸಂ) : ಪ್ರಾಚೀನ ಕರ್ನಾಟಕದ ಆಡಳಿತ ಪರಿಭಾಷಾಕೋಶ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, 2000
88. ಶೇಠೆ.ಬಿ.ಎಸ್: ಕರ್ನಾಟಕದಲ್ಲಿ ಸತಿಪದ್ಧತಿ, ವೀರಶೈವ ಅಧ್ಯಯನ ಅಕಾಡೆಮಿ, ಬೆಳಗಾವಿ, 1991.
89. ಶೇಷಶಾಸ್ತ್ರಿ.ಆರ್: ಕರ್ನಾಟಕದ ವೀರಗಲ್ಲುಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 2004.
90. ಶೇಷಶಾಸ್ತ್ರಿ.ಆರ್ : ಶಾಸನ ಪರಿಚಯ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು,
91. ಶೈಲಜ ಹಿರೇಮಠ : ಮಾತೃಪ್ರಧಾನ ಪರಿಕಲ್ಪನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, 2001.
92. ಶೆಟ್ಟರ್.ಷ: ಸಾವಿಗೆ ಆಹ್ವಾನ, ಕನ್ನಡ ಪುಸ್ತಕ ಪ್ರಾಧಿಕಾರ, ಕರ್ನಾಟಕ ಸರ್ಕಾರ, ಬೆಂಗಳೂರು, 2004.
93. ಸುಂದರರಾವ್.ಬ.ನ : ಬೆಂಗಳೂರು ಇತಿಹಾಸ, ಅಂಕಿತ ಪುಸ್ತಕ, ಬೆಂಗಳೂರು, 2011
94. ಸೂರ್ಯನಾಥ.ಯು.ಕಾಮತ್, ಪ್ರೊ.ಎಂ.ಎಚ್.ಕೃಷ್ಣ(ಸಂ) : ಬೆಂಗಳೂರು ದರ್ಶನ, ಉದಯಬಾನು ಕಲಾಸಂಘ, ಬೆಂಗಳೂರು, 2005.
95. ಹಂಪನಾಗರಾಜಯ್ಯ : ಚಂದ್ರಕೊಡೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 1997.
96. ಹಂಪನಾಗರಾಜಯ್ಯ : ಶಾಸನಗಳಲ್ಲಿ ಜೈನ ತೀರ್ಥಂಕರರು, ಪಂಡಿತರತ್ನ ಎ.ಶಾಂತಿರಾಜಶಾಸ್ತ್ರಿ ಟ್ರಸ್ಟ್, ಬೆಂಗಳೂರು, 1998.

97. ಹಿರೇಮಠ. ಆರ್.ಸಿ : ಕನ್ನಡ ಶಾಸನ ಸಂಪದ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ, 1974.

98. ಹಿರೇಮಠ.ಎಂ.ಎನ್ : ಶಾಸನ ಪರಿಭಾಷೆ, ವಿದ್ಯಾನಿಧಿ ಪ್ರಕಾಶನ, ಗದಗ, 2005

99. ಹಿರೇಮಠ.ಬಿ.ಆರ್ : ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, 1986.

**ಶಾಸನ ಸಂಪುಟಗಳು**

1. ಎಪಿಗ್ರಾಫಿಕಲ್ ಸೊಸೈಟಿ ಆಫ್ ಇಂಡಿಯಾ : ಎಪಿಗ್ರಾಫಿಯಾ ಇಂಡಿಕ ಶಾಸನ ಸಂಪುಟಗಳು ಎ.ಎಸ್.ಐ, ಭಾರತ ಸರ್ಕಾರ.

2. ಎಪಿಗ್ರಾಫಿಕಲ್ ಸೊಸೈಟಿ ಆಫ್ ಇಂಡಿಯಾ : ಸೌತ್ ಇಂಡಿಯನ್ ಇನ್ಸ್‌ಕ್ರಿಪ್ಷನ್ಸ್ ಸಂಪುಟಗಳು, ಎ.ಎಸ್.ಐ, ಭಾರತ ಸರ್ಕಾರ.

3. ರೈಸ್.ಬಿ.ಎಲ್. (ಸಂ): ಎಪಿಗ್ರಾಫಿಯ ಕರ್ನಾಟಿಕ ಸಂಪುಟ IX, ಬೆಂಗಳೂರು ಡಿಸ್ಟ್ರಿಕ್ಟಿನಲ್ಲಿರುವ ಶಾಸನಗಳು, ಮೈಸೂರು ಗೌರ್ನಮೆಂಟ್ ಸೆಂಟ್ರಲ್ ಪ್ರೆಸ್, ಬೆಂಗಳೂರು, 1905.

4. ರೈಸ್.ಬಿ.ಎಲ್. (ಸಂ): ಎಪಿಗ್ರಾಫಿಯ ಕರ್ನಾಟಿಕ, ಸಂಪುಟ 12, ತುಮಕೂರು ಡಿಸ್ಟ್ರಿಕ್ಟಿನಲ್ಲಿರುವ ಶಾಸನಗಳು, ಮೈಸೂರು ಗೌರ್ನಮೆಂಟ್ ಸೆಂಟ್ರಲ್ ಪ್ರೆಸ್, ಬೆಂಗಳೂರು, 1904.

**ನಿಯತಕಾಲಿಕೆಗಳು**

1. ಇತಿಹಾಸ ದರ್ಶನ ಸಂಪುಟಗಳು, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು
2. ಇತಿಹಾಸ ದರ್ಪಣ (ತ್ರೈಮಾಸಿಕ), ಕೆಂಪೇಗೌಡನಗರ, ಬೆಂಗಳೂರು
3. ಕ್ವಾರ್ಟರ್ಲೀ ಜರ್ನಲ್ ಆಫ್ ಮಿಥಿಕ್ ಸೊಸೈಟಿ, ಮಿಥಿಕ್ ಸೊಸೈಟಿ, ಬೆಂಗಳೂರು.
4. ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ, ಕನ್ನಡ ಸಾಹಿತ್ಯ ಪರಿಷತ್ತು. ಬೆಂಗಳೂರು.
5. ಕರ್ನಾಟಕ ಲೋಚನ (ಷಾಣ್ಮಾಸಿಕ), ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು.
6. ಪ್ರಬುದ್ಧ ಕರ್ನಾಟಕ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.
7. ಮಾನವಿಕ ಕರ್ನಾಟಕ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

8. ವಿಜಯನಗರ ಅಧ್ಯಯನ ಸಂಪುಟಗಳು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಹೊಸಪೇಟೆ.
9. ಶಾಸನ ಅಧ್ಯಯನ ಸಂಪುಟಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ.
10. ಸಾಧನೆ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

## ಆಂಗ್ಲ ಕೃತಿಗಳು

1. Francis Buchanan : A Journey from Madras through the countries of Mysore, Canara and Malabar, Vol-I, Asian Educational Services, New Delhi, 1988.
2. Rice.B.L : Mysore A Gazetteer Compiled for Government, Vol-I and II, Archibald constable and company, London, 1897.
3. Rice.B.L : Mysore and Coorg from the inscriptions, Archibald Constable and Company, London, 1909.
4. Mysore Archaeological Annual Reports(M.A.R) 1986-1956
5. Leela Shantha kumari : Hisitory of the Agraharas karnataka, 400-1300, New Era publications, 1986
6. Krishna Murthy .M.S : The Nolambas, Prasaranga, Mysore, 1980.
7. Suryanath U. Kamath : Karnataka State Gazetteer, Bangalore Rural District and Bangalore Urban, Government of Karnataka publication, Bangalore, 1989.
8. Sheik Ali : History of the western Gangas, Prasaranga, Mysore, 1976.
9. Swamikannu Pillai.L.D : An Indian Ephimeris, Vol. I-VI, Government press, Government of Madras, Madras, 1922.


N
W
E
S
ದೊಡ್ಡಬಳ್ಳಾಪುರ ತಾಲ್ಲೂಕು
ದೇವನಹಳ್ಳಿ ತಾಲ್ಲೂಕು
ನೆಲಮಂಗಲ ತಾಲ್ಲೂಕು
ಹೊಸಕೋಟೆ ತಾಲ್ಲೂಕು
ಬೆಂಗಳೂರು ಉತ್ತರ
ಬೆಂಗಳೂರು ಪೂರ್ವ
ಮಾಗಡಿ ತಾಲ್ಲೂಕು
ಬೆಂಗಳೂರು ದಕ್ಷಿಣ
ಆನೇಕಲ್
ಕನಕಪುರ ತಾಲ್ಲೂಕು


ಬೆಂಗಳೂರು ನಗರದ ನಕಾಶೆ
N
W
E
S
ದೊಡ್ಡಬಳ್ಳಾಪುರ ತಾಲ್ಲೂಕು
ದೇವನಹಳ್ಳಿ ತಾಲ್ಲೂಕು
ಜಾಲ
ಹೆಸರು ಘಟ್ಟ
ತೊಗಟಗೆರೆ
ಅಟ್ಟೂರು
ಯಲಹಂಕ
ಜಕ್ಕೂರು
ನೆಲಮಂಗಲ ತಾಲ್ಲೂಕು
ಹೊಸಕೋಟೆ ತಾಲ್ಲೂಕು
ದೊಡ್ಡಬಿದರಕಲ್ಲು
ಜಾಲಹಳ್ಳಿ
ಹೆಬ್ಬಾಳ
ಬಿದರಹಳ್ಳಿ
ಪೀಣ್ಯ
ಸೊಂಡೆಕೊಪ್ಪ
ಹೂಡಿ
ಕಾಡುಗುಡಿ
ಬಿನ್ನಮಂಗಲ
ಮಾಗಡಿ ತಾಲ್ಲೂಕು
ತಾವರೆಕೆರೆ
ದೊಮ್ಮಲೂರು
ಗುಂಜೂರು
ಅಗರ
ದೊಡ್ಡಕನ್ನೆಲ್ಲಿ
ಕೆಂಗೇರಿ
ದೊಮ್ಮಲೂರು
ಮಡಿವಾಳ
ಮುಗಳೂರು
ಉತ್ತರಹಳ್ಳಿ
ಉಸ್ಕೂರು
ಸರ್ಜಾಪುರ
ಕುಂಬಳಗೂಡು
ವಸಂತಪುರ
ಬೇಗೂರು
ಕೋನಪ್ಪನ ಅಗ್ರಹಾರ
ರಾಮನಗರ ತಾಲ್ಲೂಕು
ಬನ್ನೇರುಘಟ್ಟ
ಹೆಬ್ಬಗೋಡಿ
ಚಂದಾಪುರ
ಕಗ್ಗಲಿಪುರ
ಬಿದರಗುಪ್ಪೆ
ಜಿಗಣಿ
ಹಾರೋಗದ್ದೆ
ಅತ್ತಿಬೆಲೆ
ಇಂಡಿವಾಡಿ
ಆನೇಕಲ್
ಕನಕಪುರ ತಾಲ್ಲೂಕು

# ಅನುಬಂಧ

## ಅಪ್ರಕಟಿತ ಶಾಸನಗಳ ಪಠ್ಯ

**1**

ಅಗರ ಗ್ರಾಮದ ವೆಂಕಟೇಶ್ವರ ದೇವಾಲಯದ ಅಪ್ರಕಟಿತ ಶಿಲಾಶಾಸನಗಳು. ಶಾಸನದಲ್ಲಿ ಉಕ್ತವಾದ ಕಾಲ ಶಾಲೀವಾಹನ ಶಕ ಕ್ರೋಧಿ ಸಂವತ್ಸರದ ವೈಶಾಖ ಶುಕ್ಲ ಪಕ್ಷ ದ್ವಾದಶಾ 10 ಬುಧವಾರ, ಇದು ಕ್ರಿ.ಶ.1724 ಏಪ್ರಿಲ್ 22 ಬುಧವಾರ ಅಥವಾ ಕ್ರಿ.ಶ.1784 ಏಪ್ರಿಲ್ 28 ಬುಧವಾರಕ್ಕೆ ಸರಿಹೊಂದುತ್ತದೆ.

**ಮೊದಲನೇ ಶಾಸನ:**

1. ಶ್ರೀ ಧರ್ಮೋವಿಜಯತಾಃ
2. ಸಮಸ್ತದೋಷಗರಳಂ ಪಾಶ್ಚಾ ಸದ್ಗುಣ ಶಾಲಿನಃಯದಕ್ಷ ಸರ್ವೇ ಸಂಕೃಸ್ಮಾದ್ಗ್ರಾಮೋಯಮ
3. ಗರಾಭಿದಃ॥ ಅಕ್ರೃಧಕೆ ಗುಣ್ಯೈಃ ಪೂರ್ಣೋನಂಜರಡ್ಡ್ಯಾತ್ಮ ಜೋಧನೀ॥ ನಂದ್ಯಾಂಬಾ ಗರ್ಭ ಸಂ
4. ಭೂತ(ಸ್ಟ) ರಾಮರಡ್ಡ್ಯಾಭಿ ಧಾನಾಮ್ ಪೂರ್ಣ॥ ಶಾಲೀವಾಹ ಶಕೇ ಸಪ್ತ ನೇತ್ರಾ (ಷ) ಕ್ಷಿತಿನಂ ಮಿತೆವರ್ತಮಾನೇ ಕ್ರೋಧಿ ವರ್ಷಸಃ
5. ವೈಶಾಖ ಶುಕ್ಲ ಪಕ್ಷೇ॥ ದ್ವಾದಶಾ 10 ಬುಧವಾರೇಶು ಮಂದಿರೇ ನೂತನೇನಪಾರಃ ಶ್ರೀನಿವಾಸ ಪತಿ ಪಾಂನಸಮಃ॥ ಗಯದಾಧರಾತ್॥

**2**

**ಎರಡನೇ ಶಾಸನ:**

1. ಗರ್ಭ
2. ಗೃಹಃ
3. ಸುಖ
4. ನಾಶಿ
5. ಅಂತ
6. ರಾಳಂ
7. ನವರಂ
8. ಗಂ
9. ಮುಖ
10. ಮಂಟಪಃ
11. ಮಹಾದ್ವಾರಂ ಪೂರ್ವ ಪಶ್ಚಿಮ

12. ನುಂಚಿವೆನಕ 35॥
13. ಗೂಡವರಕು ವುತ್ತರದ
14. 35॥ ಹ ಪಣಂ 16॥
15. .ಕಂಬಕೆ .ಯುಂದಕು
16. .ದಂ 595
17. ಧನಂ 8 ಯತ್ರಂ 4
18. .ಣಂ 1
19. ಹಾಸ ಕಂಬ
20. ಆಯ 3
21. ..ರಾಯಂ ಪಮಾ.
22. ಮಂದ್ರ ದಿತ್ವ
23. ಆಯುಸ್ಸು ಶಿಂಹಾಯ
24. 845 ನಿಕಿ
25. ಪುಷ್ಕರ ರಾ
26. ಜಾಂಶೆ
27. ಪರಮ ಮೈತ್ರಿ
28. ತಾರಾ ಬಲವಾಗಿ
29. ರು ಶ್ರೀ
30. ಮಹಾದಾ(ನಂ)

## ವಕ್ತೃಗಳ ವಿವರ

| ಕ್ರ.ಸಂ. | ಹೆಸರು | ವಯಸ್ಸು | ಗ್ರಾಮ | ಜಾತಿ | ವೃತ್ತಿ |
|---|---|---|---|---|---|
| 1 | ಪುಟ್ಟಸ್ವಾಮಿ ಬಿನ್ ದೊಡ್ಡೇಗೌಡ | 60 | ಬೇಗೂರು | ಒಕ್ಕಲಿಗ | ವ್ಯಾಪಾರ |
| 2 | ಗಿರಿಗೌಡ ಬಿನ್ ಕಾಳೇಗೌಡ | 70 | ಜಾಲಹಳ್ಳಿ | ಒಕ್ಕಲಿಗ | ನಿವೃತ್ತ ಸರ್ಕಾರಿ ಅಧಿಕಾರಿ |
| 3 | ಚಂದ್ರಶೇಖರ್ ಬಿನ್ ಕೃಷ್ಣಮೂರ್ತಿ | 47 | ಬ್ಯಾಡರಹಳ್ಳಿ | ಕುರುಬ | ವಾಚ್‌ಮನ್ |
| 4 | ರವಿಕುಮಾರ್ ಬಿನ್ ಹೊನ್ನಯ್ಯ | 39 | ಕೆಂಗೇರಿ | ಒಕ್ಕಲಿಗ | ದೇವಾಲಯದ ಮೇಲ್ವಿಚಾರಕ |
| 5 | ಕೃಷ್ಣಮೂರ್ತಿ ಬಿನ್ ಬೋರಲಿಂಗಯ್ಯ | 49 | ಕೊತ್ತನೂರು | ಆದಿಕರ್ನಾಟಕ | ಕೂಲಿ |
| 6 | ಸುಬ್ರಹ್ಮಣ್ಯ ಬಿನ್ ಓಬಯ್ಯ | 58 | ಕೊತ್ತನೂರು | ಆದಿಕರ್ನಾಟಕ | ರಸ್ತೆ ನಿರ್ಮಾಣದ ಗುತ್ತಿಗೆದಾರ |
| 7 | ಶಿವಯ್ಯ ಬಿನ್ ಕಾಳಯ್ಯ | 63 | ಚಿಕ್ಕಪೇಟೆ | ತಿಗಳ | ಅರ್ಚಕ |
| 8 | ದೀಕ್ಷಿತ್ ಬಿನ್ ಭಟ್ಟ | 59 | ದೊಮ್ಮಲೂರು | ಬ್ರಾಹ್ಮಣ | ಅರ್ಚಕ |
| 9. | ಕಾಳಮ್ಮ ಬಿನ್ ತಮ್ಮಯ್ಯ | 64 | ದೊಮ್ಮಲೂರು | ಆದಿಕರ್ನಾಟಕ | ಹೂವಿನ ವ್ಯಾಪಾರ |
| 10 | ಸುಬ್ಬಣ್ಣ ದೀಕ್ಷಿತ ಬಿನ್ ನಾರಾಯಣಸ್ವಾಮಿ | 42 | ಮಡಿವಾಳ | ಬ್ರಾಹ್ಮಣ | ಅರ್ಚಕ |
| 11 | ಸೂರಪ್ಪ ಬಿನ್ ಮಹದೇವಯ್ಯ | 68 | ಮಡಿವಾಳ | ಕುರುಬ | ಗುಮಾಸ್ತ |
| 12 | ಮಹದೇವ ಬಿನ್ ಕುಳ್ಳೇಗೌಡ | 53 | ಬಸವನಗುಡಿ | ಒಕ್ಕಲಿಗ | ಗುಮಾಸ್ತ |
| 13 | ಶಿವಣ್ಣ ಬಿನ್ ಮಾರಣ್ಣ | 61 | ಕೊಡಿಗೆಹಳ್ಳಿ | ಲಿಂಗಾಯತ | ವಕೀಲ |
| 14 | ತಿಪ್ಪೇಸ್ವಾಮಿ ಬಿನ್ ಶಿವಲಿಂಗಯ್ಯ | 42 | ನಾಗಶೆಟ್ಟಿಹಳ್ಳಿ | ಲಿಂಗಾಯತ | ಕೂಲಿ |
| 15 | ಪುಟ್ಟನಿಂಗಮ್ಮ ಬಿನ್ ಎಲ್ಲಪ್ಪ | 68 | ಹೆಬ್ಬಾಳ | ಕುಂಬಾರ | ಅಂಗಡಿ ವ್ಯಾಪಾರ |
| 16 | ಶಿವರಾಜು ಬಿನ್ ಚೆಲುವರಾಜು | 57 | ಬೇಗೂರು | ಲಿಂಗಾಯತ | ಹೂವಿನ ವ್ಯಾಪಾರಿ |
| 17 | ಚೆನ್ನಮ್ಮ ಬಿನ್ ಕರಿಯಪ್ಪ | 40 | ದೊಡ್ಡನೆಕ್ಕುಂದಿ | ಲಿಂಗಾಯತ | ಹೂವಿನ ವ್ಯಾಪಾರಿ |

| | | | | | |
|---|---|---|---|---|---|
| 18 | ಸುನೀತ ಬಿನ್ ರಾಮಚಂದ್ರ | 36 | ತಾವರೆಕೆರೆ | ಒಕ್ಕಲಿಗ | ತರಕಾರಿ ವ್ಯಾಪಾರಿ |
| 19 | ಪುಟ್ಟೇಗೌಡ ಬಿನ್ ರಾಮೇಗೌಡ | 49 | ಮಡಿವಾಳ | ಒಕ್ಕಲಿಗ | ಕೂಲಿ |
| 20 | ಜಯಚಂದ್ರ ಬಿನ್ ಶಿವರಾಮಯ್ಯ | 45 | ಕ್ಯಾತಮಾರನಹಳ್ಳಿ | ಆದಿಕರ್ನಾಟಕ | ಹಣ್ಣಿನ ವ್ಯಾಪಾರಿ |
| 21 | ರಾಜಶೇಖರ್ ಬಿನ್ ಹೊನ್ನಯ್ಯ | 42 | ದೊಡ್ಡನೆಕ್ಕುಂದಿ | ಒಕ್ಕಲಿಗ | ಆರಕ್ಷಕ |
| 22 | ಸಾದಿಕ್ ಅಲಿ | 48 | ಸುಲ್ತಾನ್‌ಪೇಟೆ | ಮುಸ್ಲಿಂ | ಗುಮಾಸ್ತ |
| 23 | ಜಯಲಕ್ಷ್ಮಿ ಬಿನ್ ನಾರಾಯಣಪ್ಪ | 57 | ವರ್ತೂರು | ಬಣಜಿಗ | ಗೃಹಿಣಿ |
| 24 | ಹೇಮ ಚಂದ್ರಶೇಖರ್ | 48 | ಕೆ.ಆರ್. ಪುರಂ | ಲಿಂಗಾಯತ | ಗೃಹಿಣಿ |
| 25 | ರಾಮಲಿಂಗಪ್ಪ ಬಿನ್ ಸೋಮಣ್ಣ | 53 | ಹಲಸೂರು | ಲಿಂಗಾಯತ | ದೇವಾಲಯದ ಮೇಲ್ವಿಚಾರಕ |
| 26 | ಹೇಮಂತ ಬಿನ್ ಕೋ.ವೆಂ.ರಾಮಕೃಷ್ಣಗೌಡ | 29 | ಕೋಣನಕುಂಟೆ | ಒಕ್ಕಲಿಗ | ಸಂಶೋಧಕ |
| 27 | ರವಿ ಬಿನ್ ಬೋರಲಿಂಗಯ್ಯ | 37 | ಕುಮಾರಸ್ವಾಮಿ ಬಡಾವಣೆ | ಆದಿಕರ್ನಾಟಕ | ಎಂಜಿನಿಯರ್ |
| 28 | ಶಿವಾಚಾರ್ ಬಿನ್ ವಿಶ್ವನಾಥಾಚಾರ್ | 42 | ಬನ್ನೇರುಘಟ್ಟ | ವಿಶ್ವಕರ್ಮ | ದೇವಸ್ಥಾನದ ಮೇಲ್ವಿಚಾರಕ |
| 29 | ಜಿಮೊನ್ ಜಿನ್ | 48 | ಹಡ್ಸನ್ ವೃತ್ತ | ಕ್ರೈಸ್ತ | ಬ್ಯಾಂಕ್ ವ್ಯವಸ್ಥಾಪಕ |
| 30. | ಕೃಷ್ಣಮೂರ್ತಿ ಬಿನ್ ನಾಗರಾಜು | 51 | ಬಸವೇಶ್ವರ ನಗರ | ಒಕ್ಕಲಿಗ | ವಿದ್ಯುತ್ ಗುತ್ತಿಗೆದಾರ |
| 31 | ನಾರಾಯಣ ಅಯ್ಯಂಗಾರ್ ಬಿನ್ ಕೃಷ್ಣ ಅಯ್ಯಂಗಾರ್ | 54 | ಯಲಹಂಕ | ಬ್ರಾಹ್ಮಣ | ಅರ್ಚಕ |
| 32 | ಗೋಪಿಚಂದ್ರ ಬಿನ್ ದೊಡ್ಡಯ್ಯ | 39 | ಯಲಹಂಕ | ಕುರುಬ | ದಿನಸಿ ಅಂಗಡಿ ಮಾಲೀಕ |
| 33 | ನಂಜಯಯ್ಯ ಬಿನ್ ಶಿವು | 30 | ಯಶವಂತಪುರ | ಒಕ್ಕಲಿಗ | ವ್ಯಾಪಾರಿ |
| 34 | ಲೋಕೇಶ್ ಬಿನ್ ವಿಶಕಂಠ | 35 | ವರ್ತೂರು | ಒಕ್ಕಲಿಗ | ವ್ಯಾಪಾರಿ |
| 35 | ಸಂತೋಷ್ ಕುಮಾರ್ ಬಿನ್ ಸೋಮಯ್ಯ | 38 | ಕೊತ್ತನೂರು | ಒಕ್ಕಲಿಗ | ಅಂಚೆ ನೌಕರ |

| | | | | | |
|---|---|---|---|---|---|
| 36 | ರವಿಶೇಖರ್ ಬಿನ್ ಪುಟ್ಟಸ್ವಾಮಿ | 42 | ಅಗರ | ಲಿಂಗಾಯತ | ಅರ್ಚಕ |
| 37 | ಮಹದೇವ ಬಿನ್ ಶಿವಣ್ಣ | 55 | ಜಕ್ಕೂರು | ಕುಂಬಾರ | ಕೂಲಿ |
| 38 | ವಿಜಯ್ ಕುಮಾರ್ ಬಿನ್ ಪಾಪೇಗೌಡ | 46 | ಕನ್ನೆಲ್ಲಿ | ಒಕ್ಕಲಿಗ | ವ್ಯಾಪಾರ |
| 39 | ಧರ್ಮೇಶ್ ಬಿನ್ ಜನಾರ್ಧನಸ್ವಾಮಿ | 50 | ಬಳೇಪೇಟೆ | ಶ್ರೀ ವೈಷ್ಣವ | ಅರ್ಚಕ |
| 40. | ಗೋವಿಂದರಾಜು ಬಿನ್ ಬಸವಯ್ಯ | 56 | ಅಗರ | ಕುಂಬಾರ | ವಾಚ್‌ಮನ್ |
| 41 | ರಾಮಕೃಷ್ಣ ಬಿನ್ ನಾಗೇಗೌಡ | 41 | ಗೊಟ್ಟಗೆರೆ | ಒಕ್ಕಲಿಗ | ಕೂಲಿ |
| 42 | ರವಿಕುಮಾರ್ ಬಿನ್ ಬೀರಯ್ಯ | 46 | ಆನೇಕಲ್ಲು | ಕುರುಬ | ವ್ಯವಸಾಯ |
| 43 | ಬೋಜರಾಜು ಬಿನ್ ಶ್ರೀನಿವಾಸ | 40 | ಇಬ್ಬಲೂರು | ಒಕ್ಕಲಿಗ | ಗುತ್ತಿಗೆ ಕೆಲಸ |
| 44 | ಮಂಜುನಾಥ್ ಬಿನ್ ಚನ್ನಪ್ಪ | 42 | ಮಡಿವಾಳ | ಆದಿಕರ್ನಾಟಕ | ಹೂವಿನ ವ್ಯಾಪಾರ |
| 45 | ಪುಟ್ಟತಾಯಮ್ಮ ಬಿನ್ ಮರಿಯಪ್ಪ | 59 | ದಾಸರಹಳ್ಳಿ | ಆದಿಕರ್ನಾಟಕ | ಹೂವಿನ ವ್ಯಾಪಾರ |
| 46 | ವೆಂಕಟೇಶ ಬಿನ್ ಕೃಷ್ಣ ಅಯ್ಯಂಗಾರ್ | 66 | ದೊಮ್ಮಲೂರು | ಶ್ರೀವೈಷ್ಣವ | ಅರ್ಚಕ |
| 47 | ಸ್ವಾಮಿ ಬಿನ್ ದೇವಯ್ಯ | 44 | ವರ್ತೂರು | ಕುಂಬಾರ | ಕುಂಬಾರಿಕೆ |
| 48 | ತಮ್ಮೇಗೌಡ ಬಿನ್ ಮರಿತಿಬ್ಬೇಗೌಡ | 65 | ವರ್ತೂರು | ಒಕ್ಕಲಿಗ | ನಿವೃತ್ತ ಸರ್ಕಾರಿ ಅಧಿಕಾರಿ |
| 49 | ಜನಾರ್ಧನ ಬಿನ್ ವೆಂಕಟೇಶಮೂರ್ತಿ | 51 | ಅಲ್ಲಾಳಸಂದ್ರ | ಬ್ರಾಹ್ಮಣ | ಅರ್ಚಕ |
| 50 | ರಾಜು ಬಿನ್ ಹನುಮಂತಯ್ಯ | 38 | ಜಾಲಹಳ್ಳಿ | ವಿಶ್ವಕರ್ಮ | ವಾಹನ ಚಾಲಕ |
| 51 | ಬಸವರಾಜು ಬಿನ್ ಶಂಕರಪ್ಪ | 35 | ವರ್ತೂರು | ಲಿಂಗಾಯತ | ಅಂಗಡಿ ವ್ಯಾಪಾರಿ |
| 52 | ಸಿದ್ಧರಾಜು ಬಿನ್ ಕೆಂಪಯ್ಯ | 34 | ದೊಡ್ಡಬಿದರಕಲ್ಲು | ಲಿಂಗಾಯತ | ದೇವಾಲದ ಮೇಲ್ವಿಚಾರಕ |



ಬೆಂಗಳೂರು ಎಂದು ಉಲ್ಲೇಖವಿರುವ
ಪ್ರಾಚೀನ ಶಾಸನ



ದೇವರಾಯನ ಶಾಸನ, ದೊಮ್ಮಲೂರು



ತಮಿಳು ಶಾಸನ, ಹಲಸೂರು



ತಮಿಳು ಶಾಸನ, ದೊಡ್ಡನೆಕ್ಕುಂದಿ



**ಚೊಕ್ಕನಾಥ ದೇವಾಲಯದ ಅಧಿಷ್ಠಾನದ ಮೇಲಿನ ತಮಿಳು ಶಾಸನ, ದೊಮ್ಮಲೂರು**



**ವೆಂಗಳೂರು ಹೆಸರಿನ ಉಲ್ಲೇಖವಿರುವ ತಮಿಳು ಶಾಸನ ಸೋಮೇಶ್ವರ ದೇವಾಲಯ, ಮಡಿವಾಳ**



**ಪರ್ಷಿಯನ್ ಭಾಷೆಯ ಶಾಸನ, ಟಿಪ್ಪುವಿನ ಬೇಸಿಗೆ ಅರಮನೆ**



**ವೃಷಭಾವತಿ ನದಿ ಉಗಮದ ಶಾಸನ, ಬಸವನಗುಡಿ**



ನಾಗೇಶ್ವರ ದೇವಾಲಯ, ಬೇಗೂರು



ಚಂಪಕಧಾಮಸ್ವಾಮಿ ದೇವಾಲಯ, ಬನ್ನೇರುಘಟ್ಟ



ಸೋಮೇಶ್ವರ ದೇವಾಲಯ, ಹಲಸೂರು



ಸೋಮೇಶ್ವರ ದೇವಾಲಯ, ಮಡಿವಾಳ



ವಸಂತವಲ್ಲಭರಾಯ ದೇವಾಲಯ, ಉತ್ತರಹಳ್ಳಿ



ಗವಿಗಂಗಾಧರೇಶ್ವರ ದೇವಾಲಯ, ಗವಿಪುರ



ಕೋಟೆ ವೆಂಕಟೇಶ್ವರ ದೇವಾಲಯ, ಬೆಂಗಳೂರು



ದೊಡ್ಡ ಬಸವ, ಬಸವನಗುಡಿ



ದೊಡ್ಡಗಣೇಶ, ಬಸವನಗುಡಿ



ಯಾಳಿಸಹಿತ ಸ್ತಂಭ, ರಂಗನಾಥಸ್ವಾಮಿದೇವಾಲಯ, ಚಿಕ್ಕಪೇಟೆ



ನಂದಿ ಕಂಭ, ಗವಿಗಂಗಾಧರೇಶ್ವರ ದೇವಾಲಯ, ಗವಿಪುರ



ಯಾಳಿ ಸಹಿತ ಸ್ತಂಭ, ಸೋಮೇಶ್ವರ ದೇವಾಲಯ, ಹಲಸೂರು



ಕಂಭ, ಹಲಸೂರು



ಚೊಕ್ಕನಾಥ ದೇವಾಲಯದ ಕಟಾಂಜನ, ದೊಮ್ಮಲೂರು



ಗಿರಿಜಾಕಲ್ಯಾಣ ಶಿಲ್ಪ, ಸೋಮೇಶ್ವರ ದೇವಾಲಯ, ಹಲಸೂರು



ಬಲಿಪೀಠ, ಅಗರ



ಕೆಂಪೇಗೌಡರ ಸಮಾಧಿ



ಕೆಂಪೇಗೌಡರ ಮರಣವನ್ನು ಉಲ್ಲೇಖಿಸುವ ಶಾಸನ



ಮಹಿಷಾಸುರ ಮರ್ಧಿನಿ, ಬೇಗೂರು



ಸೂರ್ಯನಾರಾಯಣ, ಕಮ್ಮಸಂದ್ರ



ಸೂರ್ಯನಾರಾಯಣ, ಕಾಡುಗುಡಿ



ಸೂರ್ಯನಾರಾಯಣ, ಬೇಗೂರು



ಸೂರ್ಯನಾರಾಯಣ, ತೋಟಗೇರೆ



ಗಣೇಶ, ಬೇಗೂರು



ಗಣೇಶ, ಬಳೇಪೇಟೆ



ಗಣೇಶ, ಗವಿಪುರ



ಕಾಲಭೈರವೇಶ್ವರ, ಜಾಲಹಳ್ಳಿ



ಜನಾರ್ಧನಸ್ವಾಮಿ, ಹಾರೋಗದ್ದೆ



ಸಪ್ತಮಾತೃಕೆಯರು, ಕಮ್ಮಸಂದ್ರ



ದಾಮೋದರ, ಮುತ್ತೂರು



ಚನ್ನಕೇಶವ, ಅಗರ



ಕಾರಂಜಿ ಆಂಜನೇಯ, ಬಸವನಗುಡಿ



ಪ್ರಳಯಕಾಲದ ವೀರಭದ್ರ, ಗುಟ್ಟಹಳ್ಳಿ



ವೀರಭದ್ರ, ಮುಗಳೂರು



ವೀರಭದ್ರ, ಸಾರಕ್ಕಿ



ವೀರಭದ್ರ, ಕನ್ನೇಲಿ



ವೀರಭದ್ರ, ಅಕ್ಕಯಮ್ಮನ ಬೆಟ್ಟ



ತೀರ್ಥಂಕರನ ಭಗ್ನ ಶಿಲ್ಪ, ಬೇಗೂರು

